ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೨೧

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಶಿವಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡ ಅರ್ಥಾನುವಾದ ವಿವರಣೆಗಳೊಡನೆ)

## ಭಾಗ—೧೨

### ವಾಯವೀಯಸಂಹಿತೆಯ ಉತ್ತರಭಾಗ



ಅನುವಾದಕ :

**ಹಾಸನದ ಪಂಡಿತ ವೆಂಕಟರಾವ್**

(ಸ್ಥಾನ ವಿದ್ವಾನ್)

ಮೈಸೂರು

ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್

೧೯೪೬

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೨೧

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಶಿವಮಹಾಪುರಾಣಂ,

(ಸಂಸ್ಕೃತಮೂಲ, ಕನ್ನಡ ಅರ್ಥಾನುವಾದ ವಿವರಣೆಗಳೊಡನೆ)

## ಭಾಗ—೧೨

## ವಾಯವೀಯಸಂಹಿತೆಯ ಉತ್ತರಭಾಗ



ಅನುವಾದಕ :

ಹಾಸನದ ಪಂಡಿತ ವೆಂಕಟರಾವ್

ಆಸ್ಥಾನ ವಿದ್ವಾನ್



ಮೈಸೂರು

ಶ್ರೀ ಚಾಮುಂಡೇಶ್ವರೀ ಎಲಕ್ಟ್ರಿಕ್ ಪ್ರೆಸ್

೧೯೪೬



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ

ಮೈಸೂರು ದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ

**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್**

**ಜಿ.ಸಿ.ಎಸ್.ಐ. ರವರು**




## ಶ್ರೀ ಪ್ರಸನ್ನ ಶಂಕರ

ವಾಮಾಂಕನ್ಯಸ್ಯವಾಮೇತರಕರಕಮಲಾಯಾಸ್ತಥಾ ವಾಮಬಾಹು-
ನ್ಯಸ್ತಾರಕ್ತೋತ್ಪಲಾಯಾಃ ಸ್ತನವಿಧೃತಲಸದ್ವಾಮಬಾಹುಂ ಪ್ರಿಯಾಯಾಃ ।
ಸರ್ವಾಕಲ್ಪಾಭಿರಾಮೋ ಧೃತಪರಶುಮೃಗೇಷ್ಟೈಃ ಕರೈಃ ಕಾಂಚನಾಭೋ
ಧ್ಯೇಯಃ ಪದ್ಮಾಸನಸ್ಥಃ ಸ್ಮರಲುಲಿತವಪುಃ ಸಂಪದೇ ಪಾರ್ವತೀಶಃ ॥

# ಪ್ರಸ್ತಾವನೆ.

---

ಶಿವಪುರಾಣದ ಏಳನೆಯ ವಾಯುವೀಯಸಂಹಿತೆಯ ಉತ್ತರಭಾಗವು ಈ ಗ್ರಂಥದ ಹನ್ನೆರಡನೆಯ ಭಾಗವಾಗಿ ಮುದ್ರಿತವಾಗಿದೆ. ಇಲ್ಲಿಗೆ ಶಿವ ಪುರಾಣವು ಪರಿಸಮಾಪ್ತವಾಯಿತು. ಈ ಭಾಗದಲ್ಲಿ ಶಿವಪಂಚಾಕ್ಷರೀಮಂತ್ರದ ಜಪವಿಧಾನ, ಅದರ ಮಾಹಾತ್ಮ್ಯ, ನಿತ್ಯನೈಮಿತ್ತಿಕ ಶಿವಪೂಜಾವಿಧಿ, ಪಾರ್ಥಿವ ಲಿಂಗಪೂಜಾಕ್ರಮ, ಶಿವದೀಕ್ಷಾವಿಧಾನ, ಶಿವಲಿಂಗ ಶಿವಮೂರ್ತಿಗಳ ಪ್ರತಿಷ್ಠಾ ವಿಧಿಗಳು, ಶಿವಪುರಾಣಮಾಹಾತ್ಮ್ಯಕಥನ ಮುಂತಾದ ಮಹತ್ವವಿಷಯಗಳು ವಿಸ್ತಾರವಾಗಿ ವಿವರಿಸಲ್ಪಟ್ಟಿವೆ. ಈ ಉಪಾಸನಾಭಾಗಗಳೆಲ್ಲವೂ ತತ್ತ್ವಜ್ಞಾನ ಪ್ರಾಪ್ತಿಗೆ ಸಾಧನಭೂತವಾಗಿರುವುದರಿಂದ ಇವುಗಳನ್ನು ಸಕಲರೂ ಓದಿ ತಿಳಿದು ಕೊಳ್ಳಬೇಕಾದುದು ಅವಶ್ಯಕವಾಗಿರುವುದು. ಮೋಕ್ಷಪ್ರಾಪ್ತಿಗೆ ಜಪಪೂಜಾದಿ ಕರ್ಮಾನುಷ್ಠಾನಗಳಿಗಿಂತಲೂ ಯೋಗಮಾರ್ಗದಿಂದ ನಿರ್ವಿಕಲ್ಪಬ್ರಹ್ಮಸ್ವರೂಪ ವನ್ನು ಧ್ಯಾನಮಾಡುವುದೇ ಶ್ರೇಷ್ಠವಾದ ಸಾಧನವಾಗಿರುವುದು. ನಾಮ ರೂಪಾದಿ ಭೇದಗಳಿಲ್ಲದ ನಿರ್ಗುಣಬ್ರಹ್ಮೋಪಾಸನೆಯನ್ನು ಮಾಡುವುದು ಪ್ರಾರಂಭ ದೆಶೆಯಲ್ಲಿ ಸಾಧ್ಯವಿಲ್ಲದ್ದರಿಂದ ಸಗುಣರೂಪವಾದ ಮೂರ್ತಿಯನ್ನು ಕಲ್ಪಿಸಿ ಪೂಜಾದ್ಯುಪಚಾರಗಳಿಂದ ಆರಾಧನೆಮಾಡುವುದು ಸುಲಭವಾದ ಮಾರ್ಗವಾಗಿ ರುವುದು. ಈ ವಿಧವಾದ ಉಪಾಸನೆಯನ್ನು ಸಾಧಾರಣ ಜನರು ತಿಳಿದುಕೊಳ್ಳಲು ಕಷ್ಟವಾಗಿರುವುದಿಲ್ಲ. ಆದುದರಿಂದ ಮೂರ್ತ್ಯುಪಾಸನೆಯನ್ನು ಮಾಡುತ್ತಿದ್ದರೆ ಕಾಲಕ್ರಮದಲ್ಲಿ ಭಕ್ತಿಯುದಯಿಸಿ ಜ್ಞಾನಪ್ರಾಪ್ತಿಗೆ ಸಹಾಯವಾಗುವುದು. ಯೋಗಾಭ್ಯಾಸವನ್ನು ಮಾಡುವಾಗ ಸಹ ಧಾರಣಾಶಕ್ತಿಯುಂಟಾಗುವುದಕ್ಕಾಗಿ ಪ್ರಾರಂಭದಲ್ಲಿ ತನಗೆ ಇಷ್ಟವಾದ ಯಾವ ಮೂರ್ತಿಯನ್ನಾದರೂ, ಆಕಾರವನ್ನಾ ದರೂ ಧ್ಯಾನಮಾಡುವುದು ರೂಢಿಯಾಗಿರುವುದು. ಮುಖ್ಯವಾಗಿ ಮೂರ್ತ್ಯುಪಾ ಸನೆಯು ಜ್ಞಾನಪ್ರಾಪ್ತಿಗೆ ಸಾಧನವಾಗಿರುವುದು. ಜ್ಞಾನಪ್ರಾಪ್ತಿಯಿಂದ ಮೋಕ್ಷವು ಸಿದ್ಧಿಸುವುದು. ಈ ಕಾರಣದಿಂದ ಮೂರ್ತ್ಯುಪಾಸನಾದಿಕರ್ಮಾನು ಷ್ಠಾನಗಳೂ, ತತ್ತ್ವಜಿಜ್ಞಾಸೆಯೂ ಮೋಕ್ಷಪ್ರಾಪ್ತಿಗೆ ಅವಶ್ಯಕವಾದ ಸಾಧನಗಳು.

**ಈ** ಶಿವಪುರಾಣದ ಕೈಲಾಸ ಮತ್ತು ವಾಯವೀಯಸಂಹಿತೆಗಳು, ಶ್ವೇತಾಶ್ವತರ, ತೈತ್ತಿರೀಯ, ಈಶಾವಾಸ್ಯ ಮೊದಲಾದ ಉಪನಿಷದ್ವಾಕ್ಯಾರ್ಥಗಳನ್ನು ವೇದಾಂತಸಾರವನ್ನು ಒಳಗೊಂಡು ತತ್ತ್ವಜಿಜ್ಞಾಸುಗಳಿಗೆ ಬಹುವಾಗಿ ಆದರಣೀಯವಾಗಿರುತ್ತವೆ. ಅಲ್ಲಲ್ಲಿ ಕೆಲವು ಭಾಗಗಳು ಅರ್ಥಗರ್ಭಿತವಾಗಿಯೂ, ತಿಳಿದುಕೊಳ್ಳಲು ಕಷ್ಟಸಾಧ್ಯವಾಗಿಯೂ ಇರುವುದರಿಂದ ವಾಚಕರು ಇದನ್ನು ಪುನಃಪುನಃ ಓದಿದಲ್ಲಿ ಅರ್ಥವು ಮನಸ್ಸಿಗೆ ಸರಿಯಾಗಿ ಮುಂದಟ್ಟಾಗುವುದು. ಕ್ಲಿಷ್ಟವಾದ ಭಾಗಗಳನ್ನು ವಿಸ್ತಾರವಾಗಿ ವಿವರಿಸಲು ಕಾಲಾವಕಾಶವಿಲ್ಲದ್ದರಿಂದಲೂ, ಇತರ ಅನಿವಾರ್ಯಗಳಿಂದಲೂ ಅವುಗಳನ್ನು ಸಾಧ್ಯವಾದಮಟ್ಟಿಗೆ ಸುಲಭಶೈಲಿಯಲ್ಲಿ ಮಾತ್ರ ಬರೆದು ಸಂದರ್ಭಾನುಸಾರ ಶ್ರುತಿಪ್ರಮಾಣಗಳನ್ನು ಉದಹರಿಸಿರುತ್ತೇನೆ.

ಇಂತಹ ಅತ್ಯುತ್ತಮ ಗ್ರಂಥಗಳನ್ನು ಬರೆದು ಪ್ರಕಟಿಸಲು ಆಜ್ಞೆಯಿತ್ತ ಪ್ರಜಾವತ್ಸಲರೂ ದೈವಭಕ್ತಿಯುತರೂ ಆದ ನಮ್ಮನ್ನಾಳುವ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಬಿ., ಜಿ. ಸಿ. ಎಸ್. ಐ. ಮಹಾಪ್ರಭುಗಳವರಿಗೂ,** ಅವರ ಕುಟುಂಬಕ್ಕೂ, ರಾಷ್ಟ್ರದ ಸಮಸ್ತ ಜನಗಳಿಗೂ ಪಾರ್ವತೀಸಮೇತನಾದ ಪರಮೇಶ್ವರನು ಆಯುರಾರೋಗ್ಯೈಶ್ವರ್ಯಾದಿಗಳನ್ನೂ, ಸಮಸ್ತ ಸನ್ಮಂಗಳಗಳನ್ನೂ ದಯಪಾಲಿಸಲೆಂದು ಆ ಜಗದೀಶ್ವರನನ್ನು ಭಕ್ತಿಭಾವದಿಂದ ಪ್ರಾರ್ಥಿಸುತ್ತೇನೆ.

ಮೈಸೂರು,
ವ್ಯಯ ಸಂ॥ ಜ್ಯೇಷ್ಠ ಶುದ್ಧ ತೃತೀಯಾ,
೨-೬-೪೬.

ಅನುವಾದಕ:
**ಹಾಸನದ ಪಂಡಿತ ವೆಂಕಟರಾವ್,**
ಆಸ್ಥಾನ ವಿದ್ವಾನ್.



# ವಿಷಯಾನುಕ್ರಮಣಿಕೆ.

ಪುಟಸಂಖ್ಯೆ

ಪುಟಸಂಖ್ಯೆ

ಪುಟಸಂಖ್ಯೆ

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ವಾಯವೀಯ ಸಂಹಿತಾಯಾಮುತ್ತರಭಾಗೇ

## ಪ್ರಥಮೋಽಧ್ಯಾಯಃ

---

॥ ಸೂತ ಉವಾಚ ॥

ನಮಸ್ಸಮಸ್ತಸಂಸಾರಚಕ್ರಭ್ರಮಣಹೇತವೇ ।
ಗೌರೀಕುಚತಟದ್ವಂದ್ವಕುಂಕುಮಾಂಕಿತವಕ್ಷಸೇ ॥ ೧ ॥

ಉಕ್ತ್ವಾ ಭಗವತೋ ಲಬ್ಧಂ ಪ್ರಸಾದಮುಪಮನ್ಯುನಾ ।
ನಿಯಮಾದುತ್ಥಿತೋ ವಾಯುರ್ಮಧ್ಯೇ ಪ್ರಾಪ್ತೇ ದಿವಾಕರೇ ॥ ೨ ॥

---

## ಮೊದಲನೆಯ ಅಧ್ಯಾಯವು.

೧. ಸೂತಮುನಿ ಇಂತೆಂದನು—ಸಂಸಾರಚಕ್ರವು ಅಥವಾ ಜಗದ್ವ್ಯಾಪಾರವು ನಡೆಯುವುದಕ್ಕೆ ಪರಮೇಶ್ವರನೇ ಕಾರಣನು. ತನ್ನ ಪತ್ನಿಯಾದ ಗೌರೀದೇವಿಯ ಆಲಿಂಗನದಿಂದ ಆ ದೇವಿಯ ಸ್ತನಪ್ರದೇಶದಲ್ಲಿ ಲೇಪನಮಾಡಿಕೊಂಡಿದ್ದ ಕುಂಕುಮವು ತನ್ನ ಎದೆಯಮೇಲೆ ಮುದ್ರೆಯೊತ್ತಿದಂತೆ ಕಾಣುತ್ತಿರುವುದು. ಇಂತಹ ಪರಮೇಶ್ವರನಿಗೆ ನಮಸ್ಕಾರವು.

೨. ಉಪಮನ್ಯುವಿಗೆ ಮಹಾಮಹಿಮನಾದ ಶಿವನ ಅನುಗ್ರಹವು ಪ್ರಾಪ್ತವಾಯಿತು ಎಂದು ಹೇಳಿ, ಮಧ್ಯಾಹ್ನಕಾಲವು ಪ್ರಾಪ್ತವಾದುದರಿಂದ ವಾಯುದೇವನು ಮಾಧ್ಯಾಹ್ನಿಕ ಕರ್ಮವನ್ನು ಮಾಡಲು ಹೊರಟನು.

ಋಷಯಶ್ಚಾಪಿ ತೇ ಸರ್ವೇ ನೈಮಿಷಾರಣ್ಯವಾಸಿನಃ ।
ಅಥಾಯಮರ್ಥಃ ಪ್ರಷ್ಟವ್ಯ ಇತಿ ಕೃತ್ವಾ ವಿನಿಶ್ಚಯಂ ॥ ೩ ॥

ಕೃತ್ವಾ ಯಥಾ ಸ್ವಕಂ ಕೃತ್ಯಂ ಪ್ರತ್ಯಹಂ ತೇ ಯಥಾ ಪುರಾ ।
ಭಗವಂತಮುಪಾಯಾಂತಂ ಸಮೀಕ್ಷ್ಯ ಸಮುಪಾವಿಶನ್ ॥ ೪ ॥

ಅಥಾಸೌ ನಿಯಮಸ್ಯಾಂತೇ ಭಗವಾನಂಬರೋದ್ಭವಃ ।
ಮಧ್ಯೇ ಮುನಿಸಭಾಯಾಸ್ತು ಭೇಜೇ ಕ್ಲ್ಪಪ್ತಂ ವರಾಸನಂ ॥ ೫ ॥

ಸುಖಾಸನೋಪವಿಷ್ಟಶ್ಚ ವಾಯುರ್ಲೋಕನಮಸ್ಕೃತಃ ।
ಶ್ರೀಮದ್ವಿಭೂತಿಮೀಶಸ್ಯ ಹೃದಿ ಕೃತ್ವೇದಮಬ್ರವೀತ್ ॥ ೬ ॥

ತಂ ಪ್ರಪದ್ಯೇ ಮಹಾದೇವಂ ಸರ್ವಜ್ಞಮಪರಾಜಿತಂ ।
ವಿಭೂತಿಃ ಸಕಲಂ ಯಸ್ಯ ಚರಾಚರಮಿದಂ ಜಗತ್ ॥ ೭ ॥

---

೩-೪. ನೈಮಿಶಾರಣ್ಯವಾಸಿಗಳಾದ ಋಷಿಗಳೆಲ್ಲರೂ, ಆಮೇಲೆ ಈ ವಿಷಯವನ್ನು ಕೇಳೋಣವೆಂದು ನಿಶ್ಚೈಸಿಕೊಂಡು ಪ್ರತಿ ದಿನವೂ ಮಾಡು ತ್ತಿದ್ದಂತೆ ತಾವು ಮಾಡಬೇಕಾದ ಕರ್ಮಗಳನ್ನು ಮಾಡಿ ಮಹಾಮಹಿಮನಾದ ವಾಯುದೇವನು ಕುಳಿತಿರಲು, ತಾವೂ ಅವನ ಸಮೀಪದಲ್ಲಿ ಕುಳಿತುಕೊಂಡರು.

೫. ಆ ಬಳಿಕ ತನ್ನ ಮಾಧ್ಯಾಹ್ನಿಕ ನಿಯಮವಾದ ಮೇಲೆ ಮಹಾ ಮಹಿಮನಾದ ವಾಯುದೇವನು ಮುನಿಗಳ ಸಭೆಯ ನಡುವೆ ಇರುವ ಶ್ರೇಷ್ಠವಾದ ಪೀಠದಮೇಲೆ ಬಂದು ಕುಳಿತನು.

೬. ಪ್ರಪಂಚದಲ್ಲಿರುವ ಸಕಲ ಜನರ ಗೌರವಕ್ಕೂ ಪಾತ್ರನಾದ ಆ ವಾಯುವು ಸುಖಾಸನದಲ್ಲಿ ಕುಳಿತು ಈಶ್ವರನ ಸಂಪದ್ಯುಕ್ತವಾದ ಮಹಾಮಹಿಮೆ ಯನ್ನು ಮನಸ್ಸಿನಲ್ಲಿ ಭಾವಿಸುತ್ತಾ ಇಂತೆಂದನು.

೭. ಈ ಚರಾಚರಗಳಿಂದ ಕೂಡಿದ ಎಲ್ಲ ಪ್ರಪಂಚವೂ, ಯಾವನ ವಿಭೂತಿಸ್ವರೂಪವಾದುದೋ, ಅಂತಹ ಮಹಾದೇವನೂ ಸರ್ವಜ್ಞನೂ, ಇತರ ರಿಂದ ಜಯಿಸಲಸಾಧ್ಯನಾದವನೂ ಆದ ಶಿವನನ್ನು ಶರಣು ಹೊಂದುವೆನು.

ಇತ್ಯಾಕರ್ಣ್ಯ ಶುಭಾಂ ವಾಣೀಮೃಷಯಃ ಕ್ಷೀಣಕಲ್ಮಷಾಃ ।
ವಿಭೂತಿವಿಸ್ತರಂ ಶ್ರೋತುಮೂಚುಸ್ತೇ ಪರಮಂ ವಚಃ ॥ ೮ ॥

॥ ಋಷಯ ಊಚುಃ ॥

ಉಕ್ತಂ ಭಗವತಾ ವೃತ್ತಮುಪಮನ್ಯೋರ್ಮಹಾತ್ಮನಃ ।
ಕ್ಷೀರಾರ್ಥೇನಾಪಿ ತಪಸಾ ಯತ್ಪ್ರಾಪ್ತಂ ಪರಮೇಶ್ವರಾತ್ । ॥ ೯ ॥

ದೃಷ್ಟೋಽಸೌ ವಾಸುದೇವೇನ ಕೃಷ್ಣೇನಾಕ್ಲಿಷ್ಟಕರ್ಮಣಾ ।
ಧೌಮ್ಯಾಗ್ರಜಸ್ತತಸ್ತೇನ ಕೃತ್ವಾ ಪಾಶುಪತಂ ವ್ರತಂ ॥ ೧೦ ॥

ಪ್ರಾಪ್ತಂ ಚ ಪರಮಂ ಜ್ಞಾನಮಿತಿ ಪ್ರಾಗೇವ ಶುಶ್ರುಮ
ಕಥಂ ಸ ಲಬ್ಧವಾನ್ಕೃಷ್ಣೋ ಜ್ಞಾನಂ ಪಾಶುಪತಂ ಪರಂ ॥ ೧೧ ॥

---

೮. ವಾಯುದೇವನು ಹೇಳಿದ ಮಂಗಳಕರವಾದ ಈ ಮಾತನ್ನು ಕೇಳಿ ಋಷಿಗಳು ತಮ್ಮ ಪಾಪಗಳನ್ನೆಲ್ಲ ಕಳೆದುಕೊಂಡು ಶಿವನ ಮಹಿಮೆಯನ್ನು ವಿಸ್ತಾರವಾಗಿ ಕೇಳಬೇಕೆಂದು ತಮ್ಮ ತಮ್ಮಲ್ಲಿ ಮಾತನಾಡಿಕೊಂಡು ವಾಯು ದೇವನನ್ನು ಪ್ರಶ್ನೆಮಾಡಿದರು.

೯-೧೧. ಮಹಾಮಹಿಮನಾದ ಎಲೈ ವಾಯುದೇವನೇ, ಮಹಾತ್ಮನಾದ ಉಪಮನ್ಯುವು ಹಾಲಿಗೋಸ್ಕರವಾಗಿ ತಪಸ್ಸನ್ನು ಮಾಡಿ ಮಹೇಶ್ವರನ ವರದಿಂದ ಕ್ಷೀರಸಮುದ್ರವನ್ನೇ ಪಡೆದನೆಂದು ಅವನ ಚರಿತ್ರೆಯನ್ನು ಹೇಳಿದೆಯಷ್ಟೆ. ಕೃಷ್ಣನು ಧೌಮ್ಯಋಷಿಯ ಅಣ್ಣನಾದ ಈ ಉಪಮನ್ಯುವನ್ನು ಕಂಡು ಅವನ ಉಪದೇಶದಿಂದ ಪಾಶುಪತವ್ರತವನ್ನು ಮಾಡಿ ಉತ್ತಮವಾದ ಜ್ಞಾನವನ್ನು ಪಡೆದನು ಎಂದೂ ಹಿಂದೆಯೇ ಹೇಳಿರುವೆ. ಆ ಕೃಷ್ಣನು ಶ್ರೇಷ್ಠವಾದ ಪಾಶುಪತಜ್ಞಾನವನ್ನು ಹೇಗೆ ಪಡೆದನು? ಅದನ್ನು ನಮಗೆ ಈಗ ಹೇಳಬೇಕು ಎಂದರು.

॥ ವಾಯುರುವಾಚ ॥

ಸ್ವೇಚ್ಛಯಾ ಹ್ಯವತೀರ್ಣೋಽಪಿ ವಾಸುದೇವಸ್ಸನಾತನಃ ।
ನಿಂದಯನ್ನಿವ ಮಾನುಷ್ಯಂ ದೇಹಶುದ್ಧಿಂ ಚಕಾರ ಸಃ ॥ ೧೨ ॥

ಪುತ್ರಾರ್ಥಂ ಹಿ ತಪಸ್ತಪ್ತುಂ ಗತಸ್ತಸ್ಯ ಮಹಾಮುನೇಃ ।
ಆಶ್ರಮಂ ಮುನಿಭಿರ್ದೃಷ್ಟಂ ದೃಷ್ಟವಾಂಸ್ತತ್ರ ವೈ ಮುನಿಂ ॥ ೧೩ ॥

ಭಸ್ಮಾವದಾತಸರ್ವಾಂಗಂ ತ್ರಿಪುಂಡ್ರಾಂಕಿತಮಸ್ತಕಂ ।
ರುದ್ರಾಕ್ಷಮಾಲಾಭರಣಂ ಜಟಾಮಂಡಲಮಂಡಿತಂ ॥ ೧೪ ॥

ತಚ್ಛಿಷ್ಯಭೂತೈರ್ಮುನಿಭಿಶ್ಶಾಸ್ತ್ರೈರ್ವೇದಮಿವಾವೃತಂ ।
ಶಿವಧ್ಯಾನರತಂ ದಾಂತಮುಪಮನ್ಯುಂ ಮಹಾದ್ಯುತಿಂ ॥ ೧೫ ॥

೧೨. ವಾಯುದೇವನಿಂತೆಂದನು—ಅನಾದಿಯಾದ ವಿಷ್ಣುವು ತನ್ನ ಇಚ್ಛೆಯಿಂದಲೇ ವಸುದೇವನ ಪುತ್ರನಾಗಿ ಅವತಾರಮಾಡಿದರೂ, ಮನುಷ್ಯ ಶರೀರವು ನಿಂದ್ಯವಾದುದೆಂದು ತೋರಿಸುವುದಕ್ಕಾಗಿಯೇ ಅವನು ಮೊದಲು ತನ್ನ ದೇಹಶುದ್ಧಿಯನ್ನು ಮಾಡಿಕೊಂಡನು.

೧೩–೧೫. ಮಗನನ್ನು ಪಡೆವುದಕ್ಕಾಗಿ ತಪಸ್ಸನ್ನು ಮಾಡಬೇಕೆಂದು ಕೃಷ್ಣನು ತಪೋವನಕ್ಕೆ ಹೋಗಿ ಅಲ್ಲಿ ಉಪಮನ್ಯುಮಹರ್ಷಿಯ ಆಶ್ರಮವಿರುವ ಪ್ರದೇಶವನ್ನು ಋಷಿಗಳಿಂದ ತಿಳಿದು ಅಲ್ಲಿಗೂ ಹೋದನು. ಅಲ್ಲಿ ಶಾಸ್ತ್ರಗಳಿಂದ ಪರಿವೃತವಾದ ವೇದದಂತೆ, ಶಿಷ್ಯರಿಂದ ಪರಿವೃತನಾಗಿ ಉಪಮನ್ಯುಮುನಿಯು ಮಹಾತೇಜಸ್ಸಿನಿಂದ ಬೆಳಗುತ್ತಾ ಶಿವಧ್ಯಾನಾಸಕ್ತನಾಗಿ ಕುಳಿತಿದ್ದನು. ಅವನು ತನ್ನ ಸರ್ವಾಂಗಗಳಿಗೂ ಭಸ್ಮದಿಂದ ಲೇಪನಮಾಡಿಕೊಂಡಿದ್ದನು. ಹಣೆಯಲ್ಲಿ ತ್ರಿಪುಂಡ್ರವು ಪ್ರಕಾಶಿಸುತ್ತಿತ್ತು. ರುದ್ರಾಕ್ಷಮಾಲೆಗಳನ್ನು ಧರಿಸಿದ್ದನು. ಶಿರಸ್ಸಿನಲ್ಲಿ ಜಟಾಮಂಡಲವು ಒಪ್ಪುತ್ತಿತ್ತು. ಇಂತಹ ದಿವ್ಯವರ್ಚಸ್ಸಿನಿಂದ ಬೆಳಗುತ್ತಿರುವ ಉಪಮನ್ಯುಮುನಿಯನ್ನು ನೋಡಿ,

ನಮಶ್ಚಕಾರ ತಂ ದೃಷ್ಟ್ವಾ ಹೃಷ್ಟಸರ್ವತನೂರುಹಃ ।
ಬಹುಮಾನೇನ ಕೃಷ್ಣೋಽಸೌ ತ್ರಿಃ ಕೃತ್ವಾ ತು ಪ್ರದಕ್ಷಿಣಾಂ ।
ಸ್ತುತಿಂ ಚಕಾರ ಸುಪ್ರೀತ್ಯಾ ನತಸ್ಕಂಧಃ ಕೃತಾಂಜಲಿಃ ॥ ೧೬ ॥

ತಸ್ಯಾಽವಲೋಕನಾದೇವ ಮುನೇಃ ಕೃಷ್ಣಸ್ಯ ಧೀಮತಃ ।
ನಷ್ಟಮಾಸೀನ್ಮಲಂ ಸರ್ವಂ ಮಾಯಾಜಂ ಕರ್ಮಮೇವ ಚ ॥ ೧೭ ॥

ತತಃ ಕ್ಷೀಣಮಲಂ ಕೃಷ್ಣಮುಪಮನ್ಯುರ್ಯಥಾವಿಧಿ ।
ಭಸ್ಮನೋದ್ಧೂಲ್ಯ ತಂ ಮಂತ್ರೈರಗ್ನಿರಿತ್ಯಾದಿಭಿಃ ಕ್ರಮಾತ್ ॥ ೧೮ ॥

ಅಥ ಪಾಶುಪತಂ ಸಾಕ್ಷಾದ್ವ್ರತಂ ದ್ವಾದಶಮಾಸಿಕಂ ।
ಕಾರಯಿತ್ವಾ ಮುನಿಸ್ತಸ್ಮೈ ಪ್ರದದೌ ಜ್ಞಾನಮುತ್ತಮಂ ॥ ೧೯ ॥

ತದಾ ಪ್ರಭೃತಿ ತಂ ಕೃಷ್ಣಂ ಮುನಯಃ ಶಂಸಿತವ್ರತಾಃ ।
ದಿವ್ಯಾಃ ಪಾಶುಪತಾಸ್ಸರ್ವೇ ಪರಿವೃತ್ಯೋಪತಸ್ಥಿರೇ ॥ ೨೦ ॥

---

೧೬. ಆ ಕೃಷ್ಣನು ಸಂತೋಷದಿಂದ ತನ್ನ ಶರೀರವೆಲ್ಲ ರೋಮಾಂಚವಾಗುತ್ತಿರಲು ಗೌರವದಿಂದ ಆ ಮುನಿಗೆ ಮೂರು ಪ್ರದಕ್ಷಿಣೆಯನ್ನು ಮಾಡಿ ನಮಸ್ಕಾರವನ್ನೂ ಮಾಡಿದನು. ಮತ್ತು ಕೈಜೋಡಿಸಿಕೊಂಡು ಸಂತೋಷದಿಂ ಳಿ ಶಿರಸ್ಸನ್ನು ಬಗ್ಗಿಸಿ ಸ್ತೋತ್ರಮಾಡಿದನು.

೧೭. ಆ ಮುನಿಯನ್ನು ನೋಡಿದಮಾತ್ರದಿಂದಲೇ ಕೃಷ್ಣನ ಸಮಸ್ತ ಪಾಪಗಳೂ, ಮಾಯಾಸಂಬಂಧವಾದ ಕರ್ಮಗಳೂ ನಾಶವಾಗಿಹೋದುವು.

೧೮-೧೯. ಆಮೇಲೆ ಪಾಪಗಳೆಲ್ಲಾ ನಾಶವಾಗಲು ಆ ಉಪಮನ್ಯುವು ಕೃಷ್ಣನಿಗೆ "ಅಗ್ನಿರಿತಿ ಭಸ್ಮ" ಇತ್ಯಾದಿ ಮಂತ್ರಗಳಿಂದ ಕ್ರಮವಾಗಿ ವಿಧಿಯನ್ನನುಸರಿಸಿ ಭಸ್ಮೋದ್ಧೂಲನಮಾಡಿಸಿ, ಹನ್ನೆರಡು ತಿಂಗಳು ಪಾಶುಪತವ್ರತವನ್ನು ಮಾಡಿಸಿ ಬಳಿಕ ಉತ್ತಮವಾದ ಜ್ಞಾನವನ್ನು ಉಪದೇಶಮಾಡಿದನು.

೨೦. ಅದು ಮೊದಲುಗೊಂಡು ಪ್ರಸಿದ್ಧರಾದ ವ್ರತವನ್ನು ಮಾಡಿದ ಮುನಿಗಳೂ, ದೇವತೆಗಳೂ, ಪಾಶುಪತರೂ, ಎಲ್ಲರೂ ಕೃಷ್ಣನಸುತ್ತಲೂ ನೆರೆದು ಅವನನ್ನು ಸೇವಿಸುತ್ತಿದ್ದರು.

ತತೋ ಗುರುನಿಯೋಗಾದ್ವೈ ಕೃಷ್ಣಃ ಪರಮಶಕ್ತಿಮಾನ್ ।
ತಪಶ್ಚಕಾರ ಪುತ್ರಾರ್ಥಂ ಸಾಂಬಮುದ್ದಿಶ್ಯ ಶಂಕರಂ ॥ ೨೧ ॥

ತಪಸಾ ತೇನ ವರ್ಷಾಂತೇ ದೃಷ್ಟೋಽಸೌ ಪರಮೇಶ್ವರಃ ।
ಶ್ರಿಯಾ ಪರಮಯಾ ಯುಕ್ತಸ್ಸಾಂಬಶ್ಚ ಸಗಣಶ್ಶಿವಃ ॥ ೨೨ ॥

ವರಾರ್ಥಮಾವಿರ್ಭೂತಸ್ಯ ಹರಸ್ಯ ಸುಭಗಾಕೃತೇಃ ।
ಸ್ತುತಿಂ ಚಕಾರ ನತ್ವಾಸೌ ಕೃಷ್ಣಃ ಸಮ್ಯಕ್ಕೃತಾಂಜಲಿಃ ॥ ೨೩ ॥

ಸಾಂಬಂ ಸಗಣಮವ್ಯಗ್ರೋ ಲಬ್ಧವಾನ್ಪುತ್ರಮಾತ್ಮನಃ ।
ತಪಸಾ ತುಷ್ಟಚಿತ್ತೇನ ದತ್ತಂ ವಿಷ್ಣೋಶ್ಶಿವೇನ ವೈ ॥ ೨೪ ॥

ಯಸ್ಮಾತ್ಸಾಂಬೋ ಮಹಾದೇವಃ ಪ್ರದದೌ ಪುತ್ರಮಾತ್ಮನಃ ।
ತಸ್ಮಾಜ್ಜಾಂಬವತೀಸೂನುಂ ಸಾಂಬಂ ಚಕ್ರೇ ಸ ನಾಮತಃ ॥ ೨೫ ॥

---

೨೧. ಆಮೇಲೆ ಮಹಾಶಕ್ತನಾದ ಕೃಷ್ಣನು ಗುರುಗಳ ಅಪ್ಪಣೆಯಿಂದ ಅಂಬಾಸಹಿತನಾದ ಶಿವನನ್ನು ಕುರಿತು ಪುತ್ರಪ್ರಾಪ್ತಿಗಾಗಿ ತಪಸ್ಸನ್ನು ಮಾಡಿದನು.

೨೨. ಒಂದು ವರ್ಷ ಅವನು ತಪಸ್ಸನ್ನು ಮಾಡಿದಮೇಲೆ ಕೊನೆಯಲ್ಲಿ ವಿಶೇಷವಾದ ಕಾಂತಿಯಿಂದಲೂ, ಸಂಪತ್ತಿನಿಂದಲೂ, ಗಣಗಳಿಂದಲೂ ಕೂಡಿದ ಅಂಬಾಸಹಿತನಾದ ಪರಮೇಶ್ವರನು ಅವನಿಗೆ ಪ್ರತ್ಯಕ್ಷನಾದನು.

೨೩. ವರವನ್ನು ಕೊಡುವುದಕ್ಕಾಗಿ ಪ್ರತ್ಯಕ್ಷವಾಗಿ ಬಂದ ಸುಂದರಾಕಾರನಾದ ಶಿವನಿಗೆ ಕೃಷ್ಣನು ನಮಸ್ಕಾರಮಾಡಿ ಕೈಜೋಡಿಸಿ ನಿಂತು ಸ್ತೋತ್ರ ಮಾಡಿದನು.

೨೪–೨೫. ಮನಸ್ಸಿನ ಚಾಂಚಲ್ಯವಿಲ್ಲದೆ ಸ್ತೋತ್ರಮಾಡಿ ಶಿವನ ವರದಿಂದ ಪುತ್ರನನ್ನು ಪಡೆದನು. ತಪಸ್ಸಿನಿಂದ ಸಂತೋಷಪಟ್ಟ ಶಿವನು ವರವನ್ನು ಕೊಟ್ಟಮೇಲೆ ಕೃಷ್ಣನು ಜಾಂಬವತಿಯೆಂಬ ಹೆಂಡತಿಯಲ್ಲಿ ಹುಟ್ಟಿದ ತನ್ನ ಮಗನಿಗೆ ಸಾಂಬನ (ಅಂಬಾಸಹಿತನಾದ ಪರಮೇಶ್ವರನ) ವರದಿಂದ ಹುಟ್ಟಿದವನಾದುದರಿಂದ ಸಾಂಬನೆಂದೇ ಹೆಸರಿಟ್ಟನು.

ತದೇತತ್ಕಥಿತಂ ಸರ್ವಂ ಕೃಷ್ಣಸ್ಯಾಮಿತಕರ್ಮಣಃ ।
ಮಹರ್ಷೇರ್ಜ್ಞಾನಲಾಭಶ್ಚ ಪುತ್ರಲಾಭಶ್ಚ ಶಂಕರಾತ್ ॥ ೨೬ ॥

ಯ ಇದಂ ಕೀರ್ತಯೇನ್ನಿತ್ಯಂ ಶೃಣುಯಾಚ್ಛ್ರಾವಯೇತ್ತಥಾ ।
ಸ ವಿಷ್ಣೋರ್ಜ್ಞಾನಮಾಸಾದ್ಯ ತೇನೈವ ಸಹ ಮೋದತೇ ॥ ೨೭ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-
ಮುತ್ತರಭಾಗೇ ಕೃಷ್ಣಪುತ್ರಪ್ರಾಪ್ತಿವರ್ಣನಂ ನಾಮ
ಪ್ರಥಮೋಽಧ್ಯಾಯಃ

---

೨೬-೨೭. ಮಹಾಸಾಹಸಿಯಾದ ಕೃಷ್ಣನಿಗೆ, ಮಹರ್ಷಿಯಿಂದ ಜ್ಞಾನ ಲಾಭವೂ, ಶಂಕರನಿಂದ ಪುತ್ರಲಾಭವೂ, ಉಂಟಾದ ಈ ವೃತ್ತಾಂತವನ್ನೆಲ್ಲಾ ಹೇಳಿದೆನು. ಇದನ್ನು ನಿತ್ಯವೂ ಪಠಿಸುವವರೂ, ಶ್ರವಣಮಾಡುವವರೂ ವಿಷ್ಣುವಿನಿಂದ ಜ್ಞಾನವನ್ನು ಪಡೆದು ಅವನೊಡನೆ ಸಂತೋಷವನ್ನು ಅನುಭವಿಸುವರು.

ಇಲ್ಲಿಗೆ ಶ್ರೀಶಿವಮಹಾಪುರಾಣದ ಏಳನೆಯ ವಾಯವೀಯಸಂಹಿತೆಯ
ಉತ್ತರಭಾಗದಲ್ಲಿ ಕೃಷ್ಣನ ಪುತ್ರಪ್ರಾಪ್ತಿವರ್ಣನವೆಂಬ
ಮೊದಲನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ದ್ವಿತೀಯೋಽಧ್ಯಾಯಃ

---

॥ ಋಷಯ ಊಚುಃ ॥

ಕಿಂತತ್ಪಾಶುಪತಂ ಜ್ಞಾನಂ ಕಥಂ ಪಶುಪತಿಶ್ಶಿವಃ ।
ಕಥಂ ಧೌಮ್ಯಾಗ್ರಜಃ ಪೃಷ್ಟಃ ಕೃಷ್ಣೇನಾಕ್ಲಿಷ್ಟಕರ್ಮಣಾ ॥ ೧ ॥

ಏತತ್ಸರ್ವಂ ಸಮಾಚಕ್ಷ್ವ ವಾಯೋ ಶಂಕರವಿಗ್ರಹ ।
ತ್ವತ್ಸಮೋ ನ ಹಿ ವಕ್ತಾಸ್ತಿ ತ್ರೈಲೋಕ್ಯೇಷ್ವಪರಃ ಪ್ರಭುಃ ॥ ೨ ॥

---

## ಎರಡನೆಯ ಅಧ್ಯಾಯವು.

೧-೨. ಋಷಿಗಳು ಕೇಳಿದರು—ಎಲೈ ವಾಯುದೇವನೇ, ಪಾಶುಪತ ಜ್ಞಾನವೆಂಬುದಾವುದು? ಶಿವನು ಪಶುಪತಿಯು ಹೇಗಾದನು? ಕೃಷ್ಣನು ಉಪಮನ್ಯುವನ್ನು ಹೇಗೆ ಪ್ರಶ್ನೆಮಾಡಿದನು? ಶಿವಸ್ವರೂಪನಾದ ಓ ವಾಯುದೇವನೇ, ನಿನ್ನ ಸಮಾನವಾಗಿ ಹೇಳುವವರು ಮೂರು ಲೋಕದಲ್ಲಿ ಮತ್ತಾರೂ ಇಲ್ಲ. ಆದುದರಿಂದ ಈ ವಿಷಯಗಳನ್ನೆಲ್ಲಾ ನಮಗೆ ವಿವರಿಸಿ ಹೇಳು ಎಂದರು.

॥ ಸೂತ ಉವಾಚ ॥

**ಇತ್ಯಾಕರ್ಣ್ಯ ವಚಸ್ತೇಷಾಂ ಮಹರ್ಷೀಣಾಂ ಪ್ರಭಂಜನಃ ।**
**ಸಂಸ್ಮೃತ್ಯ ಶಿವಮೀಶಾನಂ ಪ್ರವಕ್ತುಮುಪಚಕ್ರಮೇ ॥ ೩ ॥**

॥ ವಾಯುರುವಾಚ ॥

**ಪುರಾ ಸಾಕ್ಷಾನ್ಮಹೇಶೇನ ಶ್ರೀಕಂಠಾಖ್ಯೇನ ಮಂದರೇ ।**
**ದೇವ್ಯೈ ದೇವೇನ ಕಥಿತಂ ಜ್ಞಾನಂ ಪಾಶುಪತಂ ಪರಂ ॥ ೪ ॥**

**ತದೇವ ಪೃಷ್ಟಂ ಕೃಷ್ಣೇನ ವಿಷ್ಣುನಾ ವಿಶ್ವಯೋನಿನಾ ।**
**ಪಶುತ್ವಂ ಚ ಸುರಾದೀನಾಂ ಪತಿತ್ವಂ ಚ ಶಿವಸ್ಯ ಚ ॥ ೫ ॥**

**ಯಥೋಪದಿಷ್ಟಂ ಕೃಷ್ಣಾಯ ಮುನಿನಾ ಹ್ಯುಪಮನ್ಯುನಾ ।**
**ತಥಾ ಸಮಾಸತೋ ವಕ್ಷ್ಯೇ ತಚ್ಛೃಣುಧ್ವಮತಂದ್ರಿತಾಃ ॥ ೬ ॥**

**ಪುರೋಪಮನ್ಯುಮಾಸೀನಂ ವಿಷ್ಣುಃ ಕೃಷ್ಣವಪುರ್ಧರಃ ।**
**ಪ್ರಣಿಪತ್ಯ ಯಥಾನ್ಯಾಯಮಿದಂ ವಚನಮಬ್ರವೀತ್ ॥ ೭ ॥**

---

೩. ಸೂತನು ಹೇಳಿದನು-ಮಹರ್ಷಿಗಳು ಈ ರೀತಿ ಕೇಳಲು, ವಾಯು ದೇವನು ಸ್ವಾಮಿಯಾದ ಶಿವನನ್ನು ಸ್ಮರಿಸಿ ಹೇಳುವುದಕ್ಕೆ ಪ್ರಾರಂಭಿಸಿದನು.

೪-೬. ಹಿಂದೆ ಶ್ರೀಕಂಠನೆಂಬ ಹೆಸರನ್ನು ಹೊಂದಿದ ಮಹೇಶ್ವರನು ಶ್ರೇಷ್ಠವಾದ ಪಾಶುಪತಜ್ಞಾನವನ್ನು ದೇವಿಗೆ ಹೇಳಿದನು. ಪ್ರಪಂಚದ ಉತ್ಪತ್ತಿಗೆ ಕಾರಣನಾದ ವಿಷ್ಣುವು ಕೃಷ್ಣಾವತಾರವನ್ನು ಮಾಡಿದಾಗ ಇದೇ ವಿಷಯವನ್ನೇ ಉಪಮನ್ಯುವನ್ನು ಕುರಿತು ಪ್ರಶ್ನೆಮಾಡಿದನು. ಆ ಉಪಮನ್ಯು ಮುನಿಯು ದೇವತೆಗಳೇ ಮೊದಲಾದ ಸಮಸ್ತಜೀವರುಗಳೂ ಪಶುಗಳೆಂದೂ, ಪರಮಾತ್ಮನಾದ ಶಿವನು ಪತಿಯೆಂದೂ ಕೃಷ್ಣನಿಗೆ ಉಪದೇಶಮಾಡಿದನು. ಅದನ್ನೇ ಸಂಗ್ರಹವಾಗಿ ಹೇಳುವೆನು. ಅದನ್ನು ನೀವು ಮನಸ್ಸಿಟ್ಟು ಕೇಳಿರಿ.

೭. ತನ್ನ ಮುಂದೆ ಕುಳಿತಿರುವ ಉಪಮನ್ಯುಮುನಿಯ ಸಮೀಪಕ್ಕೆ ಕೃಷ್ಣನು ಹೋಗಿ ಅವನಿಗೆ ಯಥಾವಿಧಿಯಾಗಿ ನಮಸ್ಕರಿಸಿ ಇಂತೆಂದನು.

॥ ಶ್ರೀಕೃಷ್ಣ ಉವಾಚ ॥

ಭಗವನ್ ಶ್ರೋತುಮಿಚ್ಛಾಮಿ ದೇವ್ಯೈ ದೇವೇನ ಭಾಷಿತಂ ।
ದಿವ್ಯಂ ಪಾಶುಪತಂ ಜ್ಞಾನಂ ವಿಭೂತಿಂ ಚಾಸ್ಯ ಕೃತ್ಸ್ನಶಃ ॥ ೮ ॥

ಕಥಂ ಪಶುಪತಿರ್ದೇವಃ ಪಶವಃ ಕೇ ಪ್ರಕೀರ್ತಿತಾಃ ।
ಕೈಃ ಪಾಶೈಸ್ತೇ ನಿಬಧ್ಯಂತೇ ವಿಮುಚ್ಯಂತೇ ಚ ತೇ ಕಥಂ ॥ ೯ ॥

ಇತಿ ಸಂಚೋದಿತಃ ಶ್ರೀಮಾನುಪಮನ್ಯುರ್ಮಹಾತ್ಮನಾ ।
ಪ್ರಣಮ್ಯ ದೇವಂ ದೇವೀಂ ಚ ಪ್ರಾಹ ಪೃಷ್ಟೋ ಯಥಾ ತಥಾ ॥ ೧೦ ॥

॥ ಉಪಮನ್ಯುರುವಾಚ ॥

ಬ್ರಹ್ಮಾದ್ಯಾಃ ಸ್ಥಾವರಾಂತಾಶ್ಚ ದೇವದೇವಸ್ಯ ಶೂಲಿನಃ ।
ಪಶವಃ ಪರಿಕೀರ್ತ್ಯಂತೇ ಸಂಸಾರವಶವರ್ತಿನಃ ॥ ೧೧ ॥

---

೮–೯. ಶ್ರೀಕೃಷ್ಣನು ಹೇಳಿದನು.—ಎಲೈ ಮಹಾತ್ಮನಾದ ಉಪಮನ್ಯು ಮುನಿಯೇ, ದೇವನಾದ ಶಿವನು, ದೇವಿಯಾದ ಪಾರ್ವತಿಗೆ ಹೇಳಿದ ಶ್ರೇಷ್ಠವಾದ ಪಾಶುಪತಜ್ಞಾನವನ್ನೂ, ಅವನ ಅನೇಕವಿಧವಾದ ಮಹಿಮೆಗಳನ್ನೂ ಕೇಳಬೇಕೆಂದು ಬಯಸುವೆನು. ದೇವನಾದ ಶಿವನು ಹೇಗೆ ಪಶುಪತಿಯಾದನು? ಪಶುಗಳು ಯಾರು? ಆ ಪಶುಗಳನ್ನು ಕಟ್ಟುವ ಪಾಶ (ಹಗ್ಗ)ಗಳಾವವು? ಆ ಕಟ್ಟನ್ನು ಅವು ಬಿಡಿಸಿಕೊಳ್ಳುವುದು ಹೇಗೆ?

೧೦. ಹೀಗೆಂದು ಮಹಾತ್ಮನಾದ ಕೃಷ್ಣನು ಉಪಮನ್ಯುವನ್ನು ಪ್ರಶ್ನೆ ಮಾಡಲು ಆ ಉಪಮನ್ಯುವು ಉಮಾಮಹೇಶ್ವರರಿಗೆ ನಮಸ್ಕಾರವನ್ನು ಮಾಡಿ ಅವನ ಪ್ರಶ್ನೆಗೆ ತಕ್ಕ ಉತ್ತರಗಳನ್ನು ಹೇಳಲುಪಕ್ರಮಿಸಿದನು.

೧೧–೧೨. ಬ್ರಹ್ಮನು ಮೊದಲುಗೊಂಡು ವೃಕ್ಷಗಳವರೆಗೆ ಇರುವ ಸಮಸ್ತ ಚರಾಚರ ಜೀವರಾಶಿಗಳೆಲ್ಲ ಜನನಮರಣರೂಪವಾದ ಸಂಸಾರಕ್ಕೆ ಅಧೀನರಾಗಿರುವುದರಿಂದ ಪಶುಗಳೆನಿಸುವರು. ಇಂತಹ ಜೀವರುಗಳಿಗೆಲ್ಲ ಶಿವನು ಸ್ವಾಮಿಯಾಗಿರುವುದರಿಂದ ಪಶುಪತಿಯೆನಿಸುವನು. ಆ ಶಿವನು, ಪಾಪ,

**ತೇಷಾಂ ಪತಿತ್ವಾದ್ದೇವೇಶಃ ಶಿವಃ ಪಶುಪತಿಸ್ಸ್ಮೃತಃ ।**
**ಮಲಮಾಯಾದಿಭಿಃ ಪಾಶೈಃ ಸ ಬಧ್ನಾತಿ ಪಶೂನ್ಪತಿಃ ॥ ೧೨ ॥**

**ಸ ಏವ ಮೋಚಕಸ್ತೇಷಾಂ ಭಕ್ತ್ಯಾ ಸಮ್ಯಗುಪಾಸಿತಃ ।**
**ಚತುರ್ವಿಂಶತಿತತ್ತ್ವಾನಿ ಮಾಯಾಕರ್ಮಗುಣಾ ಅಮೀ ॥ ೧೩ ॥**

**ವಿಷಯಾ ಇತಿ ಕಥ್ಯಂತೇ ಪಾಶಾ ಜೀವನಿಬಂಧನಾಃ ।**
**ಬ್ರಹ್ಮಾದಿಸ್ತಂಬಪರ್ಯಂತಾನ್ಪಶೂನ್ಬಧ್ವಾ ಮಹೇಶ್ವರಃ ॥ ೧೪ ॥**

**ಪಾಶೈರೇತೈಃ ಪತಿರ್ದೇವಃ ಕಾರ್ಯಂ ಕಾರಯತಿ ಸ್ವಕಂ ।**
**ತಸ್ಯಾಜ್ಞಯಾ ಮಹೇಶಸ್ಯ ಪ್ರಕೃತಿಃ ಪುರುಷೋಚಿತಾಂ ॥ ೧೫ ॥**

**ಬುದ್ಧಿಂ ಪ್ರಸೂತೇ ಸಾ ಬುದ್ಧಿರಹಂಕಾರಮಹಂಕೃತಿಃ ।**
**ಇಂದ್ರಿಯಾಣಿ ದಶೈಕಂ ಚ ತನ್ಮಾತ್ರಾಪಂಚಕಂ ತಥಾ ॥ ೧೬ ॥**

ಅಜ್ಞಾನ, ಮುಂತಾದ ಪಾಶಗಳಿಂದ ಆ ಜೀವರುಗಳನ್ನು ಕಟ್ಟುವನು. ಜೀವರು ಭಕ್ತಿಯಿಂದ ಶಿವನ ಉಪಾಸನೆಯನ್ನು ಮಾಡಿದರೆ ಅವನೇ ಆ ಕಟ್ಟಿನಿಂದ ಅವರನ್ನು ಬಿಡಿಸುವನು.

೧೩–೧೪. ಮಾಯೆಯ ಗುಣಕರ್ಮಸ್ವರೂಪವಾದ ಇಪ್ಪತ್ತನಾಲ್ಕು ತತ್ತ್ವಗಳನ್ನು ವಿಷಯುಗಳೆಂದು ಹೇಳುವರು. ಈ ವಿಷಯುಗಳೇ ಜೀವಗಳನ್ನು ಕಟ್ಟುವ ಹಗ್ಗಗಳು (ಪಾಶಗಳು). ಮಹೇಶ್ವರನು ಈ ವಿಧವಾದ ಹಗ್ಗಗಳಿಂದ ಬ್ರಹ್ಮನೇ ಮೊದಲಾಗಿ ಸ್ತಂಬವೆಂಬ ಒಂದು ಸಣ್ಣ ಹುಳುವಿನವರಿಗೆ ಇರುವ ಪಶುಸ್ವರೂಪರಾದ, ಸಮಸ್ತ ಜೀವರುಗಳನ್ನೂ ಕಟ್ಟಿ ಇವರಿಂದ ತನ್ನ ಕೆಲಸಗಳನ್ನು ಮಾಡಿಸುವನು.

೧೫–೧೬. ಆ ಮಹೇಶ್ವರನ ಆಜ್ಞೆಯಿಂದ, ಪುರುಷನಿಂದ ಜೀವನಿಗೆ ವಾಸನಾರೂಪವಾದ ಕರ್ಮಫಲಗಳಿಗೆ ತಕ್ಕ ಬುದ್ಧಿಯು ಪ್ರಕೃತಿಯಿಂದ ಹುಟ್ಟುವುದು. ಆ ಬುದ್ಧಿಯಿಂದ ಅಹಂಕಾರವು ಹುಟ್ಟುವುದು. ಆ ಅಹಂಕಾರದಿಂದ ಜ್ಞಾನಕರ್ಮೇಂದ್ರಿಯಗಳೂ, ಮನಸ್ಸೂ ಕೂಡಿ ಹನ್ನೊಂದು ಇಂದ್ರಿಯಗಳೂ, ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಪಂಚ ತನ್ಮಾತ್ರಗಳೂ ಹುಟ್ಟುವುವು.

**ಶಾಸನಾದ್ದೇವದೇವಸ್ಯ ಶಿವಸ್ಯ ಶಿವದಾಯಿನಃ ।**
**ತನ್ಮಾತ್ರಾಣ್ಯಪಿ ತಸ್ಯೈವ ಶಾಸನೇನ ಮಹೀಯಸಾ ॥ ೧೭ ॥**

**ಮಹಾಭೂತಾನ್ಯಶೇಷಾಣಿ ಭಾವಯಂತ್ಯನುಪೂರ್ವಶಃ ।**
**ಬ್ರಹ್ಮಾದೀನಾಂ ತೃಣಾಂತಾನಾಂ ದೇಹಿನಾಂ ದೇಹಸಂಗತಿ ॥ ೧೮ ॥**

**ಮಹಾಭೂತಾನ್ಯಶೇಷಾಣಿ ಜನಯಂತಿ ಶಿವಾಜ್ಞಯಾ ।**
**ಅಧ್ಯವಸ್ಯತಿ ವೈ ಬುದ್ಧಿರಹಂಕಾರೋಽಭಿಮನ್ಯತೇ ॥ ೧೯ ॥**

**ಚಿತ್ತಂ ಚೇತಯತೇ ಚಾಪಿ ಮನಃ ಸಂಕಲ್ಪಯತ್ಯಪಿ ।**
**ಶ್ರೋತ್ರಾದೀನಿ ಚ ಗೃಹ್ಣಂತಿ ಶಬ್ದಾದೀನ್ವಿಷಯಾನ್ಪೃಥಕ್ ॥ ೨೦ ॥**

**ಸ್ವಾನೇವ ನಾನ್ಯಾನ್ದೇವಸ್ಯ ದಿವ್ಯೇನಾಜ್ಞಾಬಲೇನ ವೈ ।**
**ವಾಗಾದೀನ್ಯಪಿ ಯಾನ್ಯಾಸಂಸ್ತಾನಿ ಕರ್ಮೇಂದ್ರಿಯಾಣಿ ಚ ॥ ೨೧ ॥**

---

೧೭-೧೮. ಲೋಕಕ್ಕೆಲ್ಲಾ ಮಂಗಳವನ್ನುಂಟುಮಾಡುವ ಆ ಶಿವನ ಆಜ್ಞೆಯಿಂದಲೇ ಪಂಚಮಹಾಭೂತಗಳು ಹಿಂದಿನ ಸೃಷ್ಟಿಕ್ರಮದಂತೆ ಹುಟ್ಟುವುವು. ಬ್ರಹ್ಮನೇ ಮೊದಲಾದ ಹುಲ್ಲುಕಡ್ಡಿಯವರೆಗೆ ಇರುವ ಸಕಲ ಶರೀರಗಳನ್ನೂ, ಆ ಪಂಚಭೂತಗಳು ಶಿವನ ಅಜ್ಞೆಯಿಂದಲೇ ಹುಟ್ಟಿಸುವುವು.

೧೯-೨೦. ಬುದ್ಧಿಯು ನಿಶ್ಚಯಸ್ವರೂಪವಾದುದು. ಅಹಂಕಾರವು ಅಭಿಮಾನಸ್ವರೂಪವಾದುದು. ಚಿತ್ತವು ಚಲನಾತ್ಮಕವಾದುದು. ಮನಸ್ಸು ಸಂಕಲ್ಪರೂಪವಾದುದು. ಶ್ರೋತ್ರಾದಿಪಂಚಜ್ಞಾನೇಂದ್ರಿಯಗಳು ಶಬ್ದಾದಿ ತಂತಮ್ಮ ವಿಷಯಗಳನ್ನು ಬೇರೆಯಾಗಿ ಗ್ರಹಿಸುವುವು. ಬೇರೆಯಾದ ಇಂದ್ರಿಯ ವಿಷಯಗಳನ್ನು ಗ್ರಹಿಸಲಾರವು. ಇವುಗಳಿಗೆಲ್ಲ ದೇವದೇವನಾದ ಶಿವನ ಶ್ರೇಷ್ಠವಾದ ಆಜ್ಞಾಬಲವೇ ಕಾರಣವು.

೨೧-೨೨. ವಾಗಾದಿ ಕರ್ಮೇಂದ್ರಿಯಗಳೂ, ಶಿವನ ಅಪ್ಪಣೆಯಿಂದ ತಂತಮ್ಮ ಕೆಲಸಗಳನ್ನು ಮಾಡುವುವು. ಮತ್ತೊಂದರ ಕೆಲಸವನ್ನು ಮಾಡವು. ಎಂದರೆ, ಒಂದು ಇಂದ್ರಿಯವು ಮತ್ತೊಂದು ಇಂದ್ರಿಯದ ಕೆಲಸವನ್ನು ಮಾಡ

**ಯಥಾ ಸ್ವಂ ಕರ್ಮ ಕುರ್ವಂತಿ ನಾನ್ಯತ್ಕಿಂಚಿಚ್ಛಿವಾಜ್ಞಯಾ ।**
**ಶಬ್ದಾದಯೋಽಪಿ ಗೃಹ್ಯಂತೇ ಕ್ರಿಯಂತೇ ವಚನಾದಯಃ ॥ ೨೨ ॥**

**ಅವಿಲಂಘ್ಯಾ ಹಿ ಸರ್ವೇಷಾಮಾಜ್ಞಾ ಶಂಭೋರ್ಗರೀಯಸೀ ।**
**ಅವಕಾಶಮಶೇಷಾಣಾಂ ಭೂತಾನಾಂ ಸಂಪ್ರಯಚ್ಛತಿ ॥ ೨೩ ॥**

**ಆಕಾಶಃ ಪರಮೇಶಸ್ಯ ಶಾಸನಾದೇವ ಸರ್ವಗಃ ।**
**ಪ್ರಾಣಾದ್ಯೈಶ್ಚ ತಥಾ ನಾಮಭೇದೈರಂತರ್ಬಹಿರ್ಜಗತ್ ॥ ೨೪ ॥**

**ಬಿಭರ್ತಿ ಸರ್ವಂ ಶರ್ವಸ್ಯ ಶಾಸನೇನ ಪ್ರಭಂಜನಃ ।**
**ಹವ್ಯಂ ವಹತಿ ದೇವಾನಾಂ ಕವ್ಯಂ ಕವ್ಯಾಶಿನಾಮಪಿ ॥ ೨೫ ॥**

**ಪಾಕಾದ್ಯಂ ಚ ಕರೋತ್ಯಗ್ನಿಃ ಪರಮೇಶ್ವರಶಾಸನಾತ್ ।**
**ಸಂಜೀವನಾದ್ಯಂ ಸರ್ವಸ್ಯ ಕುರ್ವಂತ್ಯಾಪಸ್ತದಾಜ್ಞಯಾ ॥ ೨೬ ॥**

---

ಲಸಮರ್ಥವು. ಜ್ಞಾನೇಂದ್ರಿಯಗಳು ಶಬ್ದಾದಿ ವಿಷಯಗಳನ್ನು ಗ್ರಹಿಸುವುವು. ಕರ್ಮೇಂದ್ರಿಯಗಳು ವಾಗಾದಿ ವ್ಯಾಪಾರಗಳನ್ನು ಮಾಡುವುವು. ಶಿವನ ಈ ಮಹಾ ಆಜ್ಞೆಯನ್ನು ಯಾರೂ ಮೀರಲಾಗುವುದಿಲ್ಲ.

೨೩–೨೪. ಆ ಪರಮೇಶ್ವರನ ಆಜ್ಞೆಯಿಂದಲೇ ಸಮಸ್ತಭೂತಗಳಿಗೂ ಆಕಾಶವು ಅವಕಾಶವನ್ನು ಕೊಟ್ಟಿರುವುದು. ವಾಯುವು ಪ್ರಾಣ, ಅಪಾನ, ಮೊದಲಾದ ಅನೇಕ ಹೆಸರುಗಳಿಂದ ಪ್ರಪಂಚದ ಸಕಲ ಜೀವಶರೀರಗಳ ಒಳಗೂ ಹೊರಗೂ, ವ್ಯಾಪಿಸಿ, ಶರೀರವನ್ನು ಧರಿಸಿರುವುದು. ಪ್ರಭಂಜನನೆಂಬವಾಯುವೂ ಸಹ ಶಿವನ ಆಜ್ಞೆಯಿಂದಲೇ ಸಮಸ್ತ ಜೀವರಾಶಿಗಳನ್ನು ಧರಿಸಿರುವುದು.

೨೫–೨೬. ಆ ಪರಮೇಶ್ವರನ ಆಜ್ಞೆಯಿಂದಲೇ ಅಗ್ನಿಯು ದೇವತೆಗಳಿಗೆ ಹವಿಸ್ಸನ್ನೂ, ಪಿತೃಗಳಿಗೆ ಕವ್ಯವನ್ನೂ, ಕೊಟ್ಟು ಪಾಕಾದಿ ಕಾರ್ಯಗಳಿಗೆ ಸಹಾಯಕನಾಗಿರುವನು. ಜಲವು ಎಲ್ಲರನ್ನೂ ಪ್ರಾಣಸಹಿತರಾಗಿರುವಂತೆ ಮಾಡಿರುವುದು. ಭೂಮಿಯು, ಪ್ರಪಂಚವನ್ನು ಯಾವಾಗಲೂ ಧರಿಸಿರುವುದು.

ವಿಶ್ವಂಭರಾ ಜಗನ್ನಿತ್ಯಂ ಧತ್ತೇ ವಿಶ್ವೇಶ್ವರಾಜ್ಞಯಾ ।
ದೇವಾನ್ಪಾತ್ಯಸುರಾರ್ ಹಂತಿ ತ್ರಿಲೋಕಮಭಿರಕ್ಷತಿ ॥ ೨೭ ॥

ಆಜ್ಞಯಾ ತಸ್ಯ ದೇವೇಂದ್ರಃ ಸರ್ವೈರ್ದೇವೈರಲಂಘ್ಯಯಾ ।
ಆಧಿಪತ್ಯಮಪಾಂ ನಿತ್ಯಂ ಕುರುತೇ ವರುಣಸ್ತದಾ ॥ ೨೮ ॥

ಪಾಶೈರ್ಬಧ್ನಾತಿ ಚ ಯಥಾ ದಂಡ್ಯಾಂಸ್ತಸ್ಯೈವ ಶಾಸನಾತ್ ।
ದದಾತಿ ನಿತ್ಯಂ ಯಕ್ಷೇಂದ್ರೋ ದ್ರವಿಣಂ ದ್ರವಿಣೇಶ್ವರಃ ॥ ೨೯ ॥

ಪುಣ್ಯಾನುರೂಪಂ ಭೂತೇಭ್ಯಃ ಪುರುಷಸ್ಯಾನುಶಾಸನಾತ್ ।
ಕರೋತಿ ಸಂಪದಶ್ಯೈಶ್ವಜ್ಞಾನಂ ಚಾಪಿ ಸುಮೇಧಸಾಂ ॥ ೩೦ ॥

ನಿಗ್ರಹಂ ಚಾಪ್ಯಸಾಧೂನಾಮೀಶಾನಃ ಶಿವಶಾಸನಾತ್ ।
ಧತ್ತೇ ತು ಧರಣೀಂ ಮೂರ್ಧ್ನಾ ಶೇಷಃ ಶಿವನಿಯೋಗತಃ ॥ ೩೧ ॥

ಯಾಮಾಹುಸ್ತಾಮಸೀಂ ರೌದ್ರೀಂ ಮೂರ್ತಿಮಂತಕರೀಂ ಹರೇಃ ।
ಸೃಜತ್ಯಶೇಷಮೀಶಸ್ಯ ಶಾಸನಾಚ್ಚತುರಾನನಃ ॥ ೩೨ ॥

---

ದೇವೇಂದ್ರನು ದೈತ್ಯರನ್ನು ಸಂಹರಿಸಿ ದೇವತೆಗಳನ್ನೂ ಮೂರು ಲೋಕವನ್ನೂ ಕಾಪಾಡುವನು. ಯಾವ ದೇವತೆಗಳೂ ಪರಮೇಶ್ವರನ ಆಜ್ಞೆಯನ್ನು ಮೀರಲು ಸಾಧ್ಯವಿಲ್ಲ.

೨೮–೩೦. ಆ ಶಿವನ ಅಪ್ಪಣೆಯಿಂದಲೇ ವರುಣನು ನೀರಿಗೆ ಅಧಿಪತಿಯಾಗಿರುವನು. ತಪ್ಪುಮಾಡಿದವರನ್ನು ತನ್ನ ಪಾಶಾಯುಧದಿಂದ ಕಟ್ಟುವನು. ಯಕ್ಷರಿಗೆ ಒಡೆಯನೂ, ಧನಗಳಿಗೆ ಸ್ವಾಮಿಯೂ ಆದ ಕುಬೇರನು ಪ್ರಾಣಿಗಳಿಗೆ ಅವರವರ ಪುಣ್ಯಾನುಸಾರವಾಗ ಧನವನ್ನು ಕೊಡುವನು. ಈಶಾನನು ಪ್ರಾಣಿಗಳಿಗೆ ಸಂಪತ್ತನ್ನೂ, ಜ್ಞಾನವನ್ನೂ, ಒಳ್ಳೆಯ ಸೂಕ್ಷ್ಮಬುದ್ಧಿಯನ್ನೂ ಕೊಡುವನಲ್ಲದೆ ದುಷ್ಟರ ನಿಗ್ರಹವನ್ನೂ ಮಾಡುವನು.

೩೧–೩೩. ಶಿವನ ಅಪ್ಪಣೆಯಿಂದಲೇ ಆದಿಶೇಷನು ತನ್ನ ತಲೆಯ ಮೇಲೆ ಭೂಮಿಯನ್ನು ಹೊತ್ತಿರುವನು. ಬ್ರಹ್ಮನು ಶಿವನ ಅಪ್ಪಣೆಯಿಂದಲೇ

ಅನ್ಯಾಭಿರ್ಮೂರ್ತಿಭಿಸ್ತ್ವಾಭಿಃ ಪಾತಿ ಚಾಂತೇ ನಿಹಂತಿ ಚ ।
ವಿಷ್ಣುಃ ಪಾಲಯತೇ ನಿತ್ಯಂ ಕಾಲಕಾಲಸ್ಯ ಶಾಸನಾತ್ ॥ ೩೩ ॥

ಸೃಜತೇತ್ರಸತೇ ಚಾಪಿ ಸ್ವಕಾಭಿಸ್ತನುಭಿಸ್ತ್ರಿಭಿಃ ।
ಹರತ್ಯಂತೇ ಜಗತ್ಸರ್ವಂ ಹರಸ್ತಸ್ಯೈವ ಶಾಸನಾತ್ ॥ ೩೪ ॥

ಸೃಜತ್ಯಪಿ ಚ ವಿಶ್ವಾತ್ಮಾ ತ್ರಿಧಾ ಭಿನ್ನಸ್ತು ರಕ್ಷತಿ ।
ಕಾಲಃ ಕರೋತಿ ಸಕಲಂ ಕಾಲಃ ಸಂಹರತಿ ಪ್ರಜಾಃ ॥ ೩೫ ॥

ಕಾಲಃ ಪಾಲಯತೇ ವಿಶ್ವಂ ಕಾಲಕಾಲಸ್ಯ ಶಾಸನಾತ್ ।
ತ್ರಿಭಿರಂಶೈರ್ಜಗದ್ಬಿಭ್ರತ್ತೇಜೋಭಿರ್ವೃಷ್ಟಿಮಾದಿಶನ್ ॥ ೩೬ ॥

ದಿವಿ ವರ್ಷತ್ಯಸೌ ಭಾನುರ್ದೇವದೇವಸ್ಯ ಶಾಸನಾತ್ ।
ಪುಷ್ಣಾತ್ಯೋಷಧಿಜಾತಾನಿ ಭೂತಾನ್ಯಾಹ್ಲಾದಯತ್ಯಪಿ ॥ ೩೭ ॥

---

ಸಮಸ್ತ ಪ್ರಪಂಚವನ್ನೂ ಸೃಷ್ಟಿಸುವನು. ಅವನು ತನ್ನದೇ ಆದ ಬೇರೆ ರೂಪದಿಂದ ಲೋಕವನ್ನು ಕಾಪಾಡಿ, ಮತ್ತೊಂದು ರೂಪದಿಂದ ಅದನ್ನು ನಾಶಮಾಡುವನು- ವಿಷ್ಣುವು ಶಿವನ ಆಜ್ಞೆಯಿಂದ ಯಾವಾಗಲೂ ಪ್ರಪಂಚವನ್ನು ರಕ್ಷಿಸುವ ಕಾರ್ಯದಲ್ಲಿರುವನು.

೩೪. ಆ ಶಿವನೇ ತನ್ನ ಮೂರು ರೂಪಗಳಿಂದ, ಸೃಷ್ಟಿ, ಸ್ಥಿತಿ ಸಂಹಾರಗಳನ್ನು ಮಾಡುವನು. ಹರನು ಜಗತ್ತನ್ನು ನಾಶಮಾಡುವುದು ತನ್ನ ಮುಖ್ಯ ಕಾರ್ಯವಾದರೂ, ತನ್ನ ಮೂರು ಅಂಶಗಳಿಂದ ಸೃಷ್ಟಿಯನ್ನೂ ರಕ್ಷಣೆಯನ್ನೂ ಮಾಡುವನು. ಎಂದರೆ ಆ ಶಿವನಿಗೆ ಸೃಷ್ಟಿ, ಸ್ಥಿತಿ, ಸಂಹಾರರೂಪವಾದ ಮೂರು ಶಕ್ತಿಗಳೂ ಇರುವುದೆಂದು ಅಭಿಪ್ರಾಯವು.

೩೫-೩೭. ಕಾಲಕಾಲನಾದ ಪರಮೇಶ್ವರನ ಅಪ್ಪಣೆಯಿಂದಲೇ ಕಾಲವು ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಮಾಡುವುದು. ಸೂರ್ಯನು ಶಿವನ ಆಜ್ಞೆಯಿಂದಲೇ ತನ್ನ ಮೂರು ಅಂಶಗಳಿಂದ ಜಗತ್ತನ್ನು ಧರಿಸಿ ಅಂತರಿಕ್ಷದಲ್ಲಿ ಮಳೆಯನ್ನುಂಟುಮಾಡುವನು. ಚಂದ್ರನು ಶಿವನ ಅಪ್ಪಣೆಯಂತೆ ಓಷಧಿಗಳನ್ನು ಪೋಷಿಸಿ, ಪ್ರಾಣಿಗಳನ್ನು ಸಂತೋಷಪಡಿಸಿ, ಕಿರಣಗಳಿಂದ ದೇವತೆಗಳಿಗೆ ಆಹಾರರೂಪವಾಗಿರುವನು.

ದೇವೈಶ್ಚ ಪೀಯತೇ ಚಂದ್ರಶ್ಚಂದ್ರಭೂಷಣಶಾಸನಾತ್ ।
ಆದಿತ್ಯಾ ವಸವೋ ರುದ್ರಾ ಅಶ್ವಿನೌ ಮರುತಸ್ತಥಾ ॥ ೩೮ ॥

ಖೇಚರಾ ಋಷಯಃ ಸಿದ್ಧಾ ಭೋಗಿನೋ ಮನುಜಾ ಮೃಗಾಃ ।
ಪಶವಃ ಪಕ್ಷಿಣಶ್ಚೈವ ಕೀಟಾದ್ಯಾಃ ಸ್ಥಾವರಾಣಿ ಚ ॥ ೩೯ ॥

ನದ್ಯಃ ಸಮುದ್ರಾ ಗಿರಯಃ ಕಾನನಾನಿ ಸರಾಂಸಿ ಚ ।
ವೇದಾಃ ಸಾಂಗಾಶ್ಚ ಶಾಸ್ತ್ರಾಣಿ ಮಂತ್ರಸ್ತೋಮಮುಖಾದಯಃ ॥ ೪೦ ॥

ಕಾಲಾಗ್ನ್ಯಾದಿಶಿವಾಂತಾನಿ ಭುವನಾನಿ ಸಹಾಧಿಪೈಃ ।
ಬ್ರಹ್ಮಾಂಡಾನ್ಯಪ್ಯಸಂಖ್ಯಾನಿ ತೇಷಾಮಾವರಣಾನಿ ಚ ॥ ೪೧ ॥

ವರ್ತಮಾನಾನ್ಯತೀತಾನಿ ಭವಿಷ್ಯಂತ್ಯಪಿ ಕೃತ್ಸ್ನಶಃ ।
ದಿಶಶ್ಚ ವಿದಿಶಶ್ಚೈವ ಕಾಲಭೇದಾಃ ಕಲಾದಯಃ ॥ ೪೨ ॥

ಯಚ್ಚ ಕಿಂಚಿಜ್ಜಗತ್ಯಸ್ಮಿನ್ ದೃಶ್ಯತೇ ಶ್ರೂಯತೇಽಪಿ ವಾ ।
ತತ್ಸರ್ವಂ ಶಂಕರಸ್ಯಾಜ್ಞಾಬಲೇನ ಸಮಧಿಷ್ಠಿತಂ ॥ ೪೩ ॥

---

೩೮–೪೩. ದ್ವಾದಶಾದಿತ್ಯರು, ಅಷ್ಟವಸುಗಳು, ಏಕಾದಶರುದ್ರರು, ಅಶ್ವಿನೀದೇವತೆಗಳು, ಸಪ್ತಮರುತ್ತುಗಳು. ಖೇಚರರು, ಋಷಿಗಳು, ಸಿದ್ಧರು, ಸರ್ಪಗಳು, ಮನುಜರು, ಮೃಗಗಳು, ಪಶು, ಸರೋವರ ಮುಂತಾದವು ಅಂಗ ಸಹಿತವಾದ ವೇದಗಳು, ಶಾಸ್ತ್ರಗಳು, ಮಂತ್ರಗಳ ಸಮೂಹವು, ಯಜ್ಞಾದಿಗಳು, ಕಾಲಾಗ್ನಿರುದ್ರರೇ ಮೊದಲಾಗಿ ಸದಾಶಿವಾಂತವಾಗಿರುವ ಲೋಕಗಳೂ, ಆ ಲೋಕಾಧಿಪತಿಗಳೂ, ಅಸಂಖ್ಯಾತವಾದ ಬ್ರಹ್ಮಾಂಡಗಳೂ, ಅವುಗಳ ಆವರಣ ಗಳು, ಭೂತಭವಿಷ್ಯದ್ವರ್ತಮಾನ ಕಾಲದವುಗಳು, ದಿಕ್ಕುಗಳು, ವಿದಿಕ್ಕುಗಳು, ಕಲಾಕಾಷ್ಠಾದಿ ಕಾಲಭೇದಗಳು, ಈ ಪ್ರಪಂಚದಲ್ಲಿ ಕಣ್ಣಿಗೆ ಕಾಣುವ ಕಿವಿಗೆ ಕೇಳುವ ಸಮಸ್ತ ವಿಷಯಗಳೂ, ಶಿವನ ಆಜ್ಞಾಬಲದಿಂದಲೇ ಇರುವುವು. ಎಂದರೆ ತಮ್ಮ ತಮ್ಮ ಕಾರ್ಯಗಳಲ್ಲಿ ಪ್ರವೃತ್ತವಾಗಿರುವುವು.

ಆಜ್ಞಾಬಲಾತ್ತಸ್ಯ ಧರಾ ಸ್ಥಿತೇಹ
ಧರಾಧರಾ ವಾರಿಧರಾಃ ಸಮುದ್ರಾಃ ।
ಜ್ಯೋತಿರ್ಗಣಾಃ ಶಕ್ರಮುಖಾಶ್ಚ ದೇವಾಃ
ಸ್ಥಿರಂ ಚಿರಂ ವಾ ಚಿದಚಿದ್ಯದಸ್ತಿ ॥ ೪೪ ॥

॥ ಉಪಮನ್ಯುರುವಾಚ ॥

ಅತ್ಯಾಶ್ಚರ್ಯಮಿದಂ ಕೃಷ್ಣ ಶಂಭೋರಮಿತಕರ್ಮಣಃ ।
ಆಜ್ಞಾಕೃತಂ ಶೃಣುಷ್ವೈತಚ್ಛ್ರುತಂ ಶ್ರುತಿಮುಖೇ ಮಯಾ ॥ ೪೫ ॥

ಪುರಾ ಕಿಲ ಸುರಾಸ್ಸೇಂದ್ರಾ ವಿವದಂತಃ ಪರಸ್ಪರಂ ।
ಅಸುರಾನ್ ಸಮರೇ ಜಿತ್ವಾ ಜೇತಾಹಮಹಮಿತ್ಯುತ ॥ ೪೬ ॥

ತದಾ ಮಹೇಶ್ವರಸ್ತೇಷಾಂ ಮಧ್ಯತೋ ವರವೇಷಧೃಕ್ ।
ಸ್ವಲಕ್ಷಣೈರ್ವಿಹೀನಾಂಗಃ ಸ್ವಯಂ ಯಕ್ಷ ಇವಾಭವತ್ ॥ ೪೭ ॥

---

೪೪. ಭೂಮಿ, ಪರ್ವತ, ಮೇಘ, ಸಮುದ್ರ, ಬೆಳಕನ್ನು ಕೊಡುವ ಸೂರ್ಯಾದಿ ಗ್ರಹಗಳ ಗುಂಪು, ದೇವೇಂದ್ರನೇ ಮೊದಲಾದ ದೇವತೆಗಳು, ಬಹಳ ಕಾಲದಿಂದಲೂ ಇರುವ ಶಾಶ್ವತವಾದ ಜ್ಞಾನಾಜ್ಞಾನಗಳು, ಇವುಗಳೆಲ್ಲ ಆ ಶಂಕರನ ಆಜ್ಞಾಬಲದಿಂದಲೇ ಇರುವುವು.

೪೫–೪೭. ಎಲೈ ಕೃಷ್ಣನೇ, ಶಿವನ ಆಜ್ಞಾಶಕ್ತಿಯ ವಿಷಯದಲ್ಲಿ ನಾನು ವೇದದಲ್ಲಿ ಕೇನೋಪನಿಷತ್ತಿನಲ್ಲಿರುವ, ಆಶ್ಚರ್ಯಕರವಾದ ಒಂದು ಕಥೆಯನ್ನು ಹೇಳುವೆನು ಕೇಳು. ಹಿಂದೆ ದೇವೇಂದ್ರನೇ ಮುಂತಾದ ದೇವತೆಗಳು ಯುದ್ಧದಲ್ಲಿ ಅಸುರರನ್ನು ಗೆದ್ದು, ನಾನು ಗೆದ್ದೆ, ತಾನು ಗೆದ್ದೆ ಎಂದು ಪರಸ್ಪರವಾಗಿ ಮಾತನಾಡುತ್ತಿದ್ದರು. ಆಗ ಮಹೇಶ್ವರನು ತನ್ನ ನಿಜವೇಷವನ್ನು ಮರೆಮಾಡಿಕೊಂಡು ಶ್ರೇಷ್ಠವಾದ ಯಕ್ಷರೂಪದಿಂದ ಅವರ ನಡುವೆ ಬಂದು ನಿಂತುಕೊಂಡು,

ಸ ತಾನಾಹ ಸುರಾನೇಕಂ ತೃಣಮಾದಾಯ ಭೂತಲೇ ।
ಯ ಏತದ್ವಿಕೃತಂ ಕರ್ತುಂ ಕ್ಷಮತೇ ಸ ತು ದೈತ್ಯಜಿತ್ ॥ ೪೮ ॥

ಯಕ್ಷಸ್ಯ ವಚನಂ ಶ್ರುತ್ವಾ ವಜ್ರಪಾಣಿಃ ಶಚೀಪತಿಃ ।
ಕಿಂಚಿತ್ಕ್ರುದ್ಧೋ ವಿಹಸ್ಯೈನಂ ತೃಣಮಾದಾತುಮುದ್ಯತಃ ॥ ೪೯ ॥

ನ ತತ್ತೃಣಮುಪಾದಾತುಂ ಮನಸಾऽಪಿ ಚ ಶಕ್ಯತೇ ।
ಯಥಾ ತಥಾಪಿ ತಚ್ಛೇತ್ತುಂ ವಜ್ರಂ ವಜ್ರಧರೋऽಸೃಜತ್ ॥ ೫೦ ॥

ತದ್ವಜ್ರಂ ನಿಜವಜ್ರೇಣ ಸಂಸೃಷ್ಟಮಿವ ಸರ್ವತಃ ।
ತೃಣೇನಾಭಿಹಿತಂ ತೇನ ತಿರ್ಯಗಗ್ರಂ ಪಪಾತ ಹ ॥ ೫೧ ॥

ತತಶ್ಚಾನ್ಯೇ ಸುಸಂರಬ್ಧಾ ಲೋಕಪಾಲಾ ಮಹಾಬಲಾಃ ।
ಸಸೃಜುಸ್ತೃಣಮುದ್ದಿಶ್ಯ ಸ್ವಾಯುಧಾನಿ ಸಹಸ್ರಶಃ ॥ ೫೨ ॥

---

೪೮–೫೧. ಒಂದು ಹುಲ್ಲುಕಡ್ಡಿಯನ್ನು ಭೂಮಿಯಮೇಲಿಟ್ಟು ಯಾರು ಈ ಕಡ್ಡಿಯನ್ನು ಮುರಿಯುವರೋ ಅವರೇ ದೈತ್ಯರನ್ನು ಗೆದ್ದವರು ಎಂದನು. ಯಕ್ಷನ ಮಾತನ್ನು ಕೇಳಿ ಶಚೀಪತಿಯಾದ ದೇವೇಂದ್ರನು, ಇದೇನು ಮಹಾ ವಿಷಯ ಎಂದು ಸ್ವಲ್ಪ ಕೋಪದಿಂದಲೇ ನಸುನಗುತ್ತಾ, ವಜ್ರಾಯುಧವನ್ನು ಹಿಡಿದು ಆ ಕಡ್ಡಿಯನ್ನು ಕೈಗೆ ತೆಗೆದುಕೊಳ್ಳಲು ಪ್ರಯತ್ನಿಸಿದನು. ಎಷ್ಟು ಪ್ರಯತ್ನಪಟ್ಟರೂ ಸಾಧ್ಯವಾಗದೇ ಹೋಗಲು ಅದರ ಮೇಲೆ ವಜ್ರಾಯುಧವನ್ನು ಪ್ರಯೋಗಿಸಿದನು, ಆ ವಜ್ರಾಯುಧಕ್ಕೆ ಮತ್ತೊಂದು ವಜ್ರಾಯುಧವು ತಗುಲಿದಂತಾಗಿ ಹುಲ್ಲುಕಡ್ಡಿಯ ಏಟಿನಿಂದ ದೇವೇಂದ್ರನ ವಜ್ರಾಯುಧವು ತಲೆಕೆಳಗಾಗಿ ಬಿದ್ದುಹೋಯಿತು.

೫೨–೫೪. ಆಮೇಲೆ ಮಿಕ್ಕ ಲೋಕಪಾಲಕರು ಪ್ರಯತ್ನಮಾಡಿ ತಮ್ಮ ಅನೇಕ ಆಯುಧಗಳನ್ನು ಆ ಹುಲ್ಲುಕಡ್ಡಿಯಮೇಲೆ ಪ್ರಯೋಗಿಸಿದರು. ಆ ಸಮಯದಲ್ಲಿ ಅಗ್ನಿಯು ದೊಡ್ಡ ಬೆಂಕಿಯನ್ನು ಆ ಹುಲ್ಲುಕಡ್ಡಿಯ ಮೇಲೆ ಪ್ರಯೋಗಿಸಿದನು. ವಾಯುವು ಮಹಾ ಸುಂಟರಗಾಳಿಯಿಂದ ಬೀಸಿತು.

ಪ್ರಜಜ್ವಾಲ ಮಹಾವಹ್ನಿಃ ಪ್ರಚಂಡಃ ಪವನೋ ವವೌ ।
ಪ್ರವೃದ್ಧೋಽಪಾಂಪತಿರ್ಯದ್ವತ್ಪ್ರಲಯೇ ಸಮುಪಸ್ಥಿತೇ ॥ ೫೩ ॥

ಏವಂ ದೇವೈಃ ಸಮಾರಬ್ಧಂ ತೃಣಮುದ್ದಿಶ್ಯ ಯತ್ನತಃ ।
ವ್ಯರ್ಥಮಾಸೀದಹೋ ಕೃಷ್ಣ ಯಕ್ಷಸ್ಯಾತ್ಮಬಲೇನ ವೈ ॥ ೫೪ ॥

ತದಾಹ ಯಕ್ಷಂ ದೇವೇಂದ್ರಃ ಕೋ ಭವಾನಿತ್ಯಮರ್ಷಿತಃ ।
ತತಸ್ಸ ಪಶ್ಯತಾಮೇವ ತೇಷಾಮಂತರಧಾದಥ ॥ ೫೫ ॥

ತದಂತರೇ ಹೈಮವತೀ ದೇವೀ ದಿವ್ಯವಿಭೂಷಣಾ ।
ಆವಿರಾಸೀನ್ನಭೋರಂಗೇ ಶೋಭಮಾನಾ ಶುಚಿಸ್ಮಿತಾ ॥ ೫೬ ॥

ತಾಂ ದೃಷ್ಟ್ವಾ ವಿಸ್ಮಯಾವಿಷ್ಟಾ ದೇವಾಃ ಶಕ್ರಪುರೋಗಮಾಃ ।
ಪ್ರಣಮ್ಯ ಯಕ್ಷಂ ಪಪ್ರಚ್ಛುಃ ಕೋಽಸೌ ಯಕ್ಷೋ ವಿಲಕ್ಷಣಃ ॥ ೫೭ ॥

---

ಸಮುದ್ರವು ಉಕ್ಕಿತು. ಎಲ್ಲವೂ ಪ್ರಳಯಕಾಲದಂತೆ ಕಾಣಿಸಿತು. ಹೀಗೆ ದೇವತೆಗಳು ಹುಲ್ಲುಕಡ್ಡಿಯ ಮೇಲೆ ತೋರಿಸಿದ ಪರಾಕ್ರಮವೆಲ್ಲವೂ, ಯಕ್ಷನ ಮಹಿಮೆಯಿಂದ ವ್ಯರ್ಥವಾಗಿಹೋಯಿತು. ಎಲೈ ಕೃಷ್ಣನೇ, ಈ ಆಶ್ಚರ್ಯ ವನ್ನೇನೆಂದು ಹೇಳಲಿ?

೫೫. ಆಗ ದೇವೇಂದ್ರನು ಕೋಪದಿಂದ ಯಕ್ಷನನ್ನು ಕುರಿತು ನೀನಾ ರೆಂದು ಪ್ರಶ್ನೆಮಾಡಿದನು. ಅವರೆಲ್ಲರೂ ನೋಡುತ್ತಿದ್ದ ಹಾಗೆಯೇ ಆ ಯಕ್ಷ ರೂಪವು ಅಲ್ಲಿಯೇ ಮಾಯವಾಯಿತು.

೫೬. ಇಷ್ಟರಲ್ಲಿ ಹಿಮವಂತನ ಮಗಳಾದ ಪಾರ್ವತೀದೇವಿಯು ದಿವ್ಯ ವಾದ ಆಭರಣಗಳನ್ನು ಧರಿಸಿ ನಗುತ್ತಾ ಆಕಾಶವೆಂಬ ರಂಗಸ್ಥಳದಲ್ಲಿ ಕಾಣಿಸಿ ಕೊಂಡಳು.

೫೭. ಆ ದೇವಿಯನ್ನು ನೋಡಿ ದೇವೇಂದ್ರನೇ ಮೊದಲಾದ ದೇವತೆ ಗಳಿಗೆ ಆಶ್ಚರ್ಯವಾಯಿತು. ಅವರೆಲ್ಲರೂ ಆ ದೇವಿಗೆ ನಮಸ್ಕಾರಮಾಡಿ ವಿಲಕ್ಷಣನಾದ ಆ ಯಕ್ಷನು ಯಾರು ಎಂದು ಪ್ರಶ್ನೆ ಮಾಡಿದರು.

ಸಾऽಬ್ರವೀತ್ಸಸ್ಮಿತಂ ದೇವೀ ಸ ಯುಷ್ಮಾಕಮಗೋಚರಃ ।
ತೇನೇದಂ ಭ್ರಾಮ್ಯತೇ ಚಕ್ರಂ ಸಂಸಾರಾಖ್ಯಂ ಚರಾಚರಂ ॥ ೫೮ ॥

ತೇನಾದೌ ಕ್ರಿಯತೇ ವಿಶ್ವಂ ತೇನ ಸಂಹ್ರಿಯತೇ ಪುನಃ ।
ನ ತನ್ನಿಯಂತಾ ಕಶ್ಚಿತ್ಸ್ಯಾತ್ತೇನ ಸರ್ವಂ ನಿಯಮ್ಯತೇ ॥ ೫೯ ॥

ಇತ್ಯುಕ್ತ್ವಾ ಸಾ ಮಹಾದೇವೀ ತತ್ರೈವಾಂತರಧತ್ತ ವೈ ।
ದೇವಾಶ್ಚ ವಿಸ್ಮಿತಾಃ ಸರ್ವೇ ತಾಂ ಪ್ರಣಮ್ಯ ದಿವಂ ಯಯುಃ ॥ ೬೦ ॥

**ಇತಿ ಶ್ರೀಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯಸಂಹಿತಾಯಾ-
ಮುತ್ತರಭಾಗೇ ಶಿವಮಹಿಮಾವರ್ಣನಂ ನಾಮ
ದ್ವಿತೀಯೋऽಧ್ಯಾಯಃ**

---

೫೮. ಆ ದೇವಿಯು ನಗುತ್ತ—ಅವನು ನಮಗೆ ಕಾಣತಕ್ಕವನಲ್ಲ. ಅವನಿಂದಲೇ ಈ ಜನನಮರಣರೂಪವಾದ ಸಂಸಾರಚಕ್ರವು ತಿರುಗುತ್ತಿರುವುದು.

೫೯. ಅವನೇ ಮೊದಲು ಈ ಪ್ರಪಂಚವನ್ನು ಸೃಷ್ಟಿಸುವನು. ಮತ್ತೆ ಅವನೇ ಅದನ್ನು ಸಂಹರಿಸುವನು. ಅವನನ್ನು ಯಾರೂ ತಮ್ಮ ಅಧೀನದಲ್ಲಿ ಇಟ್ಟುಕೊಂಡಿರಲಾರರು. ಅವನ ಆಜ್ಞೆಗೆ ಎಲ್ಲವೂ ಅಧೀನವಾಗಿರುವುದು.

೬೦. ಹೀಗೆಂದು ಹೇಳಿ ಆ ಮಹಾದೇವಿಯು ಅಲ್ಲಿಯೇ ಅದೃಶ್ಯಳಾದಳು. ದೇವತೆಗಳೆಲ್ಲರೂ ಆಶ್ಚರ್ಯಪಡುತ್ತ ಆ ದೇವಿಗೆ ನಮಸ್ಕಾರಮಾಡಿ ದೇವಲೋಕಕ್ಕೆ ಹೊರಟುಹೋದರು.

ಇಲ್ಲಿಗೆ ಶ್ರೀಶಿವಮಹಾಪುರಾಣದಲ್ಲಿ ಏಳನೆಯ ವಾಯುವೀಯಸಂಹಿತೆಯ
ಉತ್ತರಭಾಗದಲ್ಲಿ ಶಿವಮಹಿಮಾವರ್ಣನವೆಂಬ ಎರಡನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ತೃತೀಯೋಽಧ್ಯಾಯಃ

॥ ಉಪಮನ್ಯುರುವಾಚ ॥

ಶೃಣು ಕೃಷ್ಣ ಮಹೇಶಸ್ಯ ಶಿವಸ್ಯ ಪರಮಾತ್ಮನಃ ।
ಮೂರ್ತ್ಯಾತ್ಮಭಿಸ್ತತಂ ಕೃತ್ಸ್ನಂ ಜಗದೇತಚ್ಚರಾಚರಂ ॥ ೧ ॥

ಸ ಶಿವಸ್ಸರ್ವಮೇವೇದಂ ಸ್ವಕೀಯಾಭಿಶ್ಚ ಮೂರ್ತಿಭಿಃ ।
ಅಧಿತಿಷ್ಠತ್ಯಮೇಯಾತ್ಮಾ ಹ್ಯೇತತ್ಸರ್ವಮನುಸ್ಮೃತಂ ॥ ೨ ॥

---

### ಮೂರನೆಯ ಅಧ್ಯಾಯವು.

೧. ಉಪಮನ್ಯುವಿಂತೆಂದನು—ಎಲೈ ಕೃಷ್ಣನೇ, ಕೇಳು. ಪರಮಾತ್ಮನಾದ ಮಹೇಶ್ವರನ ಮೂರ್ತಿಸ್ವರೂಪಗಳಿಂದಲೇ ಈ ಸಮಸ್ತ ಚರಾಚರ ಪ್ರಪಂಚವೂ ವ್ಯಾಪಿಸಿರುವುದು.

೨-೩. ಅಪ್ರಮೇಯನಾದ ಆ ಶಿವನು ತನ್ನ ಮೂರ್ತಿಸ್ವರೂಪಗಳಿಂದಲೇ ಈ ಸಮಸ್ತ ಪ್ರಪಂಚಸ್ವರೂಪನಾಗಿರುವನು. ಇದನ್ನೆಲ್ಲಾ ನಾನು ತಿಳಿದಿರುವೆನು. ಬ್ರಹ್ಮ, ವಿಷ್ಣು, ರುದ್ರ, ಮಹೇಶ್ವರ, ಸದಾಶಿವ ಎಂಬ ಐದು

ಬ್ರಹ್ಮಾ ವಿಷ್ಣುಸ್ತಥಾ ರುದ್ರೋ ಮಹೇಶಾನಃ ಸದಾಶಿವಃ ।
ಮೂರ್ತಯಸ್ತಸ್ಯ ವಿಜ್ಞೇಯಾ ಯಾಭಿರ್ವಿಶ್ವಮಿದಂ ತತಂ ॥ ೩ ॥

ಅಥಾನ್ಯಾಶ್ಚಾಪಿ ತನವಃ ಪಂಚ ಬ್ರಹ್ಮಸಮಾಹ್ವಯಾಃ ।
ತನೂಭಿಸ್ತಾಭಿರವ್ಯಾಪ್ತಮಿಹ ಕಿಂಚಿನ್ನ ವಿದ್ಯತೇ ॥ ೪ ॥

ಈಶಾನಃ ಪುರುಷೋಽಘೋರೋ ವಾಮಸ್ಸದ್ಯಸ್ತಥೈವ ಚ ।
ಬ್ರಹ್ಮಣ್ಯೇತಾನಿ ದೇವಸ್ಯ ಮೂರ್ತಯಃ ಪಂಚ ವಿಶ್ರುತಾಃ ॥ ೫ ॥

ಈಶಾನಾಖ್ಯಾ ತು ಯಾ ತಸ್ಯ ಮೂರ್ತಿರಾದ್ಯಾ ಗರೀಯಸೀ ।
ಭೋಕ್ತಾರಂ ಪ್ರಕೃತೇಃ ಸಾಕ್ಷಾತ್ಕ್ಷೇತ್ರಜ್ಞಮಧಿತಿಷ್ಠತಿ ॥ ೬ ॥

ಸ್ಥಾಣೋಸ್ತತ್ಪುರುಷಾಖ್ಯಾ ಯಾ ಮೂರ್ತಿರ್ಮೂರ್ತಿಮತಃ ಪ್ರಭೋಃ ।
ಗುಣಾಶ್ರಯಾತ್ಮಕಂ ಭೋಗ್ಯಮವ್ಯಕ್ತಮಧಿತಿಷ್ಠತಿ ॥ ೭ ॥

---

ಮೂರ್ತಿಗಳು ಆ ಮಹೇಶ್ವರನಾದ ಶಿವನ ರೂಪಗಳಾಗಿರುವುವು. ಆ ಮೂರ್ತಿಗಳಿಂದಲೇ ವಿಸ್ತಾರವಾದ ಈ ಪ್ರಪಂಚವು ವ್ಯಾಪ್ತವಾಗಿರುವುದು.

೪–೫. ಇದಲ್ಲದೆ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ, ಎಂಬ ಶಿವನ ಐದು ಪಂಚಬ್ರಹ್ಮಮೂರ್ತಿಗಳಿರುವುವು. ಈ ಪಂಚಬ್ರಹ್ಮತತ್ತ್ವಗಳಿಂದ ಸಮಸ್ತ ಪ್ರಪಂಚವೂ, ವ್ಯಾಪಿಸಿರುವುದು. ಈ ತತ್ತ್ವಗಳಿಲ್ಲದ ಪದಾರ್ಥವಾವುದೂ ಪ್ರಪಂಚದಲ್ಲಿರುವುದಿಲ್ಲ.

೬. ಈಶಾನನೆಂಬ ಹೆಸರಿನ ಶಿವನ ಮೂರ್ತಿಯು ಮೊದಲನೆಯದು. ಇದು ಅತ್ಯಂತ ದೊಡ್ಡದಾಗಿರುವುದು. ಆ ಮೂರ್ತಿಯು ಪ್ರಕೃತಿಯ ಭೋಕ್ತೃವೂ ಕ್ಷೇತ್ರಜ್ಞಸ್ವರೂಪನೂ ಆದ ಆತ್ಮನನ್ನು ಆಶ್ರಯಿಸಿರುವುದು.

೭. ಶಿವನ ತತ್ಪುರುಷ ಎಂಬ ಹೆಸರಿನ ಮೂರ್ತಿಯು ಸತ್ತ್ವ, ರಜಸ್ತಮೋಗುಣಗಳಿಗೆ ಆಶ್ರಯವೂ ಭೋಗ್ಯವಸ್ತುವೂ ಆದ ಪ್ರಕೃತಿಯನ್ನು ಆಶ್ರಯಿಸಿರುವುದು. ಎಂದರೆ ಅದಕ್ಕೆ ಅಭಿಮಾನಿದೇವತೆಯಾಗಿರುವುದು.

**ಧರ್ಮಾದ್ಯಷ್ಟಾಂಗಸಂಯುಕ್ತಂ ಬುದ್ಧಿತತ್ತ್ವಂ ಪಿನಾಕಿನಃ ।**
**ಅಧಿತಿಷ್ಠತ್ಯಘೋರಾಖ್ಯಾ ಮೂರ್ತಿರತ್ಯಂತಪೂಜಿತಾ　　॥ ೮ ॥**

**ವಾಮದೇವಾಹ್ವಯಾಂ ಮೂರ್ತಿಂ ಮಹಾದೇವಸ್ಯ ವೇಧಸಃ ।**
**ಅಹಂಕೃತೇರಧಿಷ್ಠಾತ್ರೀಮಾಹುರಾಗಮವೇದಿನಃ　　॥ ೯ ॥**

**ಸದ್ಯೋಜಾತಾಹ್ವಯಾಂ ಮೂರ್ತಿಂ ಶಂಭೋರಮಿತವರ್ಚಸಃ ।**
**ಮನಸಃ ಸಮಧಿಷ್ಠಾತ್ರೀಂ ಮತಿಮಂತಃ ಪ್ರಚಕ್ಷತೇ　　॥ ೧೦ ॥**

**ಶ್ರೋತ್ರಸ್ಯ ವಾಚಃ ಶಬ್ದಸ್ಯ ವಿಭೋರ್ವ್ಯೋಮ್ನಸ್ತಥೈವ ಚ ।**
**ಈಶ್ವರೀಮೀಶ್ವರಸ್ಯೇಮಾಮೀಶಾಖ್ಯಾಂ ಹಿ ವಿದುರ್ಬುಧಾಃ　　॥ ೧೧ ॥**

**ತ್ವಕ್ಪಾಣಿಸ್ಪರ್ಶವಾಯೂನಾಮೀಶ್ವರೀಂ ಮೂರ್ತಿಮೈಶ್ವರೀಂ ।**
**ಪುರುಷಾಖ್ಯಂ ವಿದುಸ್ಸರ್ವೇ ಪುರಾಣಾರ್ಥವಿಶಾರದಾಃ　　॥ ೧೨ ॥**

---

೮. ಶಿವನ ಅತ್ಯಂತ ಪೂಜ್ಯವಾದ ಅಘೋರಮೂರ್ತಿಯು ಧರ್ಮವೇ ಮೊದಲಾದ ಎಂಟು ಅಂಗಗಳಿಂದ ಕೂಡಿದ ಬುದ್ಧಿತತ್ತ್ವವನ್ನು ಆಶ್ರಯಿಸಿರುವುದು.

೯. ಶಿವನ ವಾಮದೇವವೆಂಬ ಬ್ರಹ್ಮಮೂರ್ತಿಯು ಅಹಂಕಾರ ತತ್ತ್ವಕ್ಕೆ ಆಶ್ರಯವಾದುದೆಂದು ಶಾಸ್ತ್ರಜ್ಞರು ಹೇಳುವರು.

೧೦. ಮಹಾತೇಜಸ್ವಿಯಾದ ಶಿವನ ಸದ್ಯೋಜಾತವೆಂಬ ಮೂರ್ತಿಯು ಮನಸ್ತತ್ತ್ವಕ್ಕೆ ಆಶ್ರಯವಾದುದೆಂದು ಬುದ್ಧಿವಂತರು ಹೇಳುತ್ತಾರೆ.

೧೧. ಈಶ್ವರಪತ್ನಿಯಾದ ಉಮಾದೇವಿಯ ಸಂಬಂಧವಾದ ಈಶ್ವರೀ ಶಕ್ತಿಯು ಈಶಾನಮೂರ್ತಿಯ ಶ್ರೋತ್ರ, ವಾಕ್ಕು, ಶಬ್ದ, ಆಕಾಶ, ಈ ತತ್ವಗಳಿಗೆ ಆಶ್ರಯವಾದುದಾಗಿರುವುದು.

೧೨. ತ್ವಕ್ಕು, ಪಾಣಿ, ಸ್ಪರ್ಶ, ವಾಯು, ಇವುಗಳಿಗೆ ಈಶ್ವರನ ತತ್ಪುರುಷಮೂರ್ತಿಯೇ ಆಶ್ರಯವು ಎಂದು ಪುರಾಣಾರ್ಥವನ್ನು ತಿಳಿದವರು ಹೇಳುವರು.

ಚಕ್ಷುಷಶ್ಚರಣಸ್ಯಾಪಿ ರೂಪಸ್ಯಾಗ್ನೇಸ್ತಥೈವ ಚ ।
ಅಘೋರಾಖ್ಯಾಮಧಿಷ್ಠಾತ್ರೀಂ ಮೂರ್ತಿಮಾಹುರ್ಮನಿಷಿಣಃ ॥ ೧೩ ॥

ರಸನಾಯಾಶ್ಚ ಪಾಯೋಶ್ಚ ರಸಸ್ಯಾಪಾಂ ತಥೈವ ಚ ।
ಈಶ್ವರೀಂ ವಾಮದೇವಾಖ್ಯಾಂ ಮೂರ್ತಿಂ ತನಿರತಾಂ ವಿದುಃ ॥ ೧೪ ॥

ಘ್ರಾಣಸ್ಯ ಚೈವೋಪಸ್ಥಸ್ಯ ಗಂಧಸ್ಯ ಚ ಭುವಸ್ತಥಾ ।
ಸದ್ಯೋಜಾತಾಹ್ವಯಾಮೂರ್ತಿಮೀಶ್ವರೀಂ ಸಂಪ್ರಚಕ್ಷತೇ ॥ ೧೫ ॥

ಮೂರ್ತಯಃ ಪಂಚ ದೇವಸ್ಯ ವಂದನೀಯಾಃ ಪ್ರಯತ್ನತಃ ।
ಶ್ರೇಯೋರ್ಥಿಭಿರ್ನರೈರ್ನಿತ್ಯಂ ಶ್ರೇಯಸಾಮೇಕಹೇತವಃ ॥ ೧೬ ॥

ತಸ್ಯ ದೇವಾದಿದೇವಸ್ಯ ಮೂರ್ತ್ಯಷ್ಟಕಮಯಂ ಜಗತ್ ।
ತಸ್ಮಿನ್ವ್ಯಾಪ್ಯ ಸ್ಥಿತಂ ವಿಶ್ವಂ ಸೂತ್ರೇ ಮಣಿಗಣಾ ಇವ ॥ ೧೭ ॥

---

೧೩. ಕಣ್ಣುಗಳು, ಪಾದಗಳು ರೂಪ, ಅಗ್ನಿ ಇವುಗಳಿಗೆ ಅಘೋರ ಮೂರ್ತಿಯೇ ಆಶ್ರಯವು.

೧೪. ನಾಲಗೆ, ಪಾಯು, ರಸ, ನೀರು, ಇವುಗಳಿಗೆ ವಾಮದೇವನೆಂಬ ಮೂರ್ತಿಯೇ ಆಶ್ರಯವು.

೧೫. ನಾಸಿಕ, ಉಪಸ್ಥ, ಗಂಧ, ಭೂಮಿ ಇವುಗಳಿಗೆ ಸದ್ಯೋಜಾತ ವೆಂಬ ಮೂರ್ತಿಯೇ ಆಶ್ರಯವು.

೧೬. ಶ್ರೇಯಸ್ಸನ್ನು ಅಪೇಕ್ಷಿಸುವ ಮನುಷ್ಯರು ಫಲಸಿದ್ಧಿಗಾಗಿ ಶಿವನ ಪಂಚ ಬ್ರಹ್ಮಮೂರ್ತಿಗಳನ್ನು ಪ್ರತಿದಿನವೂ, ಧ್ಯಾನಿಸಿ ನಮಸ್ಕಾರಮಾಡಬೇಕು.

೧೭-೧೮. ದೇವತೆಗಳಿಗೆಲ್ಲ ಆದಿದೇವನಾದ ಶಿವನ ಅಷ್ಟಮೂರ್ತಿಮಯ ವಾದ ಈ ಪ್ರಪಂಚವು ದಾರದಲ್ಲಿ ಪೋಣಿಸಿರುವ ಮಣಿಗಳಂತೆ ಶಿವನನ್ನೇ ಆಶ್ರ

**ಶರ್ವೋ ಭವಸ್ತಥಾ ರುದ್ರ ಉಗ್ರೋ ಭೀಮಃ ಪಶೋಃ ಪತಿಃ ।**
**ಈಶಾನಶ್ಚ ಮಹಾದೇವೋ ಮೂರ್ತಯಶ್ಚಾಷ್ಟ ವಿಶ್ರುತಾಃ ೧೮ ॥**

**ಭೂಮ್ಯಂಭೋಽಗ್ನಿ ಮರುದ್ವ್ಯೋಮಕ್ಷೇತ್ರಜ್ಞಾರ್ಕನಿಶಾಕರಾಃ ।**
**ಅಧಿಷ್ಠಿತಾ ಮಹೇಶಸ್ಯ ಶರ್ವಾದ್ಯೈರಷ್ಟಮೂರ್ತಿಭಿಃ ॥ ೧೯ ॥**

**ಚರಾಚರಾತ್ಮಕಂ ವಿಶ್ವಂ ಧತ್ತೇ ವಿಶ್ವಂಭರಾತ್ಮಿಕಾ ।**
**ಶಾರ್ವೀ ಶರ್ವಾಹ್ವಯಾ ಮೂರ್ತಿರಿತಿ ಶಾಸ್ತ್ರಸ್ಯ ನಿಶ್ಚಯಃ ॥ ೨೦ ॥**

**ಸಂಜೀವನಂ ಸಮಸ್ತಸ್ಯ ಜಗತಸ್ಸಲಿಲಾತ್ಮಿಕಾ ।**
**ಭಾವೀತಿ ಗೀಯತೇ ಮೂರ್ತಿರ್ಭವಸ್ಯ ಪರಮಾತ್ಮನಃ ॥ ೨೧ ॥**

**ಬಹಿರಂತರ್ಗತಾದ್ವಿಶ್ವಂ ವ್ಯಾಪ್ಯ ತೇಜೋಮಯೀ ಶುಭಾ ।**
**ರೌದ್ರೀ ರುದ್ರಸ್ಯ ಯಾ ಮೂರ್ತಿರಾಸ್ಥಿತಾ ಘೋರರೂಪಿಣೀ ॥ ೨೨ ॥**

---

ಯಿಸಿಕೊಂಡಿರುವುದು. ಶರ್ವ, ಭವ, ರುದ್ರ, ಉಗ್ರ, ಭೀಮ. ಪಶುಪತಿ, ಈಶಾನ, ಮಹಾದೇವ ಎಂಬಿವು ಶಿವನ ಅಷ್ಟಮೂರ್ತಿಗಳು.

೧೯. ಭೂಮಿ, ನೀರು, ಅಗ್ನಿ ವಾಯು, ಆಕಾಶ, ಕ್ಷೇತ್ರಜ್ಞ, ಸೂರ್ಯ, ಚಂದ್ರ ಇವುಗಳಿಗೆ ಹಿಂದೆ ಹೇಳಿದ ಅಷ್ಟಮೂರ್ತಿಗಳು ಅಧಿಪತಿಗಳು ಅಥವಾ ಅಭಿಮಾನಿದೇವತೆಗಳು.

೨೦. ಶಿವನ ಶರ್ವ ಎಂಬ ಹೆಸರಿನ ಮೂರ್ತಿಯು ಭೂಮಿಯ ಸ್ವರೂಪದಿಂದ ಚರಾಚರಪ್ರಾಣಿಗಳಿಂದ ಕೂಡಿದ ಪ್ರಪಂಚವನ್ನು ಧರಿಸಿರುವುದು.

೨೧. ಪರಮಾತ್ಮನಾದ ಶಿವನ ಭವ ಎಂಬ ಹೆಸರಿನ ಮೂರ್ತಿಯು ನೀರಿನ ರೂಪದಿಂದ ಸಮಸ್ತ ಪ್ರಾಣಿಗಳೂ ಜೀವದಿಂದ ಕೂಡಿರುವಂತೆ ಮಾಡಿರುವುದು.

೨೨. ಭಯಂಕರಾಕಾರದ ಶಿವನ ರುದ್ರನೆಂಬ ಮೂರ್ತಿಯು ತೇಜಸ್ಸಿನ ರೂಪದಿಂದ ಪ್ರಪಂಚದ ಒಳಗೂ ಹೊರಗೂ, ವ್ಯಾಪಿಸಿಕೊಂಡಿರುವುದು.

ಸ್ಪಂದಯತ್ಯನಿಲಾತ್ಮೇದಂ ಬಿಭರ್ತಿ ಸ್ಪಂದತೇ ಸ್ವಯಂ ।
ಔಗ್ರೀತಿ ಕಥ್ಯತೇ ಸದ್ಭಿರ್ಮೂರ್ತಿರುಗ್ರಸ್ಯ ವೇಧಸಃ ॥ ೨೩ ॥

ಸರ್ವಾವಕಾಶದಾ ಸರ್ವವ್ಯಾಪಿಕಾ ಗಗನಾತ್ಮಿಕಾ ।
ಮೂರ್ತಿರ್ಭೀಮಸ್ಯ ಭೀಮಾಖ್ಯಾ ಭೂತವೃಂದಸ್ಯ ಭೇದಿಕಾ ॥ ೨೪ ॥

ಸರ್ವಾತ್ಮನಾಮಧಿಷ್ಠಾತ್ರೀ ಸರ್ವಕ್ಷೇತ್ರನಿವಾಸಿನೀ ।
ಮೂರ್ತಿಃ ಪಶುಪತೇರ್ಜ್ಞೇಯಾ ಪಶುಪಾಶನಿಕೃಂತನೀ ॥ ೨೫ ॥

ದೀಪಯಂತೀ ಜಗತ್ಸರ್ವಂ ದಿವಾಕರಸಮಾಹ್ವಯಾ।
ಈಶಾನಾಖ್ಯಾ ಮಹೇಶಸ್ಯ ಮೂರ್ತಿರ್ದಿವಿ ವಿಸರ್ಪತಿ ॥ ೨೬ ॥

---

೨೩. ಶಿವನ ಉಗ್ರನೆಂಬ ಹೆಸರಿನ ಮೂರ್ತಿಯು ವಾಯುರೂಪದಿಂದ ತಾನೂ ಚಲಿಸುತ್ತ ಇತರ ವಸ್ತುಗಳನ್ನೂ ಚಲಿಸುವಂತೆ ಮಾಡುತ್ತಾ ಈ ಪ್ರಪಂಚವನ್ನು ಪೋಷಿಸುತ್ತಿರುವುದು.

೨೪. ಭೀಮ ಎಂಬ ಹೆಸರಿನ ಮೂರ್ತಿಯು ಆಕಾಶರೂಪದಿಂದ ಸಮಸ್ತ ವಸ್ತುಗಳಿಗೂ, ಅವಕಾಶವನ್ನು ಕಲ್ಪಿಸಿಕೊಟ್ಟು ಆ ವಸ್ತುಗಳೊಳಗೆ ವ್ಯಾಪಿಸಿಕೊಂಡು ಒಂದಕ್ಕೂ, ಮತ್ತೊಂದಕ್ಕೂ ಭೇದಗಳನ್ನುಂಟುಮಾಡುತ್ತಿರುವುದು.

೨೫. ಪಶುಪತಿ ಎಂಬ ಹೆಸರಿನ ಮೂರ್ತಿಯು ಸಮಸ್ತ ಪ್ರಾಣಿಗಳ ಶರೀರದಲ್ಲಿಯೂ, ಇದ್ದುಕೊಂಡು ಆ ಜೀವರುಗಳ ಪಶುತ್ತ್ವಕ್ಕೆ ಕಾರಣಗಳಾದ ಪಾಶಗಳನ್ನು ನಾಶಮಾಡತಕ್ಕುದ್ದಾಗಿರುವುದು.

೨೬. ಮಹೇಶ್ವರನ ಈಶಾನನೆಂಬ ಮೂರ್ತಿಯು ಸೂರ್ಯರೂಪದಿಂದ ಎಲ್ಲ ಪ್ರಪಂಚವನ್ನೂ ಪ್ರಕಾಶಪಡಿಸುತ್ತಾ ಅಂತರಿಕ್ಷದಲ್ಲಿ ಸಂಚಾರಮಾಡುತ್ತಿರುವುದು.

**ಆಸ್ಯಾಯಯತಿ ಯೋ ವಿಶ್ವಮಮೃತಾಂಶುರ್ನಿಶಾಕರಃ ।**
**ಮಹಾದೇವಸ್ಯ ಸಾ ಮೂರ್ತಿರ್ಮಹಾದೇವಸಮಾಹ್ವಯಾ ॥ ೨೭ ॥**

**ಆತ್ಮಾ ತಸ್ಯಾಷ್ಟಮೀ ಮೂರ್ತಿಃ ಶಿವಸ್ಯ ಪರಮಾತ್ಮನಃ ।**
**ವ್ಯಾಪಿಕೇತರಮೂರ್ತೀನಾಂ ವಿಶ್ವಂ ತಸ್ಮಾಚ್ಛಿವಾತ್ಮಕಂ ॥ ೨೮ ॥**

**ವೃಕ್ಷಸ್ಯ ಮೂಲಸೇಕೇನ ಶಾಖಾಃ ಪುಷ್ಯಂತಿ ವೈ ಯಥಾ ।**
**ಶಿವಸ್ಯ ಪೂಜಯಾ ತದ್ವತ್ಪುಷ್ಯತ್ಯಸ್ಯ ವಪುರ್ಜಗತ್ ॥ ೨೯ ॥**

**ಸರ್ವಾಭಯಪ್ರದಾನಂ ಚ ಸರ್ವಾನುಗ್ರಹಣಂ ತಥಾ ।**
**ಸರ್ವೋಪಕಾರಕರಣಂ ಶಿವಸ್ಯಾರಾಧನಂ ವಿದುಃ ॥ ೩೦ ॥**

**ಯಥೇಹ ಪುತ್ರಪೌತ್ರಾದೇಃ ಪ್ರೀತ್ಯಾ ಪ್ರೀತೋ ಭವೇತ್ಪಿತಾ ।**
**ತಥಾ ಸರ್ವಸ್ಯ ಸಂಪ್ರೀತ್ಯಾ ಪ್ರೀತೋ ಭವತಿ ಶಂಕರಃ ॥ ೩೧ ॥**

---

೨೭. ಮಹಾದೇವನೆಂಬ ಮೂರ್ತಿಯು ಚಂದ್ರರೂಪದಿಂದ ಪ್ರಪಂಚವನ್ನು ಆನಂದಪಡಿಸುತ್ತ ಅಮೃತಕಿರಣಗಳನ್ನು ಸುರಿಸುತ್ತಿರುವುದು.

೨೮. ಪರಮಾತ್ಮನಾದ ಶಿವನ ಈ ಎಂಟನೆಯ ಮೂರ್ತಿಯು ಇತರ ಎಲ್ಲಾ ಮೂರ್ತಿಗಳಲ್ಲಿಯೂ ವ್ಯಾಪಿಸಿಕೊಂಡಿರುವುದು. ಆದುದರಿಂದ ಒಟ್ಟು ಪ್ರಪಂಚವೇ ಶಿವಸ್ವರೂಪವಾದುದಾಗಿರುವುದು.

೨೯. ಮರದ ಬುಡಕ್ಕೆ ನೀರನ್ನು ಹಾಕಿದರೆ ಆ ನೀರು ಅದರ ಕೊಂಬೆಗಳಿಗೆಲ್ಲಾ ಸೇರಿ ಹೇಗೆ ವೃಕ್ಷವನ್ನು ಪೋಷಿಸುವುದೋ ಹಾಗೆ ಶಿವನ ಪೂಜೆಯಿಂದ ಅವನ ಶರೀರವಾದ ಈ ಜಗತ್ತೇ ಸಂತೋಷಗೊಳ್ಳುವುದು.

೩೦–೩೧, ಶಿವನ ಪೂಜೆಯು, ಭಕ್ತರಿಗೆ ಯಾವ ಭಯವೂ ಇಲ್ಲದಂತೆ ಮಾಡಿ ಎಲ್ಲ ದೇವತೆಗಳ ಅನುಗ್ರಹವನ್ನೂ ಉಂಟುಮಾಡಿಕೊಟ್ಟು ಸಮಸ್ತರಿಗೂ ಉಪಕಾರವನ್ನುಂಟುಮಾಡುವುದಾಗಿರುವುದು. ಮಕ್ಕಳು, ಮೊಮ್ಮಕ್ಕಳು ಮುಂತಾದವರಿಗೆ ಸಂತೋಷವಾದರೆ ತಂದೆಯು ಹೇಗೆ ಸಂತೋಷಪಡುವನೋ ಹಾಗೆ ಸಮಸ್ತಜನರಿಗೂ ಸಂತೋಷವನ್ನುಂಟುಮಾಡುವುದರಿಂದ ಶಿವನು ಸಂತುಷ್ಟನಾಗುವನು.

**ದೇಹಿನೋ ಯಸ್ಯ ಕಸ್ಯಾಪಿ ಕ್ರಿಯತೇ ಯದಿ ನಿಗ್ರಹಃ ।**
**ಅನಿಷ್ಟಮಷ್ಟಮೂರ್ತೇಸ್ತತ್ಕೃತಮೇವ ನ ಸಂಶಯಃ ॥ ೩೨ ॥**

**ಅಷ್ಟಮೂರ್ತ್ಯಾತ್ಮನಾ ವಿಶ್ವಮಧಿಷ್ಠಾಯ ಸ್ಥಿತಂ ಶಿವಂ ।**
**ಭಜಸ್ವ ಸರ್ವಭಾವೇನ ರುದ್ರಂ ಪರಮಕಾರಣಂ ॥ ೩೩ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯಸಂಹಿತಾಯಾ-**
**ಮುತ್ತರಭಾಗೇ ಅಷ್ಟಮೂರ್ತಿಸ್ವರೂಪವರ್ಣನಂ ನಾಮ**
**ತೃತೀಯೋಽಧ್ಯಾಯಃ**

---

೩೨. ಪ್ರಪಂಚದಲ್ಲಿ ಯಾವ ಪ್ರಾಣಿಗೆ ಹಿಂಸೆಮಾಡಿದರೂ, ಅಷ್ಟಮೂರ್ತಿಸ್ವರೂಪನಾದ ಶಿವನಿಗೇ ಹಿಂಸೆ ಮಾಡಿದಂತೆ ಆಗುವುದು. ಈ ವಿಷಯದಲ್ಲಿ ಸಂದೇಹವಿಲ್ಲ.

೩೩. ಎಲೈ ಕೃಷ್ಣನೇ, ಅಷ್ಟಮೂರ್ತಿಸ್ವರೂಪದಿಂದ ಪಪ್ರಂಚವನ್ನು ವ್ಯಾಪಿಸಿರುವ ಶಿವನನ್ನು ಸಮಸ್ತಕ್ಕೂ ಕಾರಣನೆಂದೂ, ಸರ್ವಾತ್ಮಸ್ವರೂಪನೆಂದೂ ತಿಳಿದು ಧ್ಯಾನಮಾಡು ಎಂದನು.

ಇಲ್ಲಿಗೆ ಶ್ರೀಶಿವಮಹಾಪುರಾಣದಲ್ಲಿ ಏಳನೆಯ ವಾಯುವೀಯಸಂಹಿತೆಯ
ಉತ್ತರಭಾಗದಲ್ಲಿ ಅಷ್ಟಮೂರ್ತಿಸ್ವರೂಪವರ್ಣನವೆಂಬ ಮೂರನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾಪುರಾಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ಚತುರ್ಥೋಽಧ್ಯಾಯಃ

॥ ಕೃಷ್ಣ ಉವಾಚ ॥

ಭಗವನ್ಪರಮೇಶಸ್ಯ ಶರ್ವಸ್ಯಾಮಿತತೇಜಸಃ ।
ಮೂರ್ತಿಭಿರ್ವಿಶ್ವಮೇವೇದಂ ಯಥಾ ವ್ಯಾಪ್ತಂ ತಥಾ ಶ್ರುತಂ ॥ ೧ ॥

ಅಥೈತಜ್ಜ್ಞಾತುಮಿಚ್ಛಾಮಿ ಯಾಥಾತ್ಮ್ಯಂ ಪರಮೇಶಯೋಃ ।
ಸ್ತ್ರೀಪುಂಭಾವಾತ್ಮಕಂ ಚೇದಂ ತಾಭ್ಯಾಂ ಕಥಮಧಿಷ್ಠಿತಂ ॥ ೨ ॥

### ನಾಲ್ಕನೆಯ ಅಧ್ಯಾಯವು.

೧-೨. ಕೃಷ್ಣನು ಪ್ರಶ್ನೆ ಮಾಡುವನು-ಪೂಜ್ಯನಾದ ಎಲೈ ಉಪಮನ್ಯುವೇ, ಮಹಾತೇಜಸ್ವಿಯಾದ ಪರಮೇಶ್ವರನ ಮೂರ್ತಿಗಳಿಂದಲೇ ಈ ಪ್ರಪಂಚವು ಹೇಗೆ ವ್ಯಾಪಿಸಿರುವುದೋ ಅದನ್ನು ಕೇಳಿ ತಿಳಿದೆನು. ಈಗ ಪಾರ್ವತೀಪರಮೇಶ್ವರರು ಸ್ತ್ರೀಪುರುಷಭೇದಗಳಿಂದ ಈ ಪ್ರಪಂಚವನ್ನು ಹೇಗೆ ವ್ಯಾಪಿಸಿರುವರೆಂಬ ವಿಷಯವನ್ನು ಕೇಳಲಿಚ್ಛಿಸುವೆನು. ಅದನ್ನು ದಯವಿಟ್ಟು ಹೇಳಬೇಕೆಂದು ಪ್ರಾರ್ಥಿಸಲು,

॥ ಉಪಮನ್ಯುರುವಾಚ ॥

ಶ್ರೀಮದ್ವಿಭೂತಿಂ ಶಿವಯೋರ್ಯಾಥಾತ್ಮ್ಯಂ ಚ ಸಮಾಸತಃ ।
ವಕ್ಷ್ಯೇ ತದ್ವಿಸ್ತರಾದ್ವಕ್ತುಂ ಭವೇನಾಪಿ ನ ಶಕ್ಯತೇ ॥ ೩ ॥

ಶಕ್ತಿಃ ಸಾಕ್ಷಾನ್ಮಹಾದೇವೀ ಮಹಾದೇವಶ್ಚ ಶಕ್ತಿಮಾನ್ ।
ತಯೋರ್ವಿಭೂತಿಲೇಶೋ ವೈ ಸರ್ವಮೇತಚ್ಚರಾಚರಂ ॥ ೪ ॥

ವಸ್ತು ಕಿಂಚಿದಚಿದ್ರೂಪಂ ಕಿಂಚಿದ್ವಸ್ತು ಚಿದಾತ್ಮಕಂ ।
ದ್ವಯಂ ಶುದ್ಧಮಶುದ್ಧಂ ಚ ಪರಂ ಚಾಪರಮೇವ ಚ ॥ ೫ ॥

---

೩. ಉಪಮನ್ಯುವು ಹೇಳುವನು—ಎಲೈ ಕೃಷ್ಣನೇ ಕೇಳು, ಶಿವದಂಪತಿಗಳ ವಿಭೂತಿಯನ್ನೂ (ಮಹಿಮೆಯನ್ನು) ಅವರ ತತ್ತ್ವವನ್ನೂ, ಸಂಗ್ರಹವಾಗಿ ಹೇಳುವೆನು. ಅದನ್ನು ವಿಸ್ತಾರವಾಗಿ ಹೇಳಲು ಶಿವನಿಂದಲೂ ಸಾಧ್ಯವಿಲ್ಲ.

೪. ಮಹಾದೇವಿಯು ಶಕ್ತಿಸ್ವರೂಪಳು. ಮಹಾದೇವನು ಆ ಶಕ್ತಿಯುಳ್ಳವನು. ಇವರಿಬ್ಬರ ಸ್ವರೂಪದ ಅಲ್ಪಾಂಶವೇ ಈ ಸಮಸ್ತ ಚರಾಚರ ಪ್ರಪಂಚವಾಗಿರುವುದು. ಅವ್ಯಕ್ತಸ್ವರೂಪನಾದ ಶಿವನ (ಪರಬ್ರಹ್ಮನ) ಪರಿಪೂರ್ಣವಾದ ಸ್ವರೂಪವೆಲ್ಲವೂ ಈ ಪ್ರಪಂಚನಾಗಿರುವುದಿಲ್ಲ. ಆ ಪರಬ್ರಹ್ಮವಸ್ತುವಿನ ಎಲ್ಲೋ ಒಂದು ಅಣುವಿನ ಅಂಶದಷ್ಟು ಸ್ವರೂಪದಿಂದಲೇ ಅಸಂಖ್ಯಾತವಾದ ಈ ಬ್ರಹ್ಮಾಂಡಕೋಟಿಗಳು ನಿರ್ಮಿತವಾಗಿರುವುವು. ಪರಬ್ರಹ್ಮದ ಬಹುಭಾಗವು ಯಾವ ವಿಕಾರವನ್ನು ಹೊಂದದೆ ಅವ್ಯಕ್ತದೆಶೆಯಲ್ಲಿಯೇ ಇರುವುದು.

೫-೬. ಈ ಪ್ರಪಂಚದಲ್ಲಿ ಸಕಲ ವಸ್ತುಗಳೂ ಚಿತ್ತು ಅಚಿತ್ತು, ಶುದ್ಧ ಅಶುದ್ಧ, ಪರ ಅಪರ ಎಂಬ ದ್ವಂದ್ವರೂಪಗಳಿಂದ ಜ್ಞಾನಾಜ್ಞಾನಸಹಿತವಾಗಿರುವುವು. ಅಶುದ್ಧವು ಅಪರವೆನಿಸಿಯೂ, ಶುದ್ಧವು ಶುಭಕರವಾದ ಪರವೆನಿಸಿಕೊಂಡೂ ಇರುವುದು. ಈ ಪ್ರಪಂಚದಲ್ಲಿ ಕೆಲವು ವಸ್ತುಗಳು ಚಿದ್ರೂಪವಾಗಿರುವುವು. ಎಂದರೆ ಚೈತನ್ಯದಿಂದ ಕೂಡಿರುವುವು. ಕೆಲವು ಚೈತನ್ಯರಹಿತವಾದ ಜಡರೂಪದಿಂದ ಇರುವುವು. ಎಂದರೆ ಚೈತನ್ಯದಿಂದ ಇರುವ ಪ್ರಾಣಿಗಳೂ,

**ಯತ್ಸಂಸರತಿ ಚಿಚ್ಚಕ್ರಮಚಿಚ್ಚಕ್ರಸಮನ್ವಿತಂ ।**
**ತದೇವಾಶುದ್ಧಮಪರಮಿತರಂ ತು ಪರಂ ಶುಭಂ ॥ ೬ ॥**

**ಅಪರಂ ಚ ಪರಂ ಚೈವ ದ್ವಯಂ ಚಿದಚಿದಾತ್ಮಕಂ ।**
**ಶಿವಸ್ಯ ಚ ಶಿವಾಯಾಶ್ಚ ಸ್ವಾಮ್ಯಂ ಚೈತತ್ಸ್ವಭಾವತಃ ॥ ೭ ॥**

**ಶಿವಯೋರ್ವಶೇ ವಶೇ ವಿಶ್ವಂ ನ ವಿಶ್ವಸ್ಯ ವಶೇ ಶಿವೌ ।**
**ಈಶಿತವ್ಯಮಿದಂ ಯಸ್ಮಾತ್ತಸ್ಮಾದ್ವಿಶ್ವೇಶ್ವರೌ ಶಿವೌ ॥ ೮ ॥**

**ಯಥಾ ಶಿವಸ್ತಥಾ ದೇವೀ ಯಥಾ ದೇವೀ ತಥಾ ಶಿವಃ ।**
**ನಾನಯೋರಂತರಂ ವಿದ್ಯಾಚ್ಚಂದ್ರಚಂದ್ರಿಕಯೋರಿವ ॥ ೯ ॥**

---

ಚೈತನ್ಯರಹಿತವಾದ ಪರ್ವತಾದಿಗಳೂ ಎಂದು ಎರಡು ವಿಧವು. ಈ ಎರಡು ವಿಧವಾದ ಚರಾಚರವಸ್ತುಗಳಿಂದಲೇ ಪ್ರಪಂಚವು ತುಂಬಿರುವುದು. ಈ ವಸ್ತುಗಳನ್ನು ಶುದ್ಧವೆಂತಲೂ, ಅಶುದ್ಧವೆಂತಲೂ ಪುನಃ ಎರಡು ವಿಧವಾಗಿ ವಿಂಗಡಿಸಬಹುದು ಮತ್ತು ಪರವೆಂತಲೂ ಅಪರವೆಂತಲೂ ಸಹ ವಿಭಾಗವಾಡಬಹುದು. ಅಚಿದ್ವಸ್ತುಗಳನ್ನು ಎಂದರೆ ಸ್ಥಾವರರೂಪವಾದ ವಸ್ತುಗಳನ್ನಾಶ್ರಯಿಸಿ ಚಲಿಸುತ್ತಿರುವ ಚಿದ್ವಸ್ತುವು ಅಥವಾ ಚೈತನ್ಯವು ಅಶುದ್ಧವೆಂತಲೂ, ಅಪರವೆಂತಲೂ, ಉಳಿದ ಅಚಿದ್ವಸ್ತುವು ಶುದ್ಧವೆಂತಲೂ ಪರವೆಂತಲೂ ಹೇಳಲ್ಪಡುವುದು.

೭. ಚಿದಚಿದಾತ್ಮಕವಾದ ಈ ಪರಾಪರವಸ್ತುಗಳೆರಡೂ ಯಾವಾಗಲೂ ಸ್ವಾಭಾವಿಕವಾಗಿ ಶಿವದಂಪತಿಗಳಿಗೆ ಅಧೀನವಾಗಿರುವುವು.

೮. ಒಟ್ಟಿನಲ್ಲಿ ಈ ಪ್ರಪಂಚವು ಶಿವದಂಪತಿಗಳ ಅಧೀನವಾಗಿರುವುದು. ಶಿವದಂಪತಿಗಳು ಪ್ರಪಂಚಕ್ಕೆ ಅಧೀನರಲ್ಲ. ಈ ಪ್ರಪಂಚವನ್ನು ಕಾಪಾಡುವವರಾದುದರಿಂದ ಶಿವದಂಪತಿಗಳು ವಿಶ್ವೇಶ್ವರರೆನಿಸುವರು.

೯–೧೦. ಶಿವನಂತೆ ದೇವಿಯೂ ದೇವಿಯಂತೆ ಶಿವನೂ ಇರುವರು. ಚಂದ್ರನಿಗೂ ಬೆಳದಿಂಗಳಿಗೂ ಭೇದವಿಲ್ಲದಿರುವಂತೆ ಇವರಿಬ್ಬರಿಗೂ, ಭೇದವಿಲ್ಲವೆಂದು ತಿಳಿಯಬೇಕು. ಚಂದ್ರನು ಬೆಳದಿಂಗಳನ್ನು ಬಿಟ್ಟು ಬೇರೆಯಾಗಿ ಹೇಗೆ

ಚಂದ್ರೋ ನ ಖಲು ಭಾತ್ಯೇಷ ಯಥಾ ಚಂದ್ರಿಕಯಾ ವಿನಾ ।
ನ ಭಾತಿ ವಿದ್ಯಮಾನೋಽಪಿ ತಥಾ ಶಕ್ತ್ಯಾ ವಿನಾ ಶಿವಃ ॥ ೧೦ ॥

ಪ್ರಭಯಾ ಹಿ ವಿನಾ ಯದ್ವದ್ಭಾನುರೇಷ ನ ವಿದ್ಯತೇ ।
ಪ್ರಭಾ ಚ ಭಾನುನಾ ತೇನ ಸುತರಾಂ ತದುಪಾಶ್ರಯಾ ॥ ೧೧ ॥

ಏವಂ ಪರಸ್ಪರಾಪೇಕ್ಷಾ ಶಕ್ತಿಶಕ್ತಿಮತೋಃ ಸ್ಥಿತಾ ।
ನ ಶಿವೇನ ವಿನಾ ಶಕ್ತಿರ್ನಶಕ್ತ್ಯಾ ಚ ವಿನಾ ಶಿವಃ ॥ ೧೨ ॥

ಶಕ್ತ್ಯಾ ಯಯಾ ಶಿವೋ ನಿತ್ಯಂ ಭುಕ್ತ್ಯೈ ಮುಕ್ತ್ಯೈ ಚ ದೇಹಿನಾಂ ।
ಆದ್ಯಾ ಸೈಕಾ ಪರಾ ಶಕ್ತಿಶ್ಚಿನ್ಮಯೀ ಶಿವಸಂಶ್ರಯಾ ॥ ೧೩ ॥

ಯಾಮಾಹುರಖಿಲೇಶಸ್ಯ ತೈಸ್ತೈರನುಗುಣೈರ್ಗುಣೈಃ ।
ಸಮಾನಧರ್ಮಿಣೀಮೇವ ಶಿವಸ್ಯ ಪರಮಾತ್ಮನಃ ॥ ೧೪ ॥

---

ಪ್ರಕಾಶಿಸುವುದಿಲ್ಲವೋ ಹಾಗೆ ಶಿವನು ಶಕ್ತಿಯಾದ ದೇವಿಯನ್ನು ಬಿಟ್ಟು ಪ್ರಕಾಶಿಸುವುದಿಲ್ಲವು.

೧೧. ಕಾಂತಿಯಿಲ್ಲದೆ ಸೂರ್ಯನಿರುವುದಿಲ್ಲ. ಸೂರ್ಯನನ್ನೇ ಆಶ್ರಯಿಸಿದ ಕಾಂತಿಯೂ ಸೂರ್ಯನಿಲ್ಲದೆ ಇರುವುದಿಲ್ಲ. ಎಂದರೆ ಒಂದನ್ನು ಬಿಟ್ಟು ಮತ್ತೊಂದಿರುವುದಿಲ್ಲ. ಎರಡು ವಸ್ತುಗಳೂ ಬೇರೆ ಬೇರೆ ವ್ಯವಹರಿಸಲ್ಪಟ್ಟರೂ ವಸ್ತುತಃ ಒಂದೇ ವಸ್ತುವಾಗಿರುವುದು.

೧೨. ಶಕ್ತಿಗೂ, ಶಕ್ತಿಯುಳ್ಳ ಪದಾರ್ಥಗಳಿಗೂ, ಪರಸ್ಪರಾಪೇಕ್ಷೆಯು ಇದ್ದೇ ಇರುವುದು. ಪ್ರಾಣಿಗಳಿಗೆ ಭುಕ್ತಿ, ಮುಕ್ತಿರೂಪವಾದ ಫಲಗಳನ್ನು ಕೊಡುವುದರಲ್ಲಿ ಶಿವನಿಲ್ಲದ ಶಕ್ತಿಯೂ, ಶಕ್ತಿಯಿಲ್ಲದ ಶಿವನೂ ಸಮರ್ಥರಲ್ಲ. ಶಿವಶಕ್ತಿಗಳಿಬ್ಬರೂ ಸೇರಿಯೇ ಸಮಸ್ತಕಾರ್ಯಗಳನ್ನು ನೆರವೇರಿಸುವರು.

೧೩–೧೪. ಜ್ಞಾನಸ್ವರೂಪಳಾಗಿ ಶಿವನನ್ನೇ ಆಶ್ರಯಿಸಿರುವ ಅನಾದಿಯಾದ ಪರಾಶಕ್ತಿಯು ಶಿವನಿಗೆ ತಕ್ಕ ಗುಣಗಳಿಂದ ಕೂಡಿರುವುದರಿಂದ ಆ ಶಕ್ತಿಯನ್ನು ಪರಮಾತ್ಮನಾದ ಶಿವನ ಸಹಧರ್ಮಿಣಿ (ಪತ್ನಿ) ಎಂದು ಹೇಳುವರು.

ಸೈಕಾ ಪರಾ ಚ ಚಿದ್ರೂಪಾ ಶಕ್ತಿಃ ಪ್ರಸವಧರ್ಮಿಣೀ ।
ವಿಭಜ್ಯ ಬಹುಧಾ ವಿಶ್ವಂ ವಿದಧಾತಿ ಶಿವೇಚ್ಛಯಾ ॥ ೧೫ ॥

ಸಾ ಮೂಲಪ್ರಕೃತಿರ್ಮಾಯಾ ತ್ರಿಗುಣಾ ಚ ತ್ರಿಧಾ ಸ್ಮೃತಾ ।
ಶಿವಯಾ ಚ ವಿಪರ್ಯಸ್ತಂ ಯಯಾ ತತಮಿದಂ ಜಗತ್ ॥ ೧೬ ॥

ಏಕಧಾ ಚ ದ್ವಿಧಾ ಚೈವ ತಥಾ ಶತಸಹಸ್ರಧಾ ।
ಶಕ್ತಯಃ ಖಲು ಭಿದ್ಯಂತೇ ಬಹುಧಾ ವ್ಯವಹಾರತಃ ॥ ೧೭ ॥

ಶಿವೇಚ್ಛಯಾ ಪರಾ ಶಕ್ತಿಃ ಶಿವತತ್ತ್ವೈಕತಾಂ ಗತಾ ।
ತತಃ ಪರಿಸ್ಫುರತ್ಯಾದೌ ಸರ್ಗೇ ತೈಲಂ ತಿಲಾದಿವ ॥ ೧೮ ॥

ತತಃ ಕ್ರಿಯಾಖ್ಯಯಾ ಶಕ್ತ್ಯಾ ಶಕ್ತೌ ಶಕ್ತಿಮದುತ್ಥಯಾ ।
ತಸ್ಯಾಂ ವಿಕ್ಷೋಭ್ಯಮಾಣಾಯಾಮಾದೌ ನಾದಃ ಸಮುದ್ಬಭೌ ॥ ೧೯ ॥

೧೫. ಚಿದ್ರೂಪವೂ ಶ್ರೇಷ್ಠವೂ ಆದ ಆ ಶಿವಶಕ್ತಿಯು ಒಂದೇ ಆಗಿದ್ದರೂ ಪ್ರಪಂಚಸೃಷ್ಟಿಕಾಲದಲ್ಲಿ ಶಿವನ ಆಜ್ಞೆಯಿಂದ ಅನೇಕವಿಧವಾಗಿ ಮಾರ್ಪಟ್ಟು, ನಾನಾವಿಧವಾದ ಈ ಪ್ರಪಂಚವನ್ನು ನಿರ್ಮಿಸುವುದು.

೧೬–೧೭. ಆ ಶಕ್ತಿಯು ಮೂಲಪ್ರಕೃತಿಯೆಂದೂ, ಮಾಯೆಯೆಂದೂ ಸತ್ವ, ರಜಸ್ತಮೋಗುಣಗಳಿಂದ ಕೂಡಿ ತ್ರಿಗುಣಾ ಎಂದೂ, ಮೂರು ಹೆಸರುಗಳನ್ನು ಹೊಂದಿರುವುದು, ವ್ಯವಹಾರಕ್ಕನುಸಾರವಾಗಿ ಶಕ್ತಿಗಳು ಒಂದು ವಿಧವಾಗಿಯೂ, ಎರಡು ವಿಧವಾಗಿಯೂ, ಅನೇಕವಿಧವಾಗಿಯೂ ಆಗುವುವು. ಶಕ್ತಿಯು ಒಂದೇ ಆದರೂ ವ್ಯವಹಾರಕ್ಕನುಸಾರವಾಗಿ ಬೇರೆಬೇರೆ ಶಕ್ತಿಗಳೆಂದು ಹೇಳಲ್ಪಡುವುದು.

೧೮. ಶಿವನ ಇಚ್ಛೆಯಿಂದ ಪರಾಶಕ್ತಿಯು ಶಿವತತ್ವದಲ್ಲಿ ಸೇರಿ ಒಂದಾಗಿರುವುದು. ಎಳ್ಳಿನಿಂದ ಎಣ್ಣೆಯು ಹೊರಗೆ ಬರುವಂತೆ ಪ್ರಥಮಸೃಷ್ಟಿಯಲ್ಲಿ ಆ ಶಕ್ತಿಯು ಶಿವನಿಂದ ಹೊರಹೊರಟು ಪ್ರಕಾಶಕ್ಕೆ ಬರುವುದು (ಬೇರೆಯಾಗಿ ತೋರುವುದು).

೧೯-೨೦. ಹೀಗೆ ಶಿವನಿಂದ ಹೊರಹೊರಟ ಶಕ್ತಿಗೆ ಸಕಲಕ್ರಿಯಗಳನ್ನು ಮಾಡುವ ಸಾಮರ್ಥವಿರುವುದು. ಅಂತಹ ಕ್ರಿಯಾತ್ಮಕವಾದ ಶಕ್ತಿಯಲ್ಲಿ

**ನಾದಾದ್ವಿನಿಃಸೃತೋ ಬಿಂದುರ್ಬಿಂದೋರ್ದೇವಸ್ಸದಾಶಿವಃ ।**
**ತಸ್ಮಾನ್ಮಹೇಶ್ವರೋ ಜಾತಃ ಶುದ್ಧವಿದ್ಯಾ ಮಹೇಶ್ವರಾತ್ ॥ ೨೦ ॥**

**ಸಾ ವಾಚಾಮೀಶ್ವರೀ ಶಕ್ತಿರ್ವಾಗೀಶಾಖ್ಯಾ ಹಿ ಶೂಲಿನಃ ।**
**ಯಾ ಸಾ ವರ್ಣಸ್ವರೂಪೇಣ ಮಾತೃಕೇತಿ ವಿಜೃಂಭತೇ ॥ ೨೧ ॥**

**ಅಥಾನಂತಸಮಾವೇಶಾನ್ಮಾಯಾ ಕಾಲಮುವಾಸೃಜತ್ ।**
**ನಿಯತಿಂ ಚ ಕಲಾಂ ವಿದ್ಯಾಂ ಕಲಾತೋ ರಾಗಪೂರುಷೌ ॥ ೨೨ ॥**

**ಮಾಯಾತಃ ಪುನರೇವಾಭೂದವ್ಯಕ್ತಂ ತ್ರಿಗುಣಾತ್ಮಕಂ ।**
**ತ್ರಿಗುಣಾಚ್ಚ ತತೋಽವ್ಯಕ್ತಾದ್ವಿಭಕ್ತಾಃ ಸ್ಯುಸ್ತ್ರಯೋ ಗುಣಾಃ ॥ ೨೩ ॥**

---

ಕ್ಷೋಭೆಯುಂಟಾಗಿ ಎಂದರೆ ವಿಕಾರವುಂಟಾಗಿ ಕ್ರಿಯಾಶಕ್ತಿಯ ಚಲನೆಯಿಂದ ನಾದವು ಉಂಟಾಯಿತು. ನಾದದಿಂದ ಬಿಂದುವೂ, ಬಿಂದುವಿನಿಂದ ಸದಾಶಿವನೂ, ಸದಾಶಿವನಿಂದ ಮಹೇಶ್ವರನೂ, ಮಹೇಶ್ವರನಿಂದ ಶುದ್ಧವಿದ್ಯೆಯೂ, ಉತ್ಪತ್ತಿಯಾದವು.

೨೧. ಆ ವಿದ್ಯೆಯು ಶಿವನ ವಾಕ್ಛಕ್ತಿಯಾಗಿ ಸರಸ್ವತೀರೂಪವಾದ ಶಕ್ತಿಯಾಗಿರುವುದು. ಅದೇ ಶಕ್ತಿಯೇ ಅಕ್ಷರಗಳ ರೂಪದಿಂದ ಮಾತೃಕಾ ಎಂಬ ಹೆಸರಿನಿಂದ ಪ್ರಕಾಶಿಸುತ್ತಿರುವುದು.

೨೨. ಆಮೇಲೆ ಅನೇಕ ಸನ್ನಿವೇಶಗಳಿಂದ ಮಾಯೆಯು (ಪ್ರಕೃತಿಯು) ಕಾಲ, ನಿಯತಿ, ಕಲಾ, ವಿದ್ಯಾ ಇವುಗಳನ್ನು ಸೃಷ್ಟಿಸಿತು. ಕಲೆಯಿಂದ ರಾಗ, ಪುರುಷ ಇವುಗಳುಂಟಾದುವು.

೨೩. ಮಾಯೆಯಿಂದ ಮತ್ತೆ ತ್ರಿಗುಣಾತ್ಮಕವಾದ ಅವ್ಯಕ್ತವೆಂಬ ಪ್ರಕೃತಿಯು ಹುಟ್ಟಿತು. ಬಳಿಕ ಆ ಪ್ರಕೃತಿಯಿಂದ ಸತ್ತ್ವರಜಸ್ತಮೋಗುಣಗಳು ಉಂಟಾದವು. ಸೃಷ್ಟಿಗೆ ಪೂರ್ವದ ಪ್ರಕೃತಿಯಲ್ಲಿ ಸತ್ವರಜಸ್ತಮೋಗುಣಗಳು ಒಂದಾಗಿ ಸೇರಿ ಸಾಮ್ಯಾವಸ್ಥೆಯಲ್ಲಿರುವುವು. ಸೃಷ್ಟಿಕಾಲದಲ್ಲಿ ಈ ಗುಣಗಳು ಬೇರಬೇರೆಯಾಗಿ ಪ್ರಕಟವಾಗಿ ಸೃಷ್ಟಿಕಾರ್ಯಗಳು ನಡೆಯುವುವು.

**ಸತ್ತ್ವಂ ರಜಸ್ತಮಶ್ಚೇತಿ ಯೈರ್ವ್ಯಾಪ್ತಮಖಿಲಂ ಜಗತ್ ।**
**ಗುಣೇಭ್ಯಃ ಕ್ಷೋಭ್ಯಮಾಣೇಭ್ಯೋ ಗುಣೇಶಾಖ್ಯಾಸ್ತ್ರಿಮೂರ್ತಯಃ ।**
**ಅಭವನ್ಮಹದಾದೀನಿ ತತ್ತ್ವಾನಿ ಚ ಯಥಾಕ್ರಮಂ ॥ ೨೪ ॥**

**ತೇಭ್ಯಃ ಸ್ಯುರಂಡಪಿಂಡಾನಿ ತ್ವಸಂಖ್ಯಾನಿ ಶಿವಾಜ್ಞಯಾ ।**
**ಅಧಿಷ್ಠಾತಾನ್ಯನಂತಾದ್ಯೈರ್ವಿದ್ಯೇಶೈಶ್ಚಕ್ರವರ್ತಿಭಿಃ ॥ ೨೫ ॥**

**ಶರೀರಾಂತರಭೇದೇನ ಶಕ್ತೇರ್ಭೇದಾಃ ಪ್ರಕೀರ್ತಿತಾಃ ।**
**ನಾನಾರೂಪಾಸ್ತು ವಿಜ್ಞೇಯಾಃ ಸ್ಥೂಲಸೂಕ್ಷ್ಮವಿಭೇದತಃ ॥ ೨೬ ॥**

**ರುದ್ರಸ್ಯ ರೌದ್ರೀ ಸಾ ಶಕ್ತಿರ್ವಿಷ್ಣೋರ್ವೈ ವೈಷ್ಣವೀ ಮತಾ ।**
**ಬ್ರಹ್ಮಾಣೀ ಬ್ರಹ್ಮಣಃ ಪ್ರೋಕ್ತಾ ಚೇಂದ್ರಸ್ಯೈಂದ್ರೀತಿ ಕಥ್ಯತೇ ॥ ೨೭ ॥**

**ಕಿಮತ್ರ ಬಹುನೋಕ್ತೇನ ಯದ್ವಿಶ್ವಮಿತಿ ಕೀರ್ತಿತಂ ।**
**ಶಕ್ತ್ಯಾತ್ಮನೈವ ತದ್ವ್ಯಾಪ್ತಂ ಯಥಾ ದೇಹೋಂತರಾತ್ಮನಾ ॥ ೨೮ ॥**

೨೪–೨೫. ಆ ಸತ್ತ್ವರಜಸ್ತಮೋಗುಣಗಳಿಂದಲೇ ಸಮಸ್ತ ಪ್ರಪಂಚವೂ ವ್ಯಾಪಿಸಿಕೊಂಡು ಆ ಗುಣಗಳ ಚಲನೆಯಿಂದ ಗುಣಗಳಿಗೆ ಒಡೆಯರಾದ ತ್ರಿಮೂರ್ತಿಗಳೂ, ಮಹತ್ತತ್ತ್ವವೇ ಮೊದಲಾದ ತತ್ತ್ವಗಳೂ, ಆ ತತ್ತ್ವಗಳಿಂದ ಲೆಕ್ಕವಿಲ್ಲದಷ್ಟು ಬ್ರಹ್ಮಾಂಡಗಳೂ, ಶರೀರಗಳೂ, ಶಿವನ ಆಜ್ಞಾಬಲದಿಂದ ಉಂಟಾದುವು. ಆ ಶರೀರಗಳಿಗೆ ಅನಂತನೇ ಮೊದಲಾದ ವಿದ್ಯೇಶ್ವರರೂ, ಚಕ್ರವರ್ತಿಗಳೂ ಅಭಿಮಾನಿದೇವತೆಗಳು.

೨೬–೨೮. ಶರೀರಗಳ ಭೇದದಿಂದ ಶಕ್ತಿ ಭೇದಗಳು ಸ್ಥೂಲ ಸೂಕ್ಷ್ಮಗಳಾಗಿ ಅನೇಕ ಭೇದಗಳಾಗಿರುವುವು. ರುದ್ರನಲ್ಲಿ ರೌದ್ರೀಶಕ್ತಿಯೂ, ವಿಷ್ಣುವಿನಲ್ಲಿ ವೈಷ್ಣವೀಶಕ್ತಿಯೂ, ಬ್ರಹ್ಮನಲ್ಲಿ ಬ್ರಹ್ಮಾಣೀಶಕ್ತಿಯೂ, ಇಂದ್ರನಲ್ಲಿ ಐಂದ್ರೀಶಕ್ತಿಯೂ ಇರುವುದು. ಹೆಚ್ಚು ಹೇಳುವುದೇನು? ಶರೀರದಲ್ಲಿ ಅಂತರಾತ್ಮನಿದ್ದಂತೆ ಪ್ರಪಂಚವೆಲ್ಲವೂ ಆತ್ಮಶಕ್ತಿಯಿಂದ ವ್ಯಾಪಿಸಿರುವುದು.

ತಸ್ಮಾಚ್ಛಕ್ತಿಮಯಂ ಸರ್ವಂ ಜಗತ್ಸ್ಥಾವರಜಂಗಮಂ ।
ಕಲಾ ಯಾ ಪರಮಾ ಶಕ್ತಿಃ ಕಥಿತಾ ಪರಮಾತ್ಮನಃ ॥ ೨೯ ॥

ಏವಮೇಷಾ ಪರಾಶಕ್ತಿರೀಶ್ವರೇಚ್ಛಾನುಯಾಯಿನೀ ।
ಸ್ಥಿರಂ ಚರಂ ಚ ಯದ್ವಿಶ್ವಂ ಸೃಜತೀತಿ ವಿನಿಶ್ಚಯಃ ॥ ೩೦ ॥

ಜ್ಞಾನಕ್ರಿಯಾಚಿಕೀರ್ಷಾಭಿಸ್ತಿಸೃಭಿಸ್ಸ್ವಾತ್ಮಶಕ್ತಿಭಿಃ ।
ಶಕ್ತಿಮಾನೀಶ್ವರಃ ಶಶ್ವದ್ವಿಶ್ವಂ ವ್ಯಾಪ್ಯಾಧಿತಿಷ್ಠತಿ ॥ ೩೧ ॥

ಇದಮಿತ್ಥಮಿದಂ ನೇತ್ಥಂ ಭವೇದಿತ್ಯೇವಮಾತ್ಮಿಕಾ ।
ಇಚ್ಛಾಶಕ್ತಿರ್ಮಹೇಶಸ್ಯ ನಿತ್ಯಾ ಕಾರ್ಯನಿಯಾಮಿಕಾ ॥ ೩೨ ॥

ಜ್ಞಾನಶಕ್ತಿಸ್ತು ತತ್ಕಾರ್ಯಂ ಕರಣಂ ಕಾರಣಂ ತಥಾ ।
ಪ್ರಯೋಜನಂ ಚ ತತ್ತ್ವೇನ ಬುದ್ಧಿರೂಪಾಧ್ಯವಸ್ಯತಿ ॥ ೩೩ ॥

---

೨೯–೩೦. ಆದುದರಿಂದ ಚರಾಚರ ಪ್ರಪಂಚವೆಲ್ಲವೂ, ಶಕ್ತಿಸ್ವರೂಪವಾದುದು. ಪರಮಾತ್ಮನ ಶಕ್ತಿಗೆ ಕಲಾ ಎಂದು ಹೆಸರು. ಈ ಅಪಾರ ಶಕ್ತಿಯು ಆಶ್ವರನ ಇಚ್ಛೆಯನ್ನನುಸರಿಸಿ ಈ ಚರಾಚರ ಪ್ರಪಂಚವನ್ನು ಸೃಷ್ಟಿ ಮಾಡುವುದು. ಇದು ನಿಶ್ಚಯವು.

೩೧–೩೨. ಈಶ್ವರನು ತನ್ನ ಇಚ್ಛಾಜ್ಞಾನಕ್ರಿಯಾರೂಪವಾದ ಮೂರು ಶಕ್ತಿಗಳಿಂದ ಪ್ರಪಂಚವನ್ನು ವ್ಯಾಪಿಸಿರುವನು. ಇದು ಹೀಗಲ್ಲ, ಹೀಗೆಯೇ ಆಗಬೇಕು ಎಂಬ ಮಹೇಶ್ವರನ ಇಚ್ಛಾಶಕ್ತಿಯು ನಿತ್ಯವಾದ ಕಾರ್ಯನಿಯಮನ ರೂಪಶಕ್ತಿಯಾಗಿರುವುದು.

೩೩. ಆಗಬೇಕಾದ ಕಾರ್ಯ, ಅದರ ಕಾರಣ, ಅದರ ಸಾಧನಗಳು, ಆ ಕಾರ್ಯದ ಪ್ರಯೋಜನ ಇವುಗಳನ್ನು ಬುದ್ಧಿರೂಪದಿಂದ ನಿಶ್ಚಯಿಸುವುದೇ ಜ್ಞಾನಶಕ್ತಿಯು.

**ಯಥೇಪ್ಸಿತಂ ಕ್ರಿಯಾಶಕ್ತಿರ್ಯಥಾಧ್ಯವಸಿತಂ ಜಗತ್ ।**
**ಕಲ್ಪಯತ್ಯಖಿಲಂ ಕಾರ್ಯಂ ಕ್ಷಣಾತ್ಸಂಕಲ್ಪರೂಪಿಣೀ ॥ ೩೪ ॥**

**ಯಥಾ ಶಕ್ತಿತ್ರಯೋತ್ಥಾನಂ ಶಕ್ತಿಪ್ರಸವಧರ್ಮಿಣೀ ।**
**ಶಕ್ತ್ಯಾ ಪರಮಯಾ ನುನ್ನಾ ಪ್ರಸೂತೇ ಸಕಲಂ ಜಗತ್ ॥ ೩೫ ॥**

**ಏವಂ ಶಕ್ತಿಸಮಾಯೋಗಾಚ್ಛಕ್ತಿಮಾನುಚ್ಯತೇ ಶಿವಃ ।**
**ಶಕ್ತಿಶಕ್ತಿಮದುತ್ಥಂ ತು ಶಾಕ್ತಂ ಶೈವಮಿದಂ ಜಗತ್ ॥ ೩೬ ॥**

**ಯಥಾ ನ ಜಾಯತೇ ಪುತ್ರಃ ಪಿತರಂ ಮಾತರಂ ವಿನಾ ।**
**ತಥಾ ಭವಂ ಭವಾನೀಂ ಚ ವಿನಾ ನೈತಚ್ಚರಾಚರಂ ॥ ೩೭ ॥**

---

೩೪. ಬುದ್ಧಿಯಲ್ಲಿ ನಿಶ್ಚಯಿಸಿದ ಇಚ್ಛಾರೂಪವಾದ ಪ್ರಪಂಚವನ್ನು ಸಂಕಲ್ಪರೂಪವಾದ ಮನಸ್ಸಿನಿಂದ ಸಕಲ ಕಾರ್ಯಗಳನ್ನೂ ಒಂದು ಕ್ಷಣದೊಳಗಾಗಿ ಕಲ್ಪಿಸುವುದೇ ಕ್ರಿಯಾಶಕ್ತಿಯು.

೩೫. ಪರಾಶಕ್ತಿಯು ಮೇಲೆ ಹೇಳಿದ ಮೂರು ವಿಧವಾದ ಇಚ್ಛಾ, ಜ್ಞಾನ, ಕ್ರಿಯಾ ಎಂಬ ಶಕ್ತಿಗಳನ್ನು ಪ್ರಚೋದನೆಮಾಡಿ ಸಕಲ ಜಗತ್ತನ್ನೂ ಪ್ರಸವಿಸುವುದು.

೩೬. ಹೀಗೆ ಶಕ್ತಿಯ ಸಂಬಂಧದಿಂದ ಸಕಲ ಕಾರ್ಯಗಳನ್ನು ನಡೆಸುವುದರಿಂದ ಶಿವನು ಶಕ್ತಿಮಂತನೆಂದು ಹೆಸರನ್ನು ಪಡೆದಿರುವನು. ಶಕ್ತಿ, ಶಕ್ತಿಮಂತರಿಂದ (ಶಿವನಿಂದ) ಉತ್ಪತ್ತಿಯಾದ ಈ ಜಗತ್ತು ಶಿವಶಕ್ತಿಸಂಬಂಧವಾದುದಾಗಿರುವುದು.

೩೭. ತಂದೆಯೂ, ತಾಯಿಯೂ ಇಲ್ಲದೆ ಮಗನು ಹೇಗೆ ಹುಟ್ಟುವುದಿಲ್ಲವೋ ಹಾಗೆ ಭವನೂ, ಭವಾನಿಯೂ ಇಲ್ಲದೆ ಈ ಚರಾಚರ ಪ್ರಪಂಚವು ಹುಟ್ಟುವುದಿಲ್ಲ.

ಸ್ತ್ರೀಪುಂಸಪ್ರಭವಂ ವಿಶ್ವಂ ಸ್ತ್ರೀಪುಂಸಾತ್ಮಕಮೇವ ಚ ।
ಸ್ತ್ರೀಪುಂಸಯೋರ್ವಿಭೂತಿಶ್ಚ ಸ್ತ್ರೀಪುಂಸಾಭ್ಯಾಮಧಿಷ್ಠಿತಂ ।
ಪರಮಾತ್ಮಾ ಶಿವಃ ಪ್ರೋಕ್ತಶ್ಶಿವಾ ಸಾ ಚ ಪ್ರಕೀರ್ತಿತಾ ॥ ೩೮ ॥

ಶಿವಸ್ಸದಾಶಿವಃ ಪ್ರೋಕ್ತಃ ಶಿವಾ ಸಾ ಚ ಮನೋನ್ಮನೀ ।
ಶಿವೋ ಮಹೇಶ್ವರೋ ಜ್ಞೇಯಃ ಶಿವಾ ಮಾಯೇತಿ ಕಥ್ಯತೇ ॥ ೩೯ ॥

ಪುರುಷಃ ಪರಮೇಶಾನಃ ಪ್ರಕೃತಿಃ ಪರಮೇಶ್ವರೀ ।
ರುದ್ರೋ ಮಹೇಶ್ವರಃ ಸಾಕ್ಷಾದ್ರುದ್ರಾಣೀ ರುದ್ರವಲ್ಲಭಾ ॥ ೪೦ ॥

ವಿಷ್ಣುರ್ವಿಶ್ವೇಶ್ವರೋ ದೇವೋ ಲಕ್ಷ್ಮೀ ವಿಶ್ವೇಶ್ವರಪ್ರಿಯಾ ।
ಬ್ರಹ್ಮಾ ಶಿವೋ ಯದಾ ಸ್ರಷ್ಟಾ ಬ್ರಹ್ಮಾಣೀ ಬ್ರಹ್ಮಣಃ ಪ್ರಿಯಾ ॥ ೪೧ ॥

ಭಾಸ್ಕರೋ ಭಗವಾನ್ಶಂಭುಃ ಪ್ರಭಾ ಭಗವತೀ ಶಿವಾ ।
ಮಹೇಂದ್ರೋ ಮನ್ಮಥಾರಾತಿಃ ಶಚೀ ಶೈಲೇಂದ್ರಕನ್ಯಕಾ ॥ ೪೨ ॥

ಜಾತವೇದಾ ಮಹಾದೇವಃ ಸ್ವಾಹಾ ಶರ್ವಾರ್ಧದೇಹಿನೀ ।
ಯಮಸ್ತ್ರಿಯಂಬಕೋ ದೇವಸ್ತತ್ಪ್ರಿಯಾ ಗಿರಿಕನ್ಯಕಾ ॥ ೪೩ ॥

ನಿರ್ಋತಿರ್ಭಗವಾನೀಶೋ ನೈರ್ಋತೀ ನಗನಂದಿನೀ ।
ವರುಣೋ ಭಗವಾನ್ರುದ್ರೋ ವಾರುಣೀ ಭೂಧರಾತ್ಮಜಾ ॥ ೪೪ ॥

---

೩೮. ಸ್ತ್ರೀಪುರುಷರಿಂದ ಹುಟ್ಟಿದ ಪ್ರಪಂಚವು ಸ್ತ್ರೀಪುರುಷಸ್ವರೂಪವಾಗಿಯೇ ಇರುವುದು. ಸ್ತ್ರೀಪುರುಷರ ಶರೀರಗಳೂ, ಸ್ತ್ರೀಪುರುಷರಿಗೆ ಆಶ್ರಯವಾಗಿರುವುದು. ಪರಮಾತ್ಮನೇ ಶಿವನು, ಶಕ್ತಿಯೇ ಶಿವೆಯು.

೩೯–೪೦. ಶಿವಶಿವೆಯರೇ, ಸದಾಶಿವ-ಮನೋನ್ಮನೀ ಮಹೇಶ್ವರ ಮಾಯಾ, ಪುರುಷ-ಪ್ರಕೃತಿ, ರುದ್ರ-ರುದ್ರಾಣೀ ಎಂಬ ರೂಪಗಳಿಂದಿರುವರು.

೪೧-೪೪. ಹಾಗೆಯೇ ವಿಷ್ಣು-ಲಕ್ಷ್ಮೀ, ಬ್ರಹ್ಮ-ಸರಸ್ವತಿ, ಸೂರ್ಯ-ಪ್ರಭಾ, ದೇವೇಂದ್ರ-ಶಚೀ, ಅಗ್ನಿ-ಸ್ವಾಹಾ, ಯಮ-ಯಮಪತ್ನೀ, ನಿರ್ಋತಿ-ನೈರ್ಋತಿ ವರುಣ-ವಾರುಣಿ ಈ ದಂಪತಿಗಳೂ, ಶಿವದಂಪತಿಸ್ವರೂಪರು.

ಬಾಲೇಂದುಶೇಖರೋ ವಾಯುಃ ಶಿವಾ ಶಿವಮನೋಹರಾ ।
ಯಕ್ಷೋ ಯಜ್ಞಶಿರೋಹರ್ತಾ ಋದ್ಧಿರ್ಹಿಮಗಿರೀಂದ್ರಜಾ ॥ ೪೫ ॥

ಚಂದ್ರಾರ್ಧಶೇಖರಶ್ಚಂದ್ರೋ ರೋಹಿಣೀ ರುದ್ರವಲ್ಲಭಾ ।
ಈಶಾನಃ ಪರಮೇಶಾನಸ್ತದಾರ್ಯಾ ಪರಮೇಶ್ವರೀ ॥ ೪೬ ॥

ಅನಂತವಲಯೋಽನಂತೋ ಹ್ಯನಂತಾನಂತವಲ್ಲಭಾ ।
ಕಾಲಾಗ್ನಿರುದ್ರಃ ಕಾಲಾರಿಃ ಕಾಲೀ ಕಾಲಾಂತಕಪ್ರಿಯಾ ॥ ೪೭ ॥

ಪುರುಷಾಖ್ಯೋ ಮನುಃ ಶಂಭುಃ ಶತರೂಪಾ ಶಿವಪ್ರಿಯಾ ।
ದಕ್ಷಃ ಸಾಕ್ಷಾನ್ಮಹಾದೇವಃ ಪ್ರಸೂತಿಃ ಪರಮೇಶ್ವರೀ ॥ ೪೮ ॥

ಋುಚಿರ್ಭವೋ ಭವಾನೀ ಚ ಬುಧೈರಾಕೂತಿರುಚ್ಯತೇ ।
ಭೃಗುರ್ಭಗಾಕ್ಷಿಹಾ ದೇವಃ ಖ್ಯಾತಿಸ್ತ್ರಿನಯನಪ್ರಿಯಾ ॥ ೪೯ ॥

ಮರೀಚಿರ್ಭಗವಾನ್ರುದ್ರಃ ಸಂಭೂತಿಶ್ಶರ್ವವಲ್ಲಭಾ ।
ಗಂಗಾಧರೋಽಂಗಿರಾ ಜ್ಞೇಯಃ ಸ್ಮೃತಿಃ ಸಾಕ್ಷಾದುಮಾ ಸ್ಮೃತಾ ॥ ೫೦ ॥

ಪುಲಸ್ತ್ಯಃ ಶಶಭೃನ್ಮೌಲಿಃ ಪ್ರೀತಿಃ ಕಾಂತಾ ಪಿನಾಕಿನಃ ।
ಪುಲಹಸ್ತ್ರಿಪುರಧ್ವಂಸೀ ತತ್ಪ್ರಿಯಾ ತು ಶಿವಪ್ರಿಯಾ ॥ ೫೧ ॥

ಕ್ರತುಧ್ವಂಸೀ ಕ್ರತುಃ ಪ್ರೋಕ್ತಃ ಸಂನತಿರ್ದಯಿತಾ ವಿಭೋಃ ।
ತ್ರಿನೇತ್ರೋಽತ್ರಿರುಮಾ ಸಾಕ್ಷಾದನಸೂಯಾ ಸ್ಮೃತಾ ಬುಧೈಃ ॥ ೫೨ ॥

ಕಶ್ಯಪಃ ಕಾಲಹಾ ದೇವೋ ದೇವಮಾತಾ ಮಹೇಶ್ವರೀ ।
ವಸಿಷ್ಠೋ ಮನ್ಮಥಾರಾತಿರ್ದೇವೀ ಸಾಕ್ಷಾದರುಂಧತೀ ॥ ೫೩ ॥

೪೫–೫೦. ವಾಯು-ಶಿವಾ, ಕುಬೇರ-ಬುದ್ಧಿ, ಚಂದ್ರ-ರೋಹಿಣೀ, ಈಶಾನ-ಈಶ್ವರೀ, ಆದಿಶೇಷ-ಅನಂತಾ, ಕಾಲಾಗ್ನಿರುದ್ರ-ಕಾಲೀ, ಮನುಶತರೂಪಾ, ದಕ್ಷ-ಪ್ರಸೂತಿ, ಋುಚಿ-ಆಕೂತಿ, ಭೃಗು-ಖ್ಯಾತಿ, ಮರೀಚಿ-ಸಂಭೂತಿ, ಅಂಗಿರಸ್ಸ-ಸ್ಮೃತಿ, ಈ ದಂಪತಿಗಳೂ, ಶಿವದಂಪತಿಸ್ವರೂಪರು.

೫೧–೫೩. ಪುಲಸ್ತ್ಯ-ಪ್ರೀತಿ, ಪುಲಹ-ಪುಲಹಪತ್ನಿ, ಕ್ರತು-ಸಂನತಿ, ಅತ್ರಿ-ಅನಸೂಯಾ, ಕಶ್ಯಪ-ಅದಿತಿ, ವಸಿಷ್ಠ-ಅರುಂಧತಿ, ಈ ದಂಪತಿಗಳೂ, ಶಿವ ದಂಪತಿಗಳೇ. ಮುಖ್ಯವಾಗಿ ತಿಳಿದುಕೊಳ್ಳಬೇಕಾದ ಅಂಶವೇನೆಂದರೆ—ಸಮಸ್ತ ಪುರುಷರೂ ಶಿವಸ್ವರೂಪರು. ಸ್ತ್ರೀಯರೆಲ್ಲರೂ ಪಾರ್ವತೀಸ್ವರೂಪರು.

ಶಂಕರಃ ಪುರುಷಾಸ್ಸರ್ವೇ ಸ್ತ್ರಿಯಃ ಸರ್ವಾ ಮಹೇಶ್ವರೀ ।
ಸರ್ವೇ ಸ್ತ್ರೀಪುರುಷಾಸ್ತಸ್ಮಾತ್ತಯೋರೇವ ವಿಭೂತಯಃ ॥ ೫೪ ॥

ವಿಷಯೀ ಭಗವಾನೀಶೋ ವಿಷಯಃ ಪರಮೇಶ್ವರೀ ।
ಶ್ರಾವ್ಯಂ ಸರ್ವಮುಮಾರೂಪಂ ಶ್ರೋತಾ ಶೂಲವರಾಯುಧಃ ॥ ೫೫ ॥

ಪ್ರಷ್ಟವ್ಯಂ ವಸ್ತುಜಾತಂ ತು ಧತ್ತೇ ಶಂಕರವಲ್ಲಭಾ ।
ಪ್ರಷ್ಟಾ ಸ ಏವ ವಿಶ್ವಾತ್ಮಾ ಬಾಲಚಂದ್ರಾವತಂಸಕಃ ॥ ೫೬ ॥

ದ್ರಷ್ಟವ್ಯಂ ವಸ್ತುರೂಪಂ ತು ಬಿಭರ್ತಿ ಭವವಲ್ಲಭಾ ।
ದ್ರಷ್ಟಾ ವಿಶ್ವೇಶ್ವರೋ ದೇವಃ ಶಶಿಖಂಡಶಿಖಾಮಣಿಃ ॥ ೫೭ ॥

ರಸಜಾತಂ ಮಹಾದೇವೀ ದೇವೋ ರಸಯಿತಾ ಶಿವಃ ।
ಪ್ರೇಯಜಾತಂ ಚ ಗಿರಿಜಾ ಪ್ರೇಯಾಂಶ್ಚೈವ ಗರಾಶನಃ ॥ ೫೮ ॥

ಮಂತವ್ಯವಸ್ತುತಾಂ ಧತ್ತೇ ಸದಾ ದೇವೀ ಮಹೇಶ್ವರೀ ।
ಮಂತಾ ಸ ಏವ ವಿಶ್ವಾತ್ಮಾ ಮಹಾದೇವೋ ಮಹೇಶ್ವರಃ ॥ ೫೯ ॥

ಬೋದ್ಧವ್ಯವಸ್ತುರೂಪಂ ತು ಬಿಭರ್ತಿ ಭವವಲ್ಲಭಾ ।
ದೇವಸ್ಸ ಏವ ಭಗವಾನ್ಬೋದ್ಧಾ ಮುಗ್ಧೇಂದುಶೇಖರಃ ॥ ೬೦ ॥

---

೫೪-೫೮. ಸಮಸ್ತ ಸ್ತ್ರೀಪುರುಷರೂ, ಶಿವದಂಪತಿಗಳ ವಿಭೂತಿಸ್ವರೂಪರು. ಇಂದ್ರಿಯಗೋಚರವಾದ ಪದಾರ್ಥಗಳೆಲ್ಲ ದೇವಿಯ ಸ್ವರೂಪವಾದವುಗಳು. ಆ ವಿಷಯಗಳನ್ನನುಭವಿಸುವವನು ಪರಮೇಶ್ವರಸ್ವರೂಪನು. ಕಿವಿಗೆ ಕೇಳಿಸುವ ಶಬ್ದಗಳೂ, ಕಣ್ಣಿನಿಂದ ನೋಡುವ ವಸ್ತುರೂಪಗಳೂ, ರುಚಿನೋಡುವ ರಸಗಳೂ, ಪ್ರಶ್ನೆಮಾಡಬೇಕಾದ ವಿಷಯಗಳೂ ಪ್ರೀತಿಪಾತ್ರವಾದ ವಸ್ತುಗಳು, ಇವುಗಳೆಲ್ಲ ಉಮಾದೇವಿಯ ಸ್ವರೂಪಗಳು. ಈ ಇಂದ್ರಿಯಗಳಿಂದ ವಿಷಯಗಳನ್ನು ಅನುಭವಿಸುವವನು ಪರಮೇಶ್ವರನು.

೫೯-೬೧. ಮನಸ್ಸಿನಿಂದ ತಿಳಿಯುವ ವಸ್ತುಗಳೆಲ್ಲ ದೇವಿಯು; ತಿಳಿಯುವವನು ಮಹೇಶ್ವರನು. ಬುದ್ಧಿಯಿಂದ ನಿಶ್ಚಯಿಸುವ ವಿಷಯಗಳೆಲ್ಲ

**ಪ್ರಾಣಃ ಪಿನಾಕೀ ಸರ್ವೇಷಾಂ ಪ್ರಾಣಿನಾಂ ಭಗವಾನ್ಪ್ರಭುಃ ।**
**ಪ್ರಾಣಸ್ಥಿತಿಸ್ತು ಸರ್ವೇಷಾಮಂಬಿಕಾ ಚಾಂಬುರೂಪಿಣೀ ॥ ೬೧ ॥**

**ಬಿಭರ್ತಿ ಕ್ಷೇತ್ರತಾಂ ದೇವೀ ತ್ರಿಪುರಾಂತಕವಲ್ಲಭಾ ।**
**ಕ್ಷೇತ್ರಜ್ಞತ್ವಂ ತದಾ ಧತ್ತೇ ಭಗವಾನಂತಕಾಂತಕಃ ॥ ೬೨ ॥**

**ಅಹಃ ಶೂಲಾಯುಧೋ ದೇವಃ ಶೂಲಪಾಣಿಪ್ರಿಯಾ ನಿಶಾ ।**
**ಆಕಾಶಃ ಶಂಕರೋ ದೇವಃ ಪೃಥಿವೀ ಶಂಕರಪ್ರಿಯಾ ॥೬೩ ॥**

**ಸಮುದ್ರೋ ಭಗವಾನೀಶೋ ವೇಲಾ ಶೈಲೇಂದ್ರಕನ್ಯಕಾ ।**
**ವೃಕ್ಷೋ ವೃಷಧ್ವಜೋ ದೇವೋ ಲತಾ ವಿಶ್ವೇಶ್ವರಪ್ರಿಯಾ ॥ ೬೪ ॥**

**ಪುಲ್ಲಿಂಗಮಖಿಲಂ ಧತ್ತೇ ಭಗವಾನ್ಪುರಶಾಸನಃ ।**
**ಸ್ತ್ರೀಲಿಂಗಂ ಚಾಖಿಲಂ ಧತ್ತೇ ದೇವೀ ದೇವಮನೋರಮಾ ॥ ೬೫ ॥**

**ಶಬ್ದಜಾಲಮಶೇಷಂ ತು ಧತ್ತೇ ಸರ್ವಸ್ಯ ವಲ್ಲಭಾ ।**
**ಅರ್ಥಸ್ವರೂಪಮಖಿಲಂ ಧತ್ತೇ ಮುಗ್ಧೇಂದುಶೇಖರಃ ॥ ೬೬ ॥**

**ಯಸ್ಯ ಯಸ್ಯ ಪದಾರ್ಥಸ್ಯ ಯಾ ಯಾ ಶಕ್ತಿರುದಾಹೃತಾ ।**
**ಸಾ ಸಾ ವಿಶ್ವೇಶ್ವರೀ ದೇವೀ ಸ ಸ ಸರ್ವೋ ಮಹೇಶ್ವರಃ ॥ ೬೭ ॥**

---

ದೇವಿಯು; ನಿಶ್ಚಯಿಸುವವನು ದೇವನು. ಶಿವನು ಸಮಸ್ತರಿಗೂ ಪ್ರಾಣ ಸ್ವರೂಪನು; ದೇವಿಯು ನೀರಿನರೂಪದಿಂದ ಜೀವನಸ್ವರೂಪವಾಗಿರುವಳು.

೬೨-೬೫. ದೇವಿಯು ಕ್ಷೇತ್ರರೂಪಳು, ದೇವನು ಕ್ಷೇತ್ರಜ್ಞನು. ಶಿವನೇ ಹಗಲು, ದೇವಿಯೇ ರಾತ್ರಿಯು. ಆಕಾಶವೇ ಶಿವನು, ಭೂಮಿಯೇ ದೇವಿಯು. ಸಮುದ್ರವೇ ಈಶ್ವರನು, ದಡವೇ ಪಾರ್ವತಿಯು. ವೃಕ್ಷವೇ ಈಶ್ವರನು, ಲತೆಯೇ ಪಾರ್ವತಿಯು. ಪುಲ್ಲಿಂಗವೆಲ್ಲವೂ ಶಿವಸ್ವರೂಪವು, ಸ್ತ್ರೀಲಿಂಗವೆಲ್ಲವೂ ದೇವಿಯ ಸ್ವರೂಪವು.

೬೬-೬೭. ಶಬ್ದಸ್ವರೂಪವೆಲ್ಲವೂ ಪಾರ್ವತಿಯು, ಅರ್ಥಸ್ವರೂಪವೆಲ್ಲವೂ ಶಿವನು. ಯಾವ ಯಾವ ಪದಾರ್ಥಗಳಿಗೆ ಯಾವ ಯಾವುದು ಶಕ್ತಿಯಿರುವುದೋ ಅವುಗಳೆಲ್ಲ ಪಾರ್ವತಿಯ ಸ್ವರೂಪವು. ಆ ಪದಾರ್ಥಗಳೇ ಮಹೇಶ್ವರನ ಸ್ವರೂಪವು.

ಯತ್ಪರಂ ಯತ್ಪವಿತ್ರಂ ಚ ಯತ್ಪುಣ್ಯಂ ಯಚ್ಚ ಮಂಗಲಂ ।
ತತ್ತದಾಹ ಮಹಾಭಾಗಾಸ್ತಯೋಸ್ತೇಜೋವಿಜೃಂಭಿತಂ ॥ ೬೮ ॥

ಯಥಾ ದೀಪಸ್ಯ ದೀಪ್ತಸ್ಯ ಶಿಖಾ ದೀಪಯತೇ ಗೃಹಂ ।
ತಥಾ ತೇಜಸ್ತಯೋರೇತದ್ವ್ಯಾಪ್ಯ ದೀಪಯತೇ ಜಗತ್ ॥ ೬೯ ॥

ತೃಣಾದಿಶಿವಮೂರ್ತ್ಯಂತಂ ವಿಶ್ವಖ್ಯಾತಿಶಯಕ್ರಮಃ ।
ಸನ್ನಿಕರ್ಷಕ್ರಮವಶಾತ್ತಯೋರಿತಿ ಪರಾ ಶ್ರುತಿಃ ॥ ೭೦ ॥

ಸರ್ವಾಕಾರಾತ್ಮಕಾವೇತೌ ಸರ್ವಶ್ರೇಯೋವಿಧಾಯಿನೌ ।
ಪೂಜನೀಯೌ ನಮಸ್ಕಾರ್ಯೌ ಚಿಂತನೀಯೌ ಚ ಸರ್ವದಾ ॥ ೭೧ ॥

ಯಥಾಪ್ರಜ್ಞಮಿದಂ ಕೃಷ್ಣ ಯಾಥಾತ್ಮ್ಯಂ ಪರಮೇಶಯೋಃ ।
ಕಥಿತಂ ಹಿ ಮಯಾ ತೇಽದ್ಯ ನ ತು ತಾವದಿಯತ್ತಯಾ ॥ ೭೨ ॥

---

೬೮. ಯಾವುದು ಶ್ರೇಷ್ಠವೂ, ಪರಿಶುದ್ಧವೂ, ಪುಣ್ಯಕರವೂ, ಮಂಗಳವೂ ಆಗಿರುವುದೋ ಅವುಗಳೆಲ್ಲವೂ ಶಿವದಂಪತಿಗಳ ತೇಜಸ್ಸಿನ ಪ್ರಸರಣೆಯೆಂದು ಪೂಜ್ಯರು ಹೇಳುವರು.

೬೯. ಮನೆಯಲ್ಲಿಹತ್ತಿಸಿದ ದೀಪದಕಾಂತಿಯು ಮನೆಯನ್ನು ಪ್ರಕಾಶಪಡಿಸುವಂತೆ ಆ ಶಿವದಂಪತಿಗಳ ತೇಜಸ್ಸು ಈ ಜಗತ್ತನ್ನಾವರಿಸಿ ಬೆಳಗುತ್ತಿರುವುದು.

೭೦. ಹುಲ್ಲು ಕಡ್ಡಿಯನ್ನು ಮೊದಲು ಮಾಡಿಕೊಂಡು ಶಿವನ ಮೂರ್ತಿ ಪರ್ಯಂತವಾಗಿರುವ ಪ್ರಪಂಚದಲ್ಲಿ ಪ್ರಸಿದ್ಧವಾದ ವಸ್ತುಗಳೆಲ್ಲವೂ ಆ ಶಿವದಂಪತಿಗಳ ಸಂಬಂಧದಿಂದಲೇ ಪ್ರಸಿದ್ಧಿಯನ್ನು ಪಡೆದಿರುವುವು ಎಂದು ವೇದಪ್ರಮಾಣವಿರುವುದು.

೭೧. ಈ ಶಿವದಂಪತಿಗಳು ಸಮಸ್ತ ಪ್ರಪಂಚಾಕಾರಸ್ವರೂಪರು. ಸಕಲರಿಗೂ ಶ್ರೇಯಸ್ಸನ್ನುಂಟುಮಾಡುವವರು. ಆದುದರಿಂದ ಇವರನ್ನು ಯಾವಾಗಲೂ ಪೂಜೆಮಾಡಿ ನಮಸ್ಕಾರಮಾಡಿ ಧ್ಯಾನಮಾಡುತ್ತಿರಬೇಕು.

೭೨. ಎಲೈ ಕೃಷ್ಣನೇ, ಶಿವದಂಪತಿಗಳ ನಿಜಸ್ವರೂಪವನ್ನು ನನ್ನ ಬುದ್ಧಿಗೆ ತಿಳಿದಮಟ್ಟಿಗೆ ಹೇಳಿರುವೆನು. ಆದುದರಿಂದ ಅವರ ಸ್ವರೂಪವು ಇಷ್ಟೇ

**ತತ್ಕಥಂ ಶಕ್ಯತೇ ವಕ್ತುಂ ಯಾಥಾತ್ಮ್ಯಂ ಪರಮೇಶಯೋಃ ।**
**ಮಹತಾಮಪಿ ಸರ್ವೇಷಾಂ ಮನಸೋಽಪಿ ಬಹಿರ್ಗತಂ ॥ ೭೩ ॥**

**ಅಂತರ್ಗತಮನನ್ಯಾನಾಮೀಶ್ವರಾರ್ಪಿತಚೇತಸಾಂ ।**
**ಅನ್ಯೇಷಾಂ ಬುದ್ಧ್ಯನಾರೂಢಮಾರೂಢಂ ಚ ಯಥೈವ ತತ್ ॥ ೭೪ ॥**

**ಯೇಯಮುಕ್ತಾ ವಿಭೂತಿರ್ವೈ ಪ್ರಾಕೃತೀ ಸಾ ಪರಾ ಮತಾ ।**
**ಅಪ್ರಾಕೃತಾಂ ಪರಾಮನ್ಯಾಂ ಶುದ್ಧಾಂ ಗುಹ್ಯವಿದೋ ವಿದುಃ ॥ ೭೫ ॥**

**ಯತೋ ವಾಚೋ ನಿವರ್ತಂತೇ ಮನಸಾ ಚೇಂದ್ರಿಯೈಸ್ಸಹ ।**
**ಅಪ್ರಾಕೃತೀ ಪರಾ ಚೈಷಾ ವಿಭೂತಿಃ ಪಾರಮೇಶ್ವರೀ ॥ ೭೬ ॥**

**ಸೈವೇಹ ಪರಮಂ ಧಾಮ ಸೈವೇಹ ಪರಮಾ ಗತಿಃ ।**
**ಸೈವೇಹ ಪರಮಾ ಕಾಷ್ಠಾ ವಿಭೂತಿಃ ಪರಮೇಷ್ಠಿನಃ ॥ ೭೭ ॥**

---

ಎಂದು ನೀನು ತಿಳಿಯಬೇಡ. ಅಳತೆಗೆ ಸಿಕ್ಕದ ಆ ಶಿವದಂಪತಿಗಳ ನಿಜ ಸ್ವರೂಪವನ್ನು ಹೇಳಲು ಯಾರಿಗೆತಾನೇ ಸಾಧ್ಯವಾಗುವುದು ?

೭೩-೭೪. ದೊಡ್ಡವರೆನಿಸಿಕೊಂಡಿರುವವರ ಮನಸ್ಸೂ ಹೊರಗಿನ ವಿಷಯಗಳಲ್ಲಾಸಕ್ತವಾಗಿರುವುದು. ಈಶ್ವರನಲ್ಲೇ ತಮ್ಮ ಮನಸ್ಸನ್ನಿಟ್ಟು ಧ್ಯಾನ ಮಾಡುತ್ತಿರುವವರ ಮನಸ್ಸು ಅಂತರ್ಗತವಾಗಿರುವುದು. ಮಿಕ್ಕವರಿಗೆ ಆ ಶ್ರೇಷ್ಠ ತತ್ತ್ವವು ಬುದ್ಧಿಗೆ ಗೋಚರವಾಗುವುದೇ ಇಲ್ಲ.

೭೫. ಆಗ ಹೇಳಿದ ವಿಭೂತಿಗಳೆಲ್ಲವೂ ಪ್ರಕೃತಿಸಂಬಂಧವಿಲ್ಲದೆ ಶುದ್ಧವಾದ ಪರತತ್ತ್ವವೆಂದು ಅತ್ಯಂತ ರಹಸ್ಯವಾದ ಆತ್ಮಸ್ವರೂಪವನ್ನು ಬಲ್ಲವರು ತಿಳಿದಿರುವರು.

೭೬-೭೭. ಪ್ರಕೃತಿಯ ಸಂಬಂಧವಿಲ್ಲದ ಪರಮೇಶ್ವರನ ಪರಾವಿಭೂತಿಯು, ಮನಸ್ಸು ವಾಕ್ಯಗಳು ಮತ್ತು ಇಂದ್ರಿಯಗಳಿಗೆ ಗೋಚರವಾಗತಕ್ಕದಲ್ಲ. ಆ ಪರಾವಿಭೂತಿಯೇ ಶ್ರೇಷ್ಠವಾದ ಸ್ಥಾನವು. ಅದೇ ಪರಗತಿಯು. ಅದೇ ಹೊಂದಬೇಕಾದ ಕೊನೆಯ ಫಲವು.

ತಾಂ ಪ್ರಾಪ್ತುಂ ಪ್ರಯತಂತೇऽತ್ರ ಜಿತಶ್ವಾಸಾ ಜಿತೇಂದ್ರಿಯಾಃ ।
ಗರ್ಭಾಕಾರಾಗೃಹದ್ವಾರಂ ನಿಶ್ಛಿದ್ರಂ ಘಟಿತುಂ ಯಥಾ ॥ ೭೮ ॥

ಸಂಸಾರಾಶೀವಿಷಾಲೀಢಮೃತಸಂಜೀವನೌಷಧಂ ।
ವಿಭೂತಿಂ ಶಿವಯೋರ್ವಿದ್ವಾನ್ನ ಬಿಭೇತಿ ಕುತಶ್ಚನ ॥ ೭೯ ॥

ಯಃ ಪರಾಮಪರಾಂ ಚೈವ ವಿಭೂತಿಂ ವೇತ್ತಿ ತತ್ತ್ವತಃ ।
ಸೋऽಪರೋ ಭೂತಿಮುಲ್ಲಂಘ್ಯ ಪರಾಂ ಭೂತಿಂ ಸಮಶ್ನುತೇ ॥ ೮೦ ॥

ಏತತ್ತೇ ಕಥಿತಂ ಕೃಷ್ಣ ಯಾಥಾತ್ಮ್ಯಂ ಪರಮಾತ್ಮನೋಃ ।
ರಹಸ್ಯಮಪಿ ಯೋಗ್ಯೋऽಸಿ ಭರ್ಗಭಕ್ತೋ ಭವಾನಿತಿ ॥ ೮೧ ॥

---

೭೮. ಆ ಪರಮಫಲವನ್ನು (ಪರಮಪದ) ಹೊಂದುವುದಕ್ಕಾಗಿಯೇ ಮುಮುಕ್ಷುಗಳು ಜಿತೇಂದ್ರಿಯರಾಗಿ ಪ್ರಾಣವಾಯುವನ್ನು ಜಯಿಸಿ, ಗರ್ಭವೆಂಬ ಸೆರಮನೆಯ ಬಾಗಿಲನ್ನು ಸಂದಿಲ್ಲದಂತೆ ಮುಚ್ಚುವುದಕ್ಕೆ ಪ್ರಯತ್ನಪಡುವರು. (ಪುನರ್ಜನ್ಮವಿಲ್ಲದಂತೆ ಮಾಡಿಕೊಳ್ಳುವರೆಂದು ಭಾವವು).

೭೯. ಸಂಸಾರವೆಂಬ ಸರ್ಪದ ವಿಷವನ್ನು ಕುಡಿದವರಿಗೆ ಮೃತಸಂಜೀವಿನೀ ಔಷಧದಂತಿರುವ ಶಿವದಂಪತಿಗಳ ವಿಭೂತಿಯನ್ನು (ಮಹಿಮೆಯನ್ನು) ತಿಳಿದವರು ಯಾವುದಕ್ಕೂ ಭಯಪಡಬೇಕಾಗಿಲ್ಲ.

೮೦. ಯಾರು ಪರಾಪರರೂಪವಾದ ವಿಭೂತಿಗಳೆರಡನ್ನೂ ನಿಜವಾಗಿ ತಿಳಿದಿರುವರೋ ಅವರು ಅಪರವಿಭೂತಿಯನ್ನು ಬಿಟ್ಟು ಪರವಿಭೂತಿಯನ್ನೇ ಆಶ್ರಯಿಸುವರು. ಎಂದರೆ ನಶ್ವರವಾದ ವಿಷಯಸುಖಾದಿಗಳನ್ನೊಳಗೊಂಡ ಈ ಪ್ರಪಂಚವನ್ನು ತೃಣದಂತೆ ಕಂಡು ನಿತ್ಯನೂ, ಪರಬ್ರಹ್ಮಸ್ವರೂಪನೂ, ಆದ ಶಿವನನ್ನು ಆಶ್ರಯಿಸುವರು.

೮೧. ಎಲೈ ಕೃಷ್ಣನೇ, ನೀನು ಶಿವನಲ್ಲಿ ಭಕ್ತಿಯುಳ್ಳವನೆಂಬುದಾಗಿ ತಿಳಿದು ಶಿವದಂಪತಿಗಳ ತತ್ತ್ವವು ಅತ್ಯಂತ ಗೋಪ್ಯವಾದುದಾದರೂ, ಯೋಗ್ಯಶಿಷ್ಯನಾದ ನಿನಗೆ ಅದನ್ನು ಹೇಳಿರುವೆನು.

ನಾಽಶಿಷ್ಯೇಭ್ಯೋಽಪ್ಯಶೈವೇಭ್ಯೋ ನಾಽಭಕ್ತೇಭ್ಯಃ ಕದಾಚನ ।
ವ್ಯಾಹರೇದೀಶಯೋರ್ಭೂತಿಮಿತಿ ವೇದಾನುಶಾಸನಂ ॥ ೮೨ ॥

ತಸ್ಮಾತ್ತ್ವಮತಿಕಲ್ಯಾಣ ಪರೇಭ್ಯಃ ಕಥಯೇನ್ನ ಹಿ ।
ತ್ವಾದೃಶೇಭ್ಯೋಽನುರೂಪೇಭ್ಯಃ ಕಥಯೈತನ್ನ ಚಾನ್ಯಥಾ ॥ ೮೩ ॥

ವಿಭೂತಿಮೇತಾಂ ಶಿವಯೋರ್ಯೋಗ್ಯೇಭ್ಯೋ ಯಃ ಪ್ರದಾಪಯೇತ್ ।
ಸಂಸಾರಸಾಗರಾನ್ಮುಕ್ತಃ ಶಿವಸಾಯುಜ್ಯಮಾಪ್ನುಯಾತ್ ॥ ೮೪ ॥

ಕೀರ್ತನಾದಸ್ಯ ನಶ್ಯಂತಿ ಮಹಾಂತ್ಯಃ ಪಾಪಕೋಟಯಃ ।
ತ್ರಿಶ್ಚತುರ್ಧಾ ಸಮಭ್ಯಸ್ತೈರ್ವಿನಶ್ಯಂತಿ ತತೋಽಧಿಕಾಃ ॥ ೮೫ ॥

ನಶ್ಯಂತ್ಯನಿಷ್ಟರಿಪವೋ ವರ್ಧಂತೇ ಸುಹೃದಸ್ತಥಾ ।
ವಿದ್ಯಾ ಚ ವರ್ಧತೇ ಶೈವೀ ಮತಿಸ್ಸತ್ಯೇ ಪ್ರವರ್ತತೇ ॥ ೮೬ ॥

---

೮೨–೮೩. ಈ ಶಿವದಂಪತಿಗಳ ವಿಭೂತಿಯನ್ನು (ಮಹಿಮೆಯನ್ನು) ಶಿಷ್ಯರಲ್ಲದವರಿಗೂ. ಶಿವಭಕ್ತರಲ್ಲದವರಿಗೂ, ಎಂದಿಗೂ ಹೇಳಬಾರದೆಂದು ವೇದ ವಿಧಿಯು ಇರುವುದು. ಆದುದರಿಂದ ಮಂಗಳಸ್ವರೂಪನಾದ ಎಲೈ ಕೃಷ್ಣನೇ, ನೀನು ಇದನ್ನು ಅಂತಹ ಇತರ ಜನರಿಗೆ ಹೇಳಬೇಡ. ನಿನ್ನಂತಹ ಅನುರೂಪ ರಾದ ಶಿಷ್ಯರಿಗೆಮಾತ್ರ ಇದನ್ನು ಹೇಳು.

೮೪. ಈ ಶಿವದಂಪತಿಗಳ ವಿಭೂತಿಯನ್ನು ಯೋಗ್ಯರಾದ ಶಿಷ್ಯರಿಗೆ ಯಾರು ಉಪದೇಶಿಸುವರೋ, ಅವರು ಸಂಸಾರಸಾಗರದ ಬಿಡುಗಡೆಯನ್ನು ಹೊಂದಿ ಶಿವಸಾಯುಜ್ಯವನ್ನು ಪಡೆವರು.

೮೫. ಈ ಶಿವದಂಪತಿಗಳ ವಿಭೂತಿಯನ್ನು ವಿವರಿಸುವ ಈ ಅಧ್ಯಾಯ ವನ್ನು ಪಾರಾಯಣಮಾಡಿದರೆ ಅನೇಕ ಮಹಾಪಾಪಗಳು ನಾಶವಾಗುವುವು. ಮೂರು ನಾಲ್ಕು ಬಾರಿ ಪಾರಾಯಣಮಾಡಿದರೆ ಇನ್ನೂ ಹೆಚ್ಚು ಪಾಪಗಳು ನಾಶವಾಗುವುವು.

೮೬–೮೭. ಇದರ ಪಾರಾಯಣದಿಂದ ಕೆಟ್ಟಶತ್ರುಗಳೆಲ್ಲ ನಾಶವಾಗು ವರು. ಮಿತ್ರರು ಹೆಚ್ಚುವರು. ಶಿವಸಂಬಂಧವಾದ ಜ್ಞಾನವು ಅಭಿವೃದ್ಧಿ

**ಭಕ್ತಿಃ ಪರಾ ಶಿವೇ ಸಾಂಬೇ ಸಾನುಗೇ ಸಪರಿಚ್ಛದೇ ।**
**ಯದ್ಯದಿಷ್ಟತಮಂ ಚಾನ್ಯತ್ತತ್ತದಾಪ್ನೋತ್ಯಸಂಶಯಂ ॥ ೮೭ ॥**

**ಅಂತಃ ಶುಚಿಃ ಶಿವೇ ಭಕ್ತೋ ವಿಶ್ರಬ್ಧಃ ಕೀರ್ತಯೇದ್ಯದಿ ।**
**ಪ್ರಬಲೈಃ ಕರ್ಮಭಿಃ ಪೂರ್ವೈಃ ಫಲಂ ಚೇತ್ಪ್ರತಿಬಧ್ಯತೇ ।**
**ಪುನಃ ಪುನಃ ಸಮಭ್ಯಸ್ಯೇತ್ತಸ್ಯ ನಾಸ್ತೀಹ ದುರ್ಲಭಂ ॥ ೮೮ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯಸಂಹಿತಾಯಾ-ಮುತ್ತರಭಾಗೇ ಗೌರೀಶಂಕರವಿಭೂತಿಯೋಗೋ ನಾಮ ಚತುರ್ಥೋಽಧ್ಯಾಯಃ**

---

ಯಾಗಿ ಬುದ್ಧಿಯು ಸತ್ಯವಾದಮಾರ್ಗವನ್ನು ಹಿಡಿಯುವುದು. ಅಂಬಾಸಹಿತನೂ, ಸ್ಕಂದ ಗಣೇಶ, ನಂದೀ ಮೊದಲಾದ ಪರಿವಾರಸಹಿತನೂ ಆದ ಪರಶಿವನಲ್ಲಿ ಭಕ್ತಿಯುಂಟಾಗುವುದು. ತನಗೆ ಯಾವ ಯಾವ ಫಲದಲ್ಲಿ ಅಪೇಕ್ಷೆಯುಂಟಾಗುವುದೋ ಅದೆಲ್ಲವನ್ನೂ ಸಂದೇಹವಿಲ್ಲದೆ ಹೊಂದುವನು.

೮೮. ಅಂತರ್ಬಹಿಶ್ಶುದ್ಧನಾಗಿ ಶಿವನಲ್ಲಿ ದೃಢವಾದ ಭಕ್ತಿಯನ್ನಿಟ್ಟು ಈ ಅಧ್ಯಾಯವನ್ನು ಪಾರಾಯಣಮಾಡಿದರೆ, ಪೂರ್ವಜನ್ಮದ ಪ್ರಬಲವಾದ ಕರ್ಮಗಳಿಂದ ಫಲಪ್ರಾಪ್ತಿಗೆ ವಿಘ್ನಗಳು ಬಂದರೂ, ಪುನಃ ಪುನಃ ಪಾರಾಯಣಮಾಡುವುದರಿಂದ ಆ ವಿಘ್ನಗಳು ಪರಿಹಾರವಾಗಿ ಸಕಲೇಷ್ಟಾರ್ಥಗಳೂ ಸಿದ್ಧಿಸುವುವು. ಅವನಿಗೆ ದುರ್ಲಭವಾದುದಾವುದೂ ಇರುವುದಿಲ್ಲ.

ಇಲ್ಲಿಗೆ ಶ್ರೀಶಿವಮಹಾಪುರಾಣದ ಏಳನೆಯ ವಾಯುವೀಯಸಂಹಿತೆಯ ಉತ್ತರಭಾಗದಲ್ಲಿ ಗೌರೀಶಂಕರವಿಭೂತಿವರ್ಣನೆಯೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿ ವ ಮ ಹಾ ಪು ರಾ ಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ಪಂಚಮೋಽಧ್ಯಾಯಃ

॥ ಉಪಮನ್ಯುರುವಾಚ ॥

**ವಿಗ್ರಹಂ ದೇವದೇವಸ್ಯ ವಿಶ್ವಮೇತಚ್ಚರಾಚರಂ ।**
**ತದೇವ ನ ವಿಜಾನಂತಿ ಪಶವಃ ಪಾಶಗೌರವಾತ್ ॥ ೧ ॥**

**ತಮೇಕಮೇವ ಬಹುಧಾ ವದಂತಿ ಯದುನಂದನ ।**
**ಅಜಾನಂತಃ ಪರಂ ಭಾವಮವಿಕಲ್ಪಂ ಮಹರ್ಷಯಃ ॥ ೨ ॥**

**ಅಪರಂ ಬ್ರಹ್ಮರೂಪಂ ಚ ಪರಂ ಬ್ರಹ್ಮಾತ್ಮಕಂ ತಥಾ ।**
**ಕೇಚಿದಾಹುರ್ಮಹಾದೇವಮನಾದಿನಿಧನಂ ಪರಂ ॥ ೩ ॥**

---

## ಐದನೆಯ ಅಧ್ಯಾಯವು.

೧–೨. ಉಪಮನ್ಯುವಿಂತೆಂದನು—ಯದುವಂಶೋದ್ಭವನಾದ ಎಲೈ ಕೃಷ್ಣನೇ, ಈ ಸಮಸ್ತ ಚರಾಚರ ಪ್ರಪಂಚವೇ ದೇವದೇವನಾದ ಪರಮೇಶ್ವರನ ವಿಗ್ರಹವು. ಪಶುಗಳಾದ ಜೀವರುಗಳು ತಮಗಿರುವ ಪಾಶಗಳ ಸಂಬಂಧದಿಂದ ಇದನ್ನು ತಿಳಿಯಲಾರರು. ಆ ಮಹೇಶ್ವರನ ಶ್ರೇಷ್ಠವಾದ ವಿಕಾರರಹಿತವಾದ ತತ್ತ್ವವನ್ನು ಚೆನ್ನಾಗಿ ತಿಳಿಯದೆ ಮಹರ್ಷಿಗಳು, ಒಬ್ಬನೇ ಆದ ಅವನನ್ನು ಅನೇಕ ಬಗೆಯಲ್ಲಿ ವಿವರಿಸುವರು. ಈ ವಿಷಯದಲ್ಲಿ "ಏಕಂ ಸದ್ವಿಪ್ರಾ ಬಹುಧಾ ವದಂತಿ" (ಋ.ಸ.) ಎಂದು ಶ್ರುತಿ ಇರುವುದು.

೩–೪. ಅದ್ಯಂತರಹಿತನಾದ ಮಹಾದೇವನನ್ನು ಕೆಲವರು ಅಪರಬ್ರಹ್ಮನೆಂದೂ, ಪರಬ್ರಹ್ಮನೆಂದೂ ಎರಡು ರೂಪದಿಂದ ಇರುವಂತೆ ಹೇಳುವರು. ಪಂಚ

ಭೂತೇಂದ್ರಿಯಾಂತಃಕರಣಪ್ರಧಾನವಿಷಯಾತ್ಮಕಂ ।
ಅಪರಂ ಬ್ರಹ್ಮನಿರ್ದಿಷ್ಟಂ ಪರಂ ಬ್ರಹ್ಮಚಿದಾತ್ಮಕಂ ॥ ೪ ॥

ಬೃಹತ್ತ್ವಾದ್ಬೃಂಹಣತ್ವಾದ್ವಾ ಬ್ರಹ್ಮ ಚೇತ್ಯಭಿಧೀಯತೇ ।
ಉಭೇ ತೇ ಬ್ರಹ್ಮಣೋ ರೂಪೇ ಬ್ರಹ್ಮಣೋಽಧಿಪತೇಃ ಪ್ರಭೋಃ ॥ ೫ ॥

ವಿದ್ಯಾವಿದ್ಯಾಸ್ವರೂಪೀತಿ ಕೈಶ್ಚಿದೀಶೋ ನಿಗದ್ಯತೇ ।
ವಿದ್ಯಾಂ ತು ಚೇತನಾಂ ಪ್ರಾಹುಸ್ತಥಾ ವಿದ್ಯಾಮಚೇತನಾಂ ।
ವಿದ್ಯಾವಿದ್ಯಾತ್ಮಕಂ ಚೈವ ವಿಶ್ವಂ ವಿಶ್ವಗುರೋರ್ವಿಭೋಃ ॥ ೬ ॥

ರೂಪಮೇವ ನ ಸಂದೇಹೋ ವಿಶ್ವಂ ತಸ್ಯ ವಶೇ ಯತಃ ।
ಭ್ರಾಂತಿರ್ವಿದ್ಯಾ ಪರಾ ಚೇತಿ ಶಾರ್ವಂ ರೂಪಂ ಪರಂ ವಿದುಃ ॥ ೭ ॥

ಅಯಥಾಬುದ್ಧಿರರ್ಥೇಷು ಬಹುಧಾ ಭ್ರಾಂತಿರುಚ್ಯತೇ ।
ಯಥಾರ್ಥಾಕಾರಸಂವಿತ್ತಿರ್ವಿದ್ಯೇತಿ ಪರಿಕೀರ್ತ್ಯತೇ ॥ ೮ ॥

---

ಭೂತಗಳು ಇಂದ್ರಿಯಗಳು, ಅಂತಃಕರಣ, ಪ್ರಕೃತಿ ಇವುಗಳನ್ನೆಲ್ಲ ಅಪರಬ್ರಹ್ಮನೆಂದೂ, ಜ್ಞಾನಸ್ವರೂಪವನ್ನು ಪರಬ್ರಹ್ಮನೆಂದೂ ಹೇಳುವರು. ಈ ಪರತತ್ತ್ವವು ದೊಡ್ಡದಾಗಿರುವುದರಿಂದಲೂ, ಅಥವಾ ಹೆಚ್ಚುವ ಸ್ವಭಾವವುಳ್ಳದ್ದಾದುದರಿಂದಲೂ ಇದಕ್ಕೆ ಬ್ರಹ್ಮನೆಂಬ ಹೆಸರು ಬಂದಿರುವುದು. ಬ್ರಹ್ಮನಿಗೂ ಸ್ವಾಮಿಯಾದ ಆ ದೇವನಿಗೆ ಎರಡು ರೂಪಗಳೂ ಇರುವುವು.

೬. ಈಶ್ವರನು ವಿದ್ಯಾವಿದ್ಯಾಸ್ವರೂಪನೆಂದು ಕೆಲವರು ಹೇಳುವರು. ವಿದ್ಯೆಯೇ ಚೇತನವು. ಅವಿದ್ಯೆಯೇ ಅಚೇತನವು. ವಿದ್ಯಾವಿದ್ಯಾತ್ಮಕವಾದ ಈ ಪ್ರಪಂಚವು, ಈ ಪ್ರಪಂಚಕ್ಕೆ ಒಡೆಯನೂ ಲೋಕದಲ್ಲೆಲ್ಲ ದೊಡ್ಡವನೂ ಸರ್ವವ್ಯಾಪಿಯೂ ಆದ ಆ ದೇವನ ರೂಪವೇ ಎಂಬ ವಿಷಯದಲ್ಲಿ ಸಂದೇಹವಿಲ್ಲ. ಇದು ಯಾವಾಗಲೂ ಅವನ ಅಧೀನವಾದುದಾಗಿಯೇ ಇರುವುದು.

೭-೮. ಭ್ರಾಂತಿಯನ್ನು ಅಪರವಿದ್ಯೆಯೆಂದೂ ಶಿವಸ್ವರೂಪವನ್ನು ಪರವಿದ್ಯೆಯೆಂದೂ, ಹೇಳುವರು. ಪದಾರ್ಥಗಳ ಸ್ವರೂಪವನ್ನು ಇದ್ದಂತೆ ಗ್ರಹಿಸದೆ ಬೇರೆ ವಿಧವಾಗಿ ಗ್ರಹಿಸುವುದು ಭ್ರಾಂತಿಯೆನಿಸುವುದು. ಇದ್ದುದನ್ನು ಇದ್ದಂತೆ ತಿಳಿಯುವುದು ವಿದ್ಯೆಯೆನಿಸುವುದು.

**ವಿಕಲ್ಪರಹಿತಂ ತತ್ತ್ವಂ ಪರಮಿತ್ಯಭಿಧೀಯತೇ ।**
**ವೈಪರೀತ್ಯಾದಸಚ್ಛಬ್ದಃ ಕಥ್ಯತೇ ವೇದವಾದಿಭಿಃ ॥ ೯ ॥**

**ತಯೋಃ ಪತಿತ್ವಾತ್ತು ಶಿವಃ ಸದಸಸ್ಪತಿರುಚ್ಯತೇ ।**
**ಕ್ಷರಾಕ್ಷರಾತ್ಮಕಂ ಪ್ರಾಹುಃ ಕ್ಷರಾಕ್ಷರಪರಂ ಪರೇ ॥ ೧೦ ॥**

**ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ।**
**ಉಭೇ ತೇ ಪರಮೇಶಸ್ಯ ರೂಪೇ ತಸ್ಯ ವಶಂ ಯತಃ ॥ ೧೧ ॥**

**ತಯೋಃ ಪರಃ ಶಿವಃ ಶಾಂತಃ ಕ್ಷರಾಕ್ಷರಪರಃ ಸ್ಮೃತಃ ।**
**ಸಮಷ್ಟಿವ್ಯಷ್ಟಿರೂಪಂ ಚ ಸಮಷ್ಟಿವ್ಯಷ್ಟಿಕಾರಣಂ ॥ ೧೨ ॥**

೯. ವಿಕಲ್ಪ ಅಥವಾ ವಿಕಾರರಹಿತವಾದುದು ಪರತತ್ತ್ವವೆನಿಸುವುದು. ವಿಕಾರವಾದವು ಅಸತ್ಪದಾರ್ಥಗಳು. ಸತ್ ಮತ್ತು ಅಸತ್ ಎಂಬ ಇವೆರಡಕ್ಕೂ ಪತಿಯಾದ ಶಿವನನ್ನು ಸದಸಸ್ಪತಿಯೆಂದು ವೇದದಲ್ಲಿ ಹೇಳಿರುವುದು.

೧೦–೧೧. ಕೆಲವರು ಶಿವನನ್ನು ಕ್ಷರಾಕ್ಷರಾತ್ಮಕವಾದ ಪ್ರಪಂಚಸ್ವರೂಪನೆಂದು ಹೇಳುವರು. ಮತ್ತೆ ಕೆಲವರು ಪ್ರಪಂಚಸ್ವರೂಪಕ್ಕಿಂತಲೂ, ಶ್ರೇಷ್ಠವಾದ ಜ್ಞಾನಸ್ವರೂಪನೆಂದು ಹೇಳುವರು. ಕ್ಷರವೆಂದರೆ ನಾಶವಾಗತಕ್ಕ ಸಮಸ್ತ ಪ್ರಾಣಿಗಳೆಂದೂ, ಅಕ್ಷರವೆಂದರೆ ನಾಶರಹಿತನಾಗಿ ವಿಕಾರವನ್ನು ಹೊಂದದ ಕೂಟಸ್ಥನಾದ ಈಶ್ವರನೆಂದೂ ಹೇಳುವರು. ಈ ಎರಡು ರೂಪಗಳೂ, ಪರಮೇಶ್ವರನ ಸ್ವರೂಪವೇ ಆಗಿ ಅವನ ಅಧೀನವಾಗಿರುವುವು.

೧೨. ಕ್ಷರಾಕ್ಷರಗಳಾದ ಪ್ರಪಂಚ ಮತ್ತು ಈಶ್ವರರಿಗಿಂತ ಶ್ರೇಷ್ಠನೂ ನಿರ್ವಿಕಾರನೂ ಶಾಂತನೂ, ಆದ ಪರಶಿವನು ಸಮಷ್ಟಿವ್ಯಷ್ಟಿರೂಪನಾಗಿಯೂ, ಆ ಸಮಷ್ಟಿವ್ಯಷ್ಟಿಗಳಿಗೆ ಕಾರಣನಾಗಿಯೂ ಇರುವನು. ಇಲ್ಲಿ ಸಮಷ್ಟಿಯೆಂದರೆ ನಿರ್ವಿಕಾರವಾದ ಅವ್ಯಕ್ತರೂಪದಿಂದ ಸಮಸ್ತ ವಿಶ್ವವನ್ನೂ ವ್ಯಾಪಿಸಿರುವ ಪರಬ್ರಹ್ಮವಸ್ತುವು. ವ್ಯಷ್ಟಿಯೆಂದರೆ ನಮ್ಮ ಕಣ್ಣಿಗೆ ಕಾಣುವ ಮತ್ತು ಕಾಣಿಸದಿರುವ ಚರಾಚರಪ್ರಪಂಚವು. ಶಿವನು ಇವೆರಡರ ಸ್ವರೂಪನಾಗಿಯೂ ಇವುಗಳಿಗೆ ಕಾರಣನಾಗಿಯೂ ಇರುವನು.

ವದಂತಿ ಮುನಯಃ ಕೇಚಿಚ್ಛಿವಂ ಪರಮಕಾರಣಂ ।
ಸಮಷ್ಟಿಮಾಹುರವ್ಯಕ್ತಂ ವ್ಯಷ್ಟಿಂ ವ್ಯಕ್ತಂ ತಥೈವ ಚ ॥ ೧೩ ॥

ತೇ ರೂಪೇ ಪರಮೇಶಸ್ಯ ತದಿಚ್ಛಾಯಾಃ ಪ್ರವರ್ತನಾತ್ ।
ತಯೋಃ ಕಾರಣಭಾವೇನ ಶಿವಂ ಪರಮಕಾರಣಂ ॥ ೧೪ ॥

ಕಾರಣಾರ್ಥವಿದಃ ಪ್ರಾಹುಃ ಸಮಷ್ಟಿವ್ಯಷ್ಟಿಕಾರಣಂ ।
ಜಾತಿವ್ಯಕ್ತಿಸ್ವರೂಪೀತಿ ಕಥ್ಯತೇ ಕೈಶ್ಚಿದೀಶ್ವರಃ ॥ ೧೫ ॥

ಯಾ ಪಿಂಡೇಷ್ವನುವರ್ತೇತ ಸಾ ಜಾತಿರಿತಿ ಕಥ್ಯತೇ ।
ವ್ಯಕ್ತಿರ್ವ್ಯಾವೃತ್ತಿರೂಪಂ ತಂ ಪಿಂಡಜಾತಂ ಸಮಾಶ್ರಯಂ ॥ ೧೬ ॥

ಜಾತಯೋ ವ್ಯಕ್ತಯಶ್ಚೈವ ತದಾಜ್ಞಾಪರಿಪಾಲಿತಾಃ ।
ಯತಸ್ತತೋ ಮಹಾದೇವೋ ಜಾತಿವ್ಯಕ್ತಿವಪುಃ ಸ್ಮೃತಃ ॥ ೧೭ ॥

---

೧೩-೧೪. ಕೆಲವರು—ಶಿವನು ಸರ್ವಕಾರಣನು. ಅವ್ಯಕ್ತವೆಂದರೆ ಪ್ರಕೃತಿಯು ಅಥವಾ ಅದರ ಸಮಷ್ಟಿರೂಪವು. ವ್ಯಕ್ತವಾಗಿರುವ ಈ ಪ್ರಪಂಚವೇ ವ್ಯಷ್ಟಿರೂಪವು. ಈ ಎರಡು ರೂಪಗಳೂ ಪರಮೇಶ್ವರನ ಇಚ್ಛಾಶಕ್ತಿಯಿಂದುಂಟಾಗಿರುವುವು. ಆದುದರಿಂದ ಕಾರ್ಯಕಾರಣಸಮನ್ವಯವನ್ನು ಮಾಡುವ ಶಾಸ್ತ್ರಜ್ಞರು, ಸಮಷ್ಟಿವ್ಯಷ್ಟಿಗಳಿಗೆ ಮುಖ್ಯಕಾರಣನು ಶಿವನು ಎಂದು ಹೇಳುವರು.

೧೫-೧೬. ಇನ್ನು ಕೆಲವರು ಈಶ್ವರನು ಜಾತಿವ್ಯಕ್ತಿಸ್ವರೂಪನು ಎಂದು ಹೇಳುವರು, ಅನೇಕ ಶರೀರಗಳಲ್ಲಿ ಅನುವರ್ತಿಸುತ್ತಿರುವ ಲಕ್ಷಣವನ್ನು ಜಾತಿ ಎನ್ನುವರು. ಒಂದೊಂದು ಶರೀರಕ್ಕೆ ಮಾತ್ರ ಸಂಬಂಧಿಸಿದ ಲಕ್ಷಣವು ವ್ಯಕ್ತಿಯೆನಿಸುವುದು. ಉದಾಹರಣೆಗಾಗಿ ಗೋವೆಂಬುದು, ಗೋವಿನ ಲಕ್ಷಣದಿಂದ ಕೂಡಿದ ಎಲ್ಲ ಹಸುಗಳಿಗೂ, ಅನ್ವಯಿಸುವುದು. ಪುಣ್ಯಕೋಟಿ ಎಂಬ ಗೋವು ಎಂದರೆ ಆ ಹೆಸರು ಇರುವ ಹಸು ಒಂದಕ್ಕೆ ಮಾತ್ರ ಆಗುವುದು. ಇದೇ ವ್ಯಕ್ತಿಯು.

೧೭. ಜಾತಿಗಳೂ, ವ್ಯಕ್ತಿಗಳೂ, ಈಶ್ವರನ ಆಜ್ಞೆಯನ್ನು ಪಾಲಿಸುತ್ತಿರುವುವು. ಎಂದರೆ ಒಂದು ಜಾತಿ ಗ್ರಹಣವು ಮತ್ತೊಂದು ಜಾತಿಯಲ್ಲಿಯೂ, ಒಂದು ವ್ಯಕ್ತಿಗ್ರಹಣವು ಮತ್ತೊಂದು ವ್ಯಕ್ತಿಯಲ್ಲಿಯೂ, ಆಗದಿರುವುದು. ಆದರೂ

ಪ್ರಧಾನಪುರುಷವ್ಯಕ್ತಕಾಲಾತ್ಮಾ ಕಥ್ಯತೇ ಶಿವಃ ।
ಪ್ರಧಾನಂ ಪ್ರಕೃತಿಂ ಪ್ರಾಹುಃ ಕ್ಷೇತ್ರಜ್ಞಂ ಪುರುಷಂ ತಥಾ ॥ ೧೮ ॥

ತ್ರಯೋವಿಂಶತಿತತ್ತ್ವಾನಿ ವ್ಯಕ್ತಮಾಹುರ್ಮನೀಷಿಣಃ ।
ಕಾಲಃ ಕಾರ್ಯಪ್ರಪಂಚಸ್ಯ ಪರಿಣಾಮೈಕಕಾರಣಂ ॥ ೧೯ ॥

ಏಷಾಮೀಶೋಽಧಿಪೋ ಧಾತಾ ಪ್ರವರ್ತಕನಿವರ್ತಕಃ ।
ಆವಿರ್ಭಾವತಿರೋಭಾವಹೇತುರೇಕಃ ಸ್ವರಾಡಜಃ ॥ ೨೦ ॥

ತಸ್ಮಾತ್ಪ್ರಧಾನಪುರುಷವ್ಯಕ್ತಕಾಲಸ್ವರೂಪವಾನ್ ।
ಹೇತುರ್ನೇತಾಧಿಪಸ್ತೇಷಾಂ ಧಾತಾ ಚೋಕ್ತೋ ಮಹೇಶ್ವರಃ ॥ ೨೧ ॥

---

ಎಲ್ಲ ವಸ್ತುಗಳಲ್ಲಿಯೂ, ಚೈತನ್ಯರೂಪವು ಒಂದೇ ಆಗಿರುವುದು. ಆ ಕಾರಣ ದಿಂದಲೇ ಮಹಾದೇವನನ್ನು ಜಾತಿವ್ಯಕ್ತಿಸ್ವರೂಪನೆಂದು ಹೇಳುವರು.

೧೮–೧೯. ಶಿವನು ಪ್ರಧಾನ, ಪುರುಷ, ವ್ಯಕ್ತ, ಕಾಲಸ್ವರೂಪನೆಂದು ಹೇಳುವರು. ಪ್ರಧಾನವೆಂದರೆ ಪ್ರಕೃತಿಯು. ಕ್ಷೇತ್ರಜ್ಞನನ್ನು ಪುರುಷನೆನ್ನುವರು. ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು, ಪಂಚಭೂತಗಳು, ಪಂಚತನ್ಮಾತ್ರಗಳು, ಮನಸ್ಸು, ಬುದ್ಧಿ, ಅಹಂಕಾರ, ಈ ಇಪ್ಪತ್ತಮೂರು ತತ್ತ್ವಗಳಿಂದ ಕೂಡಿದ ದೇಹವನ್ನು ವ್ಯಕ್ತವೆಂದು ಹೇಳುವರು. ಕಾರ್ಯರೂಪವಾದ ಪ್ರಪಂಚದ ಪರಿಣಾಮಕ್ಕೆ ಮುಖ್ಯಕಾರಣವಾದುವೇ ಎಂದರೆ ಪ್ರಪಂಚೋತ್ಪತ್ತಿಗೆ ಕಾರಣವಾದುದೇ ಕಾಲವೆನಿಸುವುದು.

೨೦–೨೧ ಈ ಪ್ರಧಾನಪುರುಷವ್ಯಕ್ತಕಾಲಗಳಿಗೆ ಈಶ್ವರನೇ ಅಧಿಪತಿಯಾಗಿ ಸೃಷ್ಟಿಕರ್ತನೂ, ಕಾರ್ಯಪ್ರವರ್ತಕನೂ, ಕಾರ್ಯನಿವರ್ತಕನೂ ಆಗಿ ವ್ಯಕ್ತವಾಗುವುದಕ್ಕೂ, ಮರೆಯಾಗುವುದಕ್ಕೂ ಕಾರಣನಾಗಿರುವುದಲ್ಲದೆ ಉತ್ಪತ್ತಿರಹಿತನಾಗಿಯೂ ಸರ್ವಾಧಿಪತಿಯಾಗಿಯೂ ತಾನೊಬ್ಬನೇ ಇರುವುದರಿಂದ ಆ ಮಹೇಶ್ವರನನ್ನು ಪ್ರಧಾನಪುರುಷವ್ಯಕ್ತಕಾಲಸ್ವರೂಪನೆಂದೂ, ಸರ್ವಕಾರಣನೆಂದೂ, ಪ್ರಪಂಚವನ್ನು ಸೃಷ್ಟಿಸಿ ಅದನ್ನು ನಡೆಸತಕ್ಕವನೆಂದೂ ಸರ್ವಾಧಿಪತಿಯೆಂದೂ ಹೇಳುವರು.

ವಿರಾಡ್ಢಿರಣ್ಯಗರ್ಭಾತ್ಮಾ ಕೈಶ್ಚಿದೀಶೋ ನಿಗದ್ಯತೇ ।
ಹಿರಣ್ಯಗರ್ಭೋ ಲೋಕಾನಾಂ ಹೇತುರ್ವಿಶ್ವಾತ್ಮಕೋ ವಿರಾಟ್ ॥ ೨೨ ॥

ಅಂತರ್ಯಾಮೀ ಪರಶ್ಚೇತಿ ಕಥ್ಯತೇ ಕವಿಭಿಶ್ಶಿವಃ ।
ಪ್ರಾಜ್ಞಸ್ತೈಜಸವಿಶ್ವಾತ್ಮೇತ್ಯಪರೇ ಸಂಪ್ರಚಕ್ಷತೇ ॥ ೨೩ ॥

ತುರೀಯಮಪರೇ ಪ್ರಾಹುಃ ಸೌಮ್ಯಮೇವ ಪರೇ ವಿದುಃ ।
ಮಾತಾ ಮಾನಂ ಚ ಮೇಯಂ ಚ ಮತಿಂ ಚಾಹುರಥಾಪರೇ ॥ ೨೪ ॥

ಕರ್ತಾ ಕ್ರಿಯಾ ಚ ಕಾರ್ಯಂ ಚ ಕರಣಂ ಕಾರಣಂ ಪರೇ ।
ಜಾಗ್ರತ್ಸ್ವಪ್ನಸುಷುಪ್ತ್ಯಾತ್ಮೇತ್ಯಪರೇ ಸಂಪ್ರಚಕ್ಷತೇ ॥ ೨೫ ॥

---

೨೨. ಮತ್ತೆ ಕೆಲವರು ಹಿರಣ್ಯಗರ್ಭನೇ ಈಶ್ವರನೆಂದೂ, ವಿರಾಟ್ಪುರುಷನೇ ಈಶ್ವರನೆಂದೂ ಹೇಳುವರು. ಲೋಕಗಳ ಸೃಷ್ಟಿಕರ್ತನು ಹಿರಣ್ಯಗರ್ಭನು. ಪ್ರಪಂಚಸ್ವರೂಪವೇ ವಿರಾಟ್. ಮತ್ತೆ ಕೆಲವು ಕವಿಗಳು ಶಿವನು ಸಕಲ ಜೀವರ ಅಂತರ್ಯಾಮಿಯೆಂದೂ, ಪ್ರಕೃತಿವಿಕಾರಗಳೊಂದೂ ಇಲ್ಲದುದರಿಂದ ಸರ್ವಶ್ರೇಷ್ಠನೆಂದೂ ಹೇಳುವರು.

೨೩–೨೪. ಈ ಶಿವನ ಜಾಗ್ರತ್ಸ್ವಪ್ನಸುಷುಪ್ತಿಗಳಿಗೆ ಅಭಿಮಾನಿಯಾದ ವಿಶ್ವ, ತೈಜಸ, ಪ್ರಾಜ್ಞ ಎಂಬ ಹೆಸರುಗಳನ್ನು ಹೊಂದಿರುವನೆಂದು ಮತ್ತೆ ಕೆಲವರು ಹೇಳುವರು. ಇವುಗಳನ್ನು ಮೀರಿದ ತುರೀಯನೆಂದೂ, ಶಾಂತನೆಂದೂ, ಮಾತೃ, ಮಾನ, ಮೇಯ, ಮತಿ ಎಂದರೆ ಅಳತೆಮಾಡುವವನು. ಅಳತೆಯ ಸಾಧನ, ಅಳತೆಗೆ ವಿಷಯ, ಬುದ್ಧಿ ಇವುಗಳ ಸ್ವರೂಪನೆಂದೂ ಮತ್ತೆ ಕೆಲವರು ಹೇಳುವರು.

೨೫. ಮತ್ತೆ ಕೆಲವರು ಕೆಲಸ ಮಾಡುವವನು, ಕೆಲಸ, ಆ ಕೆಲಸಗಳ ಸಾಧನ, ಆ ಕೆಲಸಕ್ಕೆ ಮುಖ್ಯಕಾರಣ, ಈ ಸ್ವರೂಪನೆಂದೂ, ಎಚ್ಚರ, ಕನಸು, ನಿದ್ರಾಸ್ವರೂಪನೆಂದೂ, ನಾಲ್ಕನೆಯದಾದ ತುರೀಯಾವಸ್ಥೆಯುಳ್ಳವನೆಂದೂ, ತುರೀಯಾತೀತನೆಂದೂ ಹೇಳುವರು.

ತುರಿಯಮಪರೇ ಪ್ರಾಹುಸ್ತುರ್ಯಾತೀತಮಿತೀತರೇ ।
ತಮಾಹುರ್ನಿರ್ಗುಣಂ ಕೇಚಿದ್ಗುಣವಂತಂ ಪರೇ ವಿದುಃ ॥ ೨೬ ॥

ಕೇಚಿತ್ಸಂಸಾರಿಣಂ ಪ್ರಾಹುಸ್ತಮಸಂಸಾರಿಣಂ ಪರೇ ।
ಸ್ವತಂತ್ರಮಪರೇ ಪ್ರಾಹುರಸ್ವತಂತ್ರಂ ಪರೇ ವಿದುಃ ॥ ೨೭ ॥

ಘೋರಮಿತ್ಯಪರೇ ಪ್ರಾಹುಃ ಸೌಮ್ಯಮೇವ ಪರೇ ವಿದುಃ ।
ರಾಗವಂತಂ ಪರೇ ಪ್ರಾಹುರ್ವೀತರಾಗಂ ತಥಾಽಪರೇ ॥ ೨೮ ॥

ನಿಷ್ಕ್ರಿಯಂ ಚ ಪರೇ ಪ್ರಾಹುಃ ಸಕ್ರಿಯಂ ಚೇತರೇ ಜನಾಃ ।
ನಿರಿಂದ್ರಿಯಂ ಪರೇ ಪ್ರಾಹುಃ ಸೇಂದ್ರಿಯಂ ಚ ತಥಾಽಪರೇ ॥ ೨೯ ॥

ಧ್ರುವಮಿತ್ಯಪರೇ ಪ್ರಾಹುಸ್ತಮಧ್ರುವಮಿತೀತರೇ ।
ಅರೂಪಂ ಕೇಚಿದಾಹುರ್ವೈ ರೂಪವಂತಂ ಪರೇ ವಿದುಃ ॥ ೩೦ ॥

ಅದೃಶ್ಯಮಪರೇ ಪ್ರಾಹುರ್ದೃಶ್ಯಮಿತ್ಯಪರೇ ವಿದುಃ ।
ವಾಚ್ಯಮಿತ್ಯಪರೇ ಪ್ರಾಹುರವಾಚ್ಯಮಿತಿ ಚಾಪರೇ ॥ ೩೧ ॥

---

೨೬-೨೭. ಮತ್ತೆ ಕೆಲವರು ಆ ಈಶ್ವರನು ನಿರ್ಗುಣನೆಂದೂ, ಗುಣಸಹಿತನೆಂದೂ, ಸಂಸಾರ ಎಂದರೆ ಜನನ ಮರಣಗಳುಳ್ಳವನೆಂದೂ. ಅಸಂಸಾರಿಯೆಂದೂ, ಸ್ವತಂತ್ರನೆಂದೂ ಅಸ್ವತಂತ್ರನೆಂದೂ ತಮತಮಗೆ ತೋರಿದಂತೆ ಹೇಳುವರು.

೨೮-೩೦. ವ್ಯವಹಾರ ಮತ್ತು ಪಾರಮಾರ್ಥಿಕ ದೃಷ್ಟಿಯುಳ್ಳವರು ಕ್ರಮವಾಗಿ ಆ ಈಶ್ವರನನ್ನು ಕ್ರೂರಿ-ಸೌಮ್ಯ, ಕಾಮಿ-ವೈರಾಗ್ಯಸಂಪನ್ನ, ಕ್ರಿಯಾಸಹಿತ-ನಿಷ್ಕ್ರಿಯ, ಇಂದ್ರಿಯಸಹಿತ-ನಿರಿಂದ್ರಿಯ, ಅಶಾಶ್ವತ-ಶಾಶ್ವತ, ಆಕಾರವುಳ್ಳವನು-ನಿರಾಕಾರನು ಎಂದು ಹೇಳುವರು.

೩೧-೩೨. ಹೀಗೆಯೇ ಕೆಲಕೆಲವರು ಅದೃಶ್ಯನೆಂದೂ, ದೃಶ್ಯನೆಂದೂ, ಮಾತಿಗೆ ಸಿಕ್ಕತಕ್ಕವನೆಂದೂ, ಮಾತಿಗೆ ಸಿಕ್ಕತಕ್ಕವನಲ್ಲವೆಂದೂ, ಶಬ್ದಸ್ವರೂಪ

ಶಬ್ದಾತ್ಮಕಂ ಪರೇ ಪ್ರಾಹುಶ್ಶಬ್ದಾತೀತಮಥಾಪರೇ ।
ಕೇಚಿಚ್ಚಿಂತಾಮಯಂ ಪ್ರಾಹುಶ್ಚಿಂತಯಾ ರಹಿತಂ ಪರೇ ।
ಜ್ಞಾನಾತ್ಮಕಂಪರೇ ಪ್ರಾಹುರ್ವಿಜ್ಞಾನಮಿತಿ ಚಾಪರೇ ॥ ೩೨ ॥

ಕೇಚಿಜ್ಞೇಯಮಿತಿ ಪ್ರಾಹುರಜ್ಞೇಯಮಿತಿ ಕೇಚನ ।
ಪರಮೇಕೇ ತಮೇವಾಹುರಪರಂ ಚ ತಥಾಪರೇ ॥ ೩೩ ॥

ಏವಂ ವಿಕಲ್ಪ್ಯಮಾನಂ ತು ಯಾಥಾತ್ಮ್ಯಂ ಪರಮೇಷ್ಠಿನಃ ।
ನಾಧ್ಯವಸ್ಯಂತಿ ಮುನಯೋ ನಾನಾಪ್ರತ್ಯಯಕಾರಣಾತ್ ॥ ೩೪ ॥

ಯೇ ಪುನಸ್ಸರ್ವಭಾವೇನ ಪ್ರಸನ್ನಾಃ ಪರಮೇಶ್ವರಂ ।
ತೇ ಹಿ ಜಾನಂತ್ಯಯತ್ನೇನ ಶಿವಂ ಪರಮಕಾರಣಂ ॥ ೩೫ ॥

ಯಾವತ್ಪಶುರ್ನೈವ ಪಶ್ಯತ್ಯನೀಶಂ
ಕವಿಂ ಪುರಾಣಂ ಭುವನಸ್ಯೇಶಿತಾರಂ ।
ತಾವದ್ದುಃಖೇ ವರ್ತತೇ ಬದ್ಧಪಾಶಃ
ಸಂಸಾರೇಽಸ್ಮಿಂಶ್ಚಕ್ರನೇಮಿಕ್ರಮೇಣ ॥ ೩೬ ॥

---

ನೆಂದೂ, ಎಲ್ಲಾ ಶಬ್ದಗಳನ್ನೂ ಮೀರಿದವನೆಂದೂ, ಚಿಂತಾತ್ಮಕನೆಂದೂ ಚಿಂತಾರಹಿತನೆಂದೂ ಜ್ಞಾನಸ್ವರೂಪನೆಂದೂ, ಜ್ಞಾನರಹಿತನೆಂದೂ ಹೇಳುವರು.

೩೩-೩೫. ಕೆಲವರು ಜ್ಞಾನವಿಷಯನೆಂದೂ, ಜ್ಞಾನವಿಷಯನಲ್ಲವೆಂದೂ ಪರನೆಂದೂ, ಅಪರನೆಂದೂ, ಹೀಗೆ ಬೇರೆಬೇರೆಯಾಗಿ ಹೇಳುತ್ತ ಆ ಪರಶಿವನ ನಿಜಸ್ವರೂಪವನ್ನು ತಿಳಿದೂ ತಿಳಿಯದೆ ಭ್ರಾಂತಿಯುಳ್ಳವರಾಗಿರುವರು. ಮುನಿಗಳೂ ಕೂಡ ನಿಶ್ಚಯ ಜ್ಞಾನವಿಲ್ಲದವರಾಗಿರುವರು. ಯಾರು ಸಂಪೂರ್ಣವಾದ ಭಕ್ತಿಯಿಂದ ಪರಮೇಶ್ವರನನ್ನೇ ಶರಣು ಹೊಂದುವರೋ ಅವರು ಸರ್ವಕಾರಣನಾದ ಶಿವನನ್ನು ಕಷ್ಟವಿಲ್ಲದೇ ಸುಲಭವಾಗಿ ತಿಳಿಯುವರು.

೩೬. ಪಶುಸ್ವರೂಪನಾದ ಜೀವನು, ಸ್ವತಂತ್ರನೂ, ಕವಿಯೂ, ಅನಾದಿಯೂ, ಲೋಕರಕ್ಷಕನೂ, ಆದ ಶಿವನನ್ನು ಎಲ್ಲಿಯವರೆಗೆ ನೋಡುವುದಿಲ್ಲವೋ ಎಂದರೆ ತಿಳಿಯುವುದಿಲ್ಲವೋ ಅಲ್ಲಿಯವರೆಗೆ ದುಃಖರೂಪವಾದ ಪಾಶಗಳ

**ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ**
**ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ ।**
**ತದಾ ವಿದ್ವಾನ್ಪುಣ್ಯಪಾಪೇ ವಿಧೂಯ**
**ನಿರಂಜನಃ ಪರಮಮುಪೈತಿ ಸಾಮ್ಯಂ ॥ ೩೭ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-ಮುತ್ತರಭಾಗೇ ಪಶುಪತಿತ್ತ್ವಜ್ಞಾನಯೋಗೋ ನಾಮ ಪಂಚಮೋಽಧ್ಯಾಯಃ**

---

(ಹಗ್ಗಗಳ) ಕಟ್ಟಿಗೊಳಗಾಗಿ ಜನನಮರಣರೂಪವಾದ ಈ ಸಂಸಾರಚಕ್ರದಲ್ಲಿ ಸುತ್ತುತ್ತಿರುವನು.

೩೭. ಸರ್ವಕರ್ತೃವೂ, ಸರ್ವೇಶ್ವರನೂ, ಬ್ರಹ್ಮನಿಗೂ ಕಾರಣನೂ, ಸುವರ್ಣವರ್ಣನೂ ಆದ ಶಿವನನ್ನು ನೋಡಿದವನು ಪೂರ್ವಾರ್ಜಿತವಾದ ಪುಣ್ಯ ಪಾಪಗಳನ್ನು ಕಳೆದುಕೊಂಡು ನಿರ್ದೋಷವಾದ ಆ ಪರಮಪದವನ್ನು (ಶಿವ ಸಾಯುಜ್ಯವನ್ನು) ಹೊಂದುವನು.

ಇಲ್ಲಿಗೆ ಶ್ರೀಶಿವಮಹಾಪುರಾಣದಲ್ಲಿ ಏಳನೆಯ ವಾಯವೀಯಸಂಹಿತೆಯ ಉತ್ತರಭಾಗದಲ್ಲಿ ಪಶುಪತಿತ್ವಜ್ಞಾನಯೋಗವೆಂಬ ಐದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಓಂ ನಮಃ ಶಿವಾಯ ||

---

# ಅಥ ಶ್ರೀ ಶಿವ ಮಹಾ ಪುರಾಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ಷಷ್ಠೋಽಧ್ಯಾಯಃ

---

॥ ಉಪಮನ್ಯುರುವಾಚ ॥

ನ ಶಿವಸ್ಯಾಣವೋ ಬಂಧಃ ಕಾರ್ಯೋ ಮಾಯೇಯಮೇವ ವಾ ।
ಪ್ರಾಕೃತೋ ವಾಥ ಬೋದ್ಧಾ ವಾ ಹ್ಯಹಂಕಾರಾತ್ಮಕಸ್ತಥಾ ॥ ೧ ॥

ನೈವಾಸ್ಯ ಮಾನಸೋ ಬಂಧೋ ನ ಚೈತ್ತೋ ನೇಂದ್ರಿಯಾತ್ಮಕಃ ।
ನ ಚ ತನ್ಮಾತ್ರಬಂಧೋಽಪಿ ಭೂತಬಂಧೋ ನ ಕಶ್ಚನ ॥ ೨ ॥

---

## ಆರನೆಯ ಅಧ್ಯಾಯವು.

೧-೨. ಉಪಮನ್ಯುವು ಹೇಳಿದನು-ಶಿವನಿಗೆ ಅಣುವಾಗಲಿ, ಮಾಯೆಯ ಕಾರ್ಯಗಳಾಗಲಿ, ಪ್ರಕೃತಿಸಂಬಂಧವಾದ ಗುಣಗಳಾಗಲಿ, ಬುದ್ಧಿ ಅಹಂಕಾರ ಮನಸ್ಸು ಚಿತ್ತ ಇಂದ್ರಿಯಗಳು ಪಂಚತನ್ಮಾತ್ರಗಳು, ಪಂಚಭೂತಗಳು ಇವುಗಳ ಬಂಧನಗಳಾಗಲಿ ಇರುವುದಿಲ್ಲ. ಎಂದರೆ ಇವುಗಳಿಗೆ ಶಿವನು ಅಧೀನನಾದವನಲ್ಲ.

**ನ ಚ ಕಾಲಃ ಕಲಾ ಚೈವ ನ ವಿದ್ಯಾ ನಿಯತಿಸ್ತಥಾ ।**
**ನ ರಾಗೋ ನ ಚ ವಿದ್ವೇಷಃ ಶಂಭೋರಮಿತತೇಜಸಃ ॥ ೩ ॥**

**ನ ಚಾಸ್ತ್ಯಭಿನಿವೇಶೋಽಸ್ಯ ಕುಶಲಾಕುಶಲಾನ್ಯಪಿ ।**
**ಕರ್ಮಾಣಿ ತದ್ವಿಪಾಕಶ್ಚ ಸುಖದುಃಖೇ ಚ ತತ್ಫಲೇ ॥ ೪ ॥**

**ಆಶಯೈರ್ನಾಪಿ ಸಂಬಂಧಃ ಸಂಸ್ಕಾರೈಃ ಕರ್ಮಣಾಮಪಿ ।**
**ಭೋಗೈಶ್ಚ ಭೋಗಸಂಸ್ಕಾರೈಃ ಕಾಲತ್ರಿತಯಗೋಚರೈಃ ॥ ೫ ॥**

**ನ ತಸ್ಯ ಕಾರಣಂ ಕರ್ತಾ ನಾದಿರಂತಸ್ತಥಾಂತರಂ ।**
**ನ ಕರ್ಮ ಕಾರಣಂ ವಾಪಿ ನಾಽಕಾರ್ಯಂ ಕಾರ್ಯಮೇವ ಚ ॥ ೬ ॥**

---

೩. ಮಹಾತೇಜಸ್ವಿಯಾದ ಶಿವನಿಗೆ ಕಾಲಗಣನೆಯೆಂಬುವುದಿಲ್ಲ. ಕಾಲಕ್ಕೆ ಅಧೀನನಲ್ಲ. ಕಲೆಗಳೂ, ವಿದ್ಯೆಯೂ, ನಿಯಮವೂ, ಪ್ರೀತಿಯೂ, ದ್ವೇಷವೂ ಯಾವುದೂ ಇರುವುದಿಲ್ಲ. ಯಾವುದಕ್ಕೂ ಅವನು ಅಧೀನನಲ್ಲ.

೪–೫. ಆ ಶಿವನಿಗೆ ಅತ್ಯಂತ ಕಾರ್ಯಾಸಕ್ತಿಯಾಗಲಿ ಮಂಗಳಕರವಾದ ಅಥವಾ ಅಮಂಗಳಕರವಾದ ಕರ್ಮಗಳಾಗಲಿ ಎಂದರೆ ಕರ್ಮಬಂಧಗಳಾಗಲಿ ಆ ಕರ್ಮಗಳ ಪರಿಪಾಕಾವಸ್ಥೆಯಾಗಲಿ, ಅವುಗಳ ಫಲವಾದ ಸುಖ ದುಃಖಗಳಾಗಲಿ ಇರುವುದಿಲ್ಲ. ಭೂತಭವಿಷ್ಯದ್ವರ್ತಮಾನಗಳೆಂಬ ಮೂರು ಕಾಲಗಳಲ್ಲಿಯೂ ಸಂಕಲ್ಪವಾಗಲಿ, ಕರ್ಮಗಳ ಸಂಬಂಧವಾದ ಸಂಸ್ಕಾರಗಳಾಗಲಿ, ಸುಖಾನುಭವಗಳಾಗಲಿ ಅಥವಾ ಅವುಗಳ ಸಂಸ್ಕಾರಗಳಾಗಲಿ ಕಾಲತ್ರಯಗಳ ಸಂಬಂಧವಾಗಲಿ ಇರುವುದಿಲ್ಲ.

೬. ಅವನಿಗೆ ಕರ್ತೃವಾಗಲಿ, ಕಾರಣವಾಗಲಿ, ಆದಿಯಾಗಲಿ, ಅಂತವಾಗಲಿ, ಕಾರ್ಯಕ್ಕೆ ವಿಷಯವಾದ ಕರ್ಮಗಳಾಗಲಿ, ಕಾರ್ಯಸಾಧನಗಳಾಗಲಿ, ಮಾಡಬೇಕಾದ ಅಥವಾ ಮಾಡಬಾರದ ಕೆಲಸಗಳಾಗಲಿ ಯಾವುದೂ ಇರುವುದಿಲ್ಲ.

ನಾಸ್ಯ ಬಂಧುರಬಂಧುರ್ವಾ ನಿಂಯತಾ ಪ್ರೇರಕೋಽಪಿ ವಾ ।
ನ ಪತಿರ್ನ ಗುರುಸ್ತ್ರಾತಾ ನಾಧಿಕೋ ನ ಸಮಸ್ತಥಾ ॥ ೭ ॥

ನ ಜನ್ಮಮರಣೇ ತಸ್ಯ ನ ಕಾಂಕ್ಷಿತಮಕಾಂಕ್ಷಿತಂ ।
ನ ವಿಧಿರ್ನ ನಿಷೇಧಶ್ಚ ನ ಮುಕ್ತಿರ್ನ ಚ ಬಂಧನಂ ॥ ೮ ॥

ನಾಸ್ತಿ ಯದ್ಯದಕಲ್ಯಾಣಂ ತತ್ತದಸ್ಯ ಕದಾಚನ ।
ಕಲ್ಯಾಣಂ ಸಕಲಂ ಚಾಸ್ತಿ ಪರಮಾತ್ಮಾ ಶಿವೋ ಯತಃ ॥ ೯ ॥

ಸ ಶಿವಸ್ಸರ್ವಮೇವೇದಮಧಿಷ್ಠಾಯ ಸ್ವಶಕ್ತಿಭಿಃ ।
ಅಪ್ರಚ್ಯುತಸ್ಸ್ವತೋ ಭಾವಃ ಸ್ಥಿತಃ ಸ್ಥಾಣುರತಃ ಸ್ಮೃತಃ ॥ ೧೦ ॥

ಶಿವೇನಾಧಿಷ್ಠಿತಂ ಯಸ್ಮಾಜ್ಜಗತ್ಸ್ಥಾವರಜಂಗಮಂ ।
ಸರ್ವರೂಪಃ ಸ್ಮೃತಶ್ಶರ್ವಸ್ತಥಾ ಜ್ಞಾತ್ವಾ ನ ಮುಹ್ಯತಿ ॥ ೧೧ ॥

---

೭-೮. ಈ ಶಿವನಿಗೆ ನಂಟರಾಗಲಿ, ನಂಟರಲ್ಲದವರಾಗಲಿ, ಆಜ್ಞೆ ಮಾಡುವವರಾಗಲಿ, ಪ್ರೇರಣೆಮಾಡುವವರಾಗಲಿ, ಸ್ವಾಮಿಯಾಗಲಿ, ಗುರುವಾಗಲಿ, ರಕ್ಷಕನಾಗಲಿ, ಹೆಚ್ಚಿನವನಾಗಲಿ, ಸಮಾನನಾದವನಾಗಲಿ ಇಲ್ಲ. ಅವನಿಗೆ ಹುಟ್ಟು ಸಾವುಗಳೂ, ಇಚ್ಛಾದ್ವೇಷಗಳೂ, ವಿಧಿನಿಷೇಧಗಳೂ, ಬಂಧಮೋಕ್ಷಗಳೂ ಇರುವುದಿಲ್ಲ.

೯. ಅವನು ಶ್ರೇಷ್ಠನಾದ ಆತ್ಮಸ್ವರೂಪನೂ, ಮಂಗಳಸ್ವರೂಪನೂ, ಆದುದರಿಂದ, ಅಮಂಗಳಸ್ವರೂಪವಾದವುಗಳ ಸಂಬಂಧವೇ ಅವನಿಗಿರುವುದಿಲ್ಲ. ಸಕಲವಿಧವಾದ ಮಂಗಳಗಳೂ ಇವನಿಗೆ ಇರುವುವು. ಆದುದರಿಂದ ಇವನಿಗೆ ಶಿವನೆಂದು ಹೆಸರು.

೧೦. ಆ ಶಿವನು ಸಮಸ್ತವಾದ ಈ ಪ್ರಪಂಚವನ್ನೂ ತನ್ನಲ್ಲಿಟ್ಟುಕೊಂಡು ತನ್ನ ಶಕ್ತಿಯನ್ನು ಕಳೆದುಕೊಳ್ಳದೆ ಯಾವಾಗಲೂ, ಸ್ವಸ್ವರೂಪವಾದ ಆನಂದದಲ್ಲಿರುವುದರಿಂದ ಅವನಿಗೆ ಸ್ಥಾಣುವೆಂದು ಹೆಸರುಬಂದಿರುವುದು.

೧೧. ಈ ಚರಾಚರ ಪ್ರಪಂಚವು ಶಿವನಲ್ಲಿಯೇ ಆಶ್ರಯವನ್ನು ಪಡೆದು ಶಿವಸ್ವರೂಪವಾಗಿಯೇ ಇರುವುದರಿಂದಲೂ, ಆ ಶಿವನು ಸರ್ವರೂಪನಾದುದ

**ಶರ್ವೋ ರುದ್ರೋ ನಮಸ್ತಸ್ಮೈ ಪುರುಷಃ ಸತ್ಪರೋ ಮಹಾನ್ ।**
**ಹಿರಣ್ಯಬಾಹುರ್ಭಗವಾನ್ ಹಿರಣ್ಯಪತಿರೀಶ್ವರಃ ॥ ೧೨ ॥**

**ಅಂಬಿಕಾಪತಿರೀಶಾನಃ ಪಿನಾಕೀ ವೃಷವಾಹನಃ ।**
**ಏಕೋ ರುದ್ರಃ ಪರಂ ಬ್ರಹ್ಮ ಪುರುಷಃ ಕೃಷ್ಣಪಿಂಗಲಃ ॥ ೧೩ ॥**

**ವಾಲಾಗ್ರಮಾತ್ರೋ ಹೃನ್ಮಧ್ಯೇ ವಿಚಿಂತ್ಯೋ ದಹರಾಂತಿಕೇ ।**
**ಹಿರಣ್ಯಕೇಶಃ ಪದ್ಮಾಕ್ಷೋ ಹ್ಯರುಣಸ್ತಾಮ್ರ ಏವ ಚ ॥ ೧೪ ॥**

**ಯೋಽವಸರ್ಪತ್ಯಸೌ ದೇವೋ ನೀಲಗ್ರೀವೋ ಹಿರಣ್ಮಯಃ ।**
**ಸೌಮ್ಯೋಽಘೋರಸ್ತಥಾ ಮಿಶ್ರಶ್ಚಾಕ್ಷರಶ್ಚಾಮೃತೋಽವ್ಯಯಃ ॥ ೧೫ ॥**

---

ರಿಂದಲೂ ಅವನಿಗೆ ಶರ್ವನೆಂದು ಹೆಸರಾಗಿರುವುದು. ಪ್ರಪಂಚವೇ ಶಿವಸ್ವರೂಪವೆಂದು ತಿಳಿದ ವಿವೇಕಿಗಳು ಅಜ್ಞಾನದಿಂದ ಎಂದಿಗೂ ಮೋಹಗೊಳ್ಳುವುದಿಲ್ಲ.

೧೨-೧೩. ಪಾಪವನ್ನು ನಾಶಮಾಡುವುದರಿಂದ ಶರ್ವನೆಂದೂ, ದುಃಖನಾಶಕನಾದುದರಿಂದ ರುದ್ರನೆಂದೂ, ಸರ್ವಶಕ್ತನಾದುದರಿಂದ ಪುರುಷನೆಂದೂ, ಯಾವಾಗಲೂ ಇರುವನಾದುದರಿಂದ ಸತ್ ಎಂದೂ, ಶ್ರೇಷ್ಠನಾದುದರಿಂದ ಪರನೆಂದೂ, ದೊಡ್ಡವನಾದುದರಿಂದ ಮಹಾನೆಂದೂ ಹೆಸರನ್ನು ಹೊಂದಿದ ಶಿವನಿಗೆ ನಮಸ್ಕಾರವು. ಸುವರ್ಣಾಭರಣಗಳನ್ನು ಧರಿಸಿ ಸುವರ್ಣಕ್ಕೆ ಅಧಿಪತಿಯಾಗಿ ಪಾರ್ವತೀಪತಿಯಾಗಿ, ಸಕಲ ಪ್ರಪಂಚಕ್ಕೂ ಒಡೆಯನಾಗಿ ಪಿನಾಕವೆಂಬ ಧನುಸ್ಸನ್ನು ಧರಿಸಿ, ವೃಷವಾಹನನಾಗಿಯೂ ಅದ್ವಿತೀಯನಾಗಿಯೂ ಪರಬ್ರಹ್ಮಸ್ವರೂಪನಾಗಿಯೂ, ವಿಷಪಾನ ಮಾಡಿದುದರಿಂದ ಕಂಠದಲ್ಲಿ ಕಪ್ಪುಬಣ್ಣವೂ, ಮಿಕ್ಕ ಅವಯವಗಳಲ್ಲಿ ಪಿಂಗಳವರ್ಣವೂ ಇರುವ ಶಿವನಿಗೆ ನಮಸ್ಕಾರವು.

೧೪-೧೫. ಹೃದಯ ಮಧ್ಯದಲ್ಲಿರುವ ದಹರಾಕಾಶಪ್ರದೇಶದಲ್ಲಿ ಹಸುವಿನ ಬಾಲದ ಕೂದಲಿನಷ್ಟು ಸೂಕ್ಷ್ಮವಾಗಿ ಕಾಂತಿಯಿಂದ ಪ್ರಕಾಶಿಸುವನು. ಸೂರ್ಯಮಂಡಲ ಮಧ್ಯದಲ್ಲಿ ಚಿನ್ನದ ಬಣ್ಣದ ಕೂದಲುಗಳು, ಕಮಲದಂತಿರುವ ಕಣ್ಣುಗಳು, ಕೆಂಪಾದ ಶರೀರಕಾಂತಿ, ಕಪ್ಪಾದ ಕಂಠ ಇವುಗಳಿಂದ ಕೂಡಿ ಚಿನ್ನದಂತೆ ಹೊಳೆಯುತ್ತಾ ಉದಯಾಸ್ತಮಯಗಳನ್ನು ಮಾಡುತ್ತಿರುವನು. ಶಾಂತನಾಗಿಯೂ

ಸ ಪುಂವಿಶೇಷಃ ಪರಮೋ ಭಗವಾನಂತಕಾಂತಕಃ ।
ಚೇತನಾಚೇತನೋನ್ಮುಕ್ತಃ ಪ್ರಪಂಚಾಚ್ಚ ಪರಾತ್ಪರಃ ॥ ೧೬ ॥

ಶಿವೇನಾತಿಶಯತ್ವೇನ ಜ್ಞಾನೈಶ್ವರ್ಯೇ ವಿಲೋಕಿತೇ ।
ಲೋಕೇಶಾತಿಶಯತ್ವೇನ ಸ್ಥಿತಂ ಪ್ರಾಹುರ್ಮನೀಷಿಣಃ ॥ ೧೭ ॥

ಪ್ರತಿಸರ್ಗಪ್ರಸೂತಾನಾಂ ಬ್ರಹ್ಮಣಾಂ ಶಾಸ್ತ್ರವಿಸ್ತರಂ ।
ಉಪದೇಷ್ಟಾ ಸ ಏವಾದೌ ಕಾಲಾವಚ್ಛೇದವರ್ತಿನಾಂ ॥ ೧೮ ॥

ಕಾಲಾವಚ್ಛೇದಯುಕ್ತಾನಾಂ ಗುರೂಣಾಮಪ್ಯಸೌ ಗುರುಃ ।
ಸರ್ವೇಷಾಮೇವ ಸರ್ವೇಶಃ ಕಾಲಾವಚ್ಛೇದವರ್ಜಿತಃ ॥ ೧೯ ॥

---

ಕ್ರೂರವಾದ ರೂಪವಿಲ್ಲದೆ ಸೌಮ್ಯನಾಗಿಯೂ ನಾಶರಹಿತನಾಗಿಯೂ ಇರುವನು. ಮರಣಧರ್ಮವಿಲ್ಲದಿರುವುದರಿಂದ ಅಮೃತಸ್ವರೂಪನೆಂದೂ, ಅವ್ಯಯನೆಂದೂ ಹೆಸರನ್ನು ಹೊಂದಿರುವನು.

೧೬-೧೭. ಅವನು ಪುರುಷಶ್ರೇಷ್ಠನು. ಮಹಾಮಹಿಮೆಯುಳ್ಳವನು. ಯಮನಿಗೂ ಯಮನಂತಿರುವನು. ಪ್ರಪಂಚದಲ್ಲಿರುವ ಚೇತನಾಚೇತನ ಪ್ರಾಣಿಗಳ ಧರ್ಮವು ಅವನಲ್ಲಿಲ್ಲ. ಆದುದರಿಂದ ಪ್ರಪಂಚಕ್ಕಿಂತಲೂ, ಅತ್ಯಂತ ಶ್ರೇಷ್ಠನಾದವನು. ವಿಶೇಷವಾದ ಜ್ಞಾನೈಶ್ವರ್ಯವುಳ್ಳವನು. ಮಂಗಳಸ್ವರೂಪನು. ಶ್ರೇಷ್ಠನಾದ ಲೋಕೇಶ್ವರನಾಗಿರುವನು ಎಂದು ಬುದ್ಧಿವಂತರು ಹೇಳುವರು.

೧೮-೧೯. ಪ್ರತಿಯೊಂದು ಸೃಷ್ಟಿಪ್ರಾರಂಭದಲ್ಲಿಯೂ ಹುಟ್ಟಿದ ಮತ್ತು ಹುಟ್ಟುವ ಬ್ರಹ್ಮರಿಗೆ ಮೊದಲು ಶಾಸ್ತ್ರಗಳನ್ನೆಲ್ಲ ಉಪದೇಶಮಾಡುವವನು ಅವನೇ. ಆ ಬ್ರಹ್ಮರು ನೂರು ವರುಷ ಆಯುಸ್ಸುಳ್ಳವರು. ತತ್ತ್ವೋಪದೇಶವನ್ನು ಮಾಡುವ ಗುರುಗಳಿಗೂ ಇತರರಿಗೂ ಇಷ್ಟೇ ವರ್ಷ ವಯಸ್ಸೆಂದು ಅವರ ಆಯುಃಪರಿಮಿತಿಯು ನಿಯತಿಗೊಳಪಟ್ಟಿರುವುದು. ಆದರೆ ಶಿವನಿಗೆ ವಯಸ್ಸು ಮೊದಲಾದ ಕಾಲಪರಿಮಿತಿಯಿಲ್ಲ. ಅವನು ಕಾಲಾವಚ್ಛೇದರಹಿತನು. ಕಾಲಕ್ಕೆ ಅಧೀನ

**ಶುದ್ಧಾ ಸ್ವಾಭಾವಿಕೀ ತಸ್ಯ ಶಕ್ತಿಃ ಸರ್ವಾತಿಶಾಯಿನೀ ।**
**ಜ್ಞಾನಮಪ್ರತಿಮಂ ನಿತ್ಯಂ ವಪುರತ್ಯಂತನಿರ್ಮಲಂ ॥ ೨೦ ॥**

**ಐಶ್ವರ್ಯಮಪ್ರತಿದ್ವಂದ್ವಂ ಸುಖಮಾತ್ಯಂತಿಕಂ ಬಲಂ ।**
**ತೇಜಃಪ್ರಭಾವೋ ವೀರ್ಯಂ ಚ ಕ್ಷಮಾ ಕಾರುಣ್ಯಮೇವ ಚ ॥ ೨೧ ॥**

**ಪರಿಪೂರ್ಣಸ್ಯ ಸರ್ಗಾದ್ಯೈರ್ನಾತ್ಮನೋಽಸ್ತಿ ಪ್ರಯೋಜನಂ ।**
**ಪರಾನುಗ್ರಹ ಏವಾಸ್ಯ ಫಲಂ ಸರ್ವಸ್ಯ ಕರ್ಮಣಃ ॥ ೨೨ ॥**

**ಪ್ರಣವೋ ವಾಚಕಸ್ತಸ್ಯ ಶಿವಸ್ಯ ಪರಮಾತ್ಮನಃ ।**
**ಶಿವರುದ್ರಾದಿಶಬ್ದಾನಾಂ ಪ್ರಣವೋ ಹಿ ಪರಸ್ಮೃತಃ ॥ ೨೩ ॥**

---

ನಲ್ಲ. ಅವನು ಬ್ರಹ್ಮನೇ ಮೊದಲಾದ ಸಮಸ್ತರಿಗೂ ಗುರುವು. ಸರ್ವರಿಗೂ ಸ್ವಾಮಿಯು.

೨೦-೨೧. ಆ ಪರಶಿವನ ಶಕ್ತಿಯು ಪರಿಶುದ್ಧವಾದುದು. ಸಮಸ್ತ ಶಕ್ತಿಗಳಿಗಿಂತಲೂ ದೊಡ್ಡದಾದುದು ಮತ್ತು ಸ್ವಾಭಾವಿಕವಾದುದು. ಜ್ಞಾನವು ಅಸಮಾನವಾದುದು ಮತ್ತು ಶಾಶ್ವತವಾದುದು. ಅವನಿಗೆ ಅತ್ಯಂತ ಶುದ್ಧವಾದ ಶರೀರ, ಅಸದೃಶವಾದ ಐಶ್ವರ್ಯ, ಅನುಪಮವಾದ ಸುಖ, ಅಪರಿಮಿತವಾದ ಶಕ್ತಿಸಾಮರ್ಥ್ಯಗಳು, ಅಪಾರವಾದ ತೇಜಸ್ಸು, ಕೊನೆಯಿಲ್ಲದ ವೀರ್ಯ, ಕ್ಷಮಾ, ದಯೆ ಮೊದಲಾದವುಗಳಿರುವುವು. ಇವೆಲ್ಲವೂ ಅವನಿಗೆ ಸ್ವಭಾವಸಿದ್ಧವಾದ ಗುಣಗಳು.

೨೨. ತಾನು ಪರಿಪೂರ್ಣನಾದುದರಿಂದ ಸೃಷ್ಟಿ ಮುಂತಾದ ಕೆಲಸಗಳಿಂದ ಅವನಿಗಾಗಬೇಕಾದ ಪ್ರಯೋಜನವೇನೂ ಇಲ್ಲ. ಆದರೆ ಅವನು ಮಾಡುವ ಸಮಸ್ತ ಕಾರ್ಯಗಳಿಗೂ ಜೀವರುಗಳಿಗೆ ಅನುಗ್ರಹಮಾಡುವುದೇ ಮುಖ್ಯ ಪ್ರಯೋಜನವಾಗಿರುವುದು.

೨೩. ಆ ಶಿವನು ಪ್ರಣವವಾಚ್ಯನು, ಎಂದರೆ ಆ ಪರಮಾತ್ಮನಾದ ಶಿವನನ್ನು ಓಂಕಾರವು ತಿಳಿಸುವುದು. ಶಿವ ರುದ್ರ ಮುಂತಾದ ಶಬ್ದಗಳಿಗಿಂತಲೂ ಓಂಕಾರವು ಅತ್ಯುತ್ತಮವಾದುದು.

ಶಂಭೋಃ ಪ್ರಣವವಾಚ್ಯಸ್ಯ ಭಾವನಾತ್ತಜ್ಜಪಾದಪಿ ।
ಯಾ ಸಿದ್ಧಿಸ್ಸಾ ಪರಾ ಪ್ರಾಪ್ಯಾ ಭವತ್ಯೇವ ನ ಸಂಶಯಃ ॥ ೨೪ ॥

ತಸ್ಮಾದೇಕಾಕ್ಷರಂ ದೇವಮಾಹುರಾಗಮಪಾರಗಾಃ ।
ವಾಚ್ಯವಾಚಕಯೋರೈಕ್ಯಂ ಮನ್ಯಮಾನಾ ಮನಸ್ವಿನಃ ॥ ೨೫ ॥

ಅಸ್ಯ ಮಾತ್ರಾಃ ಸಮಾಖ್ಯಾತಾಶ್ಚತಸ್ರೋ ವೇದಮೂರ್ಧನಿ ।
ಅಕಾರಶ್ಚಾಪ್ಯುಕಾರಶ್ಚ ಮಕಾರೋ ನಾದ ಇತ್ಯಪಿ ॥ ೨೬ ॥

ಅಕಾರಂ ಬಹ್ವೃಚಂ ಪ್ರಾಹುರುಕಾರೋ ಯಜುರುಚ್ಯತೇ ।
ಮಕಾರಸ್ಸಾಮ ನಾದೋಽಸ್ಯ ಶ್ರುತಿರಾಥರ್ವಣೀ ಸ್ಮೃತಾ ॥ ೨೭ ॥

ಅಕಾರಶ್ಚ ಮಹಾಬೀಜಂ ರಜಃ ಸ್ರಷ್ಟಾ ಚತುರ್ಮುಖಃ ।
ಉಕಾರಃ ಪ್ರಕೃತಿರ್ಯೋನಿಃ ಸತ್ತ್ವಂ ಪಾಲಯಿತಾ ಹರಿಃ ॥ ೨೮ ॥

---

೨೪–೨೫. ಓಂಕಾರಕ್ಕೆ ಅರ್ಥಸ್ವರೂಪನಾದ ಶಿವನನ್ನು ಮನಸ್ಸಿನಲ್ಲಿ ಧ್ಯಾನಮಾಡುವುದರಿಂದಲೂ, ಆ ಪ್ರಣವಜಪದಿಂದಲೂ, ಯಾವ ಸಿದ್ಧಿಯುಂಟಾಗುವುದೋ ಅದು ಅತ್ಯಂತ ಶ್ರೇಷ್ಠವಾದುದು. ಅದನ್ನು ಎಲ್ಲರೂ ಹೊಂದಬೇಕಾದುದು. ಆದುದರಿಂದಲೇ ವೇದಗಳನ್ನು ತಿಳಿದ, ಮನೋನಿಗ್ರಹವನ್ನು ಮಾಡಿದ ಮುನಿಗಳು ವಾಚ್ಯವಾಚಕವಸ್ತುಗಳಿಗೆ ಎಂದರೆ ಶಬ್ದಾರ್ಥಗಳಿಗೆ ಐಕ್ಯವೆಂದು ತಿಳಿದು ಆ ದೇವನನ್ನು ಏಕಾಕ್ಷರಮಂತ್ರಸ್ವರೂಪನೆಂದು ಹೇಳುವರು.

೨೬. ಈ ಓಂಕಾರ ಮಂತ್ರಕ್ಕೆ ಅಕಾರ, ಉಕಾರ, ಮಕಾರ, ನಾದ ಎಂಬ ನಾಲ್ಕು ಮಾತ್ರೆಗಳಿರುವುವೆಂದು ಉಪನಿಷತ್ತಿನಲ್ಲಿ ಹೇಳಿರುವುದು.

೨೭. ಅಕಾರವು ಋಗ್ವೇದವು, ಉಕಾರವು ಯಜುರ್ವೇದವು, ಮಕಾರವು ಸಾಮವೇದವು, ನಾದವು ಅಥರ್ವಣವು.

೨೮–೨೯. ಅಕಾರವು ಮಹತ್ತತ್ತ್ವವು, ರಜೋಗುಣವು. ಸೃಷ್ಟಿಕರ್ತನಾದ ಚತುರ್ಮುಖನೇ ಅದಕ್ಕೆ ದೇವತೆಯು. ಉಕಾರವು ಪ್ರಕೃತಿಯು, ಸತ್ತ್ವಗುಣವು. ಪಾಲನ ಕರ್ತೃವಾದ ಹರಿಯೇ ಅದಕ್ಕೆ ದೇವತೆಯು. ಮಕಾರವು ಪುರುಷನು. ತಮೋಗುಣವು. ಸಂಹಾರಕರ್ತೃವಾದ ಹರನೇ ದೇವ

**ಮಕಾರಃ ಪುರುಷೋ ಬೀಜಂ ತಮಸ್ಸಂಹಾರಕೋ ಹರಃ ।**
**ನಾದಃ ಪರಃ ಪುಮಾನೀಶೋ ನಿರ್ಗುಣೋ ನಿಷ್ಕ್ರಿಯಃ ಶಿವಃ　　॥ ೨೯ ॥**

**ಸರ್ವಂ ತಿಸೃಭಿರೇವೇದಂ ಮಾತ್ರಾಭಿರ್ನಿಖಿಲಂ ತ್ರಿಧಾ ।**
**ಅಭಿಧಾಯ ಶಿವಾತ್ಮಾನಂ ಬೋಧಯತ್ಯರ್ಧಮಾತ್ರಯಾ　　॥ ೩೦ ॥**

**ಯಸ್ಮಾತ್ಪರಂ ನಾಪರಮಸ್ತಿ ಕಿಂಚಿ-**
**ದ್ಯಸ್ಮಾನ್ನಾಣೀಯೋ ನ ಜ್ಯಾಯೋಽಸ್ತಿ ಕಿಂಚಿತ್ ।**
**ವೃಕ್ಷ ಇವ ಸ್ತಬ್ಧೋ ದಿವಿ ತಿಷ್ಠತ್ಯೇಕ-**
**ಸ್ತೇನೇದಂ ಪೂರ್ಣಂ ಪುರುಷೇಣ ಸರ್ವಂ　　॥ ೩೧ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-**
**ಮುತ್ತರಭಾಗೇ ಶಿವತತ್ತ್ವವರ್ಣನಂ ನಾಮ**
**ಷಷ್ಠೋಽಧ್ಯಾಯಃ**

---

ತೆಯು. ನಾದವು ಪರಮಪುರುಷನಾದ ಈಶ್ವರನು. ನಿರ್ಗುಣ ನಿಷ್ಕ್ರಿಯನಾದ ಶಿವನೇ ದೇವತೆಯು.

೩೦. ಈ ಮೂರು ಮಾತ್ರೆಗಳಿಂದ ಮೂರು ಬಗೆಯಾಗಿರುವುದೆಲ್ಲವನ್ನೂ ಹೇಳಿದ ಮೇಲೆ ಅರ್ಧಮಾತ್ರೆಯಾದ ಮಕಾರದಿಂದ ಶಿವಸ್ವರೂಪವನ್ನು ಬೋಧಿಸುವುದು.

೩೧. ಆ ಆತ್ಮವಸ್ತುವಿಗಿಂತ ಶ್ರೇಷ್ಠವಾದ ವಸ್ತುವಾವುದೂ ಇರುವುದಿಲ್ಲ. ಅದಕ್ಕಿಂತ ಸೂಕ್ಷ್ಮವಾದುದಾಗಲಿ, ದೊಡ್ಡದಾದುದಾಗಲಿ, ಇಲ್ಲ. ಮರವು ಹೇಗೆ ತಾನಿರುವ ಸ್ಥಳದಿಂದ ಚಲಿಸುವುದಿಲ್ಲವೋ ಹಾಗೆ ಆತ್ಮವಸ್ತು ಒಂದೇ ಅಂತರಿಕ್ಷದಲ್ಲಿ (ಎಲ್ಲೆಲ್ಲಿಯೂ) ಸಂಪೂರ್ಣವಾಗಿ ತುಂಬಿಕೊಂಡಿರುವುದು. ಆ ವಸ್ತುವನ್ನೇ ಸರ್ವಗತನಾದ ಪುರುಷನೆನ್ನುವರು.

ಇಲ್ಲಿಗೆ ಶ್ರೀಶಿವಮಹಾಪುರಾಣದಲ್ಲಿ ಏಳನೆಯ ವಾಯವೀಯಸಂಹಿತೆಯ
ಉತ್ತರಭಾಗದಲ್ಲಿ ಶಿವತತ್ತ್ವವರ್ಣನವೆಂಬ ಆರನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ಸಪ್ತಮೋಽಧ್ಯಾಯಃ

---

॥ ಉಪಮನ್ಯುರುವಾಚ ॥

**ಶಕ್ತಿಃ ಸ್ವಾಭಾವಿಕೀ ತಸ್ಯ ವಿದ್ಯಾ ವಿಶ್ವವಿಲಕ್ಷಣಾ ।**
**ಏಕಾನೇಕಸ್ಯ ರೂಪೇಣ ಭಾತಿ ಭಾನೋರಿವ ಪ್ರಭಾ ॥ ೧ ॥**

**ಅನಂತಾಃ ಶಕ್ತಯೋ ಯಸ್ಯಾ ಇಚ್ಛಾಜ್ಞಾನಕ್ರಿಯಾದಯಃ ।**
**ಮಾಯಾದ್ಯಾಶ್ಚಾಭವನ್ವಹ್ನೇರ್ವಿಸ್ಫುಲಿಂಗಾ ಯಥಾ ತಥಾ ॥ ೨ ॥**

---

## ಏಳನೆಯ ಅಧ್ಯಾಯವು.

೧. ಉಪಮನ್ಯುವು ಹೇಳಿದನು—ಆ ಆತ್ಮನಿಗೆ ಸ್ವಾಭಾವಿಕವೂ, ಪ್ರಪಂಚದಲ್ಲಿರುವ ಸಮಸ್ತಶಕ್ತಿಗಳಿಗಿಂತ ಬೇರೆಯಾದುದೂ (ವಿದ್ಯಾ) ಜ್ಞಾನ ಸ್ವರೂಪವಾದುದೂ ಆದ ಶಕ್ತಿ ಇರುವುದು. ಇದು ಒಂದೇ ಆದರೂ ಸೂರ್ಯನ ಕಾಂತಿಯಂತೆ ಅನೇಕರೂಪವಾಗಿ ಪ್ರಕಾಶಿಸುತ್ತಿರುವುದು.

೨. ಆ ಪರಮಾತ್ಮನ ಶಕ್ತಿಗಳು, ಬೆಂಕಿಯ ಕಿಡಿಗಳಂತೆ ಇಚ್ಛಾ, ಜ್ಞಾನ, ಕ್ರಿಯಾ, ಮಾಯಾ ಮುಂತಾದ ಹೆಸರಿನಿಂದ ಅನೇಕವಾಗಿರುವುವು.

ಸದಾಶಿವೇಶ್ವರಾದ್ಯಾ ಹಿ ವಿದ್ಯಾ ವಿದ್ಯೇಶ್ವರಾದಯಃ ।
ಅಭವನ್ಪುರುಷಾಶ್ಚಾಸ್ಯಾಃ ಪ್ರಕೃತಿಶ್ಚ ಪರಾತ್ಪರಾ ॥ ೩ ॥

ಮಹದಾದಿವಿಶೇಷಾಂತಾಸ್ತ್ವಜಾದ್ಯಾಶ್ಚಾಪಿ ಮೂರ್ತಯಃ ।
ಯಚ್ಚಾನ್ಯದಸ್ತಿ ತತ್ಸರ್ವಂ ತಸ್ಯಾಃ ಕಾರ್ಯಂ ನ ಸಂಶಯಃ ॥ ೪ ॥

ಸಾ ಶಕ್ತಿಃ ಸರ್ವಗಾ ಸೂಕ್ಷ್ಮಾ ಪ್ರಬೋಧಾನಂದರೂಪಿಣೀ ।
ಶಕ್ತಿಮಾನುಚ್ಯತೇ ದೇವಶ್ಶಿವಶ್ಶೀತಾಂಶುಭೂಷಣಃ ॥ ೫ ॥

ವೇದ್ಯಶ್ಶಿವಶ್ಶಿವಾ ವಿದ್ಯಾ ಪ್ರಜ್ಞಾ ಚೈವ ಶ್ರುತಿಃ ಸ್ಮೃತಿಃ ।
ಧೃತಿರೇಷಾ ಸ್ಥಿತಿರ್ನಿಷ್ಠಾ ಜ್ಞಾನೇಚ್ಛಾಕರ್ಮಶಕ್ತಯಃ ॥ ೬ ॥

ಆಜ್ಞಾ ಚೈವ ಪರಂ ಬ್ರಹ್ಮ ದ್ವೇ ವಿದ್ಯೇ ಚ ಪರಾಽಪರೇ ।
ಶುದ್ಧವಿದ್ಯಾ ಶುದ್ಧಕಲಾ ಸರ್ವಂ ಶಕ್ತಿಕೃತಂ ಯತಃ ॥ ೭ ॥

೩-೪. ಸದಾಶಿವ, ಈಶ್ವರ, ವಿದ್ಯೇಶ್ವರ ಮುಂತಾದ ಪುರುಷರೂಪವಾಗಿಯೂ, ಸ್ತ್ರೀರೂಪವಾಗಿಯೂ ಇರುವ ವಿದ್ಯೆಗಳೂ, ಪರಾಪ್ರಕೃತಿ ಮಹತ್ತತ್ತ್ವವೇ ಮೊದಲಾದ ಸಕಲ ತತ್ತ್ವಗಳೂ, ಬ್ರಹ್ಮ, ವಿಷ್ಣು, ರುದ್ರ ಮುಂತಾದ ಮೂರ್ತಿಗಳೂ, ಮಿಕ್ಕ ಎಲ್ಲಾ ಜೀವರಾಶಿಗಳೂ, ಆ ಪರಮಾತ್ಮನ ಶಕ್ತಿಯ ಕಾರ್ಯಗಳೇ ಆಗಿರುವುವು. ಈ ವಿಷಯದಲ್ಲಿ ಸಂದೇಹವಿಲ್ಲ.

೫. ಆ ಶಕ್ತಿಯು ಸರ್ವಗತವಾದುದಾಗಿಯೂ, ಸೂಕ್ಷ್ಮವಾಗಿಯೂ, ಜ್ಞಾನಾನಂದ ಸ್ವರೂಪವಾಗಿಯೂ, ಇರುವುದರಿಂದ ಶಕ್ತಿಸಹಿತನಾದ ಶಿವನನ್ನು ಶಕ್ತಿಮಾನ್ ಎಂದರೆ ಶಕ್ತಿಸಹಿತನಾದವನೆಂದು ಹೇಳುವರು.

೬-೭. ತಿಳಿಯಬೇಕಾದುದು ಶಿವನ ಸ್ವರೂಪವು. ತಿಳಿಯುವಿಕೆಯು ದೇವಿಯ ಸ್ವರೂಪವು—ಜ್ಞಾನಶಕ್ತಿ, ಕೇಳುವಶಕ್ತಿ, ಜ್ಞಾಪಕಶಕ್ತಿ, ಧೈರ್ಯ, ಆಸಕ್ತಿ, ಇಚ್ಛಾ, ಜ್ಞಾನ ಕ್ರಿಯಾಶಕ್ತಿಗಳು, ಅಪ್ಪಣೆಮಾಡುವಶಕ್ತಿ, ಪರವಿದ್ಯಾ, ಅಪರವಿದ್ಯಾ, ಶುದ್ಧವಿದ್ಯಾ, ಶುದ್ಧಕಲಾ ಇವೆಲ್ಲವೂ ಪರಬ್ರಹ್ಮನ ಶಕ್ತಿಸ್ವರೂಪವಾದುವುಗಳು.

**ಮಾಯಾ ಚ ಪ್ರಕೃತಿರ್ಜೀವೋ ವಿಕಾರೋ ವಿಕೃತಿಸ್ತಥಾ ।**
**ಅಸಚ್ಚ ಸಚ್ಚ ಯತ್ಕಿಂಚಿತ್ತಯಾ ಸರ್ವಮಿದಂ ತತಂ ॥ ೮ ॥**

**ಸಾ ದೇವೀ ಮಾಯಯಾ ಸರ್ವಂ ಬ್ರಹ್ಮಾಂಡಂ ಸಚರಾಚರಂ ।**
**ಮೋಹಯತ್ಯಪ್ರಯತ್ನೇನ ಮೋಚಯತ್ಯಪಿ ಲೀಲಯಾ ॥ ೯ ॥**

**ಅನಯಾ ಸಹ ಸರ್ವೇಶಃ ಸಪ್ತವಿಂಶಪ್ರಕಾರಯಾ ।**
**ವಿಶ್ವಂ ವ್ಯಾಪ್ಯ ಸ್ಥಿತಸ್ತಸ್ಮಾನ್ಮುಕ್ತಿರತ್ರ ಪ್ರವರ್ತತೇ ॥ ೧೦ ॥**

**ಮುಮುಕ್ಷವಃ ಪುರಾ ಕೇಚಿನ್ಮುನಯೋ ಬ್ರಹ್ಮವಾದಿನಃ ।**
**ಸಂಶಯಾವಿಷ್ಟಮನಸೋ ವಿಮೃಶಂತಿ ಯಥಾತಥಂ ॥ ೧೧ ॥**

---

೮. ಮಾಯೆ, ಪ್ರಕೃತಿ, ಜೀವ, ವಿಕಾರ, ಅವಿಕಾರ, ಅಸತ್, ಸತ್, ಇವೆಲ್ಲವೂ ಆ ದೇವಿಯ (ಶಕ್ತಿಯ) ರೂಪಗಳೇ ಆಗಿ ದೇವಿಯು ಸರ್ವವ್ಯಾಪಿಯಾಗಿರುವಳು.

೯. ಆ ದೇವಿಯು ತನ್ನ ಮಾಯಾಶಕ್ತಿಯಿಂದ ಚರಾಚರಪ್ರಾಣಿಗಳಿಂದ ಕೂಡಿದ ಸಮಸ್ತ ಬ್ರಹ್ಮಾಂಡಗಳನ್ನೂ, ಪ್ರಯತ್ನವಿಲ್ಲದೆಯೇ ಭ್ರಾಂತಿಗೊಳಿಸುವಳು. ಸುಲಭವಾಗಿ ಆ ಭ್ರಾಂತಿನಿವಾರಣೆಯನ್ನೂ ಸಹ ಮಾಡುವಳು.

೧೦. ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ, ಪಂಚತನ್ಮಾತ್ರ, ಪಂಚಬೂತ, ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಮಹತ್ತತ್ತ್ವ, ಈಶ್ವರ, ಸದಾಶಿವ ಎಂಬ ಇಪ್ಪತ್ತೇಳು ತತ್ತ್ವಸ್ವರೂಪಳಾದ ದೇವಿಯಿಂದ ಕೂಡಿದ ಸರ್ವೇಶ್ವರನು ಪ್ರಪಂಚವನ್ನು ವ್ಯಾಪಿಸಿಕೊಂಡಿರುವನು. ಆ ಸರ್ವೇಶ್ವರನಾದ ಪರಬ್ರಹ್ಮನ ಪ್ರಾಪ್ತಿಗೆ ಈ ಇಪ್ಪತ್ತೇಳು ತತ್ತ್ವಗಳ ಬಿಡುಗಡೆಯು ಬೇಕಾಗುವುದರಿಂದ ಈ ತತ್ತ್ವಗಳ ಸಂಬಂಧವಾದ ಬಿಡುಗಡೆಯನ್ನೇ ಮುಕ್ತಿಯೆಂದು ಹೇಳುವರು.

೧೧. ಹಿಂದೆ ವೇದಾಂತಾರ್ಥವನ್ನು ಹೇಳುತ್ತಿರುವ ಮೋಕ್ಷಾಪೇಕ್ಷೆಯುಳ್ಳ ಕೆಲವರು ಮುನಿಗಳು ಸಂಶಯಗ್ರಸ್ತರಾಗಿ ಅನೇಕ ಬಗೆಯಾಗಿ ವಿಚಾರ ಮಾಡಿದರು.

**ಕಿಂ ಕಾರಣಂ ಕುತೋ ಜಾತಾ ಜೀವಾಮಃ ಕೇನ ವಾ ವಯಂ ।**
**ಕುತ್ರಾಸ್ಮಾಕಂ ಸಂಪ್ರತಿಷ್ಠಾ ಕೇನ ವಾಽಧಿಷ್ಠಿತಾ ವಯಂ ॥ ೧೨ ॥**

**ಕೇನ ವರ್ತಾಮಹೇ ಶಶ್ವತ್ಸುಖೇಷ್ವನ್ಯೇಷು ಚಾಽನಿಶಂ ।**
**ಅವಿಲಂಘ್ಯಾ ಚ ವಿಶ್ವಸ್ಯ ವ್ಯವಸ್ಥಾ ಕೇನ ವಾಕೃತಾ ॥ ೧೩ ॥**

**ಕಾಲಸ್ಸ್ವಭಾವೋ ನಿಯತಿರ್ಯದೃಚ್ಛಾ ನಾತ್ರ ಯುಜ್ಯತೇ ।**
**ಭೂತಾನಿ ಯೋನಿಃ ಪುರುಷೋ ಯೋಗೀ ಚೈಷಾಂ ಪರೋಽಥವಾ॥ ೧೪ ॥**

**ಅಚೇತನತ್ವಾತ್ಕಾಲಾದೇಶ್ಚೇತನತ್ವೇಽಪಿ ಚಾತ್ಮನಃ ।**
**ಸುಖದುಃಖಾನಿ ಭೂತತ್ವಾದನೀಶತ್ವಾದ್ವಿಚಾರ್ಯತೇ ॥ ೧೫ ॥**

---

೧೨-೧೩. ಈ ಪ್ರಪಂಚಕ್ಕೆ ಕಾರಣವಾದ ವಸ್ತುವಾವುದು? ನಾವು ಯಾವುದರಿಂದ ಹುಟ್ಟಿದೆವು? ಯಾವುದರಿಂದ ಜೀವಿಸಿರುವೆವು? ನಮಗೆ ಆಧಾರವಾದ ವಸ್ತುವಾವುದು? ನಮ್ಮನ್ನು ಯಾವ ವಸ್ತುವು ಆಶ್ರಯಿಸಿರುವುದು? ಯಾವ ಕಾರಣದಿಂದ ನಾವು ಜೀವಿಸಿ ಪುನಃ ಪುನಃ ಸುಖದುಃಖಗಳನ್ನು ಅನುಭವಿಸುತ್ತಿರುವೆವು? ಈ ಪ್ರಪಂಚದಲ್ಲಿ ನಡೆಯುವ ಸಮಸ್ತ ವ್ಯಾಪಾರಗಳನ್ನೂ ಒಂದು ಕ್ರಮದಲ್ಲಿ ನಡೆಯುವಂತೆ ವ್ಯವಸ್ಥೆ ಮಾಡಿದವನಾರು?

೧೪. ಕಾಲ, ಪ್ರಕೃತಿಯ ಸ್ವಭಾವ, ನಿಯತಿ, ಪಂಚಭೂತಗಳು, ಪುರುಷನಾದ ಈಶ್ವರ, ಯೋಗಶಕ್ತಿಯುಳ್ಳ ಯೋಗಿ ಇವೆಲ್ಲವೂ ಈ ಪ್ರಪಂಚೋತ್ಪತ್ತಿಗೆ ಕಾರಣವೆಂದು ಹೇಳುವರು. ಅದು ಸಮಂಜಸವಾಗಿ ಕಾಣುವುದಿಲ್ಲ. ಕಾರಣವೇನೆಂದರೆ,

೧೫. ಕಾಲಾದಿಗಳು ಅಚೇತನವಾದುವುಗಳು. ಆತ್ಮನು ಚೇತನಶಕ್ತಿಯುಳ್ಳವನು. ಸುಖದುಃಖಗಳು ಪಂಚಭೂತಗಳ ಸಂಬಂಧವಾದುವುಗಳು. ಇವುಗಳೆಲ್ಲವೂ ನಮ್ಮ ಅಧೀನದಲ್ಲಿರುವುವುಗಳಲ್ಲ. ಆದುದರಿಂದ ಈ ವಿಷಯದಲ್ಲಿ ವಿಚಾರಮಾಡಬೇಕಾಗಿರುವುದು.

ತೇ ಧ್ಯಾನಯೋಗಾನುಗತಾಃ ಪ್ರಪಶ್ಯಚ್ಛಕ್ತಿಮೈಶ್ವರೀಂ ।
ಪಾಶವಿಚ್ಛೇದಿಕಾಂ ಸಾಕ್ಷಾನ್ನಿಗೂಢಾಂ ಸ್ವಗುಣೈರ್ಭೃಶಂ ॥ ೧೬ ॥

ತಯಾ ವಿಚ್ಛಿನ್ನಪಾಶಾಸ್ತೇ ಸರ್ವಕಾರಣಕಾರಣಂ ।
ಶಕ್ತಿಮಂತಂ ಮಹಾದೇವಮಪಶ್ಯನ್ದಿವ್ಯಚಕ್ಷುಷಾ ॥ ೧೭ ॥

ಯಃ ಕಾರಣಾನ್ಯಶೇಷಾಣಿ ಕಾಲಾತ್ಮಸಹಿತಾನಿ ಚ ।
ಅಪ್ರಮೇಯೋಽನಯಾ ಶಕ್ತ್ಯಾ ಸಕಲಂ ಯೋಽಧಿತಿಷ್ಠತಿ ॥ ೧೮ ॥

ತತಃ ಪ್ರಸಾದಯೋಗೇನ ಯೋಗೇನ ಪರಮೇಣ ಚ ।
ದೃಷ್ಟೇನ ಭಕ್ತಿಯೋಗೇನ ದಿವ್ಯಾಂ ಗತಿಮವಾಪ್ನುಯುಃ ॥ ೧೯ ॥

---

೧೬. ಹೀಗೆಂದು ತಿಳಿದು ಮುನಿಗಳು ಧ್ಯಾನಯೋಗಾಸಕ್ತರಾಗಿ, ತನ್ನ ಗುಣಗಳಿಂದಲೇ ಗೋಪ್ಯವಾಗಿ ಸಂಸಾರಬಂಧರೂಪವಾದ ಪಾಶವನ್ನು ನಾಶ ಮಾಡಲು ಶಕ್ತವಾದ ಈಶ್ವರಸಂಬಂಧವಾದ ಶಕ್ತಿಯೊಂದಿರುವುದೆಂದು ತಿಳಿದು ಕೊಂಡರು.

೧೭. ಆ ಶಕ್ತಿಯಿಂದ ತಮ್ಮ ಸಂಸಾರಬಂಧವನ್ನು ಕಳೆದುಕೊಂಡು ಆ ಮುನಿಗಳು ಸಕಲ ಕಾರಣಗಳಿಗೂ ಕಾರಣನಾದ, ಶಕ್ತಿಯುಕ್ತನಾದ ಮಹಾ ದೇವನನ್ನು ತಮಗೆ ದೊರೆತ ದಿವ್ಯಜ್ಞಾನರೂಪಚಕ್ಷುಸ್ಸಿನಿಂದ ನೋಡಿದರು.

೧೮-೧೯. ಪ್ರಮಾಣರಹಿತ ಎಂದರೆ ಅಳತೆಗೆ ಸಿಕ್ಕದಿರುವ ಆ ಪರ ಮಾತ್ಮನು ತನ್ನ ಸಂಬಂಧವಾದ, ಈ ಶಕ್ತಿಯಿಂದ ಕಾಲ ಮತ್ತು ಆತ್ಮಸಹಿತ ವಾದ ಸಕಲ ಕಾರಣ ವಸ್ತುಗಳನ್ನೂ, ಆಶ್ರಯಿಸಿ, ಅವುಗಳಲ್ಲಿ ಅಂತರ್ಯಾಮಿ ಸ್ವರೂಪದಿಂದಿರುವನೆಂದು ತಿಳಿದುಕೊಂಡರು. ಬಳಿಕ ಆ ಪರಮಾತ್ಮನ ಅನು ಗ್ರಹದಿಂದಲೂ, ಶ್ರೇಷ್ಠವಾದ ಯೋಗಾಭ್ಯಾಸದಿಂದಲೂ, ವ್ಯಕ್ತವಾದ ಭಕ್ತಿ ಯೋಗದಿಂದಲೂ ಕೂಡಿದವರಾಗಿ ಶ್ರೇಷ್ಠವಾದ ಮೋಕ್ಷವನ್ನು ಪಡೆದರು.

ತಸ್ಮಾತ್ಸಹ ತಥಾ ಶಕ್ತ್ಯಾ ಹೃದಿ ಪಶ್ಯಂತಿ ಯೇ ಶಿವಂ ।
ತೇಷಾಂ ಶಾಶ್ವತಿಕೀ ಶಾಂತಿರ್ನೇತರೇಷಾಮಿತಿ ಶ್ರುತಿಃ ॥ ೨೦ ॥

ನ ಹಿ ಶಕ್ತಿಮತಃ ಶಕ್ತ್ಯಾ ವಿಪ್ರಯೋಗೋಽಸ್ತಿ ಜಾತುಚಿತ್ ।
ತಸ್ಮಾಚ್ಛಕ್ತೇಃ ಶಕ್ತಿಮತಸ್ತಾದಾತ್ಮ್ಯಾನ್ನಿರ್ವೃತಿರ್ದ್ವಯೋಃ ॥ ೨೧ ॥

ಕ್ರಮೋ ವಿವಕ್ಷಿತೋ ನೂನಂ ವಿಮುಕ್ತೌ ಜ್ಞಾನಕರ್ಮಣೋಃ ।
ಪ್ರಸಾದೇ ಸತಿ ಸಾ ಮುಕ್ತಿರ್ಯಸ್ಮಾತ್ಕರತಲೇ ಸ್ಥಿತಾ ॥ ೨೨ ॥

ದೇವೋ ವಾ ದಾನವೋ ವಾಪಿ ಪಶುರ್ವಾ ವಿಹಗೋಽಪಿ ವಾ ।
ಕೀಟೋ ವಾಥ ಕೃಮಿರ್ವಾಪಿ ಮುಚ್ಯತೇ ತತ್ಪ್ರಸಾದತಃ ॥ ೨೩ ॥

ಗರ್ಭಸ್ಥೋ ಜಾಯಮಾನೋ ವಾ ಬಾಲೋ ವಾ ತರುಣೋಽಪಿ ವಾ ।
ವೃದ್ಧೋ ವಾ ಮ್ರಿಯಮಾಣೋ ಹಿ ಸ್ವರ್ಗಸ್ಥೋ ವಾಥ ನಾರಕೀ ॥ ೨೪ ॥

---

೨೦. ಆದುದರಿಂದ ಶಕ್ತಿಯಿಂದ ಕೂಡಿದ ಶಿವನನ್ನು ಹೃದಯಕಮಲದಲ್ಲಿ ಯಾರು ದರ್ಶನಮಾಡುವರೋ, ಅವರಿಗೆ ಶಾಶ್ವತವಾದ ಶಾಂತಿಸುಖವು ದೊರೆಯುವುದು. ಇತರರಿಗೆ ದೊರೆಯುವುದಿಲ್ಲ ಎಂದು ವೇದವು ಹೇಳುವುದು.

೨೧. ಶಕ್ತಿಯುಕ್ತನಾದ ಶಿವನು ಶಕ್ತಿಯನ್ನು ಬಿಟ್ಟು ಎಂದಿಗೂ ಬೇರೆಯಾಗುವುದಿಲ್ಲ. ಆದುದರಿಂದ ಶಕ್ತಿಗೂ, ಶಕ್ತಿಯುಕ್ತನಾದ ಶಿವನಿಗೂ, ತಾದಾತ್ಮ್ಯಭಾವವಿರುವುದರಿಂದ ಅದೇ ಪರಮಾನಂದಸ್ವರೂಪವಾಗಿ ಮೋಕ್ಷವೆನಿಸುವುದು.

೨೨. ಶಿವನ ಅನುಗ್ರಹದಿಂದ ಮುಕ್ತಿಯು ಸುಲಭವಾಗಿ ದೊರೆಯುವುದರಿಂದ ಆ ಮೋಕ್ಷಕ್ಕೆ ಕರ್ಮಜ್ಞಾನಗಳು ಕ್ರಮವಾಗಿ ಕಾರಣಗಳೆಂಬುದು ಅಷ್ಟು ಮುಖ್ಯವಲ್ಲ.

೨೩. ದೇವ, ದಾನವ, ಪಶು, ಪಕ್ಷಿ, ಗಿಳಿಯಮರಿ, ಕ್ರಿಮಿಕೀಟಗಳೆಲ್ಲವೂ ಆ ಶಿವನ ಅನುಗ್ರಹದಿಂದ ಮುಕ್ತಿಯನ್ನೈದುವುವು.

೨೪-೨೫. ಜೀವನು ಗರ್ಭದಲ್ಲಿರಲಿ, ಹುಟ್ಟುತ್ತಿರಲಿ, ಬಾಲಕನಾಗಲಿ, ಪ್ರಾಯದವನಾಗಲಿ, ಮುದುಕನಾಗಲಿ, ಮರಣಹೊಂದುತ್ತಿರುವನಾಗಲಿ, ಸ್ವರ್ಗ

**ಪತಿತೋ ವಾಪಿ ಧರ್ಮಾತ್ಮಾ ಪಂಡಿತೋ ಮೂಢ ಏವ ವಾ ।**
**ಪ್ರಸಾದೇ ತತ್ಕ್ಷಣಾದೇವ ಮುಚ್ಯತೇ ನಾತ್ರ ಸಂಶಯಃ ॥ ೨೫ ॥**

**ಅಯೋಗ್ಯಾನಾಂ ಚ ಕಾರುಣ್ಯಾದ್ಭಕ್ತಾನಾಂ ಪರಮೇಶ್ವರಃ ।**
**ಪ್ರಸೀದತಿ ನ ಸಂದೇಹೋ ನಿಗೃಹ್ಯ ವಿವಿಧಾನ್ಮಲಾನ್ ॥ ೨೬ ॥**

**ಪ್ರಸಾದಾದೇವ ಸಾ ಭಕ್ತಿಃ ಪ್ರಸಾದೋ ಭಕ್ತಿಸಂಭವಃ ।**
**ಅವಸ್ಥಾಭೇದಮುತ್ಪ್ರೇಕ್ಷ್ಯ ವಿದ್ವಾಂಸ್ತತ್ರ ನ ಮುಹ್ಯತಿ ॥ ೨೭ ॥**

**ಪ್ರಸಾದಪೂರ್ವಿಕಾ ಯೇಯಂ ಭುಕ್ತಿಮುಕ್ತಿಪ್ರದಾಯಿನೀ ।**
**ನೈವ ಸಾ ಶಕ್ಯತೇ ಪ್ರಾಪ್ತುಂ ನರೈರೇಕೇನ ಜನ್ಮನಾ ॥ ೨೮ ॥**

---

ದಲ್ಲಿರಲಿ, ನರಕದಲ್ಲಿರಲಿ, ಪಾಪಿಯಾಗಲಿ, ಧರ್ಮಾತ್ಮನಾಗಲಿ, ಪಂಡಿತನಾಗಲಿ, ಮೂಢನಾಗಲಿ ಶಿವನ ಅನುಗ್ರಹವನ್ನು ಪಡೆದ ಕ್ಷಣದಲ್ಲಿಯೇ ಮೋಕ್ಷವನ್ನು ಹೊಂದುವನು. ಈ ವಿಷಯದಲ್ಲಿ ಸಂದೇಹವಿಲ್ಲ.

೨೬. ಪರಮೇಶ್ವರನು ಕರುಣಾಶಾಲಿಯಾದುದರಿಂದ ಅಯೋಗ್ಯರಾದರೂ, ಭಕ್ತರಾದಮಾತ್ರಕ್ಕೆ ಅವರ ಪಾಪಗಳನ್ನೆಲ್ಲ ನಾಶಮಾಡಿ ಅವರಿಗೆ ಅನುಗ್ರಹಮಾಡುವನು.

೨೭. ಶಿವನ ಅನುಗ್ರಹದಿಂದಲೇ ಭಕ್ತಿಯುಂಟಾಗುವುದು. ಆ ಅನುಗ್ರಹವು ಭಕ್ತಿಯಿಂದಲೇ ಹುಟ್ಟುವುದು. ಅವಸ್ಥಾಭೇದದಿಂದ ಬೇರೆ ಬೇರೆ ಹೆಸರನ್ನು ಹೊಂದಿರುವುದರಿಂದ ವಿದ್ವಾಂಸರು ಈ ಭಕ್ತಿ ಅನುಗ್ರಹಗಳ ವಿಷಯದಲ್ಲಿ ಭ್ರಾಂತಿಯನ್ನು ಹೊಂದಬಾರದು.

೨೮. ಶಿವನ ಅನುಗ್ರಹದಿಂದುಂಟಾಗುವ ಭುಕ್ತಿಮುಕ್ತಿರೂಪವಾದ ಫಲಗಳನ್ನು ಕೊಡುವ ಭಕ್ತಿಯನ್ನು ಮನುಷ್ಯರು ಒಂದೇ ಜನ್ಮದಲ್ಲಿ ಪಡೆಯಲಾರರು.

**ಅನೇಕಜನ್ಮಸಿದ್ಧಾನಾಂ ಶ್ರೌತಸ್ಮಾರ್ತಾನುವರ್ತಿನಾಂ ।**
**ವಿರಕ್ತಾನಾಂ ಪ್ರಬುದ್ಧಾನಾಂ ಪ್ರಸೀದತಿ ಮಹೇಶ್ವರಃ ॥ ೨೯ ॥**

**ಪ್ರಸನ್ನೇ ಸತಿ ದೇವೇಶೇ ಪಶೌ ತಸ್ಮಿನ್ಪ್ರವರ್ತಕೇ ।**
**ಅಸ್ತಿ ನಾಥೋ ಮಮೇತ್ಯಲ್ಪಾ ಭಕ್ತಿರ್ಬುದ್ಧಿಪುರಸ್ಸರಾ ॥ ೩೦ ॥**

**ತಪಸಾ ವಿವಿಧೈಶ್ಶೈವೈರ್ಧರ್ಮೈಃ ಸಂಯುಜ್ಯತೇ ನರಃ ।**
**ತತ್ಪ್ರಯೋಗೇ ತದಭ್ಯಾಸಸ್ತತೋ ಭಕ್ತಿಃ ಪರಾ ಭವೇತ್ ॥ ೩೧ ॥**

**ಪರಯಾ ಚ ತಯಾ ಭಕ್ತ್ಯಾ ಪ್ರಸಾದೋ ಲಭ್ಯತೇ ಪರಃ ।**
**ಪ್ರಸಾದಾತ್ಸರ್ವಪಾಶೇಭ್ಯೋ ಮುಕ್ತಿರ್ಮುಕ್ತಸ್ಯ ನಿರ್ವೃತಿಃ ॥ ೩೨ ॥**

**ಅಲ್ಪಭಾವೋಽಪಿ ಯೋ ಮರ್ತ್ಯಸ್ಸೋಽಪಿ ಜನ್ಮತ್ರಯಾತ್ಪರಂ ।**
**ನ ಯೋನಿಯಂತ್ರಪೀಡಾಯೈ ಭವೇನ್ನೈವಾತ್ರ ಸಂಶಯಃ ॥ ೩೩ ॥**

---

೨೯ ಶ್ರುತಿ ಸ್ಮೃತಿ ವಿಹಿತವಾದ ಕರ್ಮಗಳನ್ನು ಅನೇಕ ಜನ್ಮಗಳಲ್ಲಿ ಆಚರಿಸಿ ವೈರಾಗ್ಯದಿಂದ ಕೂಡಿದ ಜ್ಞಾನಿಗಳಿಗೆ ಪರಮೇಶ್ವರನು ಪ್ರಸನ್ನನಾಗುವನು. “ ಕೋಟಿಜನ್ಮಾರ್ಜಿತೈಃ ಪುಣ್ಯೈಃ ಶಿವೇ ಭಕ್ತಿಃ ಪ್ರಜಾಯತೇ ” ಎಂದು ಶಿವ ಗೀತೆಯಲ್ಲಿ ಹೇಳಿರುವುದು.

೩೦. ದೇವದೇವನಾದ ಶಿವನು ಪ್ರಸನ್ನನಾದರೆ ಪಶುಸ್ವರೂಪನಾದ ಜೀವನಿಗೆ ನನಗೊಬ್ಬ ಸ್ವಾಮಿಯಿರುವನು ಎಂಬ ತಿಳಿವಳಿಕೆಯು ಸ್ವಲ್ಪಮಟ್ಟಿಗಾದರೂ ಉಂಟಾಗುವುದು.

೩೧. ಬಳಿಕ ಮನುಷ್ಯನು ತಪಸ್ಸನ್ನು ಮಾಡುತ್ತ ಬಗೆಬಗೆಯ ಶಿವ ಧರ್ಮಗಳನ್ನು ಆಚರಿಸುವನು. ಈ ಅಭ್ಯಾಸವು ಹೆಚ್ಚಿದಹಾಗೆಲ್ಲ ಪರಾಭಕ್ತಿಯು ಉತ್ಪತ್ತಿಯಾಗುವುದು.

೩೨. ಆ ಪರಾಭಕ್ತಿಯಿಂದ ಶಿವನ ಪರಮಾನುಗ್ರಹವುಂಟಾಗುವುದು. ಆ ಅನುಗ್ರಹದಿಂದ ಸಕಲ ಕರ್ಮಬಂಧಗಳಿಂದ ಬಿಡುಗಡೆಯುಂಟಾಗಿ ಮೋಕ್ಷ ಸುಖವು ಮನುಜನಿಗೆ ಲಭಿಸುವುದು.

೩೩. ಮನುಷ್ಯನಿಗೆ ಅತ್ಯಲ್ಪವಾದ ಭಕ್ತಿಯಿದ್ದರೂ, ಮೂರು ಜನ್ಮಕ್ಕಿಂತ ಹೆಚ್ಚು ಜನ್ಮವನ್ನು ಅವನು ಪಡೆಯುವುದಿಲ್ಲ. ಮತ್ತೆ ಗರ್ಭವಾಸದುಃಖವು ಅವನಿಗೆ ಉಂಟಾಗುವುದಿಲ್ಲ. ಈ ವಿಷಯದಲ್ಲಿ ಸಂದೇಹವೇ ಇಲ್ಲ.

ಸಾಂಗಾನಂಗಾ ಚ ಯಾ ಸೇವಾ ಸಾ ಭಕ್ತಿರಿತಿ ಕಥ್ಯತೇ ।
ಸಾ ಪುನರ್ಭಿದ್ಯತೇ ತ್ರೇಧಾ ಮನೋವಾಕ್ಕಾಯಸಾಧನೈಃ ॥ ೩೪ ॥

ಶಿವರೂಪಾದಿಚಿಂತಾ ಯಾ ಸಾ ಸೇವಾ ಮಾನಸೀ ಸ್ಮೃತಾ ।
ಜಪಾದಿರ್ವಾಚಿಕೀ ಸೇವಾ ಕರ್ಮ ಪೂಜಾದಿ ಕಾಯಿಕೀ ॥ ೩೫ ॥

ಸೇಯಂ ತ್ರಿಸಾಧನಾ ಸೇವಾ ಶಿವಧರ್ಮಶ್ಚ ಕಥ್ಯತೇ ।
ಸ ತು ಪಂಚವಿಧಃ ಪ್ರೋಕ್ತಃ ಶಿವೇನ ಪರಮಾತ್ಮನಾ ॥ ೩೬ ॥

ತಪಃ ಕರ್ಮ ಜಪೋ ಧ್ಯಾನಂ ಜ್ಞಾನಂ ಚೇತಿ ಸಮಾಸತಃ ।
ಕರ್ಮಲಿಂಗಾರ್ಚನಾದ್ಯಂ ಚ ತಪಶ್ಚಾಂದ್ರಾಯಣಾದಿಕಂ ॥ ೩೭ ॥

೩೪. ಸಕಲ ವಸ್ತು ಸಮೃದ್ಧಿಯಿಂದ ಕೂಡಿರಲಿ ಅಥವಾ, ಅವುಗಳಲ್ಲಿ ನ್ಯೂನತೆಯಿರಲಿ ಶಿವನ ಪೂಜೆಯನ್ನು ನಡೆಸುವುದೇ ಭಕ್ತಿಯೆನಿಸುವುದು. ಆ ಭಕ್ತಿಯು ಮಾನಸಿಕ, ವಾಚಕ, ಕಾಯಿಕವೆಂದು ಮೂರು ಬಗೆಯಾಗಿರುವುದು.

೩೫. ಮನಸ್ಸಿನಲ್ಲಿ ಶಿವನ ರೂಪಾದಿಗಳನ್ನು ಧ್ಯಾನಿಸುವುದೇ ಮಾನಸಿಕ ಪೂಜೆಯು, ಶಿವಮಂತ್ರಗಳನ್ನು ಜಪಿಸುವುದೇ ವಾಚಿಕಪೂಜೆಯು, ಪೂಜಾದ್ರವ್ಯ ಗಳನ್ನುಪಯೋಗಿಸಿ ಪೂಜಿಸುವುದೇ ಕಾಯಿಕಪೂಜೆಯು.

೩೬. ಈ ಮನೋವಾಕ್ಕಾಯರೂಪವಾದ ತ್ರಿಕರಣಗಳಿಂದ ಮಾಡುವ ಸೇವೆಯನ್ನು ಶಿವಧರ್ಮವೆಂದು ಹೇಳುವರು. ತಪಸ್ಸು, ಕರ್ಮ, ಜಪ, ಧ್ಯಾನ, ಜ್ಞಾನ ಎಂದು ಶಿವಧರ್ಮವು ಐದು ವಿಧವಾಗಿರುವುದೆಂದು ಪರಮಾತ್ಮನಾದ ಶಿವನೇ ಹೇಳಿರುವನು.

೩೭-೩೮. ಶಿವಲಿಂಗವನ್ನು ಪೂಜಿಸುವುದೇ ಮೊದಲಾದುವು ಕರ್ಮವೆನಿಸುವುದು. ಚಾಂದ್ರಾಯಣಾದಿ ವ್ರತಗಳನ್ನು ಮಾಡುವುದೇ ತಪಸ್ಸೆನಿಸುವುದು. ಉಪಾಂಶು (ಮೆಲ್ಲಗೆ ಉಚ್ಚಾರಣೆಮಾಡುವುದು) ಮಾನಸಿಕ ಅರ್ಥಾನುಸಂಧಾನ ಎಂಬ ಮೂರು ರೂಪಗಳಲ್ಲಿ ಶಿವಮಂತ್ರವನ್ನು ಮತ್ತೆ ಮತ್ತೆ ಹೇಳುವುದೇ ಜಪವು

ಜಪಸ್ತ್ರಿಧಾ ಶಿವಾಭ್ಯಾಸಶ್ಚಿಂತಾ ಧ್ಯಾನಂ ಶಿವಸ್ಯ ತು ।
ಶಿವಾಗಮೋಕ್ತಂ ಯಜ್ಞಾನಂ ತದತ್ರ ಜ್ಞಾನಮುಚ್ಯತೇ ॥೩೮ ॥

ಶ್ರೀಕಂಠೇನ ಶಿವೇನೋಕ್ತಂ ಶಿವಾಯೈ ಚ ಶಿವಾಗಮಃ ।
ಶಿವಾಶ್ರಿತಾನಾಂ ಕಾರುಣ್ಯಾಚ್ಛ್ರೇಯಸಾಮೇಕಸಾಧನಂ ॥ ೩೯ ॥

ತಸ್ಮಾದ್ವಿವರ್ಧಯೇದ್ಭಕ್ತಿಂ ಶಿವೇ ಪರಮಕಾರಣೇ ।
ತ್ಯಜೇಚ್ಚ ವಿಷಯಾಸಂಗಂ ಶ್ರೇಯೋರ್ಥೀ ಮತಿಮಾನ್ನರಃ ॥ ೪೦ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-
ಮುತ್ತರಭಾಗೇ ಶಿವತತ್ತ್ವಕಥನಂ ನಾಮ
ಸಪ್ತಮೋಽಧ್ಯಾಯಃ



ಶಿವನ ರೂಪವನ್ನು ಮನಸ್ಸಿನಲ್ಲಿ ಯೋಚಿಸುವುದೇ ಧ್ಯಾನವು. ಶೈವಾಗಮದಲ್ಲಿ ಹೇಳಿರುವ ಜ್ಞಾನಸ್ವರೂಪವೇ ನಿಜವಾದ ಜ್ಞಾನವೆನಿಸುವುದು.

೩೯. ವಿಷವನ್ನು ಕಂಠದಲ್ಲಿ ಧರಿಸಿದುದರಿಂದ ಶ್ರೀಕಂಠನೆನಿಸಿದ ಶಿವನು ಪಾರ್ವತಿಗೆ ಹೇಳಿದ ಶಿವಾಗಮವು ಶಿವನ ಕರುಣೆಗೆ ಪಾತ್ರರಾದ ಭಕ್ತರಿಗೆ ಮುಖ್ಯವಾದ ಶ್ರೇಯಸ್ಸಾಧನವಾಗಿರುವುದು.

೪೦. ಆದುದರಿಂದ ಶ್ರೇಯಸ್ಸನ್ನಪೇಕ್ಷಿಸುವ ಬುದ್ಧಿವಂತನಾದ ಮನುಜನು ಸರ್ವಕಾರಣನಾದ ಶಿವನಲ್ಲಿ ಭಕ್ತಿಯನ್ನು ವೃದ್ಧಿಗೊಳಿಸಿ, ವಿಷಯಾದಿಸುಖಗಳಲ್ಲಿ ಆಸಕ್ತಿಯನ್ನು ತೊರೆದು ಶಿವನನ್ನು ಭಜಿಸಬೇಕು.

ಇಲ್ಲಿಗೆ ಶ್ರೀಶಿವಮಹಾಪುರಾಣದ ಏಳನೆಯ ವಾಯವೀಯಸಂಹಿತೆಯ
ಉತ್ತರಭಾಗದಲ್ಲಿ ಶಿವತತ್ತ್ವಕಥನವೆಂಬ ಏಳನೆಯ
ಅಧ್ಯಾಯವು ಮುಗಿದುದು.



|| ಶ್ರೀಃ ||

|| ಓಂ ನಮಃ ಶಿವಾಯ ||

---

# ಅಥ ಶ್ರೀ ಶಿವಮಹಾಪುರಾಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ಅಷ್ಟಮೋಽಧ್ಯಾಯಃ

---

॥ ಕೃಷ್ಣ ಉವಾಚ ॥

ಭಗವನ್ಶ್ರೋತುಮಿಚ್ಛಾಮಿ ಶಿವೇನ ಪರಿಭಾಷಿತಂ ।
ವೇದಸಾರೇ ಶಿವಜ್ಞಾನಂ ಸ್ವಾಶ್ರಿತಾನಾಂ ವಿಮುಕ್ತಯೇ ॥ ೧ ॥

ಅಭಕ್ತಾನಾಮಬುದ್ಧೀನಾಮಯುಕ್ತಾನಾಮಗೋಚರಂ ।
ಅರ್ಥೈರ್ದಶಾರ್ಧೈಃ ಸಂಯುಕ್ತಂ ಗೂಢಮಪ್ರಾಜ್ಞನಿಂದಿತಂ ॥ ೨ ॥

---

### ಎಂಟನೆಯ ಅಧ್ಯಾಯವು.

೧-೨. ಕೃಷ್ಣನು ಪ್ರಶ್ನೆ ಮಾಡುವನು—ಮಹಾಮಹಿಮನಾದ ಎಲೈ ಉಪಮನ್ಯುಮುನಿಯೇ, ತನ್ನನ್ನು ಶರಣುಹೊಂದಿದವರ ದುಃಖನಾಶಕ್ಕಾಗಿ ಶಿವನೇ ದೇವಿಗೆ ಹೇಳಿದ ವೇದಾಂತದಲ್ಲಿರುವ ಶಿವಜ್ಞಾನಸ್ವರೂಪವನ್ನು ಕೇಳಬೇಕೆಂದು ಬಯಸುವೆನು. ಆ ಶಿವಜ್ಞಾನವು ಭಕ್ತರಲ್ಲದವರಿಗೂ, ಬುದ್ಧಿಹೀನರಿಗೂ, ಯೋಗಾಭ್ಯಾಸವಿಲ್ಲದವರಿಗೂ, ಗೋಚರವಾಗತಕ್ಕದ್ದಲ್ಲ. ಅದು ಐದು ವಿಧವಾದ ಅರ್ಥಗಳಿಂದ ಯುಕ್ತವಾಗಿ ಅತ್ಯಂತಗೋಪ್ಯವಾಗಿರುವುದು. ಬುದ್ಧಿಹೀನರು ಮಾತ್ರ ಇದನ್ನು ನಿಂದಿಸುವರು.

**ವರ್ಣಾಶ್ರಮಕೃತೈರ್ಧರ್ಮೈರ್ವಿಪರೀತಂ ಕ್ವಚಿತ್ಸಮಂ ।**
**ವೇದಾತ್ಷಡಂಗಾದುದ್ಧೃತ್ಯ ಸಾಂಖ್ಯಾದ್ಯೋಗಾಚ್ಚ ಕೃತ್ಸ್ನಶಃ ॥ ೩ ॥**

**ಶತಕೋಟಿಪ್ರಮಾಣೇನ ವಿಸ್ತೀರ್ಣಂ ಗ್ರಂಥಸಂಖ್ಯಯಾ ।**
**ಕಥಿತಂ ಪರಮೇಶೇನ ತತ್ರ ಪೂಜಾ ಕಥಂ ಪ್ರಭೋಃ ॥ ೪ ॥**

**ಕಸ್ಯಾಧಿಕಾರಃ ಪೂಜಾದೌ ಜ್ಞಾನಯೋಗಾದಯಃ ಕಥಂ ।**
**ತತ್ಸರ್ವಂ ವಿಸ್ತರಾದೇವ ವಕ್ತುಮರ್ಹಸಿ ಸುವ್ರತ ॥ ೫ ॥**

**॥ ಉಪಮನ್ಯುರುವಾಚ ॥**

**ಶೈವಂ ಸಂಕ್ಷಿಪ್ಯ ವೇದೋಕ್ತಂ ಶಿವೇನ ಪರಿಭಾಷಿತಂ ।**
**ಸ್ತುತಿನಿಂದಾದಿರಹಿತಂ ಸದ್ಯಃ ಪ್ರತ್ಯಯಕಾರಣಂ ॥ ೬ ॥**

---

೩-೫. ಆ ಶಿವಜ್ಞಾನವು ವರ್ಣಾಶ್ರಮಧರ್ಮಗಳಿಗೆ ವಿರುದ್ಧವಾದುದು. ಕೆಲವೆಡೆಗಳಲ್ಲಿ ಮಾತ್ರ ವರ್ಣಾಶ್ರಮಧರ್ಮಗಳಿಗೆ ಸಾಮ್ಯವಾಗಿರುವುದು. ಎಂದರೆ ಹೊಂದಿಕೊಂಡಿರುವುದು. ವೇದವೇದಾಂಗಗಳಿಂದಲೂ, ಸಾಂಖ್ಯಯೋಗ ಶಾಸ್ತ್ರಗಳಿಂದಲೂ, ಅನೇಕ ವಿಷಯಗಳನ್ನು ತೆಗೆದುಕೊಂಡು ಒಂದು ನೂರು ಕೋಟಿ ಶ್ಲೋಕಸಂಖ್ಯೆಯಿಂದ ಪರಮೇಶ್ವರನೇ ಅದನ್ನು ಹೇಳಿರುವನು. ಇಂತಹ ಆ ಶಿವಜ್ಞಾನಾನುಸಾರವಾಗಿ ಶಿವನ ಪೂಜೆಯನ್ನು ಹೇಗೆ ಮಾಡಬೇಕು? ಪೂಜೆ ಮಾಡುವ ಅಧಿಕಾರವು ಯಾರಿಗಿರುವುದು? ಜ್ಞಾನಯೋಗವು ಹೇಗೆ? ಇವುಗಳೆಲ್ಲವನ್ನೂ ಮಹಾತಪಸ್ವಿಯಾದ ನೀನು ವಿಸ್ತಾರವಾಗಿ ನನಗೆ ಹೇಳಬೇಕು ಎಂದನು.

೬-೭. ಉಪಮನ್ಯುವು ಹೇಳುವನು—ಶಿವನೇ ಹೇಳಿದ ವೇದೋಕ್ತವಾದ ಆ ಶಿವಧರ್ಮವನ್ನು ಎಂದರೆ ಶಿವಜ್ಞಾನವನ್ನು ಸಂಗ್ರಹವಾಗಿ ಹೇಳುವೆನು. ವಿಸ್ತಾರವಾಗಿ ಹೇಳಲು ನನಗೆ ಶಕ್ತಿಸಾಲದು. ಆ ಶಿವಜ್ಞಾನವು ಸ್ತುತಿನಿಂದಾದಿಗಳಿಂದ ರಹಿತವಾದುದು. ಕೇಳಿದೊಡನೆಯೇ ಅದರಲ್ಲಿ ನಂಬಿಕೆಹುಟ್ಟು

ಗುರುಪ್ರಸಾದಜಂ ದಿವ್ಯಮನಾಯಾಸೇನ ಮುಕ್ತಿದಂ ।
ಕಥಯಿಷ್ಯೇ ಸಮಾಸೇನ ತಸ್ಯ ಶಕ್ಯೋ ನ ವಿಸ್ತರಃ ॥ ೭ ॥

ಸಿಸೃಕ್ಷಯಾ ಪುರಾsವ್ಯಕ್ತಾಚ್ಛಿವಃ ಸ್ಥಾಣುರ್ಮಹೇಶ್ವರಃ ।
ಸತ್ಕಾರ್ಯಕಾರಣೋಪೇತಸ್ಸ್ವಯಮಾವಿರಭೂತ್ಪ್ರಭುಃ ॥ ೮ ॥

ಜನಯಾಮಾಸ ಚ ತದಾ ಋಷಿರ್ವಿಶ್ವಾಧಿಕಃ ಪ್ರಭುಃ ।
ದೇವಾನಾಂ ಪ್ರಥಮಂ ದೇವಂ ಬ್ರಹ್ಮಾಣಂ ಬ್ರಹ್ಮಣಸ್ಪತಿಂ ॥ ೯ ॥

ಬ್ರಹ್ಮಾಪಿ ಪಿತರಂ ದೇವಂ ಜಾಯಮಾನಂ ನ್ಯವೈಕ್ಷತ ।
ತಂ ಜಾಯಮಾನಂ ಜನಕೋ ದೇವಃ ಪ್ರಾಪಶ್ಯದಾಜ್ಞಯಾ ॥ ೧೦ ॥

---

ವುದು. ಅದು ಗುರುವಿನ ಅನುಗ್ರಹದಿಂದ ಮಾತ್ರವೇ ಲಭಿಸುವುದು. ಅನಾಯಾಸವಾಗಿ ಮೋಕ್ಷವನ್ನುಂಟುಮಾಡುವುದು. ಇಂತಹ ಶಿವಜ್ಞಾನವನ್ನು ಸಂಕ್ಷೇಪವಾಗಿ ಹೇಳುವೆನು.

೮. ಬಹಳ ಕಾಲದಹಿಂದೆ ಯಾವ ವಿಕಾರವೂ ಇಲ್ಲದ ಅವ್ಯಕ್ತರೂಪದಿಂದಿದ್ದ ಮಹೇಶ್ವರನು ತನ್ನ ಪ್ರಕೃತಿಶಕ್ತಿಯಿಂದ ಪ್ರಪಂಚವನ್ನು ಸೃಷ್ಟಿಮಾಡಬೇಕೆಂದು ಅಪೇಕ್ಷಿಸಿ ಕಾರ್ಯಕರಣಸಂಘಾತರೂಪವಾದ ಸದ್ರೂಪವಾದ ಶರೀರದಿಂದ ಕೂಡಿ ತಾನೇ ಸ್ವಯಂ ವ್ಯಕ್ತನಾದನು.

೯. ಆಗ ಪ್ರಪಂಚಕ್ಕಿಂತ ಅಧಿಕನೂ ಎಲ್ಲರಿಗೂ ಸ್ವಾಮಿಯೂ ಆದ ಶಿವನು ದೇವತೆಗಳಲ್ಲಿ ಮೊದಲನೆಯವನೂ, ವೇದಗಳಿಗೆ ಸ್ವಾಮಿಯೂ ಆದ ಬ್ರಹ್ಮನನ್ನು ಸೃಷ್ಟಿಸಿದನು.

೧೦. ಬ್ರಹ್ಮನೂ ಶರೀರವನ್ನು ಧರಿಸಿದ ತಂದೆಯಾದ ಶಿವನನ್ನು ನೋಡಿದನು. ಆಗ ಶಿವನು ಆಗತಾನೇ ಹುಟ್ಟಿದ ಬ್ರಹ್ಮನನ್ನು ನೋಡಿ ಆ ನೋಟದಿಂದಲೇ ಅವನಿಗೆ ಆಜ್ಞೆಮಾಡಿದನು.

ದೃಷ್ಟೋ ರುದ್ರೇಣ ದೇವೋऽಸಾವಸೃಜದ್ವಿಶ್ವಮೀಶ್ವರಃ ।
ವರ್ಣಾಶ್ರಮವ್ಯವಸ್ಥಾಂ ಚ ಚಕಾರ ಸ ಪೃಥಕ್ಪೃಥಕ್ ॥ ೧೧ ॥

ಸೋಮಂ ಸಸರ್ಜ ಯಜ್ಞಾರ್ಥೇ ಸೋಮಾದ್ದ್ಯೌಸ್ಸಮಜಾಯತ ।
ಧರಾ ಚ ವಹ್ನಿಃ ಸೂರ್ಯಶ್ಚ ಯಜ್ಞೋ ವಿಷ್ಣುಃ ಶಚೀಪತಿಃ ॥ ೧೨

ತೇ ಚಾನ್ಯೇ ಚ ಸುರಾ ರುದ್ರಂ ರುದ್ರಾಧ್ಯಾಯೇನ ತುಷ್ಟುವುಃ ।
ಪ್ರಸನ್ನವದನಸ್ತಸ್ಥೌ ದೇವಾನಾಮಗ್ರತಃ ಪ್ರಭುಃ ॥ ೧೩ ॥

ಅಪಹೃತ್ಯ ಸ್ವಲೀಲಾರ್ಥಂ ತೇಷಾಂ ಜ್ಞಾನಂ ಮಹೇಶ್ವರಃ ।
ತಮಪೃಚ್ಛಂಸ್ತತೋ ದೇವಾಃ ಕೋ ಭವಾನಿತಿ ಮೋಹಿತಾಃ ॥ ೧೪ ॥

ಸೋऽಬ್ರವೀದ್ಭಗವಾನ್ರುದ್ರೋ ಹ್ಯಹಮೇಕಃ ಪುರಾತನಃ ।
ಆಸಂ ಪ್ರಥಮಮೇವಾಹಂ ವರ್ತಾಮಿ ಚ ಸುರೋತ್ತಮಾಃ ॥ ೧೫ ॥

---

೧೧. ರುದ್ರನು ತನ್ನ ದೃಷ್ಟಿಯಿಂದಲೇ ಆಜ್ಞೆಮಾಡಲು, ಬ್ರಹ್ಮನು ಪ್ರಪಂಚವನ್ನು ಸೃಷ್ಟಿಸಿ ಆ ಪ್ರಪಂಚದಲ್ಲಿ ವರ್ಣಾಶ್ರಮಧರ್ಮಗಳನ್ನು ಬೇರೆ ಬೇರೆಯಾಗಿ ವ್ಯವಸ್ಥೆಮಾಡಿದನು.

೧೨. ಬ್ರಹ್ಮನು ಯಜ್ಞಕರ್ಮಕ್ಕಾಗಿ ಸಮಸ್ತ ಓಷಧಿಗಳಿಗೂ, ಅಧಿಪತಿಯಾದ ಚಂದ್ರನನ್ನು ಸೃಷ್ಟಿಸಿದನು. ಆ ಚಂದ್ರನಿಂದ ದ್ಯುಲೋಕವು ಉಂಟಾಯಿತು. ಆಮೇಲೆ ಭೂಮಿ ಅಗ್ನಿ, ಸೂರ್ಯ, ಯಜ್ಞಸ್ವರೂಪನಾದ ವಿಷ್ಣು ದೇವೇಂದ್ರ ಇವರುಗಳು ಹುಟ್ಟಿದರು.

೧೩-೧೪. ಈ ದೇವತೆಗಳೆಲ್ಲರೂ ರುದ್ರನನ್ನು ವೇದದಲ್ಲಿ ಹೇಳಿರುವ ರುದ್ರಾಧ್ಯಾಯದಿಂದ ಸ್ತೋತ್ರಮಾಡಿದರು. ಆ ಸ್ವಾಮಿಯು ಅವರ ಸ್ತೋತ್ರದಿಂದ ಸಂತೋಷಗೊಂಡು ಲೀಲೆಗಾಗಿ ಆ ದೇವತೆಗಳ ಜ್ಞಾನವನ್ನು ಅಪಹರಿಸಿ ಅವರ ಮುಂದೆ ಸುಮ್ಮನೆ ನಿಂತನು. ಆಮೇಲೆ ದೇವತೆಗಳು ಅಜ್ಞಾನದಿಂದ ಕೂಡಿದವರಾಗಿ ನೀನಾರೆಂದು ಆ ದೇವನನ್ನು ಪ್ರಶ್ನೆಮಾಡಿದರು.

೧೫-೧೬. ಮಹಾಮಹಿಮನಾದ ರುದ್ರನು ಅವರನ್ನು ಕುರಿತು, ನಾನೊಬ್ಬನೇ ಅನಾದಿಯಿಂದಿರತಕ್ಕವನು. ಭೂತ ಭವಿಷ್ಯದ್ವರ್ತಮಾನವೆಂಬ ಮೂರು

ಭವಿಷ್ಯಾಮಿ ಚ ಮತ್ತೋಽನ್ಯೋ ವ್ಯತಿರಿಕ್ತೋ ನ ಕಶ್ಚನ ।
ಅಹಮೇವ ಜಗತ್ಸರ್ವಂ ತರ್ಪಯಾಮಿ ಸ್ವತೇಜಸಾ ॥ ೧೬ ॥

ಮತ್ತೋಽಧಿಕಃ ಸಮೋ ನಾಸ್ತಿ ಮಾಂ ಯೋ ವೇದ ಸ ಮುಚ್ಯತೇ ।
ಇತ್ಯುಕ್ತ್ವಾ ಭಗವಾನ್ರುದ್ರಸ್ತತ್ರೈವಾಂತರಧತ್ತ ಸಃ ॥ ೧೭ ॥

ಅಪಶ್ಯಂತಸ್ತಮೀಶಾನಂ ಸ್ತುವಂತಶ್ಚೈವ ಸಾಮಭಿಃ ।
ವ್ರತಂ ಪಾಶುಪತಂ ಕೃತ್ವಾ ತ್ವಥರ್ವಶಿರಸಿ ಸ್ಥಿತಂ ॥ ೧೮ ॥

ಭಸ್ಮಸಂಛನ್ನಸರ್ವಾಂಗಾ ಬಭೂವುರಮರಾಸ್ತದಾ ।
ಅಥ ತೇಷಾಂ ಪ್ರಸಾದಾರ್ಥಂ ಪಶೂನಾಂ ಪತಿರೀಶ್ವರಃ ॥ ೧೯ ॥

ಸಗಣಶ್ಚೋಮಯಾ ಸಾರ್ಧಂ ಸಾನ್ನಿಧ್ಯಮಕರೋತ್ಪ್ರಭುಃ ।
ಯಂ ವಿನಿದ್ರಾ ಜಿತಶ್ವಾಸಾ ಯೋಗಿನೋ ದಗ್ಧಕಿಲ್ಬಿಷಾಃ ॥ ೨೦ ॥

---

ಕಾಲಗಳಲ್ಲಿಯೂ, ನಾನಿರುವೆನು. ನನಗಿಂತ ಬೇರೆಯಾದವನೊಬ್ಬನೂ ಇರುವುದಿಲ್ಲ. ನಾನೊಬ್ಬನೇ ನನ್ನ ತೇಜಸ್ಸಿನಿಂದ ಪ್ರಪಂಚವನ್ನೆಲ್ಲ ತೃಪ್ತಿಪಡಿಸುತ್ತೇನೆ. ನನಗಿಂತ ಹೆಚ್ಚಿನವನಾಗಲಿ ನನಗೆ ಸಮಾನನಾಗಲಿ ಲೋಕದಲ್ಲಿ ಯಾರೂ ಇರುವುದಿಲ್ಲ. ನಿಜವಾದ ನನ್ನ ಸ್ವರೂಪವನ್ನು ತಿಳಿದವರು ಸಕಲ ದುಃಖಗಳಿಂದ ಬಿಡುಗಡೆಯನ್ನು ಹೊಂದುವರು ಎಂದನು.

೧೭-೧೮. ಹೀಗೆಂದು ಹೇಳಿ ಮಹಾಮಹಿಮನಾದ ಶಿವನು ಅಲ್ಲಿಯೇ ಅಂತರ್ಧಾನನಾದನು. ದೇವತೆಗಳು ಆ ದೇವನನ್ನು ಕಾಣದೆ ಸಾಮವೇದಗಳಿಂದ ಸ್ತೋತ್ರಮಾಡುತ್ತ ಅಥರ್ವಶಿರೋಪನಿಷತ್ತಿನಲ್ಲಿ ಹೇಳಿದಂತೆ ಪಾಶುಪತ ವ್ರತವನ್ನು ಮಾಡಿ ತಮ್ಮ ಸಮಸ್ತ ಅಂಗಗಳಿಗೂ, ಭಸ್ಮಧಾರಣೆಯನ್ನು ಮಾಡಿಕೊಂಡರು.

೧೯-೨೦. ಆಮೇಲೆ ಅವರಿಗೆ ಅನುಗ್ರಹಮಾಡುವುದಕ್ಕಾಗಿ ಪಶುಸ್ವರೂಪರಾದ ಸಮಸ್ತ ಜೀವರಿಗೂ ಸ್ವಾಮಿಯಾದ ಪರಮೇಶ್ವರನು, ತನ್ನ ಪರಿವಾರ ಗಣಗಳಿಂದಲೂ ಉಮಾದೇವಿಯಿಂದಲೂ ಸಹಿತನಾಗಿ ದೇವತೆಗಳಿಗೆ ಪ್ರತ್ಯಕ್ಷನಾದನು. ಪಾಪರಹಿತರಾದ ಯೋಗಿಗಳು, ನಿದ್ರೆಮುಂತಾದ ಆಲಸ್ಯಗಳನ್ನು ತೊರೆದು, ಜಿತೇಂದ್ರಿಯರಾಗಿ ಪ್ರಾಣವಾಯುವನ್ನು ನಿಯಮನಮಾಡಿ, ಸಮಾಧಿ

**ಹೃದಿ ಪಶ್ಯಂತಿ ತಂ ದೇವಂ ದದೃಶುರ್ದೇವಪುಂಗವಾಃ ।**
**ಯಾಮಾಹುಃ ಪರಮಾಂ ಶಕ್ತಿಮೀಶ್ವರೇಚ್ಛಾನುವರ್ತಿನೀಂ ॥ ೨೧ ॥**

**ತಾಮಪಶ್ಯನ್ಮಹೇಶಸ್ಯ ವಾಮತೋ ವಾಮಲೋಚನಾಂ ।**
**ಯೇ ವಿನಿರ್ಧೂತಸಂಸಾರಾಃ ಪ್ರಾಪ್ತಾಃ ಶೈವಂ ಪರಂ ಪದಂ ॥ ೨೨ ॥**

**ನಿತ್ಯಸಿದ್ಧಾಶ್ಚ ಯೇ ವಾನ್ಯಂ ತೇ ಚ ದೃಷ್ಟ್ವಾ ಗಣೇಶ್ವರಾಃ ।**
**ಅಥ ತಂ ತುಷ್ಟುವುರ್ದೇವಾ ದೇವ್ಯಾ ಸಹ ಮಹೇಶ್ವರಂ ॥ ೨೩ ॥**

**ಸ್ತೋತ್ರೈರ್ಮಾಹೇಶ್ವರೈರ್ದಿವ್ಯೈಃ ಶ್ರೌತೈಃ ಪೌರಾಣಿಕೈರಪಿ ।**
**ದೇವೋಽಪಿ ದೇವಾನಾಲೋಕ್ಯ ಘೃಣಯಾ ವೃಷಭಧ್ವಜಃ ॥ ೨೪ ॥**

**ತುಷ್ಟೋಽಸ್ಮೀತ್ಯಾಹ ಸುಪ್ರೀತಸ್ಸ್ವಭಾವಮಧುರಾಂ ಗಿರಂ ।**
**ಅಥ ಸುಪ್ರೀತಮನಸಂ ಪ್ರಣಿಪತ್ಯ ವೃಷಧ್ವಜಂ ।**
**ಅರ್ಥಂ ಮಹತ್ತಮಂ ದೇವಾಃ ಪಪ್ರಚ್ಛುರಿದಮಾದರಾತ್ ॥ ೨೫ ॥**

---

ಯಲ್ಲಿದ್ದು ತಮ್ಮ ಹೃದಯಾಕಾಶದಲ್ಲಿ ಯಾವ ದೇವನನ್ನು ಧ್ಯಾನಮಾಡುವರೋ ಅಂತಹ ದೇವನನ್ನು ದೇವತೆಗಳು ಆಗ ದರ್ಶನಮಾಡಿದರು.

೨೧-೨೩. ಈಶ್ವರೇಚ್ಛೆಯನ್ನನುಸರಿಸುವ ಪರಾಶಕ್ತಿಯೆಂದು ಯಾರನ್ನು ಕರೆವರೋ ಆ ದೇವಿಯನ್ನು ಶಿವನ ಎಡಭಾಗದಲ್ಲಿ ನೋಡಿದರು. ಯಾರು ಸಂಸಾರದುಃಖವನ್ನು ಕಳೆದುಕೊಂಡು ಶಿವನ ಪರಮಪದವಿಯನ್ನು ಪಡೆದು ನಿತ್ಯಸಿದ್ಧರೆನಿಸಿಕೊಂಡ ಗಣೇಶ್ವರರಾಗಿರುವರೋ ಅವರನ್ನೂ ಆ ಶಿವನ ಸಮೀಪ ದಲ್ಲಿ ಕಂಡರು. ಆಮೇಲೆ ದೇವತೆಗಳು ದೇವಿಯೊಡನೆ ಕೂಡಿದ ಮಹೇಶ್ವರ ನನ್ನು ವೇದಮಂತ್ರಗಳಿಂದಲೂ, ಪುರಾಣ ಶ್ಲೋಕರೂಪವಾದ ಸ್ತೋತ್ರ ಗಳಿಂದಲೂ ನಾನಾವಿಧವಾಗಿ ಸ್ತೋತ್ರಮಾಡಿದರು.

೨೪. ಆಗ ವೃಷಭಧ್ವಜನಾದ ಶಿವನು ಸುಪ್ರೀತನಾಗಿ ದೇವತೆಗಳನ್ನು ಕೃಪಾದೃಷ್ಟಿಯಿಂದ ನೋಡಿ, ಎಲೈ ದೇವತೆಗಳೇ, ನಿಮ್ಮ ಭಕ್ತಿಗೆ ನಾನು ಸಂತುಷ್ಟ ನಾದೆನು ಎಂದು ಮೃದುಮಧುರವಾಗಿ ನುಡಿದನು.

೨೫. ಆಮೇಲೆ ದೇವತೆಗಳು ಸಂತೋಷಗೊಂಡ ವೃಷಧ್ವಜನಾದ ಶಿವನಿಗೆ ಭಕ್ತಿಯಿಂದ ನಮಸ್ಕಾರಮಾಡಿ ಅರ್ಥಗರ್ಭಿತವಾದ ವಿಷಯಗಳನ್ನು ತಿಳಿದುಕೊಳ್ಳಬೇಕೆಂಬ ಇಚ್ಛೆಯಿಂದ ಪ್ರಶ್ನೆಮಾಡಿದರು.

॥ ದೇವಾ ಊಚುಃ ॥

ಭಗವನ್ಕೇನ ಮಾರ್ಗೇಣ ಪೂಜನೀಯೋಽಸಿ ಭೂತಲೇ ।
ಕಸ್ಯಾಧಿಕಾರಃ ಪೂಜಾಯಾಂ ವಕ್ತುಮರ್ಹಸಿ ತತ್ತ್ವತಃ ॥ ೨೬ ॥

ತತಃ ಸಸ್ಮಿತಮಾಲೋಕ್ಯ ದೇವೀಂ ದೇವವರೋ ಹರಃ ।
ಸ್ವರೂಪಂ ದರ್ಶಯಾಮಾಸ ಘೋರಂ ಸೂರ್ಯಾತ್ಮಕಂ ಪರಂ ॥ ೨೭ ॥

ಸರ್ವೈಶ್ವರ್ಯಗುಣೋಪೇತಂ ಸರ್ವತೇಜೋಮಯಂ ಪರಂ ।
ಶಕ್ತಿಭಿರ್ಮೂರ್ತಿಭಿಶ್ಚಾಂಗೈರ್ಗ್ರಹೈರ್ದೇವೈಶ್ಚ ಸಂವೃತಂ ॥ ೨೮ ॥

ಅಷ್ಟಬಾಹುಂ ಚತುರ್ವಕ್ತ್ರಮರ್ಧನಾರೀಕಮದ್ಭುತಂ ।
ದೃಷ್ಟ್ವೈವಮದ್ಭುತಾಕಾರಂ ದೇವಾ ವಿಷ್ಣುಪುರೋಗಮಾಃ ॥ ೨೯ ॥

---

೨೬. ಮಹಾಮಹಿಮನಾದ ಓ ಸ್ವಾಮಿಯೇ, ಭೂಮಿಯಲ್ಲಿ ಜನರು ನಿನ್ನನ್ನು ಯಾವರೀತಿಯಿಂದ ಪೂಜಿಸಬೇಕು ? ಪೂಜೆಮಾಡುವುದಕ್ಕೆ ಎಂತಹ ಮನುಷ್ಯನಿಗೆ ಅಧಿಕಾರವಿರುವುದು ? ಅದನ್ನು ನಮಗೆ ಹೇಳಬೇಕು ಎಂದರು.

೨೭. ಆಮೇಲೆ ದೇವಶ್ರೇಷ್ಠನಾದ ಶಿವನು ಮಂದಹಾಸದಿಂದ ದೇವಿಯನ್ನು ನೋಡಿ ಮಹಾಭಯಂಕರವಾದ ಸೂರ್ಯರೂಪದಿಂದಿರುವ ತನ್ನ ಶ್ರೇಷ್ಠವಾದ ಸ್ವರೂಪವನ್ನು ತೋರಿಸಿದನು.

೨೮. ಆ ಸ್ವರೂಪವು ಸಕಲವಿಧವಾದ ಈಶ್ವರಸಂಬಂಧವಾದ ಗುಣಗಳಿಂದ ಕೂಡಿದುದಾಗಿಯೂ, ಸಕಲ ತೇಜಸ್ಸುಗಳಿಂದ ಪರಿಪೂರ್ಣವಾಗಿಯೂ, ಸಕಲವಿಧವಾದ ಮೂರ್ತಿಸ್ವರೂಪವಾದ ಶಕ್ತಿಗಳಿಂದಲೂ, ಅವಯವಗಳಿಂದಲೂ, ಗ್ರಹಗಳಿಂದಲೂ, ದೇವತೆಗಳಿಂದಲೂ ಕೂಡಿದುದಾಗಿಯೂ, ಇದ್ದಿತು. ಆ ಮೂರ್ತಿಗೆ ಎಂಟುತೋಳುಗಳು, ನಾಲ್ಕು ಮುಖಗಳು ಇದ್ದವು. ಅರ್ಧಶರೀರವು ಸ್ತ್ರೀರೂಪವಾಗಿಯೂ, ಉಳಿದರ್ಧವು ಪುರುಷರೂಪವಾಗಿಯೂ ಇದ್ದಿತು. ಇದನ್ನು ನೋಡಲು ಬಹು ಆಶ್ಚರ್ಯಕರವಾಗಿದ್ದಿತು.

೨೯–೩೧. ವಿಷ್ಣುವೇ ಮೊದಲಾದ ದೇವತೆಗಳು, ಈ ರೀತಿ ಅದ್ಭುತಾಕಾರದಿಂದ ಬೆಳಗುತ್ತಿರುವ ಸೂರ್ಯರೂಪನಾದ ದೇವನನ್ನೂ, ದೇವಿಯನ್ನೂ

ಬುದ್ಧ್ವಾ ದಿವಾಕರಂ ದೇವಂ ದೇವೀಂ ಚೈವ ನಿಶಾಕರಂ ।
ಪಂಚಭೂತಾನಿ ಶೇಷಾಣಿ ತನ್ಮಯಂ ಚ ಚರಾಚರಂ ॥ ೩೦ ॥

ಏವಮುಕ್ತ್ವಾ ನಮಶ್ಚಕ್ರುಸ್ತಸ್ಮೈ ಚಾರ್ಘ್ಯಂ ಪ್ರದಾಯ ವೈ ॥ ೩೧ ॥

ಸಿಂದೂರವರ್ಣಾಯ ಸುಮಂಡಲಾಯ
ಸುವರ್ಣವರ್ಣಾಭರಣಾಯ ತುಭ್ಯಂ ।
ಪದ್ಮಾಭನೇತ್ರಾಯ ಸಪಂಕಜಾಯ
ಬ್ರಹ್ಮೇಂದ್ರನಾರಾಯಣಕಾರಣಾಯ ॥ ೩೨ ॥

ಸುರತ್ನಪೂರ್ಣಂ ಸಸುವರ್ಣತೋಯಂ
ಸಕುಂಕುಮಾದ್ಯಂ ಸಕುಶಂ ಸಪುಷ್ಪಂ ।
ಪ್ರದತ್ತಮಾದಾಯ ಸಹೇಮಪಾತ್ರಂ
ಪ್ರಶಸ್ತಮರ್ಘ್ಯಂ ಭಗವನ್ಪ್ರಸೀದ ॥ ೩೩ ॥

ನಮಶ್ಶಿವಾಯ ಶಾಂತಾಯ ಸಗಣಾಯಾದಿಹೇತವೇ ।
ರುದ್ರಾಯ ವಿಷ್ಣವೇ ತುಭ್ಯಂ ಬ್ರಹ್ಮಣೇ ಸೂರ್ಯಮೂರ್ತಯೇ ॥ ೩೪ ॥

---

ಚಂದ್ರನನ್ನೂ, ಪಂಚಭೂತಗಳನ್ನೂ, ಅವುಗಳ ಸ್ವರೂಪವಾದ ಚರಾಚರ ಪ್ರಪಂಚವನ್ನೂ ಕಂಡು ಶ್ಲೋಕರೂಪವಾದ ಈ ಕೆಳಗಿನ ಮಂತ್ರಗಳನ್ನು ಹೇಳಿ ಅರ್ಘ್ಯವನ್ನು ಕೊಟ್ಟು ನಮಸ್ಕಾರಮಾಡಿದರು.

೩೨–೩೪. ಎಲೈ ಭಗವಂತನೇ, ಸಿಂದೂರವರ್ಣದ ದೇಹಕಾಂತಿಯಿಂದ ಬೆಳಗುತ್ತಾ ಚಿನ್ನದ ಆಭರಣಗಳನ್ನು ಧರಿಸಿ, ಕಮಲದಂತಿರುವ ಕಣ್ಣುಗಳಿಂದ ಒಪ್ಪುತ್ತಾ ಬ್ರಹ್ಮ, ದೇವೇಂದ್ರ ನಾರಾಯಣ ಈ ದೇವತೆಗಳಿಗೆ ಕಾರಣನಾಗಿ ಕಮಲವನ್ನು ಕೈಯಲ್ಲಿ ಹಿಡಿದಿರುವ ನಿನಗೆ ಈ ಅರ್ಘ್ಯವು. ರತ್ನಗಳು, ಚಿನ್ನ, ಕುಂಕುಮಕೇಸರಿ, ದರ್ಭೆ, ಹೂ, ಇವುಗಳಿಂದ ಕೂಡಿದ ಪ್ರಶಸ್ತವಾದ ನೀರನ್ನು ಚಿನ್ನದ ಪಾತ್ರೆಯಲ್ಲಿ ತುಂಬಿ ಅರ್ಘ್ಯವನ್ನು ಕೊಡುವೆನು. ಮಹಾಮಹಿಮನಾದ ಓ ಸ್ವಾಮಿಯೇ, ನೀನು ಪ್ರಸನ್ನನಾಗಬೇಕು. ಮಂಗಳಸ್ವರೂಪನೂ, ಶಾಂತನೂ ಸಮಸ್ತಪರಿವಾರಗಣಗಳಿಂದ ಕೂಡಿದವನೂ, ಪ್ರಥಮಸೃಷ್ಟಿಗೆ ಕಾರಣನೂ

**ಯಃ ಶಿವಂ ಮಂಡಲೇ ಸೌರೇ ಸಂಪೂಜ್ಯೈವ ಸಮಾಹಿತಃ ।**
**ಪ್ರಾತರ್ಮಧ್ಯಾಹ್ನಸಾಯಾಹ್ನೇ ಪ್ರದದ್ಯಾದರ್ಘ್ಯಮುತ್ತಮಂ ॥ ೩೫ ॥**

**ಪ್ರಣಮೇದ್ವಾ ಪಠೇದೇತಾಞ್ಶ್ಲೋಕಾಞ್ಶ್ರುತಿಮುಖಾನಿಮಾನ್ ।**
**ನ ತಸ್ಯ ದುರ್ಲಭಂ ಕಿಂಚಿದ್ಭಕ್ತಶ್ಚೇನ್ಮುಚ್ಯತೇ ಧ್ರುವಂ ॥ ೩೬ ॥**

**ತಸ್ಮಾದಭ್ಯರ್ಚಯೇನ್ನಿತ್ಯಂ ಶಿವಮಾದಿತ್ಯರೂಪಿಣಂ ।**
**ಧರ್ಮಕಾಮಾರ್ಥಮುಕ್ತ್ಯರ್ಥಂ ಮನಸಾ ಕರ್ಮಣಾ ಗಿರಾ ॥ ೩೭ ॥**

**ಅಥ ದೇವಾನ್ಸಮಾಲೋಕ್ಯ ಮಂಡಲಸ್ಥೋ ಮಹೇಶ್ವರಃ ।**
**ಸರ್ವಾಗಮೋತ್ತರಂ ದತ್ವಾ ಶಾಸ್ತ್ರಮಂತರಧಾದ್ಧರಃ ॥ ೩೮ ॥**

---

ತ್ರಿಮೂರ್ತಿಸ್ವರೂಪನೂ ಆದ ಸೂರ್ಯಾಕಾರದ ನಿನಗೆ ನಮಸ್ಕಾರವು ಎಂಬ ಈ ಮೂರು ಮಂತ್ರಗಳಿಂದ ಅರ್ಘ್ಯವನ್ನು ಕೊಡಬೇಕು.

೩೫–೩೬. ಭಕ್ತನಾದ ಮನುಜನು ಸೂರ್ಯಮಂಡಲದಲ್ಲಿರುವ ಶಿವನನ್ನು ಧ್ಯಾನಮಾಡುತ್ತ ಪೂಜಿಸಿ ಮೂರು ಕಾಲಗಳಲ್ಲಿಯೂ, ಅರ್ಘ್ಯವನ್ನು ಕೊಡಬೇಕು. ವೇದೋಕ್ತವಾದ ಈ ಮೂರು ಶ್ಲೋಕಗಳನ್ನೂ ಹೇಳಿ ನಮಸ್ಕಾರವನ್ನಾದರೂ ಮಾಡಬೇಕು. ಹೀಗೆ ಮಾಡಿದವರಿಗೆ ಎಲ್ಲ ಇಷ್ಟಾರ್ಥಗಳೂ ದೊರೆಯುವುವು. ಇದರ ಜತೆಗೆ ಭಕ್ತಿಯೂ ಸೇರಿದರೆ ಖಂಡಿತವಾಗಿಯೂ ಮೋಕ್ಷವುಂಟಾಗುವುದು.

೩೭. ಆದುದರಿಂದ ಜನರು ಸೂರ್ಯರೂಪನಾದ ಶಿವನನ್ನು ಚತುರ್ವಿಧ ಪುರುಷಾರ್ಥಸಿದ್ಧಿಗೋಸ್ಕರವಾಗಿ ಪ್ರತಿದಿನವೂ, ಮನೋವಾಕ್ಕಾಯಕರ್ಮಗಳಿಂದ ಪೂಜಿಸಬೇಕು.

೩೮. ಆಮೇಲೆ ಸೂರ್ಯಮಂಡಲದಲ್ಲಿದ್ದ ಮಹೇಶ್ವರನು ದೇವತೆಗಳನ್ನು ನೋಡಿ ಶ್ರೇಷ್ಠವಾದ ಆಗಮಶಾಸ್ತ್ರವನ್ನು ಅವರಿಗೆ ಉಪದೇಶಿಸಿ ಅಲ್ಲಿಯೇ ಅಂತರ್ಧಾನನಾದನು.

ತತ್ರ ಪೂಜಾಧಿಕಾರೋsಯಂ ಬ್ರಹ್ಮಕ್ಷತ್ರವಿಶಾಮಿತಿ ।
ಜ್ಞಾತ್ವಾ ಪ್ರಣಮ್ಯ ದೇವೇಶಂ ದೇವಾ ಜಗ್ಮುರ್ಯಥಾಗತಂ ॥ ೩೯ ॥

ಅಥ ಕಾಲೇನ ಮಹತಾ ತಸ್ಮಿಞ್ಛಾಸ್ತ್ರೇ ತಿರೋಹಿತೇ ।
ಭರ್ತಾರಂ ಪರಿಪಪ್ರಚ್ಛ ತದಂಕಸ್ಥಾ ಮಹೇಶ್ವರೀ ॥ ೪೦ ॥

ತಯಾ ಸಂಚೋದಿತೋ ದೇವೋ ದೇವ್ಯಾ ಚಂದ್ರವಿಭೂಷಣಃ ।
ಅವದತ್ಕರಮುದ್ಧೃತ್ಯ ಶಾಸ್ತ್ರಂ ಸರ್ವಾಗಮೋತ್ತರಂ ॥ ೪೧ ॥

ಪ್ರವರ್ತಿತಂ ಚ ತಲ್ಲೋಕೇ ನಿಯೋಗಾತ್ಪರಮೇಷ್ಠಿನಃ ।
ಮಯಾಗಸ್ತ್ಯೇನ ಗುರುಣಾ ದಧೀಚೇನ ಮಹರ್ಷಿಣಾ ॥ ೪೨ ॥

ಸ್ವಯಮುಷ್ಯವತೀರ್ಯೋರ್ವ್ಯಾಂ ಯುಗಾವರ್ತೇಷು ಶೂಲಧೃಕ್ ।
ಸ್ವಾಶ್ರಿತಾನಾಂ ವಿಮುಕ್ತ್ಯರ್ಥಂ ಕುರುತೇ ಜ್ಞಾನಸಂತತಿಂ ॥ ೪೩ ॥

---

೩೯. ಆ ಆಗಮಶಾಸ್ತ್ರದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯವರ್ಣದವರಿಗೆ ಶಿವಪೂಜಾಧಿಕಾರವಿರುವುದೆಂದು ತಿಳಿದು ದೇವತೆಗಳು ಆ ದೇವನಿಗೆ ನಮಸ್ಕಾರ ಮಾಡಿ ತಮ್ಮ ಸ್ಥಳಗಳಿಗೆ ಹೊರಟುಹೋದರು.

೪೦. ಬಹಳಕಾಲವು ಕಳೆದನಂತರ ಆ ಶಾಸ್ತ್ರವು ನಷ್ಟವಾಗಿಹೋಯಿತು. ಇದನ್ನು ತಿಳಿದು ಶಿವನ ತೊಡೆಯಲ್ಲಿ ಕುಳಿತಿದ್ದ ದೇವಿಯು ಶಿವನನ್ನು ಪ್ರಶ್ನೆ ಮಾಡಿದಳು.

೪೧-೪೨. ದೇವಿಯ ಪ್ರೇರಣೆಯಿಂದ ಚಂದ್ರಶೇಖರನಾದ ಶಿವನು ಇದು ಶ್ರೇಷ್ಠವಾದುದೆಂದು ಸೂಚಿಸುವುದಕ್ಕಾಗಿ ತನ್ನ ಕೈಯ್ಯನ್ನು ಮೇಲಕ್ಕೆ ಎತ್ತಿ ಆಗಮಶಾಸ್ತ್ರವನ್ನು ತಾನೇ ಹೇಳಿದನು. ಬಳಿಕ ಆ ಶಾಸ್ತ್ರವು ಬ್ರಹ್ಮನ ಅಪ್ಪಣೆ ಯಿಂದ ನನ್ನಿಂದಲೂ, ನನ್ನ ಗುರುವಾದ ಅಗಸ್ತ್ಯರಿಂದಲೂ, ದಧೀಚಮುನಿ ಯಿಂದಲೂ ಲೋಕದಲ್ಲಿ ಹರಡಿತು.

೪೩. ಪ್ರತಿಯೊಂದು ಯುಗದಲ್ಲಿಯೂ ಶಿವನು ತಾನೇ ಅವತಾರಮಾಡಿ ಅಥವಾ ಸಮಯೋಚಿತವಾದ ರೂಪದಿಂದ ಪ್ರಕಟವಾಗಿ, ತನ್ನ ಭಕ್ತರಿಗೆ ಮೋಕ್ಷ ವನ್ನುಂಟುಮಾಡುವುದಕ್ಕಾಗಿ ಅವರಿಗೆ ಜ್ಞಾನಬೋಧೆಯನ್ನು ಮಾಡುವನು.

ಋಭುಸ್ಸತ್ಯೋ ಭಾರ್ಗವಶ್ಚ ಹ್ಯಂಗಿರಾಃ ಸವಿತಾ ದ್ವಿಜಾಃ ।
ಮೃತ್ಯುಃ ಶತಕ್ರತುರ್ಧೀಮಾನ್ವಸಿಷ್ಠೋ ಮುನಿಪುಂಗವಃ ॥ ೪೪ ॥

ಸಾರಸ್ವತಸ್ತ್ರಿಧಾಮಾ ಚ ತ್ರಿವೃತೋ ಮುನಿಪುಂಗವಃ ।
ಶತತೇಜಾಸ್ಸ್ವಯಂ ಧರ್ಮೋ ನಾರಾಯಣ ಇತಿ ಶ್ರುತಃ ॥ ೪೫ ॥

ಸ್ವರಕ್ಷಶ್ಚಾರುಣಿರ್ಧೀಮಾಂಸ್ತಥಾ ಚೈವ ಕೃತಂಜಯಃ ।
ಕೃತಂಜಯೋ ಭರದ್ವಾಜೋ ಗೌತಮಃ ಕವಿರುತ್ತಮಃ ॥ ೪೬ ॥

ವಾಚಃಸ್ರವಾ ಮುನಿಸ್ಸಾಕ್ಷಾತ್ತಥಾ ಸೂಕ್ಷ್ಮಾಯಣಿಃ ಶುಚಿಃ ।
ತೃಣಬಿಂದುರ್ಮುನಿಃ ಕೃಷ್ಣಃ ಶಕ್ತಿಃ ಶಾಕ್ತೇಯ ಉತ್ತರಃ ॥ ೪೭ ॥

ಜಾತೂಕರ್ಣ್ಯೋ ಹರಿಸ್ಸಾಕ್ಷಾತ್ಕೃಷ್ಣದ್ವೈಪಾಯನೋ ಮುನಿಃ ।
ವ್ಯಾಸಾವತಾರಾಞ್ಛೃಣ್ವಂತು ಕಲ್ಪಯೋಗೇಶ್ವರಾನ್ಕ್ರಮಾತ್ ॥ ೪೮ ॥

ಲೈಂಗೇ ವ್ಯಾಸಾವತಾರಾ ಹಿ ದ್ವಾಪರಾಂತೇಷು ಸುವ್ರತಾಃ ।
ಯೋಗಾಚಾರ್ಯಾವತಾರಾಶ್ಚ ತಥಾ ಶಿಷ್ಯೇಷು ಶೂಲಿನಃ ॥ ೪೯ ॥

---

೪೪-೪೭. ಋಭು, ಸತ್ಯ, ಭಾರ್ಗವ, ಅಂಗಿರಸ್ಸು, ಸೂರ್ಯ, ಬ್ರಾಹ್ಮಣರು ಮೃತ್ಯುದೇವತೆ, ದೇವೇಂದ್ರ, ವಸಿಷ್ಠ, ಸಾರಸ್ವತ, ತ್ರಿಧಾಮ, ತ್ರಿವೃತ್, ಶತತೇಜ, ಧರ್ಮ, ನಾರಾಯಣಮುನಿ, ಆರುಣಿ, ಕೃತಂಜಯ, ಭರದ್ವಾಜ, ಗೌತಮ, ಶುಕ್ರ, ವಾಚಸ್ರವ, ಸೂಕ್ಷ್ಮಾಯಣಿ, ತೃಣಬಿಂದು, ಕೃಷ್ಣ, ಶಕ್ತಿ, ಪರಾಶರ, ಜಾತೂಕರ್ಣ್ಯ, ಕೃಷ್ಣದ್ವೈಪಾಯನ, ವ್ಯಾಸ ಈ ಮುನಿಗಳಿಂದ ಪರಂಪರೆಯಾಗಿ ಆಗಮ ಶಾಸ್ತ್ರವು ಲೋಕದಲ್ಲಿ ವಿಸ್ತರಿಸಿತು.

೪೮-೫೦. ಲಿಂಗಪುರಾಣದಲ್ಲಿ ವ್ಯಾಸಾವತಾರಗಳನ್ನೂ, ಪ್ರತಿಕಲ್ಪದಲ್ಲಿಯೂ, ಯೋಗೇಶ್ವರಾವತಾರವನ್ನೂ, ಪ್ರತಿದ್ವಾಪರಯುಗದ ಕೊನೆಯಲ್ಲಿ ಯೋಗಾಚಾರ್ಯಾವತಾರವನ್ನೂ, ಆ ಪ್ರತಿಯೊಂದು ಅವತಾರದಲ್ಲಿಯೂ, ಶಿವನಿಗೆ ನಾಲ್ಕುಜನ ಶಿಷ್ಯರುಗಳನ್ನೂ, ಆ ಶಿಷ್ಯರಿಗೆ ನೂರಾರು ಶಿಷ್ಯರನ್ನೂ

**ತತ್ರ ತತ್ರ ವಿಭೋಶ್ಶಿಷ್ಯಾಶ್ಚತ್ವಾರಃ ಸ್ಯುರ್ಮಹೌಜಸಃ ।**
**ಶಿಷ್ಯಾಸ್ತೇಷಾಂ ಪ್ರಶಿಷ್ಯಾಶ್ಚ ಶತಶೋಽಥ ಸಹಸ್ರಶಃ ॥ ೫೦ ॥**

**ತೇಷಾಂ ಸಂಭಾವನಾಲ್ಲೋಕೇ ಶೈವಾಜ್ಞಾಕರಣಾದಿಭಿಃ ।**
**ಭಾಗ್ಯವಂತೋ ವಿಮುಚ್ಯಂತೇ ಭಕ್ತ್ಯಾ ಚಾತ್ಯಂತಭಾವಿತಾಃ ॥ ೫೧ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯಸಂಹಿತಾಯಾ-ಮುತ್ತರಭಾಗೇ ಶಿವತತ್ತ್ವಜ್ಞಾನೇ ವ್ಯಾಸಾವತಾರವರ್ಣನಂ ನಾಮ ಅಷ್ಟಮೋಽಧ್ಯಾಯಃ**

---

ವಿಸ್ತಾರವಾಗಿ ಹೇಳಿರುವುದು. ಈ ವಿಷಯವು ಇದೇ ಪುರಾಣದ ಶತರುದ್ರ ಸಂಹಿತೆಯ ನಾಲ್ಕು ಮತ್ತು ಐದನೆಯ ಅಧ್ಯಾಯಗಳಲ್ಲಿ ವಿಸ್ತಾರವಾಗಿ ನಿರೂಪಿಸಲ್ಪಟ್ಟಿರುವುದು.

೫೧. ಲೋಕದಲ್ಲಿ ಆ ಮಹರ್ಷಿಗಳನ್ನು ಗೌರವಿಸುವುದರಿಂದಲೂ, ಶಿವಾಜ್ಞೆಯನ್ನು ನಡೆಸುವುದರಿಂದಲೂ, ಅತ್ಯಂತ ಭಕ್ತಿಯನ್ನು ಪ್ರದರ್ಶಿಸುವುದರಿಂದಲೂ ಜನರು ಪುಣ್ಯವಂತರುಗಳಾಗಿ ಮೋಕ್ಷವನ್ನು ಹೊಂದುವರು.

ಇಲ್ಲಿಗೆ ಶ್ರೀಶಿವಮಹಾಪುರಾಣದಲ್ಲಿ ಏಳನೆಯ ವಾಯುವೀಯಸಂಹಿತೆಯ
ಉತ್ತರಭಾಗದಲ್ಲಿ ಶಿವತತ್ತ್ವಜ್ಞಾನನಿರೂಪಣೆಯ ಸಂದರ್ಭದಲ್ಲಿ
ವ್ಯಾಸಾವತಾರವರ್ಣನವೆಂಬ ಎಂಟನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವ ಮಹಾ ಪುರಾಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ನವಮೋಽಧ್ಯಾಯಃ

|| ಕೃಷ್ಣ ಉವಾಚ ||

**ಯುಗಾವರ್ತೇಷು ಸರ್ವೇಷು ಯೋಗಾಚಾರ್ಯಚ್ಛಲೇನ ತು ।**
**ಅವತಾರಾನ್ಹಿ ಶರ್ವಸ್ಯ ಶಿಷ್ಯಾಂಶ್ಚ ಭಗವನ್ವದ || ೧ ||**

|| ಉಪಮನ್ಯುರುವಾಚ ||

**ಶ್ವೇತಃ ಸುತಾರೋ ಮದನಃ ಸುಹೋತ್ರಃ ಕಂಕ ಏವ ಚ ।**
**ಲೌಗಾಕ್ಷಿಶ್ಚ ಮಹಾಮಾಯೋ ಜೈಗೀಷವ್ಯಸ್ತಥೈವ ಚ || ೨ ||**

---

### ಒಂಭತ್ತನೆಯ ಅಧ್ಯಾಯವು.

೧. ಕೃಷ್ಣನು ಕೇಳುವನು-ಎಲೈ ಮಹಾಮಹಿಮನಾದ ಉಪಮನ್ಯುವೇ, ಪ್ರತಿಯೊಂದು ಚತುರ್ಯುಗದಲ್ಲಿಯೂ, ಯೋಗಾಚಾರ್ಯನೆಂಬ ನೆಪದಿಂದಮಾಡಿದ ಶಿವನ ಅವತಾರಗಳನ್ನೂ ಅವನ ಶಿಷ್ಯರುಗಳನ್ನೂ ಕೇಳಬಯಸುವೆನು, ಅದನ್ನು ದಯವಿಟ್ಟು ಹೇಳಬೇಕೆನಲು,

೨-೬. ಉಪಮನ್ಯುವು ಹೇಳುವನು—ಈ ವರಾಹಕಲ್ಪದ ಏಳನೆಯದಾದ ವೈವಸ್ವತಮನ್ವಂತರದಲ್ಲಿ ಪ್ರತಿಯೊಂದು ಚತುರ್ಯುಗದ ದ್ವಾಪರ

ದಧಿವಾಹಶ್ಚ ಋಷಭೋ ಮುನಿರುಗ್ರೋಽತ್ರಿರೇವ ಚ ।
ಸುಪಾಲಕೋ ಗೌತಮಶ್ಚ ತಥಾ ದೇವಶಿರಾ ಮುನಿಃ ॥ ೩ ॥

ಗೋಕರ್ಣಶ್ಚ ಮಹಾವಾಸೀ ಶಿಖಂಡೀ ಚಾಪರಃ ಸ್ಮೃತಃ ।
ಜಟಾಮಾಲೀ ಚಾಟ್ಟಹಾಸೋ ದಾರುಕೋ ಲಾಂಗುಲೀ ತಥಾ ॥ ೪ ॥

ಮಹಾಕಾಲಶ್ಚ ಶೂಲೀ ಚ ದಂಡೀ ಮುಂಡೀಶ ಏವ ಚ ।
ಸವಿಷ್ಣುಸ್ಸೋಮಶರ್ಮಾ ಚ ಲಕುಲೀಶ್ವರಏವ ಚ ॥ ೫ ॥

ಏತೇ ವಾರಾಹಕಲ್ಪೇಽಸ್ಮಿನ್ ಸಪ್ತಮಸ್ಯಾಂತರೇ ಮನೋಃ ।
ಅಷ್ಟಾವಿಂಶತಿಸಂಖ್ಯಾತಾ ಯೋಗಾಚಾರ್ಯಾ ಯುಗಕ್ರಮಾತ್ ॥ ೬ ॥

ಶಿಷ್ಯಾಃ ಪ್ರತ್ಯೇಕಮೇತೇಷಾಂ ಚತ್ವಾರಃ ಶಾಂತಚೇತಸಃ ।
ಶ್ವೇತಾದಯಶ್ಚ ರುಷ್ಯಾಂತಾಂಸ್ತಾನ್ಬ್ರವೀಮಿ ಯಥಾಕ್ರಮಂ ॥ ೭ ॥

---

ಯುಗಾಂತದಲ್ಲಿ, ಶಿವನು ಯೋಗಾಚಾರ್ಯನ ಅವತಾರವನ್ನು ಮಾಡಿರುವನು.† ಈಗ ನಡೆಯುತ್ತಿರುವುದು ಇಪ್ಪತ್ತೆಂಟನೆಯ ಚತುರ್ಯುಗವಾದುದರಿಂದ ಕ್ರಮವಾಗಿ ಯೋಗಾಚಾರ್ಯಾವತಾರದ ಇಪ್ಪತ್ತೆಂಟು ಹೆಸರುಗಳನ್ನು ಇಲ್ಲಿ ಹೇಳಿದೆ. ಅವಾವುವೆಂದರೆ—ಶ್ವೇತ, ಸುತಾರ, ಮದನ, ಸುಹೋತ್ರ, ಕಂಕ, ಲೋಗಾಕ್ಷಿ, ಜೈಗೀಷವ್ಯ, ದಧಿವಾಹ, ಋಷಭ, ಉಗ್ರ, ಅತ್ರಿ, ಸುಪಾಲಕ, ಗೌತಮ, ವೇದಶಿರ, ಗೋಕರ್ಣ, ಶಿಖಂಡಿ, ಜಟಾಮಾಲಿ, ಅಟ್ಟಹಾಸ, ದಾರುಕ, ಲಾಂಗುಲಿ, ಮಹಾಕಾಲ, ಶೂಲಿ, ದಂಡಿ, ಮುಂಡಿ, ಈಶ, ವಿಷ್ಣು, ಸೋಮಶರ್ಮ, ಲಕುಲೀಶ್ವರ.

೭. ಈ ಇಪ್ಪತ್ತೆಂಟು ಜನ ಯೋಗಾಚಾರ್ಯರಿಗೂ, ಪ್ರತಿಯೊಬ್ಬರಿಗೂ, ನಾಲ್ವರು ಮುಖ್ಯ ಶಿಷ್ಯರಿರುವರು. ಅವರುಗಳ ಹೆಸರುಗಳನ್ನು ಹೇಳುವೆನು ಕೇಳು.

ಶ್ವೇತಶ್ಶ್ವೇತಶಿಖಶ್ಚೈವ ಶ್ವೇತಾಶ್ವಃ ಶ್ವೇತಲೋಹಿತಃ ।
ದುಂದುಭಿಃ ಶತರೂಪಶ್ಚ ಋಚೀಕಃ ಕೇತುಮಾಂಸ್ತಥಾ ॥ ೮ ॥

ವಿಕೋಶಶ್ಚ ವಿಕೇಶಶ್ಚ ವಿಪಾಶಃ ಪಾಶನಾಶನಃ ।
ಸುಮುಖೋ ದುರ್ಮುಖಶ್ಚೈವ ದುರ್ಗಮೋ ದುರತಿಕ್ರಮಃ ॥ ೯ ॥

ಸನತ್ಕುಮಾರಃ ಸನಕಃ ಸನಂದಶ್ಚ ಸನಾತನಃ ।
ಸುಧಾಮಾ ವಿರಜಾಶ್ಚೈವ ಶಂಖಶ್ಚಾಂಡಜ ಏವ ಚ ॥ ೧೦ ॥

ಸಾರಸ್ವತಶ್ಚ ಮೇಘಶ್ಚ ಮೇಘವಾಹಸ್ಸುವಾಹಕಃ ।
ಕಪಿಲಶ್ಚಾಸುರಿಃ ಪಂಚಶಿಖೋ ಬಾಷ್ಕಲ ಏವ ಚ ॥ ೧೧ ॥

ಪರಾಶರಶ್ಚ ಗರ್ಗಶ್ಚ ಭಾರ್ಗವಶ್ಚಾಂಗಿರಾಸ್ತಥಾ ।
ಬಲಬಂಧುರ್ನಿರಾಮಿತ್ರಃ ಕೇತುಶೃಂಗಸ್ತಪೋಧನಃ ॥ ೧೨ ॥

ಲಂಬೋದರಶ್ಚ ಲಂಬಶ್ಚ ಲಂಬಾತ್ಮಾ ಲಂಬಕೇಶಕಃ ।
ಸರ್ವಜ್ಞಸ್ಸಮಬುದ್ಧಿಶ್ಚ ಸಾಧ್ಯಸಿದ್ಧಿಸ್ತಥೈವ ಚ ॥ ೧೩ ॥

ಸುಧಾಮಾ ಕಶ್ಯಪಶ್ಚೈವ ವಸಿಷ್ಠೋ ವಿರಜಾಸ್ತಥಾ ।
ಅತ್ರಿರುಗ್ರೋ ಗುರುಶ್ರೇಷ್ಠಃ ಶ್ರವಣೋऽಥ ಶ್ರವಿಷ್ಟಕಃ ॥ ೧೪ ॥

---

೮–೨೨. ೧ ಶ್ವೇತ, ಶ್ವೇತಶಿಖ, ಶ್ವೇತಾಶ್ವ, ಶ್ವೇತಲೋಹಿತ; ೨ ದುಂದುಭಿ, ಶತರೂಪ, ಋಚೀಕ, ಕೇತುಮಂತ; ೩ ವಿಕೋಶ, ವಿಕೇಶ, ವಿಪಾಶ, ಪಾಶನಾಶನ; ೪ ಸುಮುಖ, ದುರ್ಮುಖ, ದುರ್ಗಮ, ದುರತಿಕ್ರಮ; ೫ ಸನತ್ಕುಮಾರ, ಸನಕ, ಸನಂದ, ಸನಾತನ; ೬ ಸುಧಾಮ, ವಿರಜ, ಶಂಖ, ಅಂಡಜ; ೭ ಸಾರಸ್ವತ, ಮೇಘ, ಮೇಘವಾಹ, ಸುವಾಹಕ; ೮ ಕಪಿಲ, ಆಸುರಿ, ಪಂಚಶಿಖ, ಬಾಷ್ಕಲ; ೯ ಪರಾಶರ, ಗರ್ಗ, ಭಾರ್ಗವ, ಅಂಗಿರ; ೧೦ ಬಲಬಂಧು, ನಿರಾಮಿತ್ರ, ಕೇತುಶೃಂಗ, ತಪೋಧನ; ೧೧ ಲಂಬೋದರ, ಲಂಬ, ಲಂಬಾತ್ಮಾ, ಲಂಬಿಕೇಶ; ೧೨ ಸರ್ವಜ್ಞ, ಸಮಬುದ್ಧಿ, ಸಾಧ್ಯ, ಸಿದ್ಧಿ; ೧೩ ಸುಧಾಮ, ಕಶ್ಯಪ, ವಸಿಷ್ಠ, ವಿರಜ; ೧೪ ಅತ್ರಿ, ಉಗ್ರ, ಶ್ರವಣ, ಶ್ರವಿಷ್ಠ; ೧೫ ಕುಣಿ, ಕುಣಿಬಾಹು, ಕುಶರೀರ, ಕುನೇತ್ರ; ೧೬ ಕಾಶ್ಯಪ, ಉಶನ, ಚ್ಯವನ, ಬೃಹಸ್ಪತಿ; ೧೭ ಉತಥ್ಯ, ವಾಮದೇವ,

ಕುಣಿಶ್ಚ ಕುಣಿಬಾಹುಶ್ಚ ಕುಶರೀರಃ ಕುನೇತ್ರಕಃ ।
ಕಾಶ್ಯಪೋ ಹ್ಯುಶನಾಶ್ಚೈವ ಚ್ಯವನಶ್ಚ ಬೃಹಸ್ಪತಿಃ ॥ ೧೫ ॥

ಉತಥ್ಯೋ ವಾಮದೇವಶ್ಚ ಮಹಾಕಾಲೋ ಮಹಾನಿಲಃ ।
ವಾಚಃಶ್ರವಾಃ ಸುವೀರಶ್ಚ ಶ್ಯಾವಕಶ್ಚ ಯತೀಶ್ವರಃ ॥ ೧೬ ॥

ಹಿರಣ್ಯನಾಭಃ ಕೌಶಲ್ಯೋ ಲೋಕಾಕ್ಷಿಃ ಕುಥುಮಿಸ್ತಥಾ ।
ಸುಮಂತುರ್ಜೈಮಿನಿಶ್ಚೈವ ಕುಬಂಧಃ ಕುಶಕಂಧರಃ ॥ ೧೭ ॥

ಪ್ಲಕ್ಷೋ ದಾರ್ಭಾಯಣಿಶ್ಚೈವ ಕೇತುಮಾನ್ಗೌತಮಸ್ತಥಾ ।
ಭಲ್ಲವೀ ಮಧುಪಿಂಗಶ್ಚ ಶ್ವೇತಕೇತುಸ್ತಥೈವ ಚ ॥ ೧೮ ॥

ಉಶಿಜೋ ಬೃಹದಶ್ವಶ್ಚ ದೇವಲಃ ಕವಿರೇವ ಚ ।
ಶಾಲಿಹೋತ್ರಃ ಸುವೇಷಶ್ಚ ಯುವನಾಶ್ವಃ ಶರದ್ವಸುಃ ॥ ೧೯ ॥

ಛಗಲಃ ಕುಂಡಕರ್ಣಶ್ಚ ಕುಂಭಾಂಡಶ್ಚ ಪ್ರವಾಹಕಃ ।
ಉಲೂಕೋ ವಿದ್ಯುತಶ್ಚೈವ ಶಂಬೂಕೋ ಹ್ಯಾಶ್ವಲಾಯನಃ ॥ ೨೦ ॥

ಅಕ್ಷಪಾದಃ ಕಣಾದಶ್ಚ ಉಲೂಕೋ ವತ್ಸ ಏವ ಚ ।
ಕುಲಿಕಶ್ಚೈವ ಗರ್ಗಶ್ಚ ಮಿತ್ರಕೋ ರುಷ್ಯ ಏವ ಚ ॥ ೨೧ ॥

ಏತೇ ಶಿಷ್ಯಾ ಮಹೇಶಸ್ಯ ಯೋಗಾಚಾರ್ಯಸ್ವರೂಪಿಣಃ ।
ಸಂಖ್ಯಾ ಚ ಶತಮೇತೇಷಾಂ ಸಹ ದ್ವಾದಶಸಂಖ್ಯಯಾ ॥ ೨೨ ॥

---

ಮಹಾಕಾಲ, ಮಹಾನಿಲ; ೧೮ ವಾಚಶ್ರವ, ಸುವೀರ, ಶ್ಯಾವಕ, ಯತೀಶ್ವರ; ೧೯ ಹಿರಣ್ಯನಾಭ, ಕೌಶಲ್ಯ, ಲೋಕಾಕ್ಷಿ, ಕುಥುಮಿ; ೨೦ ಸುಮಂತು, ಜೈಮಿನಿ, ಕುಬಂಧ, ಕುಶಕಂಧರ; ೨೧ ಪ್ಲಕ್ಷ, ದಾರ್ಭಾಯಣಿ, ಕೇತುಮಂತ, ಗೌತಮ; ೨೨ ಭಲ್ಲವಿ, ಮಧುಪಿಂಗ, ಶ್ವೇತ ಕೇತು; ೨೩ ಉಶಿಜ, ಬೃಹದಶ್ವ ದೇವಲ, ಕವಿ; ೨೪ ಶಾಲಿಹೋತ್ರ, ಸುವೇಷ, ಯುವನಾಶ್ವ, ಶರದ್ವಸು; ೨೫ ಛಗಲ, ಕುಂಡಕರ್ಣ, ಕುಂಭಾಂಡ, ಪ್ರವಾಹಕ; ೨೬ ಉಲೂಕ, ವಿದ್ಯುತ ಶಂಬೂಕ, ಆಶ್ವಲಾಯನ; ೨೭ ಅಕ್ಷಪಾದ. ಕಣಾದ, ಉಲೂಕ, ವತ್ಸ; ೨೮ ಕುಲಿಕ, ಗರ್ಗ, ಮಿತ್ರಕ, ರುಷ್ಯ. ಈ ೧೧೨ ಜನರು ಯೋಗಾಚಾರ್ಯ ಸ್ವರೂಪನಾದ ಮಹೇಶ್ವರನ ಶಿಷ್ಯರು.

ಸರ್ವೇ ಪಾಶುಪತಾಸ್ಸಿದ್ಧಾ ಭಸ್ಮೋದ್ಧೂಲಿತವಿಗ್ರಹಾಃ ।
ಸರ್ವಶಾಸ್ತ್ರಾರ್ಥತತ್ತ್ವಜ್ಞಾ ವೇದವೇದಾಂಗಪಾರಗಾಃ ॥ ೨೩ ॥

ಶಿವಾಶ್ರಮರತಾಸ್ಸರ್ವೇ ಶಿವಜ್ಞಾನಪರಾಯಣಾಃ ।
ಸರ್ವಸಂಗವಿನಿರ್ಮುಕ್ತಾಃ ಶಿವೈಕಾಸಕ್ತಚೇತಸಃ ॥ ೨೪ ॥

ಸರ್ವದ್ವಂದ್ವಸಹಾ ಧೀರಾಃ ಸರ್ವಭೂತಹಿತೇ ರತಾಃ ।
ಋಜವೋ ಮೃದವಃ ಸ್ವಸ್ಥಾ ಜಿತಕ್ರೋಧಾ ಜಿತೇಂದ್ರಿಯಾಃ ॥ ೨೫ ॥

ರುದ್ರಾಕ್ಷಮಾಲಾಭರಣಾಸ್ತ್ರಿಪುಂಡ್ರಾಂಕಿತಮಸ್ತಕಾಃ ।
ಶಿಖಾಜಟಾಸ್ಸರ್ವಜಟಾ ಅಜಟಾ ಮುಂಡಶೀರ್ಷಕಾಃ ॥ ೨೬ ॥

ಫಲಮೂಲಾಶನಪ್ರಾಯಾಃ ಪ್ರಾಣಾಯಾಮಪರಾಯಣಾಃ ।
ಶಿವಾಭಿಮಾನಸಂಪನ್ನಾಃ ಶಿವಧ್ಯಾನೈಕತತ್ಪರಾಃ ॥ ೨೭ ॥

---

೨೩–೨೪. ಈ ಶಿಷ್ಯರೆಲ್ಲರೂ ಪಾಶುಪತವ್ರತವನ್ನು ಮಾಡಿ ಫಲವನ್ನು ಪಡೆದು ಶರೀರಕ್ಕೆಲ್ಲ ಭಸ್ಮವನ್ನು ಲೇಪನಮಾಡಿಕೊಂಡಿರುವರು. ಸಮಸ್ತ ಶಾಸ್ತ್ರಗಳ ತತ್ತ್ವಾರ್ಥವನ್ನೂ, ವೇದವೇದಾಂಗಗಳನ್ನೂ, ಸಂಪೂರ್ಣವಾಗಿ ತಿಳಿದಿರುವರು. ಶಿವಾಶ್ರಮಧರ್ಮವನ್ನಾಚರಿಸುತ್ತಾ ಶಿವಜ್ಞಾನಾಸಕ್ತರಾಗಿ ಸಕಲ ವಿಧವಾದ ಆಸೆಗಳನ್ನೂ ತೊರೆದು ಶಿವನೊಬ್ಬನಲ್ಲಿಯೇ ತಮ್ಮ ಮನಸ್ಸನ್ನು ನೆಲೆಗೊಳಿಸಿರುವರು.

೨೫–೨೭. ಇವರು ಶೀತೋಷ್ಣ ಸುಖದುಃಖಾದಿ ದ್ವಂದ್ವಗಳನ್ನು ಸಹಿಸುವ ಶಕ್ತಿಯುಳ್ಳವರೂ, ಧೈರ್ಯಶಾಲಿಗಳೂ ಆಗಿ ಸಕಲ ಪ್ರಾಣಿಗಳಿಗೂ ಹಿತವನ್ನು ಮಾಡುತ್ತ, ಸರಳವೂ, ಮೃದುವೂ, ಶಾಂತವೂ ಆದ ಸ್ವಭಾವದವರಾಗಿ ಕೋಪವನ್ನೂ, ಇಂದ್ರಿಯಗಳನ್ನೂ, ಜಯಿಸಿ ರುದ್ರಾಕ್ಷಮಾಲೆ, ಭಸ್ಮತ್ರಿಪುಂಡ್ರ, ಜಟೆ ಇವುಗಳನ್ನು ಧರಿಸಿರುವರು. ಕೆಲವರು ತಲೆಯ ಕೂದಲನ್ನು ಮುಂಡನ ಮಾಡಿಸಿಕೊಂಡು, ಗೆಡ್ಡೆ, ಗೆಣಸುಗಳನ್ನೂ, ಹಣ್ಣುಗಳನ್ನೂ ಆಹಾರಮಾಡುತ್ತಾ ಪ್ರಾಣಾಯಾಮಾಸಕ್ತರಾಗಿ ಶಿವಧರ್ಮದಲ್ಲಿ ಅಭಿಮಾನವುಳ್ಳವರಾಗಿ, ಶಿವನನ್ನೇ

**ಸಮುನ್ಮಥಿತಸಂಸಾರವಿಷವೃಕ್ಷಾಂಕುರೋದ್ಗಮಾಃ ।**
**ಪ್ರಯಾತುಮೇವ ಸಂನ್ನದ್ಧಾಃ ಪರಂ ಶಿವಪುರಂ ಪ್ರತಿ ॥ ೨೮ ॥**

**ಸದೇಶಿಕಾನಿಮಾನ್ಮತ್ವಾ ನಿತ್ಯಂ ಯಶ್ಶಿವಮರ್ಚಯೇತ್ ।**
**ಸ ಯಾತಿ ಶಿವಸಾಯುಜ್ಯಂ ನಾತ್ರ ಕಾರ್ಯಾ ವಿಚಾರಣಾ ॥ ೨೯ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-**
**ಮುತ್ತರಭಾಗೇ ಶಿವಸ್ಯ ಯೋಗಾವತಾರವರ್ಣನಂ ನಾಮ**
**ನವಮೋಽಧ್ಯಾಯಃ**



ಧ್ಯಾನಮಾಡುತ್ತಾ, ಜನನ ಮರಣವೆಂಬ ಸಂಸಾರವಿಷವೃಕ್ಷದ ಮೊಳಕೆಯನ್ನು ನಾಶಮಾಡುತ್ತಾ ಶ್ರೇಷ್ಠವಾದ ಶಿವನ ಪಟ್ಟಣಕ್ಕೆ ಹೋಗಲು ಸಿದ್ಧರಾದವರೇ ಆಗಿರುವರು.

೨೯. ಗುರುಗಳೊಡನೆ ಕೂಡಿದ ಈ ಶಿಷ್ಯರನ್ನು ಮನಸ್ಸಿನಲ್ಲಿ ಧ್ಯಾನಿಸಿ ಪ್ರತಿ ದಿನವೂ ಯಾರು ಶಿವನ ಪೂಜೆಯನ್ನು ಮಾಡುವರೋ ಅವರು ಶಿವ ಸಾಯುಜ್ಯಪದವಿಯನ್ನು ಪಡೆವರು. ಈ ವಿಷಯದಲ್ಲಿ ಸಂದೇಹಪಡಬೇಕಾದು ದಿಲ್ಲ ಎಂದನು.

ಇಲ್ಲಿಗೆ ಶ್ರೀಶಿವಮಹಾಪುರಾಣದಲ್ಲಿ ಏಳನೆಯ ವಾಯವೀಯಸಂಹಿತೆಯ
ಉತ್ತರಭಾಗದಲ್ಲಿ ಶಿವನ ಯೋಗಾವತಾರವರ್ಣನವೆಂಬ ಒಂಭತ್ತನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ದಶಮೋಽಧ್ಯಾಯಃ

---

॥ ಕೃಷ್ಣ ಉವಾಚ ॥

ಭಗವನ್ಸರ್ವಯೋಗೀಂದ್ರ ಗಣೇಶ್ವರ ಮುನೀಶ್ವರ ।
ಷಡಾನನಸಮುಪ್ರಖ್ಯ ಸರ್ವಜ್ಞಾನನಿಧೇ ಗುರೋ ॥ ೧ ॥

ಪ್ರಾಯಸ್ತ್ವಮವತೀರ್ಯೋರ್ವ್ಯಾಂ ಪಾಶವಿಚ್ಛಿತ್ತಯೇ ನೃಣಾಂ ।
ಮಹರ್ಷಿವಪುರಾಸ್ಥಾಯ ಸ್ಥಿತೋಽಸಿ ಪರಮೇಶ್ವರ ॥ ೨ ॥

---

## ಹತ್ತನೆಯ ಅಧ್ಯಾಯವು.

೧-೨. ಕೃಷ್ಣನಿಂತೆಂದನು—ಎಲೈ ಪೂಜ್ಯನೇ, ನೀನು ಮಹಾಮಹಿಮನೂ, ಯೋಗಿಶ್ರೇಷ್ಠನೂ, ಮುನೀಶ್ವರನೂ ಆಗಿರುವೆ. ಗಣಗಳಿಗೊಡೆಯನಾದ ಷಣ್ಮುಖನಿಗೆ ಸಮಾನನು. ಸಮಸ್ತ ಜ್ಞಾನಿಗಳಿಗೂ ಆಶ್ರಯನಾದ ಗುರುಸ್ವರೂಪನಾಗಿರುವೆ. ಬಹುತರವಾಗಿ ನೀನು ಭೂಮಿಯಲ್ಲಿರುವ ಮನುಜರ ದುಃಖರೂಪವಾದ ಪಾಶಗಳನ್ನು ನಾಶಮಾಡುವುದಕ್ಕಾಗಿ ಮಹರ್ಷಿರೂಪವಾಗಿ ಅವತಾರಮಾಡಿದ ಪರಮೇಶ್ವರನೇ ಆಗಿರುವೆ.

**ಅನ್ಯಥಾ ಹಿ ಜಗತ್ಯಸ್ಮಿನ್ದೇವೋ ವಾ ದಾನವೋऽಪಿ ವಾ ।**
**ತ್ವತ್ತೋऽನ್ಯಃ ಪರಮಂ ಭಾವಂ ಕೋ ಜಾನೀಯಾಚ್ಛಿವಾತ್ಮಕಂ ॥ ೩ ॥**

**ತಸ್ಮಾತ್ತ್ವ ಮುಖೋದ್ಗೀರ್ಣಂ ಸಾಕ್ಷಾದಿವ ಪಿನಾಕಿನಃ ।**
**ಶಿವಜ್ಞಾನಾಮೃತಂ ಪೀತ್ವಾ ನ ಮೇ ತೃಪ್ತಮಭೂನ್ಮನಃ ॥ ೪ ॥**

**ಸಾಕ್ಷಾತ್ಸರ್ವಜಗತ್ಕರ್ತುರ್ಭರ್ತುರಂಕಂ ಸಮಾಶ್ರಿತಾ ।**
**ಭಗವನ್ಕಿಂನು ಪಪ್ರಚ್ಛ ಭರ್ತಾರಂ ಪರಮೇಶ್ವರೀ ॥ ೫ ॥**

**॥ ಉಪಮನ್ಯುರುವಾಚ ॥**

**ಸ್ಥಾನೇ ಪೃಷ್ಟಂ ತ್ವಯಾ ಕೃಷ್ಣ ತದ್ವಕ್ಷ್ಯಾಮಿ ಯಥಾತಥಂ ।**
**ಭವಭಕ್ತಸ್ಯ ಯುಕ್ತಸ್ಯ ತವ ಕಲ್ಯಾಣಚೇತಸಃ ॥ ೬ ॥**

---

೩–೪. ಹಾಗಲ್ಲದಿದ್ದರೆ ಈ ಭೂಲೋಕದಲ್ಲಿ ನಿನ್ನನ್ನು ಬಿಟ್ಟರೆ, ದೇವ ದಾನವರಲ್ಲಿಯೂ ಮನುಜರಲ್ಲಿಯೂ ಶಿವತತ್ತ್ವವನ್ನು ಚೆನ್ನಾಗಿ ತಿಳಿದಿರುವವನಾರಿರುವನು ? ಆದುದರಿಂದ ನಿನ್ನ ಮುಖಾರವಿಂದದಿಂದ ಹೊರಹೊರಟ ಸಾಕ್ಷಾತ್ಪಿನಾಕಪಾಣಿಯಾದ ಶಿವನ ಜ್ಞಾನಾಮೃತವನ್ನು ಎಷ್ಟು ಪಾನಮಾಡಿದರೂ ನನ್ನ ಮನಸ್ಸು ತೃಪ್ತಿಹೊಂದಲಿಲ್ಲ.

೫. ಸರ್ವಜಗತ್ತನ್ನೂ ಸೃಷ್ಟಿಸಿದ ತನ್ನ ಪತಿಯಾದ ಪರಮೇಶ್ವರನ ತೊಡೆಯ ಮೇಲೆ ಕುಳಿತಿದ್ದ ದೇವಿಯು ಆ ಪತಿಯನ್ನು ಪ್ರಶ್ನೆಮಾಡಿದುದೇನು? ಆ ದೇವನು ಪ್ರತ್ಯುತ್ತರವನ್ನೇನು ಹೇಳಿದನು ? ಎಲೈ ಮಹಾಮಹಿಮನಾದ ಉಪಮನ್ಯುವೇ, ಈ ವಿಚಾರಗಳನ್ನೆಲ್ಲಾ ವಿಸ್ತಾರವಾಗಿ ನನಗರುಹಬೇಕು ಎನ್ನಲು,

೬. ಉಪಮನ್ಯುವಿಂತೆಂದನು—ಎಲೈ ಕೃಷ್ಣನೇ, ನೀನು ಪ್ರಶ್ನೆಮಾಡಿದುದು ಯುಕ್ತವಾಗಿರುವುದು. ಶಿವಭಕ್ತನೂ, ಯೋಗಯುಕ್ತನೂ, ಆದ ಶುಭವಾದ ಮನಸ್ಸುಳ್ಳ ನಿನಗೆ ಆ ವಿಷಯವನ್ನು ಯಥಾವತ್ತಾಗಿ ಹೇಳುವೆನು.

ಮಹೀಧರವರೇ ದಿವ್ಯೇ ಮಂದರೇ ಚಾರುಕಂದರೇ ।
ದೇವ್ಯಾ ಸಹ ಮಹಾದೇವೋ ದಿವ್ಯೋದ್ಯಾನಗತೋಽಭವತ್ ॥ ೭ ॥

ತದಾ ದೇವ್ಯಾಃ ಪ್ರಿಯಸಖೀ ಸುಸ್ಮಿತಾಸ್ಯಾ ಶುಭಾವತೀ ।
ಫುಲ್ಲಾನ್ಯತಿಮನೋಜ್ಞಾನಿ ಪುಷ್ಪಾಣಿ ಸಮುದಾಹರತ್ ॥ ೮ ॥

ತತಃ ಸ್ವಮಂಕಮಾರೋಪ್ಯ ದೇವೀಂ ದೇವವರೋ ಹರಃ ।
ಅಲಂಕೃತ್ಯ ಚ ತೈಃ ಪುಷ್ಪೈರಾಸ್ತೇ ಹೃಷ್ಟತರಃ ಸ್ವಯಂ ॥ ೯ ॥

ಅಥಾಂತಃಪುರಚಾರಿಣ್ಯೋ ದೇವ್ಯೋ ದಿವ್ಯವಿಭೂಷಣಾಃ ।
ಅಂತರಂಗಾ ಗಣೇಂದ್ರಾಶ್ಚ ಸರ್ವಲೋಕಮಹೇಶ್ವರೀಂ ॥ ೧೦ ॥

ಭರ್ತಾರಂ ಪರಿಪೂರ್ಣಂ ಚ ಸರ್ವಲೋಕಮಹೇಶ್ವರಂ ।
ಚಾಮರಾಸಕ್ತಹಸ್ತಾಶ್ಚ ದೇವೀಂ ದೇವಂ ಸಿಷೇವಿರೇ ॥ ೧೧ ॥

---

೭-೮. ಮನೋಹರವಾದ ಗುಹೆಗಳಿಂದ ಕೂಡಿ ಶ್ರೇಷ್ಠವಾದ ಮಂದರ ಪರ್ವತದಲ್ಲಿರುವ ಅತ್ಯುತ್ತಮವಾದ ಉದ್ಯಾನವನದಲ್ಲಿ ಶಿವನು ದೇವಿಯೊಡನೆ ಕುಳಿತಿದ್ದನು. ಆಗ ದೇವಿಯ ಪ್ರಿಯಸಖಿಯಾದ ಶುಭಾವತಿಯೆಂಬುವಳು ನಗುನಗುತ್ತ ಚೆನ್ನಾಗಿ ಅರಳಿದ ಸುಂದರವಾದ ಹೂಗಳನ್ನು ದೇವಿಗೆ ತಂದು ಕೊಟ್ಟಳು.

೯. ಆಮೇಲೆ ದೇವಶ್ರೇಷ್ಠನಾದ ಶಿವನು ದೇವಿಯನ್ನು ತನ್ನ ತೊಡೆಯ ಮೇಲೆ ಕೂಡಿಸಿಕೊಂಡು ಆ ಹೂಗಳಿಂದ ಅಲಂಕಾರಮಾಡುತ್ತಾ ಸಂತೋಷ ವಾಗಿದ್ದನು.

೧೦-೧೧. ಬಳಿಕ ಶಿವನ ಅಂತಃಪುರ (ರಾಣಿವಾಸದ) ಸ್ತ್ರೀಯರೂ, ಅಂತರಂಗಕ್ಕೆ ಯೋಗ್ಯರಾದ ಗಣೇಶ್ವರರೂ ಒಂದು ಸಮಸ್ತಲೋಕೇಶ್ವರಿಯಾದ ದೇವಿಯನ್ನೂ, ಪೂರ್ಣಜ್ಞಾನಸ್ವರೂಪನಾದ ಶಿವನನ್ನೂ, ಚಾಮರದಿಂದ ಬೀಸುತ್ತ ಸೇವಿಸುತ್ತಿದ್ದರು.

ತತಃ ಪ್ರಿಯಾಃ ಕಥಾ ವೃತ್ತಾ ವಿನೋದಾಯ ಮಹೇಶಯೋಃ ।
ತ್ರಾಣಾಯ ಚ ನೃಣಾಂ ಲೋಕೇ ಯೇ ಶಿವಂ ಶರಣಂ ಗತಾಃ ॥ ೧೨ ॥

ತದಾವಸರಮಾಲೋಕ್ಯ ಸರ್ವಲೋಕಮಹೇಶ್ವರೀ ।
ಭರ್ತಾರಂ ಪರಿಪಪ್ರಚ್ಛ ಸರ್ವಲೋಕಮಹೇಶ್ವರಂ ॥ ೧೩ ॥

॥ ದೇವ್ಯುವಾಚ ॥

ಕೇನ ವಶ್ಯೋ ಮಹಾದೇವೋ ಮರ್ತ್ಯಾನಾಂ ಮಂದಚೇತಸಾಂ ।
ಆತ್ಮತತ್ತ್ವಾದ್ಯಸಕ್ತಾನಾಮಾತ್ಮನಾಮಕೃತಾತ್ಮನಾಂ ॥ ೧೪ ॥

॥ ಈಶ್ವರ ಉವಾಚ ॥

ನ ಕರ್ಮಣಾ ನ ತಪಸಾ ನ ಜಪ್ಯೈರ್ನಾಸನಾದಿಭಿಃ ।
ನ ಜ್ಞಾನೇನ ನ ಚಾನ್ಯೇನ ವಶ್ಯೋಽಹಂ ಶ್ರದ್ಧಯಾ ವಿನಾ ॥ ೧೫ ॥

---

೧೨-೧೩. ಆಮೇಲೆ ಲೋಕದ ಜನರನ್ನು ಉದ್ಧಾರಮಾಡುವುದಕ್ಕಾಗಿ ಆ ಪಾರ್ವತೀಪರಮೇಶ್ವರರಿಗೆ ವಿನೋದಕರವಾದ ಮಾತುಗಳು ನಡೆಯುತ್ತಿದ್ದುವು. ಇದೇ ಸಮಯವೆಂದು ಸಮಸ್ತ ಲೋಕೇಶ್ವರಿಯಾದ ದೇವಿಯು ಸರ್ವಲೋಕೇಶ್ವರನಾದ ತನ್ನ ಪತಿಯನ್ನು ಕುರಿತು,

೧೪. ಎಲೈ ಮಹಾದೇವನೇ, ಮನುಷ್ಯರಲ್ಲನೇಕರು ಮಂದಬುದ್ಧಿಯಿಂದ ಆತ್ಮತತ್ತ್ವವನ್ನು ತಿಳಿಯಲು ಶಕ್ತರಲ್ಲವಷ್ಟೆ. ಕೃತಾರ್ಥರಲ್ಲದ ಅವರಿಗೆ ಗತಿಯೇನು? ಏನು ಮಾಡಿದರೆ ಅಂತಹ ಜನರಿಗೆ ಮಹಾದೇವನು ಪ್ರಸನ್ನನಾಗುವನು? ಎಂದು ಕೇಳಿದಳು.

೧೫-೧೬. ಈಶ್ವರನಿಂತೆಂದನು—ಕರ್ಮಗಳನ್ನು ಮಾಡಿದರೂ ತಪಸ್ಸು ಜಪ, ಯೋಗಾಭ್ಯಾಸ, ಜ್ಞಾನಾಭ್ಯಾಸ, ಇವುಗಳನ್ನು ಮಾಡಿದರೂ, ಮತ್ತೇನನ್ನು ಮಾಡಿದರೂ, ನನ್ನಲ್ಲಿ ನಂಬಿಕೆಯನ್ನಿಡದವರಿಗೆ ನಾನು ವಶನಾಗತಕ್ಕವನಲ್ಲ. ಮನುಜರಿಗೆ ನನ್ನಲ್ಲಿ ನಂಬಿಕೆಯೊಂದಿದ್ದರೆ ಯಾವ ಕಾರಣದಿಂದ

ಶ್ರದ್ಧಾ ಮಯ್ಯಸ್ತಿ ಚೇತ್ಪುಂಸಾಂ ಯೇನ ಕೇನಾಪಿ ಹೇತುನಾ ।
ವಶ್ಯಃ ಸ್ಪೃಶ್ಯಶ್ಚ ದೃಶ್ಯಶ್ಚ ಪೂಜ್ಯಃ ಸಂಭಾಷ್ಯ ಏವ ಚ ॥ ೧೬ ॥

ಸಾಧ್ಯಾ ತಸ್ಮಾನ್ಮಯಿ ಶ್ರದ್ಧಾ ಮಾಂ ವಶೀಕರ್ತುಮಿಚ್ಛತಾ ।
ಶ್ರದ್ಧಾ ಹೇತುಸ್ಸ್ವಧರ್ಮಸ್ಯ ರಕ್ಷಣಂ ವರ್ಣಿನಾಮಿಹ ॥ ೧೭ ॥

ಸ್ವವರ್ಣಾಶ್ರಮಧರ್ಮೇಽಥ ವರ್ತತೇ ಯಸ್ತು ಮಾನವಃ ।
ತಸ್ಯೈವ ಭವತಿ ಶ್ರದ್ಧಾ ಮಯಿ ನಾನ್ಯಸ್ಯ ಕಸ್ಯಚಿತ್ ॥ ೧೮ ॥

ಆಮ್ನಾಯಸಿದ್ಧಮಖಿಲಂ ಧರ್ಮಮಾಶ್ರಮಿಣಾಮಿಹ ।
ಬ್ರಹ್ಮಣಾ ಕಥಿತಂ ಪೂರ್ವಂ ಮಮೈವಾಜ್ಞಾಪುರಸ್ಸರಂ ॥ ೧೯ ॥

ಸ ತು ಪೈತಾಮಹೋ ಧರ್ಮೋ ಬಹುವಿತ್ತಕ್ರಿಯಾನ್ವಿತಃ ।
ನಾತ್ಯಂತಫಲಭೂಯಿಷ್ಠಃ ಕ್ಲೇಶಾಯಾಸಸಮನ್ವಿತಃ ॥ ೨೦ ॥

---

ಲಾದಲೂ ಅವರಿಗೆ ನಾನು ವಶನಾಗಿ ಅವರು ಮಾಡುವ ಸ್ಪರ್ಶ, ನೋಟ; ಪೂಜೆ ಸಂಭಾಷಣೆ ಮುಂತಾದವುಗಳಿಂದ ಸಂತುಷ್ಟನಾಗುವೆನು:

೧೭-೧೮. ನನ್ನನ್ನು ವಶಮಾಡಿಕೊಳ್ಳಬೇಕೆಂಬ ಮನುಜನು ನನ್ನಲ್ಲಿ ನಂಬಿಕೆಯನ್ನಿಡಬೇಕು. ನನ್ನ ವಿಷಯದಲ್ಲಿ ನಂಬಿಕೆಯನ್ನಿಡುವುದರಿಂದಲೇ ಸಕಲ ವರ್ಣದವರಿಗೂ, ತಮ್ಮ ಧರ್ಮರಕ್ಷಣೆಯು ಉಂಟಾಗುವುದು. ವರ್ಣಾಶ್ರಮಧರ್ಮದಲ್ಲಿರುವ ಮನುಜನಿಗೆ ನನ್ನ ವಿಷಯದಲ್ಲಿ ನಂಬಿಕೆಯು ಇರುವುದು. ಇತರರಿಗಿರುವುದಿಲ್ಲ.

೧೯-೨೦. ವೇದಸಿದ್ಧವಾದ ಸಮಸ್ತ ವರ್ಣಾಶ್ರಮಧರ್ಮಗಳನ್ನು ನನ್ನ ಅಪ್ಪಣೆಯಿಂದಲೇ ಬ್ರಹ್ಮನು ಜನರಿಗೆ ಹೇಳಿರುವನು. ಆದರೆ ಆ ಬ್ರಹ್ಮನು ಹೇಳಿದ ಧರ್ಮವನ್ನು ಆಚರಿಸಬೇಕಾದರೆ ಬಹುದ್ರವ್ಯಬೇಕಾಗುವುದು. ಕಾಯಕ್ಲೇಶಾದಿ ಕಷ್ಟಗಳನ್ನು ಸಹಿಸಬೇಕಾಗಿರುವುದು. ಇಷ್ಟು ಕಷ್ಟಪಟ್ಟು ಆ ಧರ್ಮಗಳನ್ನು ಆಚರಿಸಿದರೂ ಫಲಮಾತ್ರ ಹೆಚ್ಚಾಗಿ ಲಭಿಸುವುದಿಲ್ಲ.

ತೇನ ಧರ್ಮೇಣ ಮಹತಾ ಶ್ರದ್ಧಾಂ ಪ್ರಾಪ್ಯ ಸುದುರ್ಲಭಾಂ ।
ವರ್ಣಿನೋ ಯೇ ಪ್ರಪದ್ಯಂತೇ ಮಾಮನನ್ಯಸಮಾಶ್ರಯಾಃ ।
ತೇಷಾಂ ಸುಖೇನ ಮಾರ್ಗೇಣ ಧರ್ಮಕಾಮಾರ್ಥಮುಕ್ತಯಃ ॥ ೨೧ ॥

ವರ್ಣಾಶ್ರಮಸಮಾಚಾರೋ ಮಯಾ ಭೂಯಃ ಪ್ರಕಲ್ಪಿತಃ ।
ತಸ್ಮಿನ್ಭಕ್ತಿಮತಾಮೇವ ಮದೀಯಾನಾಂ ತು ವರ್ಣಿನಾಂ ॥ ೨೨ ॥

ಅಧಿಕಾರೋ ನ ಚಾನ್ಯೇಷಾಮಿತ್ಯಾಜ್ಞಾ ನೈಷ್ಠಿಕೀ ಮಮ ।
ತದಾಜ್ಞಪ್ತೇನ ಮಾರ್ಗೇಣ ವರ್ಣಿನೋ ಮದುಪಾಶ್ರಯಾಃ ॥ ೨೩ ॥

ಮಲಮಾಯಾದಿಪಾಶೇಭ್ಯೋ ವಿಮುಕ್ತಾ ಮತ್ಪ್ರಸಾದತಃ ।
ಪುರಂ ಮದೀಯಮಾಸಾದ್ಯ ಪುನರಾವೃತ್ತಿದುರ್ಲಭಂ ।
ಪರಮಂ ಮಮ ಸಾಧರ್ಮ್ಯಂ ಪ್ರಾಪ್ಯ ನಿರ್ವೃತಿಮಾಯಯುಃ ॥ ೨೪ ॥

---

೨೧–೨೨. ಆದುದರಿಂದ ಶ್ರೇಷ್ಠವಾದ ಶಿವಧರ್ಮವನ್ನು ಆಚರಿಸಿ ನನ್ನಲ್ಲಿ ನಂಬಿಕೆಯನ್ನೂ ಭಕ್ತಿಯನ್ನೂ ಇರಿಸಿ ನನ್ನನ್ನೇ ಶರಣುಹೊಂದುವವರಿಗೆ ಸುಲಭವಾದ ಮಾರ್ಗದಿಂದ ಚತುರ್ವಿಧ ಪುರುಷಾರ್ಥಗಳು ಸಿದ್ಧಿಸುವುವು. ಅದಕ್ಕಾಗಿ ನಾನು ಮತ್ತೆ ವರ್ಣಾಶ್ರಮಧರ್ಮಗಳನ್ನು ಕಲ್ಪಿಸಿದೆನು. ಆ ಶಿವ ಧರ್ಮವಲ್ಲಿ ಭಕ್ತಿಯುಳ್ಳವರಿಗೇ ನಾನು ಕಲ್ಪಿಸಿದ ಧರ್ಮಗಳಲ್ಲಿ ಅಧಿಕಾರವಿರುವುದು- ಮತ್ತೊಬ್ಬರಿಗೆ ಅದನ್ನಾಚರಿಸಲು ಅಧಿಕಾರವಿಲ್ಲವೆಂದು ಖಂಡಿತವಾದ ನನ್ನ ಆಜ್ಞೆಯಿರುವುದು.

೨೩–೨೪. ಆದುದರಿಂದ ನಾನು ಆಜ್ಞೆಮಾಡಿದರೀತಿಯಲ್ಲಿ ವರ್ಣಾಶ್ರಮ ಧರ್ಮಗಳನ್ನು ನಡೆಸುತ್ತಾ ನನ್ನನ್ನೇ ಆಶ್ರಯಿಸಿದವರು ಪಾಪ ಅಜ್ಞಾನ ಮುಂತಾದ ಪಾಶಗಳ ಬಿಡುಗಡೆಯನ್ನು ಹೊಂದಿ ನನ್ನ ಅನುಗ್ರಹದಿಂದ ನನ್ನ ಪಟ್ಟಣಕ್ಕೆ (ಪರಮಪದ) ಬಂದು ನನ್ನ ಸಮಾನತ್ವವನ್ನು ಪಡೆದು ಸುಖಿಸುವರು. ಅವರಿಗೆ ಪುನರ್ಜನ್ಮಾದಿ ದುಃಖಾನುಭವವಿಲ್ಲ.

ತಸ್ಮಾಲ್ಲಬ್ಧ್ವಾಪ್ಯಲಬ್ಧ್ವಾ ವಾ ವರ್ಣಧರ್ಮಂ ಮಯೇರಿತಂ ।
ಆಶ್ರಿತ್ಯ ಮಾಮ ಭಕ್ತಶ್ಚೇತ್ಸ್ವಾತ್ಮನಾತ್ಮಾನಮುದ್ಧರೇತ್ ॥ ೨೫ ॥

ಅಲಬ್ಧಲಾಭ ಏವೈಷ ಕೋಟಿಕೋಟಿಗುಣಾಧಿಕಃ ।
ತಸ್ಮಾನ್ಮೇ ಮುಖತೋ ಲಬ್ಧಂ ವರ್ಣಧರ್ಮಂ ಸಮಾಚರೇತ್ ॥ ೨೬ ॥

ಮಮಾವತಾರಾ ಹಿ ಶುಭೇ ಯೋಗಾಚಾರ್ಯಚ್ಛಲೇನ ತು ।
ಸರ್ವಾಂತರೇಷು ಸಂತ್ಯಾರ್ಯೇ ಸಂತತಿಶ್ಚ ಸಹಸ್ರಶಃ ॥ ೨೭ ॥

ಅಯುಕ್ತಾನಾಮಬುದ್ಧೀನಾಮಭಕ್ತಾನಾಂ ಸುರೇಶ್ವರಿ ।
ದುರ್ಲಭಂ ಸಂತತಿಜ್ಞಾನಂ ತತೋ ಯತ್ನಾತ್ಸಮಾಶ್ರಯೇತ್ ॥ ೨೮ ॥

---

೨೫. ಆದುದರಿಂದ ನಾನು ಹೇಳಿದ ವರ್ಣಧರ್ಮವು ಗುರೂಪದೇಶದಿಂದ ಪ್ರಾಪ್ತವಾಗಲಿ ಅಥವಾ ಪ್ರಾಪ್ತವಾಗದಿರಲಿ ಮನುಜನು ತಾನಾಗಿಯೇ ಭಕ್ತಿಯಿಂದ ನನ್ನನ್ನಾಶ್ರಯಿಸಿದರೆ ತನ್ನನ್ನು ತಾನೇ ಉದ್ಧಾರಮಾಡಿಕೊಂಡಂತೆ ಆಗುವುದು.

೨೬. ನನ್ನ ಮುಖದಿಂದ ಹೊರಹೊರಟ ಎಂದರೆ ನಾನು ಉಪದೇಶ ಮಾಡಿದ ವರ್ಣಾಶ್ರಮ ಧರ್ಮಾಚರಣೆಯು ಕೋಟಿಪಾಲು ಹೆಚ್ಚಿನ ಗುಣವುಳ್ಳದ್ದೆಂದೂ ಅಲಭ್ಯಲಾಭವೆಂದೂ ತಿಳಿಯಬೇಕು.

೨೭-೨೮. ಮಂಗಳಕರಳಾದ ಎಲೌ ದೇವಿಯೇ, ಕೇಳು. ಸಕಲ ಮನ್ವಂತರಗಳಲ್ಲಿಯೂ, ನಾನು ಯೋಗಾಚಾರ್ಯನೆಂಬ ಹೆಸರಿನಿಂದ ಅವತಾರ ಮಾಡುವೆನು. ನನಗೆ ಶಿಷ್ಯರು ಅನೇಕವಾಗಿರುವರು. ಯೋಗಯುಕ್ತರಲ್ಲದವರಿಗೂ, ಮೂಢರಿಗೂ, ಭಕ್ತರಲ್ಲದವರಿಗೂ, ನನ್ನ ಶಿಷ್ಯರ ಸಮೂಹದ ತಿಳುವಳಿಕೆಯುಂಟಾಗುವುದಿಲ್ಲ. ಆದುದರಿಂದ ಪ್ರಯತ್ನಪೂರ್ವಕವಾಗಿ ಆ ನನ್ನ ಶಿಷ್ಯರ ಸಂತತಿಯನ್ನಾಶ್ರಯಿಸಿ ಜ್ಞಾನವನ್ನು ಪಡೆಯಬೇಕು. ಎಂದರೆ ಗುರುವಾದ ನನ್ನಿಂದಲೇ ನಡೆದುಬರುತ್ತಿರುವ ಶಿಷ್ಯಪರಂಪರೆಯಿಂದ ಜ್ಞಾನೋಪದೇಶವನ್ನು ಪಡೆಯಬೇಕು.

ಸಾ ಹಾನಿಸ್ತನ್ಮಹಚ್ಛಿದ್ರಂ ಸ ಮೋಹಸ್ಸಾಂಧಮೂಕತಾ ।
ಯದನ್ಯತ್ರ ಶ್ರಮಂ ಕುರ್ಯಾನ್ಮೋಕ್ಷಮಾರ್ಗಬಹಿಷ್ಕೃತಃ ॥ ೨೯ ॥

ಜ್ಞಾನಂ ಕ್ರಿಯಾ ಚ ಚರ್ಯಾ ಚ ಯೋಗಶ್ಚೇತಿ ಸುರೇಶ್ವರಿ ।
ಚತುಷ್ಪಾದಃ ಸಮಾಖ್ಯಾತೋ ಮಮ ಧರ್ಮಸ್ಸನಾತನಃ ॥ ೩೦ ॥

ಪಶುಪಾಶಪತಿಜ್ಞಾನಂ ಜ್ಞಾನಮಿತ್ಯಭಿಧೀಯತೇ ।
ಷಡಧ್ವಶುದ್ಧಿರ್ವಿಧಿನಾ ಗುರ್ವಧೀನಾ ಕ್ರಿಯೋಚ್ಯತೇ ॥ ೩೧ ॥

ವರ್ಣಾಶ್ರಮಪ್ರಯುಕ್ತಸ್ಯ ಮಯೈವ ವಿಹಿತಸ್ಯ ಚ ।
ಮಮಾರ್ಚನಾದಿಧರ್ಮಸ್ಯ ಚರ್ಯಾ ಚರ್ಯೇತಿ ಕಥ್ಯತೇ ॥ ೩೨ ॥

ಮದುಕ್ತೇನೈವ ಮಾರ್ಗೇಣ ಮಯ್ಯವಸ್ಥಿತಚೇತಸಃ ।
ವೃತ್ತ್ಯಂತರನಿರೋಧೋ ಯೋ ಯೋಗ ಇತ್ಯಭಿಧೀತೇ ॥ ೩೩ ॥

೨೯. ನನ್ನ ಶಿಷ್ಯಸಂತತಿಯನ್ನಾಶ್ರಯಿಸದೆ ಬೇರೆಯವರನ್ನಾಶ್ರಯಿಸಿದರೆ ಅವರಿಗೆ ಮೋಕ್ಷಮಾರ್ಗಕ್ಕೆ ಸಾಧನೆಯು ತಪ್ಪಿಹೋಗುವುದು. ಆದರಿಂದ ಅವರಿಗೆ ದೊಡ್ಡ ಹಾನಿಯೇ ಆಗುವುದು. ಅದೇ ಅಜ್ಞಾನವೆನಿಸುವುದು. ಅದೇ ಕುರುಡ ಮೂಕರ ಸ್ವಭಾವವಾಗಿರುವುದು.

೩೦. ಅನಾದಿಯಾದ ನನ್ನ ಧರ್ಮವು ಎಂದರೆ ಶಿವಧರ್ಮವು ಜ್ಞಾನ, ಕ್ರಿಯಾ, ಚರ್ಯಾ, ಯೋಗ ಎಂದು ನಾಲ್ಕು ಭಾಗವಾಗಿರುವುದು. ಈ ಭಾಗಗಳನ್ನು ಪಾದಗಳೆಂದು ಹೇಳುವರು.

೩೧-೩೩. ಪಶು, ಪಾಶ, ಪತಿ ಇವುಗಳ ಸ್ವರೂಪವನ್ನು ತಿಳಿದುಕೊಳ್ಳುವುದೇ ಜ್ಞಾನವೆನಿಸುವುದು. ಗುರುವಿಗೆ ಅಧೀನನಾಗಿಯೂ ಶಾಸ್ತ್ರವಿಧಿಗನುಸಾರವಾಗಿಯೂ ಷಡಧ್ವಶುದ್ಧಿಯನ್ನು ಮಾಡಿಕೊಳ್ಳುವುದು ಕ್ರಿಯೆಯೆನಿಸುವುದು. ನಾನೇ ವಿಧಿಸಿರುವ ವರ್ಣಾಶ್ರಮಸಂಬಂಧವಾದ ನನ್ನ ಪೂಜೆಯೇ ಮುಂತಾದ ಧರ್ಮಾಚರಣೆಯು ಚರ್ಯೆಯೆನಿಸುವುದು. ನಾನು ಹೇಳಿದ ಮಾರ್ಗದಿಂದ ನನ್ನಲ್ಲೇ ಮನಸ್ಸನ್ನಿಟ್ಟು ಆ ಮನಸ್ಸಿನಲ್ಲಿ ಬೇರೆ ವೃತ್ತಿಯು ಉತ್ಪತ್ತಿಯಾಗದಂತೆ ತಡೆಯುವುದೇ ಯೋಗವೆನಿಸುವುದು.

ಅಶ್ವಮೇಧಗಣಾಚ್ಛ್ರೇಷ್ಠಂ ದೇವಿ ಚಿತ್ತಪ್ರಸಾಧನಂ ।
ಮುಕ್ತಿದಂ ಚ ತಥಾ ಹ್ಯೇತದ್ದುಷ್ಪ್ರಾಪ್ಯಂ ವಿಷಯೈಷಿಣಾಂ ॥ ೩೪ ॥

ವಿಜಿತೇಂದ್ರಿಯವರ್ಗಸ್ಯ ಯಮೇನ ನಿಯಮೇನ ಚ ।
ಪೂರ್ವಪಾಪಹರೋ ಯೋಗೋ ವಿರಕ್ತಸ್ಯೈವ ಕಥ್ಯತೇ ॥ ೩೫ ॥

ವೈರಾಗ್ಯಾಜ್ಜಾಯತೇ ಜ್ಞಾನಂ ಜ್ಞಾನಾದ್ಯೋಗಃ ಪ್ರವರ್ತತೇ ॥ ೩೬ ॥

ಯೋಗಜ್ಞಃ ಪತಿತೋ ವಾಪಿ ಮುಚ್ಯತೇ ನಾತ್ರ ಸಂಶಯಃ ।
ದಯಾ ಕಾರ್ಯಾಥ ಸತತಮಹಿಂಸಾ ಜ್ಞಾನಸಂಗ್ರಹಃ । ॥ ೩೭ ॥

ಸತ್ಯಮಸ್ತೇಯಮಾಸ್ತಿಕ್ಯಂ ಶ್ರದ್ಧಾ ಚೇಂದ್ರಿಯನಿಗ್ರಹಃ ।
ಅಧ್ಯಾಪನಂ ಚಾಧ್ಯಯನಂ ಯಜನಂ ಯಾಜನಂ ತಥಾ ॥ ೩೮ ॥

---

೩೪. ಎಲೌ ದೇವಿ, ಪರಿಶುದ್ಧವಾದ ಮನಸ್ಸಿನಿಂದಿರುವುದು, ಅನೇಕ ಅಶ್ವಮೇಧಯಜ್ಞಗಳನ್ನು ಮಾಡುವುದಕ್ಕಿಂತ ಶ್ರೇಷ್ಠವೆನಿಸುವುದು. ಆ ಶುದ್ಧ ಚಿತ್ತವೇ ಮೋಕ್ಷವನ್ನು ಕೊಡತಕ್ಕದ್ದು. ವಿಷಯಸುಖಗಳನ್ನಪೇಕ್ಷಿಸುವವರಿಗೆ ಚಿತ್ತಶುದ್ಧಿಯುಂಟಾಗುವುದು ಬಹು ಕಷ್ಟವು.

೩೫-೩೬. ಯಮನಿಯಮಗಳೆಂಬ ಯೋಗಾಂಗಗಳಿಂದ ಇಂದ್ರಿಯಗಳನ್ನು ಜಯಿಸಿದ ವಿರಕ್ತನಿಗೆ ಪೂರ್ವಜನ್ಮದ ಪಾಪವನ್ನು ನಾಶಮಾಡುವ ಯೋಗವು ಸಾಧ್ಯವಾಗುವುದು. ವೈರಾಗ್ಯದಿಂದ ಜ್ಞಾನವೂ, ಜ್ಞಾನದಿಂದ ಯೋಗವೂ ಉಂಟಾಗುವುದು. ಯೋಗವನ್ನು ಬಲ್ಲವನು ಅನೇಕ ಪಾಪಗಳನ್ನು ಮಾಡಿದವನಾದರೂ ಮೋಕ್ಷವನ್ನು ಹೊಂದುವುದರಲ್ಲಿ ಸಂದೇಹವಿಲ್ಲ.

೩೭-೩೯. ಯಾವಾಗಲೂ ಸಮಸ್ತ ಪ್ರಾಣಿಗಳ ವಿಷಯದಲ್ಲಿಯೂ, ದಯೆಯನ್ನು ತೋರಿಸುತ್ತಾ ಅಹಿಂಸೆಯಿಂದ ಕೂಡಿ ಜ್ಞಾನಸಂಗ್ರಹಕ್ಕಾಗಿ ಸತ್ಯ, ಅಸ್ತೇಯ ಆಸ್ತಿಕ್ಯಬುದ್ಧಿ, ಶ್ರದ್ಧೆ, ಇಂದ್ರಿಯನಿಗ್ರಹ, ತಾನು ವೇದವನ್ನೋದುವುದು, ಇತರರಿಗೆ ಹೇಳಿಕೊಡುವುದು, ತಾನು ಯಜ್ಞಮಾಡುವುದು, ಇತರರಿ

ಧ್ಯಾನಮೀಶ್ವರಭಾವಶ್ಚ ಸತತಂ ಜ್ಞಾನಶೀಲತಾ ।
ಯ ಏವಂ ವರ್ತತೇ ವಿಪ್ರೋ ಜ್ಞಾನಯೋಗಸ್ಯ ಸಿದ್ಧಯೇ ॥ ೩೯ ॥

ಅಚಿರಾದೇವ ವಿಜ್ಞಾನಂ ಲಬ್ಧ್ವಾ ಯೋಗಂ ಚ ವಿಂದತಿ ।
ದಗ್ಧ್ವಾ ದೇಹಮಿಮಂ ಜ್ಞಾನೀ ಕ್ಷಣಾಜ್ಜ್ಞಾನಾಗ್ನಿನಾ ಪ್ರಿಯೇ ॥ ೪೦ ॥

ಪ್ರಸಾದಾನ್ಮಮ ಯೋಗಜ್ಞಃ ಕರ್ಮಬಂಧಂ ಪ್ರಹಾಸ್ಯತಿ ।
ಪುಣ್ಯಃ ಪುಣ್ಯಾತ್ಮಕಂ ಕರ್ಮ ಮುಕ್ತೇಸ್ತತ್ಪ್ರತಿಬಂಧಕಂ ।
ತಸ್ಮಾನ್ನಿಯೋಗತೋ ಯೋಗೀ ಪುಣ್ಯಾಪುಣ್ಯಂ ವಿವರ್ಜಯೇತ್ ॥ ೪೧ ॥

ಫಲಕಾಮನಯಾ ಕರ್ಮಕರಣಾತ್ಪ್ರತಿಬಧ್ಯತೇ ।
ನ ಕರ್ಮಮಾತ್ರಕರಣಾತ್ತಸ್ಮಾತ್ಕರ್ಮಫಲಂ ತ್ಯಜೇತ್ ॥ ೪೨ ॥

---

ಯಜ್ಞವನ್ನು ಮಾಡಿಸುವುದು, ಧ್ಯಾನ, ಈಶ್ವರ ಭಕ್ತಿ ಯಾವಾಗಲೂ ಜ್ಞಾನಾಸಕ್ತಿ ಈ ಗುಣಗಳಿಂದ ಕೂಡಿದ ವಿಪ್ರನು ಸ್ವಲ್ಪ ಕಾಲದಲ್ಲಿಯೇ ವಿಜ್ಞಾನವನ್ನು ಪಡೆದು ಶಿವಯೋಗವನ್ನು ಹೊಂದುವನು.

೪೦-೪೧. ಪ್ರಿಯೆಯಾದ ಎಲೌ ಪಾರ್ವತಿ, ಜ್ಞಾನಿಯಾದವನು ಜ್ಞಾನಾಗ್ನಿಯಿಂದ ಈ ದೇಹವನ್ನು ಒಂದು ಕ್ಷಣದೊಳಗಾಗಿ ಸುಟ್ಟು ನನ್ನ ಅನುಗ್ರಹದಿಂದ ಯೋಗವನ್ನು ತಿಳಿದು ಕರ್ಮದ ಕಟ್ಟನ್ನು ಬಿಡಿಸಿಕೊಳ್ಳುವನು. ಪುಣ್ಯವೂ ಪುಣ್ಯಕರ್ಮಗಳೂ, ಮೋಕ್ಷಕ್ಕೆ ತಡೆಯನ್ನುಂಟುಮಾಡುವುವು. ಆದುದರಿಂದ ಯೋಗಿಯು ನನ್ನಪ್ಪಣೆಯಿಂದ ಪುಣ್ಯಕರ್ಮಗಳನ್ನೂ ಪಾಪಕರ್ಮಗಳನ್ನೂ ತ್ಯಾಗಮಾಡಬೇಕು.

೪೨. ಫಲಾಪೇಕ್ಷೆಯಿಂದ ಕರ್ಮಗಳನ್ನು ಮಾಡಿದರೆ ಅದರ ಫಲಾನುಭವಕ್ಕಾಗಿ ಪೂರ್ವಜನ್ಮಾದಿಗಳುಂಟಾಗುವುವು. ಫಲಾಪೇಕ್ಷೆಯಿಲ್ಲದೆ ಮಾಡಿದರೆ ಈ ಬಂಧಕವುಂಟಾಗುವುದಿಲ್ಲ. ಆದುದರಿಂದ ಕರ್ಮಫಲವನ್ನು ತ್ಯಾಗಮಾಡಬೇಕು.

ಪ್ರಥಮಂ ಕರ್ಮಯಜ್ಞೇನ ಬಹಿಃ ಸಂಪೂಜ್ಯ ಮಾಂ ಪ್ರಿಯೇ ।
ಜ್ಞಾನಯೋಗರತೋ ಭೂತ್ವಾ ಪಶ್ಚಾದ್ಯೋಗಂ ಸಮಭ್ಯಸೇತ್ ॥ ೪೩ ॥

ವಿದಿತೇ ಮಮ ಯಾಥಾತ್ಮ್ಯೇ ಕರ್ಮಯಜ್ಞೇನ ದೇಹಿನಃ ।
ನ ಯಜಂತಿ ಹಿ ಮಾಂ ಯುಕ್ತಾಃ ಸಮಲೋಷ್ಟಾಶ್ಮಕಾಂಚನಾಃ ॥ ೪೪ ॥

ನಿತ್ಯಯುಕ್ತೋ ಮುನಿಶ್ರೇಷ್ಠೋ ಮದ್ಭಕ್ತಶ್ಚ ಸಮಾಹಿತಃ ।
ಜ್ಞಾನಯೋಗರತೋ ಯೋಗೀ ಮಮ ಸಾಯುಜ್ಯಮಾಪ್ನುಯಾತ್॥ ೪೫ ॥

ಅಥಾವಿರಕ್ತಚಿತ್ತಾ ಯೇ ವರ್ಣಿನೋ ಮದುಪಾಶ್ರಿತಾಃ ।
ಜ್ಞಾನಚರ್ಯಾಕ್ರಿಯಾಸ್ವೇವ ತೇಽಧಿಕುರ್ಯುಸ್ತಪರ್ಹಕಾಃ ॥ ೪೬ ॥

ದ್ವಿಧಾ ಮತ್ಪೂಜನಂ ಜ್ಞೇಯಂ ಬಾಹ್ಯಮಾಭ್ಯಂತರಂ ತಥಾ ।
ವಾಙ್ಮನಃಕಾಯಭೇದಾಚ್ಚ ತ್ರಿಧಾ ಮದ್ಭಜನಂ ವಿದುಃ ॥ ೪೭ ॥

೪೩. ಪ್ರಿಯೆಯಾದ ಓ ಪಾರ್ವತಿ ಮನುಷ್ಯನು ಮೊದಲು ಫಲಾಪೇಕ್ಷೆಯಿಲ್ಲದೆ ಕರ್ಮರೂಪವಾದ ಯಜ್ಞದಿಂದ ನನ್ನ ಬಾಹ್ಯ ಪೂಜೆಯನ್ನು ಮಾಡಿದರೆ ಜ್ಞಾನಯೋಗದಲ್ಲಾಸಕ್ತನಾಗುವನು. ಆಮೇಲೆ ಯೋಗಾಭ್ಯಾಸವನ್ನು ಮಾಡಬೇಕು.

೪೪–೪೫. ನನ್ನ ನಿಜಸ್ವರೂಪವು ತಿಳಿದಮೇಲೆ ಮನುಜರಿಗೆ ಕರ್ಮರೂಪವಾದ ಯಜ್ಞಗಳ ಅವಶ್ಯಕತೆ ಇಲ್ಲ. ಅವರಿಗೆ ಕಲ್ಲು, ಮಣ್ಣು, ಚಿನ್ನಗಳ ವಿಷಯದಲ್ಲಿ ಸಮಾನವಾದ ಬುದ್ಧಿಯುಂಟಾಗಿ ಯೋಗಿಗಳಾಗುವರು. ಶಿವಜ್ಞಾನ ಯೋಗದಿಂದ ಕೂಡಿದ ನನ್ನ ಭಕ್ತರು ಏಕಾಗ್ರಚಿತ್ತತೆಯಿಂದ ಜ್ಞಾನಯೋಗಾಸಕ್ತರಾಗಿ ನನ್ನ ಸಾಯುಜ್ಯರೂಪವಾದ ಮುಕ್ತಿಯನ್ನು ಪಡೆಯುವರು.

೪೬. ವೈರಾಗ್ಯಬುದ್ಧಿಯಿಲ್ಲದ ನನ್ನ ಭಕ್ತರು ವರ್ಣಧರ್ಮವನ್ನು ನಡೆಸುತ್ತ ಜ್ಞಾನ, ಚರ್ಯೆ, ಕ್ರಿಯೆ, ಇವುಗಳಲ್ಲಿ ಮಾತ್ರ ಅಧಿಕಾರವುಳ್ಳವರಾಗಿರುವರು.

೪೭. ನನ್ನ ಪೂಜೆಯು ಬಾಹ್ಯಪೂಜೆ, ಆಂತರಪೂಜೆ ಎಂದು ಎರಡು ಬಗೆಯು. ನನ್ನ ಸೇವೆಯು ವಾಕ್ಕು, ಮನಸ್ಸು, ಕಾಯ ಈ ರೂಪದಿಂದ ಮೂರು ವಿಧವಾಗಿರುವುದು.

ತಪಃ ಕರ್ಮ ಜಪೋ ಧ್ಯಾನಂ ಜ್ಞಾನಂ ಚೇತ್ಯನುಪೂರ್ವಶಃ ।
ಪಂಚಧಾ ಕಥ್ಯತೇ ಸದ್ಭಿಸ್ತದೇವ ಭಜನಂ ಪುನಃ ॥ ೪೮ ॥

ಅನ್ಯಾತ್ಮವಿದಿತಂ ಬಾಹ್ಯಮಸ್ಮದಭ್ಯರ್ಚನಾದಿಕಂ ।
ತದೇವ ತು ಸ್ವಸಂವೇದ್ಯಮಾಭ್ಯಂತರಮುದಾಹೃತಂ ॥ ೪೯ ॥

ಮನೋ ಮತ್ಪ್ರವಣಂ ಚಿತ್ತಂ ನ ಮನೋಮಾತ್ರಮುಚ್ಯತೇ ।
ಮನ್ನಾಮನಿರತಾ ವಾಣೀ ವಾಙ್ಮತಾ ಖಲು ನೇತರಾ ॥ ೫೦ ॥

ಲಿಂಗಂ ಮಚ್ಛಾಸನಾದಿಷ್ಟೈಸ್ತ್ರಿಪುಂಡ್ರಾದಿಭಿರಂಕಿತಃ ।
ಮಮೋಪಚಾರನಿರತಃ ಕಾಯಃ ಕಾಯೋ ನ ಚೇತರಃ ॥ ೫೧ ॥

ಮದರ್ಚಾ ಕರ್ಮ ವಿಜ್ಞೇಯಂ ಬಾಹ್ಯೇ ಯಾಗಾದಿನೋಚ್ಯತೇ ।
ಮದರ್ಥೇ ದೇಹಸಂಶೋಷಸ್ತಪಃ ಕೃಚ್ಛ್ರಾದಿ ನೋ ಮತಂ ॥ ೫೨ ॥

---

೪೮. ಭಕ್ತಿರೂಪವಾದ ನನ್ನ ಸೇವೆಯು ತಪಸ್ಸು, ಜಪ, ಕರ್ಮ, ಧ್ಯಾನ, ಜ್ಞಾನ ಎಂದು ಐದು ಬಗೆಯಾಗಿರುವುದು.

೪೯. ಎಲ್ಲ ಜನರಿಗೂ ತಿಳಿಯುವಂತೆ ಪೂಜಾಸಾಮಗ್ರಿಗಳಿಂದ ನನ್ನನ್ನು ಪೂಜಿಸುವುದು, ಬಾಹ್ಯಪೂಜೆಯು. ತನ್ನೊಬ್ಬನಿಗೆ ಮಾತ್ರ ತಿಳಿಯುವಂತೆ ಮನಸ್ಸಿನಲ್ಲಿಯೇ ಮಾಡುವ ಪೂಜೆಯು ಆಭ್ಯಂತರವೆನಿಸುವುದು.

೫೦-೫೧. ಸಾಮಾನ್ಯವಾದ ಮನಸ್ಸು ಮನಸ್ಸೆನಿಸುವುದಿಲ್ಲ. ನನ್ನಲ್ಲಿ ಆಸಕ್ತವಾದ ಚಿತ್ತವನ್ನೇ ಮನಸ್ಸೆಂದು ಹೇಳುವರು. ನನ್ನ ನಾಮಗಳಲ್ಲಿ ಆಸಕ್ತವಾದ ಮಾತುಗಳೇ ಮಾತುಗಳೆನಿಸುವುವು. ಬೇರೆಯಾದುವುಗಳು ಮಾತುಗಳಲ್ಲ. ನನ್ನ ಅಪ್ಪಣೆಯಿಂದ ಭಸ್ಮ ತ್ರಿಪುಂಡ್ರಾದಿಗಳನ್ನು ಧರಿಸಿ ನನ್ನ ಪೂಜಾದಿ ಉಪಚಾರಗಳನ್ನು ಮಾಡುವ ಶರೀರವೇ ಶರೀರವೆನಿಸುವುವು. ಮಿಕ್ಕವು ಶರೀರಗಳೆನಿಸುವುದಿಲ್ಲ.

೫೨-೫೩. ಬಾಹ್ಯವಾದ ಯಾಗಾದಿಗಳು ಕರ್ಮವಲ್ಲ. ನನ್ನ ಪೂಜೆಯೇ ಕರ್ಮವು. ಕೃಚ್ಛ್ರಚಾಂದ್ರಾಯಣಾದಿಗಳು ತಪಸ್ಸಲ್ಲ. ನನಗೋಸ್ಕರವಾಗಿ

ಜಪಃ ಪಂಚಾಕ್ಷರಾಭ್ಯಾಸಃ ಪ್ರಣವಾಭ್ಯಾಸ ಏವ ಚ ।
ರುದ್ರಾಧ್ಯಾಯಾದಿಕಾಭ್ಯಾಸೋ ನ ವೇದಾಧ್ಯಯನಾದಿಕಂ ॥ ೫೩ ॥

ಧ್ಯಾನಂ ಮದ್ರೂಪಚಿಂತಾದ್ಯಂ ನಾತ್ಮಾದ್ಯರ್ಥಸಮಾಧಯಃ ।
ಮಮಾಗಮಾರ್ಥವಿಜ್ಞಾನಂ ಜ್ಞಾನಂ ನಾನ್ಯಾರ್ಥವೇದನಂ ॥ ೫೪ ॥

ಬಾಹ್ಯೇ ವಾಭ್ಯಂತರೇ ವಾಥ ಯತ್ರ ಸ್ಯಾನ್ಮನಸೋ ರತಿಃ ।
ಪ್ರಾಗ್ವಾಸನಾವಶಾದ್ದೇವಿ ತತ್ತ್ವನಿಷ್ಠಾಂ ಸಮಾಚರೇತ್ ॥ ೫೫ ॥

ಬಾಹ್ಯಾದಾಭ್ಯಂತರಂ ಶ್ರೇಷ್ಠಂ ಭವೇಚ್ಛತಗುಣಾಧಿಕಂ ।
ಅಸಂಕರತ್ವಾದ್ದೋಷಾಣಾಂ ದೃಷ್ಟಾನಾಮುಪ್ಯಸಂಭವಾತ್ ॥ ೫೬ ॥

---

ಶರೀರಶೋಷಣೆ ಮಾಡುವುದೇ ತಪಸ್ಸು. ಪಂಚಾಕ್ಷರಮಂತ್ರವನ್ನಾಗಲಿ ಪ್ರಣವ ಮಂತ್ರವನ್ನಾಗಲಿ, ರುದ್ರಾಧ್ಯಯನವನ್ನಾಗಲಿ, ಆವೃತ್ತಿಮಾಡುವುದೇ ಜಪ ವೆನಿಸುವುದು. ವೇದಮಂತ್ರಗಳ ಅರ್ಥ ತಿಳಿಯದೆ ಸುಮ್ಮನೆ ಪಠಿಸುವುದು ಮಂತ್ರಜಪವೆನಿಸುವುದಿಲ್ಲ.

೫೪. ಸ್ವಪ್ರಯೋಜನವನ್ನು ಚಿಂತಿಸುವುದು ಧ್ಯಾನವಲ್ಲ. ನನ್ನ ರೂಪ ವನ್ನು ಚಿಂತಿಸುತ್ತಿರುವುದೇ ಧ್ಯಾನವೆನಿಸುವುದು. ಶಿವಾಗಮಶಾಸ್ತ್ರದ ತಿಳಿವಳಿ ಕೆಯೇ ವಿಜ್ಞಾನವೆನಿಸುವುದು.

೫೫. ಎಲೌ ದೇವಿ, ಹೊರಗಾಗಲಿ ಒಳಗಾಗಲಿ ಮನಸ್ಸು ಎಲ್ಲಿ ಆಸಕ್ತ ವಾಗುವುದೋ ಅಲ್ಲಿಯೇ ಪೂರ್ವಜನ್ಮವಾಸನಾಬಲದಿಂದ ತತ್ತ್ವವಿಚಾರವನ್ನು ಮಾಡುತ್ತಿರಬೇಕು.

೫೬. ಬಾಹ್ಯವಾಗಿ ವಿಚಾರಮಾಡುವುದಕ್ಕಿಂತ ತನ್ನ ಮನಸ್ಸಿನೊಳಗೆ ಮನನಾದಿಗಳಿಂದ ತತ್ತ್ವವಿಚಾರಮಾಡುವುದು ನೂರು ಪಾಲು ಉತ್ತಮವಾದುದು. ಮನಸ್ಸಿನಲ್ಲಿ ವಿಚಾರಮಾಡುವ ಸಂದರ್ಭದಲ್ಲಿ ದೋಷದೃಷ್ಟಿಯಾಗಲಿ, ಅಥವಾ ಅನೇಕ ದೋಷಗಳ ಸಂಬಂಧವಾಗಲಿ ಇರುವುದಿಲ್ಲ.

ಶೌಚಮಾಭ್ಯಂತರಂ ವಿದ್ಯಾನ್ನ ಬಾಹ್ಯಂ ಶೌಚಮುಚ್ಯತೇ ।
ಅಂತಃಶೌಚವಿಮುಕ್ತಾತ್ಮಾ ಶುಚಿರಪ್ಯಶುಚಿರ್ಯತಃ ॥ ೫೭ ॥

ಬಾಹ್ಯಮಾಭ್ಯಂತರಂ ಚೈವ ಭಜನಂ ಭಾವಪೂರ್ವಕಂ ।
ನ ಭಾವರಹಿತಂ ದೇವಿ ವಿಪ್ರಲಂಭೈಕಕಾರಣಂ ॥ ೫೮ ॥

ಕೃತಕೃತ್ಯಸ್ಯ ಪೂತಸ್ಯ ಮಮ ಕಿಂ ಕ್ರಿಯತೇ ನರೈಃ ।
ಬಹಿರ್ವಾಭ್ಯಂತರಂ ವಾಥ ಮಯಾ ಭಾವೋ ಹಿ ಗೃಹ್ಯತೇ ॥ ೫೯ ॥

ಭಾವೈಕಾತ್ಮಾ ಕ್ರಿಯಾ ದೇವಿ ಮಮ ಧರ್ಮಃ ಸನಾತನಃ ।
ಮನಸಾ ಕರ್ಮಣಾ ವಾಚಾ ಹ್ಯನಪೇಕ್ಷ್ಯ ಫಲಂ ಕ್ವಚಿತ್ ॥ ೬೦ ॥

ಫಲೋದ್ದೇಶೇನ ದೇವೇಶಿ ಲಘುರ್ಮಮ ಸಮಾಶ್ರಯಃ ।
ಫಲಾರ್ಥೀ ತದಭಾವೇ ಮಾಂ ಪರಿತ್ಯಕ್ತುಂ ಕ್ಷಮೋ ಯತಃ ॥ ೬೧ ॥

೫೭. ಹೊರಗಿನ ದೇಹಾದಿಗಳ ಶುಚಿಯು ಶುಚಿಯಲ್ಲ. ಒಳಗಿನ ಮನಸ್ಸಿನ ಶುಚಿಯೇ ಶುಚಿಯೆನಿಸುವುದು. ಮನಸ್ಸಿನ ಶುದ್ಧಿಯಿಲ್ಲದೆ ದೇಹವು ಶುದ್ಧವಾಗಿದ್ದರೂ ಮನುಜನು ಅಶುಚಿಯೆನಿಸುವನು.

೫೮-೫೯. ಹೊರಗೂ ಒಳಗೂ ಭಕ್ತಿಯಿಂದ ನನ್ನ ಸೇವೆ ಮಾಡುವುದೇ ಭಜನವೆನಿಸುವುದು. ಭಕ್ತಿಯಿಲ್ಲದ ಸೇವೆಯು ಮೋಸಕ್ಕೆ ಕಾರಣವಾಗುವುದು. ಕೃತಾರ್ಥನೂ, ಪರಿಶುದ್ಧನೂ ಆದ ನನಗೆ ಮನುಜನು ಏನು ಮಾಡಬಲ್ಲನು ? ಅವನಿಂದ ನನಗೆ ಆಗಬೇಕಾದುದೇನು ? ಹೊರಗಾಗಲಿ ಒಳಗಾಗಲಿ ಭಕ್ತಿಯಿದ್ದರೆ ಅವರು ನನಗೆ ಗ್ರಾಹ್ಯರಾಗುವರು. ಎಂದರೆ ಭಕ್ತಿಯುಳ್ಳವರಿಗೆ ನಾನು ಅನುಗ್ರಹವನ್ನು ಮಾಡುವೆನು. ಎಲೌ ದೇವಿ, ಅನಾದಿಯಾದ ಶಿವಧರ್ಮಕ್ಕೆ ಭಕ್ತಿಯೇ ಮುಖ್ಯವಾದ ಅಂಗವಾಗಿರುವುದು.

೬೦-೬೧. ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದಲೂ, ಫಲಾಪೇಕ್ಷೆಯಿಲ್ಲದಿರಬೇಕು. ಫಲಾಪೇಕ್ಷೆಯಿಂದ ನನ್ನನ್ನು ಭಜಿಸುವವನು ಫಲಪ್ರಾಪ್ತಿಯಾಗದಿದ್ದರೆ ನನ್ನನ್ನು ಬಿಟ್ಟುಬಿಡುವನು. ಆದುದರಿಂದ ಫಲಾಪೇಕ್ಷೆಯಿಂದ ನನ್ನನ್ನಾಶ್ರಯಿಸುವುದು ಕೇವಲ ಕೀಳಾದುದು.

ಫಲಾರ್ಥಿನೋಽಪಿ ಯಸ್ಯೈವ ಮಯಿ ಚಿತ್ತಂ ಪ್ರತಿಷ್ಠಿತಂ ।
ಭಾವಾನುರೂಪಫಲದಸ್ತಸ್ಯಾಪ್ಯಹಮನಿಂದಿತೇ ॥ ೬೨ ॥

ಫಲಾನಪೇಕ್ಷಯಾ ಯೇಷಾಂ ಮನೋ ಮತ್ಪ್ರವಣಂ ಭವೇತ್ ।
ಪ್ರಾರ್ಥಯೇಯುಃ ಫಲಂ ಪಶ್ಚಾದ್ಭಕ್ತಾಸ್ತೇಽಪಿ ಮಮ ಪ್ರಿಯಾಃ ॥ ೬೩ ॥

ಪಾಕ್ಸಂಸ್ಕಾರವಶಾದೇವ ಯೇ ವಿಚಿಂತ್ಯ ಫಲಾಫಲೇ ।
ವಿವಶಾ ಮಾಂ ಪ್ರಪದ್ಯಂತೇ ಮಮ ಪ್ರಿಯತಮಾ ಮತಾಃ ॥ ೬೪ ॥

ಮಲ್ಲಾಭಾನ್ನ ಪರೋ ಲಾಭಸ್ತೇಷಾಮಸ್ತಿ ಯಥಾತಥಂ ।
ಮಮಾಪಿ ಲಾಭಸ್ತಲ್ಲಾಭಾನ್ನಾಪರಃ ಪರಮೇಶ್ವರಿ ॥ ೬೫ ॥

ಮದನುಗ್ರಹತಸ್ತೇಷಾಂ ಭಾವೋ ಮಯಿ ಸಮರ್ಪಿತಃ ।
ಫಲಂ ಪರಮನಿರ್ವಾಣಂ ಪ್ರಯಚ್ಛತಿ ಬಲಾದಿವ ॥ ೬೬ ॥

---

೬೨. ನಿರ್ದುಷ್ಟಳಾದ ಎಲೌ ಪಾರ್ವತಿ, ಫಲಾಪೇಕ್ಷೆಯುಳ್ಳವನಾದರೂ ಅವನ ಮನಸ್ಸು ನನ್ನಲ್ಲಿ ನೆಲಸಿದ್ದರೆ ಅವನ ಭಕ್ತಿಗೆ ತಕ್ಕಷ್ಟು ಫಲವನ್ನು ಅವನಿಗೂ ಕೊಡುವೆನು.

೬೩. ಯಾರ ಮನಸ್ಸು ಫಲಾಪೇಕ್ಷೆಯಿಲ್ಲದೆ ನನ್ನಲ್ಲಿ ಆಸಕ್ತವಾಗಿರುವುದೋ ಅವರು ಆಮೇಲೆ ಫಲವನ್ನು ಅಪೇಕ್ಷಿಸಿದರೂ ಅವರೂ ನನಗೆ ಪ್ರೀತಿಪಾತ್ರರಾದ ಭಕ್ತರಾಗುವರು.

೬೪. ಯಾವ ಜನರು ಫಲಾಫಲಗಳನ್ನು ಯೋಚಿಸದೆ ಪೂರ್ವಜನ್ಮಸಂಸ್ಕಾರವಶದಿಂದಲೇ ನನ್ನನ್ನು ಶರಣುಹೊಂದುವರೋ ಅವರು ನನಗೆ ಅತ್ಯಂತ ಪ್ರೀತಿಪಾತ್ರರಾದವರು.

೬೫. ನನ್ನ ಪ್ರಾಪ್ತಿಗಿಂತ ಉತ್ತಮವಾದ ಪ್ರಾಪ್ತಿಯು ಅವರಿಗೆ ಹೇಗಿಲ್ಲವೋ ಹಾಗೆಯೇ ನನಗೂ ಅಂತಹ ಭಕ್ತರ ಪ್ರಾಪ್ತಿಗಿಂತ ಉತ್ತಮವಾದ ಪ್ರಾಪ್ತಿಯೂ ಇರುವುದಿಲ್ಲ.

೬೬. ನನ್ನ ಅನುಗ್ರಹದಿಂದ ಅವರ ಭಕ್ತಿಯು ನನಗೆ ಸಮರ್ಪಿತವಾಗುವುದು. ಆ ಭಕ್ತಿಯು ಬಲಾತ್ಕಾರವಾಗಿಯಾದರೂ ಶ್ರೇಷ್ಠವಾದ ಮೋಕ್ಷಫಲವನ್ನು ಕೊಟ್ಟೇಕೊಡುವುದು.

**ಮಹಾತ್ಮನಾಮನನ್ಯಾನಾಂ ಮಯಿ ಸಂನ್ಯಸ್ತಚೇತಸಾಂ ।**
**ಅಷ್ಟಧಾ ಲಕ್ಷಣಂ ಪ್ರಾಹುರ್ಮಮ ಧರ್ಮಾಧಿಕಾರಿಣಾಂ ॥ ೬೭ ॥**

**ಮದ್ಭಕ್ತಜನವಾತ್ಸಲ್ಯಂ ಪೂಜಾಯಾಂ ಚಾನುಮೋದನಂ ।**
**ಸ್ವಯಮಭ್ಯರ್ಚನಂ ಚೈವ ಮದರ್ಥೇ ಚಾಂಗಚೇಷ್ಟಿತಂ ॥ ೬೮ ॥**

**ಮತ್ಕಥಾಶ್ರವಣೇ ಭಕ್ತಿಃ ಸ್ವರನೇತ್ರಾಂಗವಿಕ್ರಿಯಾಃ ।**
**ಮಮಾನುಸ್ಮರಣಂ ನಿತ್ಯಂ ಯಶ್ಚ ಮಾಮುಪಜೀವತಿ ॥ ೬೯ ॥**

**ಏವಮಷ್ಟವಿಧಂ ಚಿಹ್ನಂ ಯಸ್ಮಿನ್ಮ್ಲೇಚ್ಛೇಽಪಿ ವರ್ತತೇ ।**
**ಸ ವಿಪ್ರೇಂದ್ರೋ ಮುನಿಃ ಶ್ರೀಮಾನ್ಸ ಯತಿಸ್ಸ ಚ ಪಂಡಿತಃ ॥ ೭೦ ॥**

೬೭. ನನ್ನಲ್ಲಿಯೇ ಮನಸ್ಸನ್ನು ನೆಲಗೊಳಿಸಿದ ಮಹಾಮಹಿಮರಾದ ನನ್ನ ಭಕ್ತರು ನನಗಿಂತ ಬೇರೆಯವರಲ್ಲ. ಇವರು ಎಂಟು ವಿಧವಾದ ಲಕ್ಷಣಗಳಿಂದಕೂಡಿರುವರೆಂದು ಶಿವಧರ್ಮಾಧಿಕಾರಿಗಳು ಹೇಳುವರು.

೬೮-೬೯. ಆ ಲಕ್ಷಣಗಳು ಯಾವುವೆಂದರೆ—ನನ್ನ ಭಕ್ತರಲ್ಲಿ ಪ್ರೀತಿ, ನನ್ನ ಪೂಜೆಯನ್ನು ಶ್ಲಾಘಿಸುವುದು, ತಾನೂ ಪೂಜಿಸುವುದು, ನನಗೋಸ್ಕರವಾಗಿ ತನ್ನ ಸಮಸ್ತ ಅವಯವಗಳಿಂದಲೂ ಸಹಕರಿಸಿ ಪೂಜಾದಿ ಕಾರ್ಯವನ್ನು ಮಾಡುವುದು, ನನ್ನ ಕಥೆಯನ್ನು ಕೇಳುವುದರಲ್ಲಿ ಆಸಕ್ತಿ, ಹೀಗೆ ಕೇಳುವುದರಿಂದುಂಟಾದ ಭಕ್ತಿಯಿಂದ ಧ್ವನಿ, ಕಣ್ಣು, ಮುಂತಾದ ಅವಯವಗಳಲ್ಲಿ ಭಕ್ತ್ಯುದ್ರೇಕವು ತೋರುವಿಕೆ, ಯಾವಾಗಲೂ ನನ್ನ ಧ್ಯಾನ, ನನ್ನನ್ನೇ ಆಶ್ರಯಿಸಿ ಜೀವಿಸುವುದು ಎಂಬಿವೇ ಆ ಎಂಟು ಲಕ್ಷಣಗಳು.

೭೦. ಈರೀತಿಯಾದ ಎಂಟು ವಿಧವಾದ ಚಿಹ್ನೆಗಳು ಯಾವನಲ್ಲಿದ್ದರೂ, ಅವನು ಮ್ಲೇಚ್ಛನೇ ಆದರೂ ಅವನನ್ನು ಬ್ರಾಹ್ಮಣಶ್ರೇಷ್ಠನಂತೆಯೂ, ಮುನಿಯಂತೆಯೂ, ವಿದ್ವಾಂಸನಾದ ಯತಿಯಂತೆಯೂ, ಪಂಡಿತನಂತೆಯೂ ತಿಳಿಯಬೇಕು.

**ನ ಮೇ ಪ್ರಿಯಶ್ಚತುರ್ವೇದೀ ಮದ್ಭಕ್ತಃ ಶ್ವಪಚೋಽಪಿ ಯಃ ।**
**ತಸ್ಮೈ ದೇಯಂ ತತೋ ಗ್ರಾಹ್ಯಂ ಸ ಚ ಪೂಜ್ಯೋ ಯಥಾ ಹ್ಯಹಂ ॥ ೭೧ ॥**

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥ ೭೨ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯಸಂಹಿತಾಯಾ-**
**ಮುತ್ತರಭಾಗೇ ಶಿವಭಕ್ತಿವರ್ಣನಂ ನಾಮ**
**ದಶಮೋಽಧ್ಯಾಯಃ**

---

೭೧. ನನ್ನ ಭಕ್ತನಲ್ಲದವನು ನಾಲ್ಕು ವೇದಗಳನ್ನು ತಿಳಿದಿದ್ದರೂ, ಅವನು ನನಗೆ ಪ್ರೀತಿಪಾತ್ರನಲ್ಲ. ನನ್ನ ಭಕ್ತನು ಚಂಡಾಲನಾದರೂ ಅವನಿಗೆ ದಾನವನ್ನು ಕೊಡಬಹುದು. ಅವನಿಂದ ದಾನವನ್ನು ತೆಗೆದುಕೊಳ್ಳಬಹುದು. ಅವನು ನನ್ನಂತೆಯೇ ಪೂಜ್ಯನಾಗಿರುವನು.

೭೨. ಪತ್ರೆ, ಪುಷ್ಪ, ಫಲ, ಜಲ ಇವುಗಳನ್ನು ಯಾವನು ಭಕ್ತಿಯಿಂದ ನನಗೆ ಸಮರ್ಪಿಸುವನೋ ಅವನಿಗೆ ನಾನು ಕಾಣದಿರುವುದಿಲ್ಲ. ಅವನು ನನಗೆ ಕಾಣದಿರುವುದಿಲ್ಲ. ಎಂದರೆ ಅವನನ್ನು ಬಿಟ್ಟು ನಾನಿರುವುದಿಲ್ಲ, ನನ್ನನ್ನು ಬಿಟ್ಟು ಅವನಿರುವುದಿಲ್ಲ. ಅವನು ನನ್ನಲ್ಲಿಯೇ ಐಕ್ಯನಾಗುವನು.

ಇಲ್ಲಿಗೆ ಶ್ರೀಶಿವಮಹಾಪುರಾಣದ ಏಳನೆಯ ವಾಯುವೀಯಸಂಹಿತೆಯ
ಉತ್ತರಭಾಗದಲ್ಲಿ ಶಿವಭಕ್ತಿವರ್ಣನವೆಂಬ ಹತ್ತನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ಏಕಾದಶೋऽಧ್ಯಾಯಃ

॥ ಈಶ್ವರ ಉವಾಚ ॥

ಅಥ ವಕ್ಷ್ಯಾಮಿ ದೇವೇಶಿ ಭಕ್ತಾನಾಮಧಿಕಾರಿಣಾಂ ।
ವಿದುಷಾಂ ದ್ವಿಜಮುಖ್ಯಾನಾಂ ವರ್ಣಧರ್ಮಂ ಸಮಾಸತಃ ॥ ೧ ॥

ತ್ರಿಸ್ನಾನಂ ಚಾಗ್ನಿಕಾರ್ಯಂ ಚ ಲಿಂಗಾರ್ಚನಮನುಕ್ರಮಾತ್ ।
ದಾನಮೀಶ್ವರಭಾವಶ್ಚ ದಯಾ ಸರ್ವತ್ರ ಸರ್ವದಾ ॥ ೨ ॥

## ಹನ್ನೊಂದನೆಯ ಅಧ್ಯಾಯವು.

೧. ಈಶ್ವರನು ಹೇಳಿದನು—ಎಲೌ ದೇವೇಶಿಯೇ, ನನ್ನ ಭಕ್ತರೂ, ಮೋಕ್ಷಾಧಿಕಾರಿಗಳೂ, ವಿದ್ವಾಂಸರೂ ಆದ ಬ್ರಾಹ್ಮಣರೇ ಮೊದಲಾದ ವರ್ಣದವರು ಆಚರಿಸಬೇಕಾದ ವರ್ಣಾಶ್ರಮಧರ್ಮವನ್ನು ಸಂಗ್ರಹವಾಗಿ ಹೇಳುವೆನು, ಕೇಳು.

೨-೬. ಪ್ರತಿದಿನವೂ ಮೂರು ಕಾಲಗಳಲ್ಲಿ ಸ್ನಾನ, ಅಗ್ನಿಕಾರ್ಯ, ಲಿಂಗಾರ್ಚನೆ, ದಾನ, ಈಶ್ವರಧ್ಯಾನ, ಎಲ್ಲಾ ಪ್ರಾಣಿಗಳಲ್ಲಿಯೂ ದಯೆ, ಸತ್ಯ

ಸತ್ಯಂ ಸಂತೋಷಮಾಸ್ತಿಕ್ಯಮಹಿಂಸಾ ಸರ್ವಜಂತುಷು ।
ಹ್ರೀಶ್ರದ್ಧಾಧ್ಯಯನಂ ಯೋಗಸ್ಸದಾಧ್ಯಾಪನಮೇವ ಚ ॥ ೩ ॥

ವ್ಯಾಖ್ಯಾನಂ ಬ್ರಹ್ಮಚರ್ಯಂ ಚ ಶ್ರವಣಂ ಚ ತಪಃ ಕ್ಷಮಾ ।
ಶೌಚಂ ಶಿಖೋಪವೀತಂ ಚ ಉಷ್ಣೀಷಂ ಚೋತ್ತರೀಯಕಂ ॥ ೪ ॥

ನಿಷಿದ್ಧಾಸೇವನಂ ಚೈವ ಭಸ್ಮರುದ್ರಾಕ್ಷಧಾರಣಂ ।
ಪರ್ವಣ್ಯಭ್ಯರ್ಚನಂ ದೇವಿ ಚತುರ್ದಶ್ಯಾಂ ವಿಶೇಷತಃ ॥ ೫ ॥

ಪಾನಂ ಚ ಬ್ರಹ್ಮಕೂರ್ಚಸ್ಯ ಮಾಸಿ ಮಾಸಿ ಯಥಾವಿಧಿ ।
ಅಭ್ಯರ್ಚನಂ ವಿಶೇಷೇಣ ತೇನೈವ ಸ್ನಾಪ್ಯ ಮಾಂ ಪ್ರಿಯೇ ॥ ೬ ॥

ಸರ್ವಕ್ರಿಯಾನ್ನಸಂತ್ಯಾಗಃ ಶ್ರಾದ್ಧಾನ್ನಸ್ಯ ಚ ವರ್ಜನಂ ।
ತಥಾ ಪರ್ಯುಷಿತಾನ್ನಸ್ಯ ಯಾವಕಸ್ಯ ವಿಶೇಷತಃ ॥ ೭ ॥

---

ಸಂಭಾಷಣೆ, ತೃಪ್ತಿ, ಗುರುದೇವಾದಿಗಳಲ್ಲಿ ಭಕ್ತಿ, ಎಲ್ಲಾ ಪ್ರಾಣಿಗಳನ್ನೂ ಹಿಂಸಿಸದಿರುವುದು, ಅಕಾರ್ಯಗಳನ್ನು ಮಾಡುವ ವಿಷಯದಲ್ಲಿ ನಾಚಿಕೆ, ವೇದಶಾಸ್ತ್ರಾದಿಗಳಲ್ಲಿ ನಂಬಿಕೆ, ಮತ್ತು ಅವುಗಳ ಅಭ್ಯಾಸ, ಯೋಗಾಭ್ಯಾಸ, ಇತರರಿಗೆ ವೇದಶಾಸ್ತ್ರಾದಿಗಳನ್ನು ಹೇಳಿಕೊಡುವುದು ಮತ್ತು ಇವುಗಳ ವಿಷಯವಾದ ಉಪನ್ಯಾಸಮಾಡುವುದು, ಬ್ರಹ್ಮಚರ್ಯನಿಯಮ, ಉಪನಿಷತ್ತು ಮುಂತಾದುವುಗಳ ಶ್ರವಣ, ತಪಸ್ಸು, ಸಹನೆ, ಶುಚಿತ್ವ, ಶಿಖಾಯಜ್ಞೋಪವೀತಗಳ ಧಾರಣೆ, ಮೇಲುಹೊದಿಕೆ, ತಲೆಗೆ ಪಾಗನ್ನಿಡುವುದು, ನಿಷಿದ್ಧಪದಾರ್ಥಗಳನ್ನು ಸೇವಿಸದಿರುವುದು, ಭಸ್ಮ ರುದ್ರಾಕ್ಷಿಗಳನ್ನು ಧರಿಸುವುದು, ಪೂರ್ಣಿಮಾ, ಅಮಾವಾಸ್ಯಾ, ಚತುರ್ದಶಿ ಈ ದಿನಗಳಲ್ಲಿ ವಿಶೇಷ ಕ್ರಮದಿಂದ ಶಿವನನ್ನು ಪೂಜಿಸುವುದು, ಪ್ರತಿ ತಿಂಗಳಲ್ಲಿಯೂ ವಿಧಿಗನುಸಾರವಾಗಿ ಬ್ರಹ್ಮಕೂರ್ಚದ ನೀರನ್ನು ಪಾನಮಾಡುವುದು, ಅದೇ ನೀರಿನಿಂದ ಯಾಗರೂಪಿಯಾದ ನನಗೆ ಅಭಿಷೇಕವನ್ನು ಮಾಡಿ ಪೂಜಿಸುವುದು, ಇವುಗಳು ದ್ವಿಜರು ಆಚರಿಸಬೇಕಾದ ಧರ್ಮಗಳು.

೭–೯. ಸಕಲವಿಧ ಕರ್ಮಸಂಬಂಧವಾದ ಅನ್ನಗಳನ್ನೂ, ಶ್ರಾದ್ಧಾನ್ನವನ್ನೂ, ಎಲ್ಲರೂ ಊಟಮಾಡಿದ ಮೇಲೆ ಮಿಕ್ಕ ಅನ್ನವನ್ನೂ, ಯವಾನ್ನವನ್ನೂ

ಮದ್ಯಸ್ಯ ಮದ್ಯಗಂಧಸ್ಯ ನೈವೇದ್ಯಸ್ಯ ಚ ವರ್ಜನಂ ।
ಸಾಮಾನ್ಯಂ ಸರ್ವವರ್ಣಾನಾಂ ಬ್ರಾಹ್ಮಣಾನಾಂ ವಿಶೇಷತಃ ॥ ೮ ॥

ಕ್ಷಮಾ ಶಾಂತಿಶ್ಚ ಸಂತೋಷಸ್ಸತ್ಯಮಸ್ತೇಯಮೇವ ಚ ।
ಬ್ರಹ್ಮಚರ್ಯಂ ಮಮ ಜ್ಞಾನಂ ವೈರಾಗ್ಯಂ ಭಸ್ಮಸೇವನಂ ॥ ೯ ॥

ಸರ್ವಸಂಗನಿವೃತ್ತಿಶ್ಚ ದಶೈತಾನಿ ವಿಶೇಷತಃ ।
ಲಿಂಗಾನಿ ಯೋಗಿನಾಂ ಭೂಯೋ ದಿವಾ ಭಿಕ್ಷಾಶನಂ ತಥಾ ॥ ೧೦ ॥

ವಾನಪ್ರಸ್ಥಾಶ್ರಮಸ್ಥಾನಾಂ ಸಮಾನಮಿದಮಿಷ್ಯತೇ ।
ರಾತ್ರೌ ನ ಭೋಜನಂ ಕಾರ್ಯಂ ಸರ್ವೇಷಾಂ ಬ್ರಹ್ಮಚಾರಿಣಾಂ ॥ ೧೧ ॥

ಅಧ್ಯಾಪನಂ ಯಾಜನಂ ಚ ಕ್ಷತ್ರಿಯಸ್ಯಾಪ್ರತಿಗ್ರಹಃ ।
ವೈಶ್ಯಸ್ಯ ಚ ವಿಶೇಷೇಣ ಮಯಾ ನಾತ್ರ ವಿಧೀಯತೇ ॥ ೧೨ ॥

ಅಥವಾ ಗಂಜಿಯನ್ನೂ, ಮದ್ಯಗಳನ್ನೂ, ಕ್ಷುದ್ರದೇವತೆಗಳಿಗೆ ನಿವೇದನಮಾಡಿದ ಅನ್ನವನ್ನೂ, ಬಿಟ್ಟುಬಿಡಬೇಕು. ಇವುಗಳೆಲ್ಲ ಎಲ್ಲ ವರ್ಣದವರಿಗೂ ಸಾಮಾನ್ಯವಾದ ಧರ್ಮಗಳು. ಬ್ರಾಹ್ಮಣರಾದವರು ಇವುಗಳನ್ನು ಮುಖ್ಯವಾಗಿ ಆಚರಿಸಲೇ ಬೇಕು. ಇನ್ನು ಸಹನೆ, ಶಾಂತಿ, ತೃಪ್ತಿ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಶಿವಸಂಬಂಧವಾದ ತಿಳುವಳಿಕೆ, ವೈರಾಗ್ಯ, ಭಸ್ಮಧಾರಣೆ, ಸರ್ವಸಂಗನಿವೃತ್ತಿ ಈ ಹತ್ತು ಗುಣಗಳು ಬ್ರಾಹ್ಮಣರು ಆಚರಿಸಬೇಕಾದ ವಿಶೇಷಧರ್ಮಗಳು.

೧೦-೧೧. ಯೋಗಿಗಳು, ವಾನಪ್ರಸ್ಥರು, ಹಗಲು ಭಿಕ್ಷಾನ್ನವನ್ನು ಭೋಜನಮಾಡಬೇಕು. ಇವರಲ್ಲದೆ ಎಲ್ಲಾ ಬ್ರಹ್ಮಚಾರಿಗಳೂ, ರಾತ್ರಿಯು ಹೊತ್ತು ಭೋಜನವನ್ನು ಮಾಡಬಾರದು.

೧೨. ಕ್ಷತ್ರಿಯರಿಗೂ, ವೈಶ್ಯರಿಗೂ, ಇತರರಿಗೆ ವೇದವನ್ನು ಹೇಳಿಕೊಡುವುದು, ಯಜ್ಞಾದಿಗಳನ್ನು ಮಾಡಿಸುವುದು, ದಾನವನ್ನು ತೆಗೆದುಕೊಳ್ಳುವುದು. ಈ ಮೂರು ಕರ್ಮಗಳನ್ನು ಈ ಶಿವಧರ್ಮದಲ್ಲಿ ನಾನು ವಿಧಾನಮಾಡಿಲ್ಲ. ಎಂದರೆ ಕ್ಷತ್ರಿಯ ವೈಶ್ಯರಿಗೆ ಅಧ್ಯಾಪನ, ಯಾಜನ, ಪ್ರತಿಗ್ರಹಗಳನ್ನು ಮಾಡಲು ಅಧಿಕಾರವಿಲ್ಲ.

ರಕ್ಷಣಂ ಸರ್ವವರ್ಣಾನಾಂ ಯುದ್ಧೇ ಶತ್ರುವಧಸ್ತಥಾ ।
ದುಷ್ಟಪಕ್ಷಿಮೃಗಾಣಾಂ ಚ ದುಷ್ಟಾನಾಂ ಶಾಸನಂ ನೃಣಾಂ ॥ ೧೩ ॥
ಅವಿಶ್ವಾಸಶ್ಚ ಸರ್ವತ್ರ ವಿಶ್ವಾಸೋ ಮಮ ಯೋಗಿಷು ।
ಸ್ತ್ರೀಸಂಸರ್ಗಶ್ಚ ಕಾಲೇಷು ಚಮೂರಕ್ಷಣಮೇವ ಚ ॥ ೧೪ ॥
ಸದಾ ಸಂಚಾರಿತೈಶ್ಚಾರೈರ್ಲೋಕವೃತ್ತಾಂತವೇದನಂ ।
ಸದಾಸ್ತ್ರಧಾರಣಂ ಚೈವ ಭಸ್ಮಕಂಚುಕಧಾರಣಂ ॥ ೧೫ ॥
ರಾಜ್ಞಾಂ ಮಮಾಶ್ರಮಸ್ಥಾನಾಮೇಷ ಧರ್ಮಸ್ಯ ಸಂಗ್ರಹಃ ।
ಗೋರಕ್ಷಣಂ ಚ ವಾಣಿಜ್ಯಂ ಕೃಷಿರ್ವೈಶ್ಯಸ್ಯ ಕಥ್ಯತೇ ॥ ೧೬ ॥
ಶುಶ್ರೂಷೇತರವರ್ಣಾನಾಂ ಧರ್ಮಃ ಶೂದ್ರಸ್ಯ ಕಥ್ಯತೇ ।
ಉದ್ಯಾನಕರಣಂ ಚೈವ ಮಮ ಕ್ಷೇತ್ರಸಮಾಶ್ರಯಃ ॥ ೧೭ ॥
ಧರ್ಮಪತ್ನ್ಯಾಸ್ತು ಗಮನಂ ಗೃಹಸ್ಥಸ್ಯ ವಿಧೀಯತೇ ।
ಬ್ರಹ್ಮಚರ್ಯಂ ವನಸ್ಥಾನಾಂ ಯತೀನಾಂ ಬ್ರಹ್ಮಚಾರಿಣಾಂ ॥ ೧೮ ॥

---

೧೩-೧೫. ಶಿವಧರ್ಮವನ್ನಾಚರಿಸುವ ಕ್ಷತ್ರಿಯರಿಗೆ ಸಮಸ್ತ ವರ್ಣದವರನ್ನೂ ಕಾಪಾಡುವುದು, ಯುದ್ಧದಲ್ಲಿ ಶತ್ರುಗಳನ್ನು ಕೊಲ್ಲುವುದು, ಕೆಟ್ಟದಾದ ಪಕ್ಷಿಗಳು. ಮೃಗಗಳು, ಮನುಷ್ಯರು ಇವರುಗಳನ್ನು ದಂಡಿಸುವುದು. ಶಿವಯೋಗಿಗಳಲ್ಲಿ ನಂಬಿಕೆ, ಇತರರಲ್ಲಿ ನಂಬಿಕೆಯಿಲ್ಲದಿರುವುದು, ಋತು ಸಮಯದಲ್ಲಿ ಸ್ತ್ರೀಸಂಗ, ಸೇನಾರಕ್ಷಣೆ, ಗೂಢಚಾರರಿಂದ ಎಲ್ಲಾ ದೇಶದ ವೃತ್ತಾಂತಗಳನ್ನು ತಿಳಿಯುವುದು, ಯಾವಾಗಲೂ ಅಸ್ತ್ರವನ್ನು ಹಿಡಿದಿರುವುದು, ಭಸ್ಮಕವಚವನ್ನು ಧರಿಸಿರುವುದು ಇವುಗಳು ಮುಖ್ಯ ಧರ್ಮಗಳು.

೧೬. ಗೋವುಗಳನ್ನು ಕಾಪಾಡುವುದು, ವ್ಯಾಪಾರಮಾಡುವುದು, ವ್ಯವಸಾಯ ಮಾಡುವುದು ಈ ಮೂರೂ ವೈಶ್ಯರಿಗೆ ವಿಶೇಷಧರ್ಮಗಳು.

೧೭-೧೮. ತೋಟಗಳನ್ನು ಮಾಡಿಕೊಂಡು ಶಿವಕ್ಷೇತ್ರಗಳಲ್ಲಿ ವಾಸಮಾಡುತ್ತ, ಇತರ ವರ್ಣದವರನ್ನು ಸೇವಿಸುವುದು ಶೂದ್ರರಿಗೆ ಮುಖ್ಯಧರ್ಮವು. ಋತುಕಾಲದಲ್ಲಿ ಧರ್ಮಪತ್ನಿಯ ಸಂಗವನ್ನು ಮಾಡುವುದು ಗೃಹಸ್ಥನಾದವನಿಗೆ ಮುಖ್ಯ ಧರ್ಮವಾಗಿರುವುದು. ವಾನಪ್ರಸ್ಥರು, ಯತಿಗಳು, ಬ್ರಹ್ಮಚಾರಿಗಳು ಇವರಿಗೆ ಸ್ತ್ರೀಸಂಗಮಾಡದಿರುವುದೇ ಮುಖ್ಯ ಧರ್ಮವು.

ಸ್ತ್ರೀಣಾಂ ತು ಭರ್ತೃಶುಶ್ರೂಷಾ ಧರ್ಮೋ ನಾನ್ಯಸ್ಸನಾತನಃ ।
ಮಮಾರ್ಚನಂ ಚ ಕಲ್ಯಾಣಿ ನಿಯೋಗೋ ಭರ್ತುರಸ್ತಿ ಚೇತ್ ॥ ೧೯ ॥

ಯಾ ನಾರೀ ಭರ್ತೃಶುಶ್ರೂಷಾಂ ವಿಹಾಯ ವ್ರತತತ್ಪರಾ ।
ಸಾ ನಾರೀ ನರಕಂ ಯಾತಿ ನಾತ್ರ ಕಾರ್ಯಾ ವಿಚಾರಣಾ ॥ ೨೦ ॥

ಅಥ ಭರ್ತೃವಿಹೀನಾಯಾ ವಕ್ಷ್ಯೇ ಧರ್ಮಂ ಸನಾತನಂ ।
ವ್ರತಂ ದಾನಂ ತಪಃ ಶೌಚಂ ಭೂಶಯ್ಯಾ ನಕ್ತಭೋಜನಂ ॥ ೨೧ ॥

ಬ್ರಹ್ಮಚರ್ಯಂ ಸದಾ ಸ್ನಾನಂ ಭಸ್ಮನಾ ಸಲಿಲೇನ ವಾ ।
ಶಾಂತಿರ್ಮೌನಂ ಕ್ಷಮಾ ನಿತ್ಯಂ ಸಂವಿಭಾಗೋ ಯಥಾವಿಧಿ ॥ ೨೨ ॥

ಅಷ್ಟಮ್ಯಾಂ ಚ ಚತುರ್ದಶ್ಯಾಂ ಪೌರ್ಣಮಾಸ್ಯಾಂ ವಿಶೇಷತಃ ।
ಏಕಾದಶ್ಯಾಂ ಚ ವಿಧಿವದುಪವಾಸೋ ಮಮಾರ್ಚನಂ ॥ ೨೩ ॥

ಇತಿ ಸಂಕ್ಷೇಪತಃ ಪ್ರೋಕ್ತೋ ಮಯಾಶ್ರಮನಿಷೇವಿಣಾಂ ।
ಬ್ರಹ್ಮಕ್ಷತ್ರವಿಶಾಂ ದೇವಿ ಯತೀನಾಂ ಬ್ರಹ್ಮಚಾರಿಣಾಂ ॥ ೨೪ ॥

೧೯–೨೦. ಸ್ತ್ರೀಯರಿಗೆ ಗಂಡನ ಸೇವೆಯನ್ನು ಮಾಡುವುದನ್ನು ಬಿಟ್ಟು ಬೇರೆ ಧರ್ಮವಿಲ್ಲ. ಗಂಡನ ಅಪ್ಪಣೆಯಿದ್ದರೆ ನನ್ನ ಪೂಜೆಯನ್ನು ಮಾಡಬಹುದು. ಗಂಡನ ಸೇವೆಯನ್ನು ಬಿಟ್ಟು ವ್ರತಾದಿಗಳನ್ನು ಮಾಡುವುದರಲ್ಲಾಸಕ್ತಳಾಗುವ ಸ್ತ್ರೀಯು ನರಕಕ್ಕೆ ಹೋಗುವಳು.

೨೧-೨೫. ಇನ್ನು ಮುಂದೆ ಗಂಡನಿಲ್ಲದ ಸ್ತ್ರೀಯರು ಆಚರಿಸಬೇಕಾದ ಸನಾತನ ಧರ್ಮವನ್ನು ಹೇಳುವೆನು. ವ್ರತಗಳು, ದಾನ, ತಪಸ್ಸು, ಶುಚಿತ್ವ, ಭೂಮಿಯಮೇಲೆ ಮಲಗುವುದು, ಒಂದು ಹೊತ್ತು ಊಟ, ಬ್ರಹ್ಮಚರ್ಯ, ನೀರಿನಿಂದಾಗಲಿ ಭಸ್ಮದಿಂದಾಗಲಿ ಸ್ನಾನ, ಶಾಂತಿ, ಮೌನ, ಸಹನೆ ಇವುಗಳನ್ನು ವಿಧಿಗನುಸಾರವಾಗಿ ನಡೆಸಿಕೊಂಡು ಬರುವುದು, ಅಷ್ಟಮಿ, ಚತುರ್ದಶಿ, ಪೂರ್ಣಿಮೆ, ಏಕಾದಶಿ ಈ ದಿನಗಳಲ್ಲಿ ವಿಧಿಗನುಸಾರವಾಗಿ ನನ್ನನ್ನು ಪೂಜಿಸುವುದು, ಇವುಗಳೇ ಅವರ ಮುಖ್ಯ ಧರ್ಮಗಳು. ಇದುವರೆಗೆ ನಾನು ಸಮಸ್ತ

ತಥೈವ ವಾನಪ್ರಸ್ಥಾನಾಂ ಗೃಹಸ್ಥಾನಾಂ ಚ ಸುಂದರಿ ।
ಶೂದ್ರಾಣಾಮಥ ನಾರೀಣಾಂ ಧರ್ಮ ಏಷ ಸನಾತನಃ ॥ ೨೫ ॥

ಧ್ಯೇಯಸ್ತ್ವಯ್ಯಾಹಂ ದೇವೇಶಿ ಸದಾ ಜಾಪ್ಯಃ ಷಡಕ್ಷರಃ ।
ವೇದೋಕ್ತಮಖಿಲಂ ಧರ್ಮಮಿತಿ ಧರ್ಮಾರ್ಥಸಂಗ್ರಹಃ ॥ ೨೬ ॥

ಅಥ ಯೇ ಮಾನವಾ ಲೋಕೇ ಸ್ವೇಚ್ಛಯಾ ಧೃತವಿಗ್ರಹಾಃ ।
ಭಾವಾತಿಶಯಸಂಪನ್ನಾಃ ಪೂರ್ವಸಂಸ್ಕಾರಸಂಯುತಾಃ ॥ ೨೭ ॥

ವಿರಕ್ತಾ ವಾಽನುರಕ್ತಾ ವಾ ಸ್ತ್ರ್ಯಾದೀನಾಂ ವಿಷಯೇಷ್ವಪಿ ।
ಪಾಪೈರ್ನ ತೇ ವಿಲಿಂಪಂತೇ ಪದ್ಮಪತ್ರಮಿವಾಂಭಸಾ ॥ ೨೮ ॥

ತೇಷಾಂ ಮಮಾತ್ಮವಿಜ್ಞಾನಂ ವಿಶುದ್ಧಾನಾಂ ವಿವೇಕಿನಾಂ ।
ಮತ್ಪ್ರಸಾದಾದ್ವಿಶುದ್ಧಾನಾಂ ದುಃಖಮಾಶ್ರಮರಕ್ಷಣಾತ್ ॥ ೨೯ ॥

ವಾದ ವರ್ಣ ಆಶ್ರಮ ಮತ್ತು ಸ್ತ್ರೀಯರ ಧರ್ಮಗಳನ್ನು ಸಂಗ್ರಹವಾಗಿ ಹೇಳಿರುವೆನು. ಎಲೌ ಸುಂದರಿಯಾದ ದೇವಿಯೇ, ಇದೇ ಸನಾತನ ಧರ್ಮವು.

೨೬. ಎಲೌ ಪಾರ್ವತಿ, ನೀನು ನನ್ನನ್ನು ಯಾವಾಗಲೂ ಧ್ಯಾನ ಮಾಡುತ್ತ ನನ್ನ ಷಡಕ್ಷರಮಂತ್ರವನ್ನು ಜಪಿಸುತ್ತಿರು. ನಾನು ಹೇಳಿದ ಈ ಧರ್ಮಗಳೆಲ್ಲವೂ, ವೇದೋಕ್ತವಾದವುಗಳು.

೨೭-೨೮. ಈ ಭೂಲೋಕದಲ್ಲಿ ಶರೀರವನ್ನು ಧರಿಸಿದ ಮನುಜರು ಪೂರ್ವಜನ್ಮದ ಸಂಸ್ಕಾರಗಳಿಂದ ಕೂಡಿ ನನ್ನಲ್ಲಿ ಅತ್ಯಂತ ಭಕ್ತಿಭಾವದಿಂದಿದ್ದರೆ ಸ್ತ್ರೀಯರ ವಿಷಯದಲ್ಲಿ ವಿರಕ್ತರಾಗಲಿ, ಅನುರಕ್ತರಾಗಲಿ ಹೇಗಿದ್ದರೂ ಅವರು ತಾವರೆ ಎಲೆಯಮೇಲಿರುವ ನೀರು ಎಲೆಗೆ ಅಂಟದಿರುವಂತೆ ಪಾಪಗಳ ಸಂಬಂಧವನ್ನು ಹೊಂದದಿರುವರು.

೨೯-೩೦. ಪರಿಶುದ್ಧರೂ, ವಿವೇಕಿಗಳೂ ಆದ ಅವರಿಗೆ ನನ್ನ ಸ್ವರೂಪವಾದ ಆತ್ಮಜ್ಞಾನವುಂಟಾಗುವುದು. ನನ್ನ ಅನುಗ್ರಹದಿಂದ ಪರಿಶುದ್ಧರಾದ ಅವರಿಗೆ ಆಶ್ರಮಧರ್ಮವನ್ನು ರಕ್ಷಿಸುವ ಕಷ್ಟವಾಗಲಿ, ಕೃತ್ಯಾಕೃತ್ಯವಿಮರ್ಶೆ

ನಾಸ್ತಿ ಕೃತ್ಯಮಕೃತ್ಯಂ ಚ ಸಮಾಧಿರ್ವಾ ಪರಾಯಣಂ ।
ನ ವಿಧಿರ್ನ ನಿಷೇಧಶ್ಚ ತೇಷಾಂ ಮಮ ಯಥಾ ತಥಾ ॥ ೩೦ ॥

ಯಥೇಹ ಪರಿಪೂರ್ಣಸ್ಯ ಸಾಧ್ಯಂ ಮಮ ನ ವಿದ್ಯತೇ ।
ತಥೈವ ಕೃತಕೃತ್ಯಾನಾಂ ತೇಷಾಮಪಿ ನ ಸಂಶಯಃ ॥ ೩೧ ॥

ಮದ್ಭಕ್ತಾನಾಂ ಹಿತಾರ್ಥಾಯ ಮಾನುಷಂ ಭಾವಮಾಶ್ರಿತಾಃ ।
ರುದ್ರಲೋಕಾತ್ಪರಿಭ್ರಷ್ಟಾಸ್ತೇ ರುದ್ರಾ ನಾತ್ರ ಸಂಶಯಃ ॥ ೩೨ ॥

ಮಮಾನುಶಾಸನಂ ಯದ್ವದ್ಬ್ರಹ್ಮಾದೀನಾಂ ಪ್ರವರ್ತಕಂ ।
ತಥಾ ನರಾಣಾಮನ್ಯೇಷಾಂ ತನ್ನಿಯೋಗಃ ಪ್ರವರ್ತಕಃ ॥ ೩೩ ॥

ಮಮಾಜ್ಞಾಧಾರಭಾವೇನ ಸದ್ಭಾವಾತಿಶಯೇನ ಚ ।
ತದಾಲೋಕನಮಾತ್ರೇಣ ಸರ್ವಪಾಪಕ್ಷಯೋ ಭವೇತ್ ॥ ೩೪ ॥

---

ಯಾಗಲಿ, ಧ್ಯಾನರೂಪವಾದ ಸಮಾಧಿಯಾಗಲಿ ವಿಧಿನಿಷೇಧಗಳಾಗಲಿ ಇರುವುದಿಲ್ಲ. ಅವರು ನನ್ನಂತೆಯೇ ಇರತಕ್ಕವರು.

೩೧-೩೨. ಪರಿಪೂರ್ಣಸ್ವರೂಪನಾದ ನನಗೆ ಅಸಾಧ್ಯವಾದ ಕಾರ್ಯವು ಒಂದಾದರೂ ಹೇಗೆ ಇರುವುದಿಲ್ಲವೋ, ಹಾಗೆಯೇ ಕೃತಾರ್ಥರಾದ ನನ್ನ ಭಕ್ತರಿಗೂ ಅಸಾಧ್ಯವಾದುದಾವುದೂ ಇಲ್ಲ. ಅವರು ನನ್ನ ಭಕ್ತರ ಹಿತಕ್ಕಾಗಿ ಮನುಷ್ಯ ಜನ್ಮವನ್ನು ಪಡೆದು ರುದ್ರಲೋಕದಿಂದ ಬಂದ ರುದ್ರರೇ ಎಂಬುದರಲ್ಲಿ ಸಂದೇಹವಿರುವುದಿಲ್ಲ.

೩೩-೩೪. ನನ್ನ ಆಜ್ಞೆಯು ಹೇಗೆ ಬ್ರಹ್ಮಾದಿದೇವತೆಗಳಿಗೆ ಸೃಷ್ಟಿ ಮುಂತಾದ ಕಾರ್ಯಪ್ರವರ್ತನೆಯನ್ನುಂಟುಮಾಡಿರುವುದೋ ಹಾಗೆಯೇ ಮಿಕ್ಕ ಮಾನವರಿಗೆಲ್ಲ ಆ ನನ್ನ ಭಕ್ತರ ಆಜ್ಞೆಯೇ ಕಾರ್ಯಪ್ರವರ್ತನೆಯನ್ನುಂಟುಮಾಡುವುದು. ನನ್ನ ಅಪ್ಪಣೆಯ ಆಧಾರದಿಂದಲೂ, ಅವರ ಸದ್ಭಕ್ತಿಯ ಅತಿಶಯದಿಂದಲೂ ಆ ನನ್ನ ಭಕ್ತರ ದರ್ಶನಮಾತ್ರದಿಂದ ಸಮಸ್ತ ಪಾಪಗಳೂ ನಾಶವಾಗುವುವು.

ಪ್ರತ್ಯಯಾಶ್ಚ ಪ್ರವರ್ತಂತೇ ಪ್ರಶಸ್ತಫಲಸೂಚಕಾಃ ।
ಮಯಿ ಭಾವವತಾಂ ಪುಂಸಾಂ ಪ್ರಾಗದೃಷ್ಟಾರ್ಥಗೋಚರಾಃ ॥ ೩೫ ॥

ಕಂಪಸ್ವೇದೋಽಶ್ರುಪಾತಶ್ಚ ಕಂಠೇ ಚ ಸ್ವರವಿಕ್ರಿಯಾ ।
ಆನಂದಾದ್ಯುಪಲಬ್ಧಿಶ್ಚ ಭವೇದಾಕಸ್ಮಿಕೀ ಮುಹುಃ ॥ ೩೬ ॥

ಸ ತೈರ್ವ್ಯಸ್ತೈಸ್ಸಮಸ್ತೈರ್ವಾ ಲಿಂಗೈರವ್ಯಭಿಚಾರಿಭಿಃ ।
ಮಂದಮಧ್ಯೋತ್ತಮೈರ್ಭಾವೈರ್ವಿಜ್ಞೇಯಾಸ್ತೇ ನರೋತ್ತಮಾಃ ॥ ೩೭ ॥

ಯಥಾಯೋಽಗ್ನಿಸಮಾವೇಶಾನ್ನಾಯೋ ಭವತಿ ಕೇವಲಂ ।
ತಥೈವ ಮಮ ಸಾನ್ನಿಧ್ಯಾನ್ನ ತೇ ಕೇವಲಮಾನುಷಾಃ ॥ ೩೮ ॥

ಹಸ್ತಪಾದಾದಿಸಾಧರ್ಮ್ಯಾದ್ರುದ್ರಾನ್ಮರ್ತ್ಯವಪುರ್ಧರಾನ್ ।
ಪ್ರಾಕೃತಾನಿವ ಮನ್ವಾನೋ ನಾವಜಾನೀತ ಪಂಡಿತಃ ॥ ೩೯ ॥

---

೩೫–೩೬. ನನ್ನಲ್ಲಿ ಭಕ್ತಿಯುಳ್ಳ ಜನರಿಗೆ, ಅಪರ ಅದೃಷ್ಟವು ಉತ್ತಮವಾದ ಫಲವನ್ನು ಕೊಡುವುದೆಂದು ಸೂಚಿಸುವ ಅವಯವಗಳ ಕಂಪನ, ಬೆವರು, ಆನಂದಬಾಷ್ಪ, ಗದ್ಗದಸ್ವರ, ಸಂತೋಷಾತಿಶಯ ಮುಂತಾದ ಆಕಸ್ಮಿಕವಾದ ಚಿನ್ಹೆಗಳು ಬಾರಿಬಾರಿಗೂ ಉಂಟಾಗುವುವು.

೩೭. ಈ ಮೇಲೆ ಹೇಳಿದ ಚಿನ್ಹೆಗಳು ಒಂದೊಂದೇ ಇದ್ದರೂ ಅಥವಾ ಎಲ್ಲವೂ ಇದ್ದರೂ ಅವರಿಗೆ ಶಿವನಲ್ಲಿರುವ ಭಕ್ತಿಗನುಸಾರವಾಗಿ ಅವರನ್ನು ಮಂದ ಮಧ್ಯಮ, ಉತ್ತಮ ಭಕ್ತರನ್ನಾಗಿ ತಿಳಿಯಬೇಕು.

೩೮. ಕಬ್ಬಿಣದ ಗುಂಡನ್ನು ಬೆಂಕಿಯಲ್ಲಿ ಕಾಯಿಸುವುದರಿಂದ ಬರೀ ಕಬ್ಬಿಣವಾಗದೆ ಅದು ಹೇಗೆ ನಾನಾವಸ್ತುಗಳಾಗುವದೋ ಹಾಗೆ ಭಕ್ತರು ನನ್ನ ಸನ್ನಿಧಾನದಿಂದ ಸಾಮಾನ್ಯ ಮನುಷ್ಯರಾಗುವುದಿಲ್ಲ. ಎಂದರೆ ಸಾಮಾನ್ಯ ಮನುಷ್ಯರಿಗಿಂತ ಹೆಚ್ಚಿನ ಮಹತ್ವವುಳ್ಳವರಾಗುವರು.

೩೯–೪೦. ಸಾಮಾನ್ಯ ಮನುಷ್ಯರಿಗಿರುವಂತೆ ಕೈಕಾಲು ಮೊದಲಾದ ಅವಯವಗಳಿಂದ ಯುಕ್ತವಾದ ಶರೀರವನ್ನು ಧರಿಸಿದ ಮಾತ್ರಕ್ಕೆ ನನ್ನ ಭಕ್ತ

**ಅವಜ್ಞಾನಂ ಕೃತಂ ತೇಷು ನರೈರ್ವ್ಯಾಮೂಢಚೇತಸೈಃ ।**
**ಆಯುಃ ಶ್ರಿಯಂ ಕುಲಂ ಶೀಲಂ ಹಿತ್ವಾ ನಿರಯಮಾವಹೇತ್ ॥ ೪೦ ॥**

**ಬ್ರಹ್ಮವಿಷ್ಣುಸುರೇಶಾನಾಮಪಿ ತೂಲಾಯತೇ ಪದಂ ।**
**ಮತ್ತೋಽನ್ಯದನಪೇಕ್ಷಾಣಾಮುದ್ಧೃತಾನಾಂ ಮಹಾತ್ಮನಾಂ ॥ ೪೧ ॥**

**ಅಶುದ್ಧಂ ಬೌದ್ಧಮೈಶ್ವರ್ಯಂ ಪ್ರಾಕೃತಂ ಪೌರುಷಂ ತಥಾ ।**
**ಗುಣೇಶಾನಾಮತಸ್ತ್ಯಾಜ್ಯಂ ಗುಣಾತೀತಪದೈಷಿಣಾಂ ॥ ೪೨ ॥**

**ಅಥ ಕಿಂ ಬಹುನೋಕ್ತೇನ ಶ್ರೇಯಃಪ್ರಾಪ್ತ್ಯೈಕಸಾಧನಂ ।**
**ಮಯಿ ಚಿತ್ತಸಮಾಸಂಗೋ ಯೇನ ಕೇನಾಪಿ ಹೇತುನಾ ॥ ೪೩ ॥**

---

ರನ್ನು ಸಾಮಾನ್ಯ ಜನರಂತೆ ವಿದ್ವಾಂಸನಾದವನು ಪರಿಗಣಿಸಬಾರದು. ಆ ನನ್ನ ಭಕ್ತರು ರುದ್ರಸ್ವರೂಪರೇ ಆಗಿರುವರು. ಅವರನ್ನು ನಿಕೃಷ್ಟವಾಗಿ ಭಾವಿಸಿದರೆ ಅವರ ಆಯಸ್ಸು, ಸಂಪತ್ತು, ವಂಶ, ಗೌರವ ಸದಾಚಾರ ಇವುಗಳನ್ನು ಕಳೆದುಕೊಂಡು ನರಕಕ್ಕೆ ಹೋಗಬೇಕಾಗುವುದು.

೪೧. ಮಹಾಮಹಿಮರಾದ ನನ್ನ ಭಕ್ತರು ವೈರಾಗ್ಯಶಾಲಿಗಳಾಗಿದ್ದರೂ ನನ್ನ ಅನುಗ್ರಹಬಲದಿಂದ ಅವರಿಗೆ ಬ್ರಹ್ಮ, ವಿಷ್ಣು, ದೇವೇಂದ್ರರ ಸ್ಥಾನಮಾನ ಗೌರವಗಳು ಸುಲಭವಾಗಿ ಲಭಿಸುವುವು.

೪೨. ಸತ್ವರಜಸ್ತಮೋಗುಣಪ್ರಧಾನರಾದ ವಿಷ್ಣು, ಬ್ರಹ್ಮ, ರುದ್ರರ ಸಂಪತ್ತುಗಳು ಅಶುದ್ಧವಾದುದಾಗಿಯೂ, ಬುದ್ಧಿಕಲ್ಪಿತವಾದುವಾಗಿಯೂ, ಪ್ರಕೃತಿ ಪುರುಷಸಂಬಂದವಾದುದೂ ಆಗಿರುವುದರಿಂದ ಅವು ಸ್ಥಿರವಲ್ಲ. ಗುಣಾತೀತವಾದ ನನ್ನ ಪರಮಪದವೆಂಬ ಸ್ಥಾನವನ್ನು ಬಯಸುವವರು ನಾಶಕರವಾದ ಈ ವಿಷ್ಣು ಮೊದಲಾದವರ ಪದವಿಯನ್ನು ಬೇಡವೆಂದು ತ್ಯಾಗಮಾಡುವರು.

೪೩. ಹೆಚ್ಚಾಗಿ ಹೇಳುವುದರಿಂದೇನುಪ್ರಯೋಜನ? ಯಾವುದಾದರೊಂದು ಕಾರಣದಿಂದ ನನ್ನಲ್ಲಿ ಮನಸ್ಸನ್ನು ನೆಲೆಗೊಳಿಸುವುದೇ ಶ್ರೇಯಸ್ಸನ್ನು ಹೊಂದುವುದಕ್ಕೆ ಮುಖ್ಯಕಾರಣವಾದುದಾಗಿರುವುದು ಎಂದನು.

॥ ಉಪಮನ್ಯುರುವಾಚ ॥

ಇತ್ಥಂ ಶ್ರೀಕಂಠನಾಥೇನ ಶಿವೇನ ಪರಮಾತ್ಮನಾ ।
ಹಿತಾಯ ಜಗತಾಮುಕ್ತೋ ಜ್ಞಾನಸಾರಾರ್ಥಸಂಗ್ರಹಃ ॥ ೪೪ ॥

ವಿಜ್ಞಾನಸಂಗ್ರಹಸ್ಯಾಸ್ಯ ವೇದಶಾಸ್ತ್ರಾಣಿ ಕೃತ್ಸ್ನಶಃ ।
ಸೇತಿಹಾಸಪುರಾಣಾನಿ ವಿದ್ಯಾ ವ್ಯಾಖ್ಯಾನವಿಸ್ತರಃ ॥ ೪೫ ॥

ಜ್ಞಾನಂ ಜ್ಞೇಯಮನುಷ್ಠೇಯಮಧಿಕಾರೋಽಥ ಸಾಧನಂ ।
ಸಾಧ್ಯಂ ಚೇತಿ ಷಡರ್ಥಾನಾಂ ಸಂಗ್ರಹಸ್ತ್ವೇಷ ಸಂಗ್ರಹಃ ॥ ೪೬ ॥

ಗುರೋರಧಿಕೃತಂ ಜ್ಞಾನಂ ಜ್ಞೇಯಂ ಪಾಶಃ ಪಶುಃ ಪತಿಃ ।
ಲಿಂಗಾರ್ಚನಾದ್ಯನುಷ್ಠೇಯಂ ಭಕ್ತಸ್ತ್ವಧಿಕೃತೋಽಪಿ ಯಃ ॥ ೪೭ ॥

ಸಾಧನಂ ಶಿವಮಂತ್ರಾದ್ಯಂ ಸಾಧ್ಯಂ ಶಿವಸಮಾನತಾ ।
ಷಡರ್ಥಸಂಗ್ರಹಸ್ಯಾಸ್ಯ ಜ್ಞಾನಾತ್ಸರ್ವಜ್ಞತೋಚ್ಯತೇ ॥ ೪೮ ॥

---

೪೪–೪೫. ಹೀಗೆ ಪರಮಾತ್ಮನಾದ ಶಿವನು ಲೋಕಹಿತಕ್ಕಾಗಿ ಜ್ಞಾನಸಾರವಾದ ವಿಷಯವನ್ನು ಸಂಗ್ರಹವಾಗಿ ಹೇಳಿದನು. ಈ ಸಂಗ್ರಹವಾದ ಜ್ಞಾನಕ್ಕೆ ಸಕಲ ವೇದಗಳೂ, ಶಾಸ್ತ್ರಗಳೂ, ಇತಿಹಾಸ ಪುರಾಣಗಳೂ, ವ್ಯಾಖ್ಯಾನ ರೂಪವಾದ ವಿಸ್ತಾರವಾದ ವಿದ್ಯೆಯಾಗಿರುವುದು.

೪೬. ಈ ಜ್ಞಾನಸಾರ ಸಂಗ್ರಹದಲ್ಲಿ ಜ್ಞಾನ, ಜ್ಞೇಯ, ಅನುಷ್ಠಾನ, ಅಧಿಕಾರ, ಸಾಧನ, ಸಾಧ್ಯ ಎಂಬ ಆರು ವಿಷಯಗಳನ್ನು ಸಂಕ್ಷೇಪವಾಗಿ ಹೇಳಿರುವುದು.

೪೭–೪೮. ಗುರುವಿನ ದೆಸೆಯಿಂದ ಉಪದೇಶಮೂಲಕವಾಗಿ ಬಂದ ತಿಳುವಳಿಕೆಯೇ ಜ್ಞಾನವೆನಿಸುವುದು. ಪಾಶ, ಪಶು, ಪತಿ ಇವುಗಳ ಸ್ವರೂಪವೇ ಜ್ಞೇಯ (ತಿಳಿಯಬೇಕಾದುದು)ವೆನಿಸುವುದು. ಲಿಂಗಾರ್ಚನೆ ಮುಂತಾದುವೇ ಅನುಷ್ಠೇಯವೆನಿಸುವುದು. ಭಕ್ತನೇ ಅಧಿಕಾರಿಯು. ಶಿವಮಂತ್ರಾದಿಗಳೇ ಸಾಧನವಾದವುಗಳು. ಶಿವಸಮಾನತ್ವವೇ ಸಾಧ್ಯವೆನಿಸುವುದು. ಎಂದರೆ ಸಾಧಿಸಬೇಕಾದ ವಿಷಯವು. ಈ ಆರು ವಿಷಯಗಳನ್ನು ಸಂಪೂರ್ಣವಾಗಿ ತಿಳಿದುಕೊಳ್ಳುವುದೇ ಸರ್ವಜ್ಞತೆಯೆನಿಸುವುದು.

ಪ್ರಥಮಂ ಕರ್ಮಯಜ್ಞಾದೇರ್ಭಕ್ತ್ಯಾ ವಿತ್ತಾನುಸಾರತಃ ।
ಬಾಹ್ಯೇಽಭ್ಯರ್ಚ್ಯ ಶಿವಂ ಪಶ್ಚಾದಂತರ್ಯಾಗರತೋ ಭವೇತ್ ॥ ೪೯ ॥

ರತಿರಭ್ಯಂತರೇ ಯಸ್ಯ ನ ಬಾಹ್ಯೇ ಪುಣ್ಯಗೌರವಾತ್ ।
ನ ಕರ್ಮ ಕರಣೀಯಂ ಹಿ ಬಹಿಸ್ತಸ್ಯ ಮಹಾತ್ಮನಾ ॥ ೫೦ ॥

ಜ್ಞಾನಾಮೃತೇನ ತೃಪ್ತಸ್ಯ ಭಕ್ತ್ಯಾ ಶೈವಶಿವಾತ್ಮನಃ ।
ನಾಂತರ್ನ ಚ ಬಹಿಃ ಕೃಷ್ಣ ಕೃತ್ಯಮಸ್ತಿ ಕದಾಚನ ॥ ೫೧ ॥

ತಸ್ಮಾತ್ಕ್ರಮೇಣ ಸಂತ್ಯಜ್ಯ ಬಾಹ್ಯಮಾಭ್ಯಂತರಂ ತಥಾ ।
ಜ್ಞಾನೇನ ಜ್ಞೇಯಮಾಲೋಕ್ಯಾಜ್ಞಾನಂ ಚಾಪಿ ಪರಿತ್ಯಜೇತ್ ॥ ೫೨ ॥

೪೯. ಮೊದಲು ಭಕ್ತಿಯಿಂದ ತನ್ನಲ್ಲಿರುವ ದ್ರವ್ಯಕ್ಕನುಸಾರವಾಗಿ ಕರ್ಮ, ಯಜ್ಞಾದಿಗಳನ್ನು ಮಾಡಿ ಬಾಹ್ಯರೂಪವಾದ ಶಿವಲಿಂಗಾರ್ಚನೆ ಮುಂತಾದುವನ್ನು ಮಾಡಬೇಕು. ಆಮೇಲೆ ಅಂತರ್ಯಾಗವನ್ನು ಮಾಡಬೇಕು. ಎಂದರೆ ಮನಃಪೂಜಾದಿಗಳಲ್ಲಾಸಕ್ತನಾಗಬೇಕು.

೫೦. ಪುಣ್ಯಪರಿಪಾಕದಿಂದ ಯಾವ ಮನುಜನಿಗೆ ಮನಸ್ಸಿನಲ್ಲಿ ಶಿವ ಭಕ್ತಿಯು ನೆಲಸುವುದೋ ಆ ಮಹಾತ್ಮನಿಗೆ ಬಾಹ್ಯಕರ್ಮಗಳವಶ್ಯಕತೆಯಿಲ್ಲ.

೫೧. ಎಲೈ ಕೃಷ್ಣನೇ, ಜ್ಞಾನಾಮೃತದಿಂದ ತೃಪ್ತಿಹೊಂದಿದ ಶಿವ ಸ್ವರೂಪನಾದ ಭಕ್ತನಿಗೆ ಮನಸ್ಸಿನಲ್ಲಾಗಲಿ, ಹೊರಗಿನ ಅವಯವಗಳಿಂದಲಾಗಲಿ ಮಾಡಬೇಕಾದ ಕೆಲಸಗಳು ಯಾವಾಗಲೂ ಇರುವುದಿಲ್ಲ. ಅವನು ಬಾಹ್ಯಾಭ್ಯಂತರಕರ್ಮಗಳ ನಿಯಮಕ್ಕೆ ಒಳಪಡದೆ ಶಿವಧ್ಯಾನದಲ್ಲಾಸಕ್ತನಾಗಿರುವನು.

೫೨. ಆದುದರಿಂದ ಕ್ರಮವಾಗಿ ಬಾಹ್ಯಾಭ್ಯಂತರವ್ಯಾಪಾರಗಳನ್ನು ಬಿಟ್ಟು ಜ್ಞಾನದಿಂದ ಜ್ಞೇಯವಸ್ತುವನ್ನು ತಿಳಿದು ಬಳಿಕ ಆ ಜ್ಞಾನವನ್ನೂ ತ್ಯಾಗಮಾಡಬೇಕು. ಎಂದರೆ ಜ್ಞೇಯವಸ್ತುಸ್ವರೂಪವಾಗಿ ನಿಲ್ಲಬೇಕು.

ನೈಕಾಗ್ರ್ಯಂ ಚೇಚ್ಛಿವೇ ಚಿತ್ತಂ ಕಿಂ ಕೃತೇನಾಪಿ ಕರ್ಮಣಾ ।
ಏಕಾಗ್ರಮೇವ ಚೇಚ್ಚಿತ್ತಂ ಕಿಂ ಕೃತೇನಾಪಿ ಕರ್ಮಣಾ ॥ ೫೩ ॥

ತಸ್ಮಾತ್ಕರ್ಮಾಣ್ಯಕೃತ್ವಾ ವಾ ಕೃತ್ವಾ ವಾಂತರ್ಬಹಿಃ ಕ್ರಮಾತ್ ।
ಯೇನ ಕೇನಾಪ್ಯುಪಾಯೇನ ಶಿವೇ ಚಿತ್ತಂ ನಿವೇಶಯೇತ್ ॥ ೫೪ ॥

ಶಿವೇ ನಿವಿಷ್ಟಚಿತ್ತಾನಾಂ ಪ್ರತಿಷ್ಠಿತಧಿಯಾ ಸತಾಂ ।
ಪರತ್ರೇಹ ಚ ಸರ್ವತ್ರ ನಿರ್ವೃತಿಃ ಪರಮಾ ಭವೇತ್ ॥ ೫೫ ॥

ಇಹೋಂ ನಮಃ ಶಿವಾಯೇತಿ ಮಂತ್ರೇಣಾನೇನ ಸಿದ್ಧಯಃ ।
ಸ ತಸ್ಮಾದಧಿಗಂತವ್ಯಃ ಪರಾವರವಿಭೂತಯೇ ॥ ೫೬ ॥

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾಮುತ್ತರಭಾಗೇ ಶಿವಜ್ಞಾನವರ್ಣನಂ ನಾಮೈಕಾದಶೋಽಧ್ಯಾಯಃ**

೫೩. ಶಿವನಲ್ಲಿ ಮನಸ್ಸಿನ ಏಕಾಗ್ರತೆಯಿಲ್ಲದೆ ಮಾಡಿದ ಕರ್ಮಗಳು ಫಲದಾಯಕವಾಗುವುದಿಲ್ಲ. ಆ ಮನಸ್ಸು ಶಿವನಲ್ಲಿ ಏಕಾಗ್ರವೇ ಆಗಿಬಿಟ್ಟರೆ ಕರ್ಮಗಳನ್ನು ಮಾಡಬೇಕಾದುದೇ ಇಲ್ಲ.

೫೪. ಆದುದರಿಂದ ಬಾಹ್ಯಾಭ್ಯಂತರ ಕರ್ಮಗಳನ್ನು ಮಾಡಿಯಾಗಲಿ ಮಾಡದೆಯಾಗಲಿ, ಯಾವದಾದರೊಂದು ಉಪಾಯದಿಂದ ಮನಸ್ಸನ್ನು ಶಿವನಲ್ಲಿಯೇ ನೆಲೆಗೊಳಿಸಬೇಕು.

೫೫. ಶಿವನಲ್ಲಿ ಮನಸ್ಸನ್ನು ನೆಲೆಗೊಳಿಸಿದ ಸಜ್ಜನರಿಗೆ ಇಹಪರಗಳಲ್ಲಿ ಸಂಪೂರ್ಣವಾದ ಸೌಖ್ಯವು ಉಂಟಾಗುವುದು.

೫೬. ಈ ವಿಷಯದಲ್ಲಿ "ಓಂ ನಮಃ ಶಿವಾಯ" ಎಂಬ ಮಂತ್ರವು ಸಮಸ್ತ ಇಷ್ಟಾರ್ಥಗಳನ್ನೂ ಕೊಡುವುದಾದುದರಿಂದ ಅತ್ಯಂತ ಶ್ರೇಷ್ಠವಾದ ಆತ್ಮಸ್ವರೂಪಪ್ರಾಪ್ತಿಗಾಗಿ ಆ ಮಂತ್ರವನ್ನು ಗುರುಮುಖದಿಂದ ಉಪದೇಶಮಾಡಿಸಿಕೊಳ್ಳಬೇಕು.

ಇಲ್ಲಿಗೆ ಶ್ರೀಶಿವಮಹಾಪುರಾಣದಲ್ಲಿ ಏಳನೆಯ ವಾಯವೀಯಸಂಹಿತೆಯ
ಉತ್ತರಭಾಗದಲ್ಲಿ ಶಿವಜ್ಞಾನವರ್ಣನವೆಂಬ ಹನ್ನೊಂದನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ವಾಯುವೀಯಸಂಹಿತಾಯಾಮುತ್ತರಭಾಗೇ

## ದ್ವಾದಶೋಽಧ್ಯಾಯಃ

---

॥ ಶ್ರೀಕೃಷ್ಣ ಉವಾಚ ॥

**ಮಹರ್ಷಿವರ ಸರ್ವಜ್ಞ ಸರ್ವಜ್ಞಾನಮಹೋದಧೇ ।**
**ಪಂಚಾಕ್ಷರಸ್ಯ ಮಾಹಾತ್ಮ್ಯಂ ಶ್ರೋತುಮಿಚ್ಛಾಮಿ ತತ್ತ್ವತಃ ॥ ೧ ॥**

॥ ಉಪಮನ್ಯುರುವಾಚ ॥

**ಪಂಚಾಕ್ಷರಸ್ಯ ಮಾಹಾತ್ಮ್ಯಂ ವರ್ಷಕೋಟಿಶತೈರಪಿ ।**
**ಅಶಕ್ಯಂ ವಿಸ್ತರಾದ್ವಕ್ತುಂ ತಸ್ಮಾತ್ಸಂಕ್ಷೇಪತಃ ಶೃಣು ॥ ೨ ॥**

### ಹನ್ನೆರಡನೆಯ ಅಧ್ಯಾಯವು.

೧. ಶ್ರೀಕೃಷ್ಣನು ಕೇಳುವನು—ಎಲೈ ಉಪಮನ್ಯುಮುನಿಯೇ, ನೀನು ಸಮಸ್ತಜ್ಞಾನಗಳಿಗೂ ಜಲನಿಧಿಯಂತಿರುವೆ. ಮಹರ್ಷಿಗಳಲ್ಲಿ ಶ್ರೇಷ್ಠನು. ಈಗ ನಾನು ಪಂಚಾಕ್ಷರೀ ಮಂತ್ರದ ಮಹಿಮೆಯ ಸ್ವರೂಪವನ್ನು ವಿಸ್ತಾರವಾಗಿ ಕೇಳಬೇಕೆಂದಿರುವೆನು. ಅದನ್ನು ದಯವಿಟ್ಟು ಹೇಳಬೇಕೆನಲು,

೨. ಉಪಮನ್ಯುವಿಂತೆಂದನು—ಪಂಚಾಕ್ಷರ ಮಂತ್ರದ ಮಹಿಮೆಯನ್ನು ವಿಸ್ತಾರವಾಗಿ ಹೇಳಲು ನೂರುಕೋಟಿ ವರ್ಷವಾದರೂ, ಸಾಧ್ಯವಾಗಲಾರದು. ಆದುದರಿಂದ ಸಂಕ್ಷೇಪವಾಗಿ ಹೇಳುವೆನು, ಕೇಳು.

ವೇದೇ ಶಿವಾಗಮೇ ಚಾಯಮುಭಯತ್ರ ಷಡಕ್ಷರಃ ।
ಸರ್ವೇಷಾಂ ಶಿವಭಕ್ತಾನಾಮಶೇಷಾರ್ಥಪ್ರಸಾಧಕಃ ॥ ೩ ॥

ತದಲ್ಪಾಕ್ಷರಮರ್ಥಾಢ್ಯಂ ವೇದಸಾರಂ ವಿಮುಕ್ತಿದಂ ।
ಆಜ್ಞಾಸಿದ್ಧಮಸಂದಿಗ್ಧಂ ವಾಕ್ಯಮೇತಚ್ಛಿವಾತ್ಮಕಂ ॥ ೪ ॥

ನಾನಾಸಿದ್ಧಿಯುತಂ ದಿವ್ಯಂ ಲೋಕಚಿತ್ತಾನುರಂಜಕಂ ।
ಸುನಿಶ್ಚಿತಾರ್ಥಂ ಗಂಭೀರಂ ವಾಕ್ಯಂ ತತ್ಪಾರಮೇಶ್ವರಂ ॥ ೫ ॥

ಮಂತ್ರಂ ಸುಖಮುಖೋಚ್ಚಾರ್ಯಮಶೇಷಾರ್ಥಪ್ರಸಿದ್ಧಯೇ ।
ಪ್ರಾಹೋಂ ನಮಃ ಶಿವಾಯೇತಿ ಸರ್ವಜ್ಞಃ ಸರ್ವದೇಹಿನಾಂ ॥ ೬ ॥

ತದ್ಬೀಜಂ ಸರ್ವವಿದ್ಯಾನಾಂ ಮಂತ್ರಮಾದ್ಯಂ ಷಡಕ್ಷರಂ ।
ಅತಿಸೂಕ್ಷ್ಮಂ ಮಹಾರ್ಥಂ ಚ ಜ್ಞೇಯಂ ತದ್ವಟಬೀಜವತ್ ॥ ೭ ॥

---

೩-೪. ವೇದದಲ್ಲಿಯೂ, ಶಿವಾಗಮದಲ್ಲಿಯೂ, ಈ ಮಂತ್ರಕ್ಕೆ ಷಡಕ್ಷರ ಮಂತ್ರವೆಂದು ಹೆಸರು. ಇದು ಸಮಸ್ತ ಶಿವಭಕ್ತರಿಗೂ ಸಕಲ ಇಷ್ಟಾರ್ಥಗಳನ್ನೂ ಕೊಡುವುದು. ಸ್ವಲ್ಪವಾದ ಅಕ್ಷರಗಳಿದ್ದರೂ ವಿಶೇಷವಾದ ಅರ್ಥಗರ್ಭಿತವಾದುದು. ವೇದಮಂತ್ರಗಳಲ್ಲಿ ಸಾರಭೂತವಾದುದು. ಮೋಕ್ಷಫಲವನ್ನು ಕೊಡತಕ್ಕುದು. ಈ ಮಂಗಳಕರವಾದ ಮಂತ್ರವನ್ನು ಜಪಮಾಡುವವರ ಆಜ್ಞೆಯು ತಡೆಯಿಲ್ಲದೆ ನಡೆವುದೆಂಬ ವಿಷಯದಲ್ಲಿ ಸಂದೇಹವಿಲ್ಲ.

೫-೬. ಈ ಮಂತ್ರವನ್ನು ಸುಲಭವಾಗಿ ಉಚ್ಚರಿಸಲು ಸಾಧ್ಯವಾಗಿರುವುದು. ಜಪಮಾಡುವವರಿಗೆ ಸಕಲೇಷ್ಟಾರ್ಥಗಳನ್ನು ಕೊಡುವುದು, ಭಕ್ತರ ಮನಸ್ಸಂತೋಷಪಡಿಸುವುದು. ಪರಮೇಶ್ವರನ ಸ್ವರೂಪವನ್ನೇ ಸಾಕ್ಷಾತ್ತಾಗಿ ಪ್ರತಿಪಾದಿಸುವುದು. ಇಂತಹ "ಓಂ ನಮಃ ಶಿವಾಯ" ಎಂಬ ಮಂತ್ರವು ಸಲಕ ಇಷ್ಟಾರ್ಥಸಿದ್ಧಿಗಳನ್ನು ಕೊಡುವುದೆಂದು ಪರಮೇಶ್ವರನೇ ಹೇಳಿರುವನು.

೭. ಆ ಷಡಕ್ಷರಮಂತ್ರವು ಅಲದಬೀಜದಂತೆ ಸೂಕ್ಷ್ಮವಾಗಿದ್ದರೂ ವಿಶೇಷವಾಗಿ ಅರ್ಥಗರ್ಭಿತವಾಗಿರುವುದು. ಇದು ಸಮಸ್ತ ವಿದ್ಯಾರೂಪವಾದ ಮಂತ್ರಗಳಿಗೂ ಕಾರಣವಾಗಿರುವುದೆಂದು ತಿಳಿಯಬೇಕು.

**ದೇವೋ ಗುಣತ್ರಯಾತೀತಃ ಸರ್ವಜ್ಞಃ ಸರ್ವಕೃತ್ಪ್ರಭುಃ ।**
**ಓಮಿತ್ಯೇಕಾಕ್ಷರೇ ಮಂತ್ರೇ ಸ್ಥಿತಃ ಸರ್ವಗತಃ ಶಿವಃ ॥ ೮ ॥**

**ಈಶಾನಾದ್ಯಾನಿ ಸೂಕ್ಷ್ಮಾಣಿ ಬ್ರಹ್ಮಾಣ್ಯೇಕಾಕ್ಷರಾಣಿ ತು ।**
**ಮಂತ್ರೇ ನಮಶ್ಶಿವಾಯೇತಿ ಸಂಸ್ಥಿತಾನಿ ಯಥಾಕ್ರಮಂ ॥ ೯ ॥**

**ಮಂತ್ರೇ ಷಡಕ್ಷರೇ ಸೂಕ್ಷ್ಮೇ ಪಂಚಬ್ರಹ್ಮತನುಃ ಶಿವಃ ।**
**ವಾಚ್ಯವಾಚಕಭಾವೇನ ಸ್ಥಿತಃ ಸಾಕ್ಷಾತ್ಸ್ವಭಾವತಃ ।**
**ವಾಚ್ಯಃ ಶಿವೋಽಪ್ರಮೇಯತ್ವಾನ್ಮಂತ್ರಸ್ತದ್ವಾಚಕಃ ಸ್ಮೃತಃ ॥ ೧೦ ॥**

**ವಾಚ್ಯವಾಚಕಭಾವೋಽಯಮನಾದಿಃ ಸಂಸ್ಥಿತಸ್ತಯೋಃ ।**
**ಯಥಾಽನಾದಿಪ್ರವೃತ್ತೋಽಯಂ ಘೋರಸಂಸಾರಸಾಗರಃ ॥ ೧೧ ॥**

೮. ಸತ್ವರಜಸ್ತಮೋಗುಣಗಳಿಗೆ ಮೀರಿದವನೂ, ಸರ್ವಜ್ಞನೂ, ಸರ್ವಕಾರಣನೂ, ಸರ್ವವ್ಯಾಪಿಯೂ ಆದ ಸ್ವಾಮಿಯಾದ ಪರಮೇಶ್ವರನು ಓಂ ಎಂಬ ಏಕಾಕ್ಷರ ಮಂತ್ರದಲ್ಲಿ ಅಧಿಷ್ಠಿತನಾಗಿ ನೆಲೆಸಿರುವನು.

೯. ನಮಃ ಶಿವಾಯ ಎಂಬ ಐದು ಅಕ್ಷರದ ಮಂತ್ರದಲ್ಲಿ ಕ್ರಮವಾಗಿ ಈಶಾನ, ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷರೆಂಬ ಪಂಚಬ್ರಹ್ಮಮೂರ್ತಿಗಳು ಸೂಕ್ಷ್ಮರೂಪದಿಂದ ಒಂದೊಂದು ಅಕ್ಷರವನ್ನು ಆಶ್ರಯಿಸಿರುವರು.

೧೦. ಸೂಕ್ಷ್ಮವಾದ ಷಡಕ್ಷರ ಮಂತ್ರದಲ್ಲಿ ಪಂಚ ಬ್ರಹ್ಮಮೂರ್ತಿಸ್ವರೂಪನಾದ ಶಿವನು ವಾಚ್ಯವಾಚಕ ಸಂಬಂಧದಿಂದ ಸ್ವಭಾವಸಿದ್ಧವಾಗಿರುವನು. ಅಪ್ರಮೇಯನಾದ ಎಂದರೆ, ಅಳತೆಗೆ ಸಿಕ್ಕದವನಾದ ಶಿವನೇ ವಾಚ್ಯವು. ಷಡಕ್ಷರ ಮಂತ್ರವೇ ವಾಚಕವು. ಇಲ್ಲಿ ವಾಚ್ಯವಾಚಕವೆಂದರೆ, ಒಂದು ವಸ್ತುವನ್ನು ವಿವರಿಸುವ ವಾಕ್ಯವೇ ವಾಚಕವು. ವಿವರಿಸಲ್ಪಡುವ ವಸ್ತುವೇ ವಾಚ್ಯವು ಎಂದು ತಿಳಿಯಬೇಕು.

೧೧. ಈ ಭಯಂಕರವೆಂಬ ಸಂಸಾರಸಮುದ್ರವು ಹೇಗೆ ಅನಾದಿಯಾದುದೋ ಹಾಗೆಯೇ ಮಂತ್ರಕ್ಕೂ, ಶಿವನಿಗೂ, ವಾಚ್ಯವಾಚಕಭಾವವು ಅನಾದಿಯಾಗಿರುವುದು.

ಶಿವೋऽಪಿ ಹಿ ತಥಾನಾದಿಸ್ಸಂಸಾರಾನ್ಮೋಚಕಃ ಸ್ಥಿತಃ ।
ವ್ಯಾಧೀನಾಂ ಭೇಷಜಂ ಯದ್ವತ್ಪ್ರತಿಪಕ್ಷಃ ಸ್ವಭಾವತಃ ॥ ೧೨ ॥

ತದ್ವತ್ಸಂಸಾರದೋಷಾಣಾಂ ಪ್ರತಿಪಕ್ಷಃ ಶಿವಃ ಸ್ಮೃತಃ ।
ಅಸತ್ಯಸ್ಮಿಞ್ಜಗನ್ನಾಥೇ ತಮೋಭೂತಮಿದಂ ಭವೇತ್ ॥ ೧೩ ॥

ಅಚೇತನತ್ವಾತ್ಪ್ರಕೃತೇರಜ್ಞತ್ವಾತ್ಪುರುಷಸ್ಯ ಚ ।
ಪ್ರಧಾನಪರಮಾಣ್ವಾದಿಯಾವತ್ಕಿಂಚಿದಚೇತನಂ ॥ ೧೪ ॥

ನ ತತ್ಕರ್ತೃ ಸ್ವಯಂ ದೃಷ್ಟಂ ಬುದ್ಧಿಮತ್ಕಾರಣಂ ವಿನಾ ।
ಧರ್ಮಾಧರ್ಮೋಪದೇಶಶ್ಚ ಬಂಧಮೋಕ್ಷೌ ವಿಚಾರಣಾತ್ ॥ ೧೫ ॥

ನ ಸರ್ವಜ್ಞಂ ವಿನಾ ಪುಂಸಾಮಾದಿಸರ್ಗಃ ಪ್ರಸಿಧ್ಯತಿ ।
ವೈದ್ಯಂ ವಿನಾ ನಿರಾನಂದಾಃ ಕ್ಲಿಶ್ಯಂತೇ ರೋಗಿಣೋ ಯಥಾ ॥ ೧೬ ॥

---

೧೨. ಶಿವನೂ ಸಹ ಅನಾದಿಯಾದವನು. ಅವನೇ ಸಂಸಾರ ದುಃಖವನ್ನು ಬಿಡಿಸುವವನು. ರೋಗಗಳಿಗೆ ಔಷಧವು ಹೇಗೆ ಪ್ರತೀಕಾರವೋ ಹಾಗೆ ಸಂಸಾರದೋಷಗಳಿಗೆ ಶಿವನು ಪ್ರತೀಕಾರಸ್ವರೂಪನಾದವನು.

೧೩-೧೫. ಲೋಕಕ್ಕೆ ಸ್ವಾಮಿಯಾದ ಶಿವನೊಬ್ಬನಿಲ್ಲದಿದ್ದರೆ ಈ ಪ್ರಪಂಚವೆಲ್ಲವೂ ಕತ್ತಲೆಕವಿದಂತಾಗುತ್ತಿದ್ದಿತು. ಪ್ರಕೃತಿಯು ಅಚೇತನವು. ಪುರುಷನು (ಜೀವ) ಅಜ್ಞನು. ಪ್ರಧಾನ ಪರಮಾಣು ಮುಂತಾದುವೆಲ್ಲ ಅಚೇತನವಾದವು. ಆದುದರಿಂದ ಜಡವಸ್ತುಗಳು ಕರ್ತೃವಾಗಲಾರವು. ಧರ್ಮಾಧರ್ಮೋಪದೇಶವೂ, ಬಂಧ ಮೋಕ್ಷಗಳೂ, ಇರುವುದರಿಂದ ಇವೆಲ್ಲವನ್ನೂ ವಿಚಾರಮಾಡಿ ನೋಡಿದರೆ ಇವುಗಳೆಲ್ಲಕ್ಕೂ ಬುದ್ಧಿಯಿಂದಕೂಡಿದ ಸರ್ವಶಕ್ತಿಯುಕ್ತವಾದ ಯಾವುದೋ ಒಂದು ವಸ್ತುವು ಕಾರಣವಾಗಿರಬೇಕೆಂದು ತೋರುತ್ತದೆ.

೧೬-೧೭. ಸರ್ವಜ್ಞನಾದ ಪರಶಿವನಿಲ್ಲದೆ ಪುರುಷರ ಆದಿಸೃಷ್ಟಿಯುಂಟಾಗುವುದಿಲ್ಲ. ದೃಷ್ಟಾಂತವೇನೆಂದರೆ, ವೈದ್ಯನಿಲ್ಲದಿದ್ದರೆ ರೋಗಿಗಳು ಸಂತೋಷವಿಲ್ಲದವರಾಗಿ ದುಃಖಪಡುವರು. ಆದುದರಿಂದ ಅನಾದಿಯಾದವನೂ, ಸರ್ವಜ್ಞ

**ತಸ್ಮಾದನಾದಿಃ ಸರ್ವಜ್ಞಃ ಪರಿಪೂರ್ಣಃ ಸದಾಶಿವಃ ।**
**ಅಸ್ತಿ ನಾಥಃ ಪರಿತ್ರಾತಾ ಪುಂಸಾಂ ಸಂಸಾರಸಾಗರಾತ್ ॥ ೧೭ ॥**

**ಆದಿಮಧ್ಯಾಂತನಿರ್ಮುಕ್ತಸ್ಸ್ವಭಾವವಿಮಲಃ ಪ್ರಭುಃ ।**
**ಸರ್ವಜ್ಞಃ ಪರಿಪೂರ್ಣಶ್ಚ ಶಿವೋ ಜ್ಞೇಯಃ ಶಿವಾಗಮೇ ॥ ೧೮ ॥**

**ತಸ್ಯಾಭಿಧಾನಮಂತ್ರೋಽಯಮಭಿಧೇಯಶ್ಚ ಸ ಸ್ಮೃತಃ ।**
**ಅಭಿಧಾನಾಭಿಧೇಯತ್ವಾನ್ಮಂತ್ರಸಿದ್ಧಃ ಪರಶ್ಶಿವಃ ॥ ೧೯ ॥**

**ಏತಾವತ್ತು ಶಿವಜ್ಞಾನಮೇತಾವತ್ಪರಮಂ ಪದಂ ।**
**ಯದೋಂ ನಮಶ್ಶಿವಾಯೇತಿ ಶಿವವಾಕ್ಯಂ ಷಡಕ್ಷರಂ ॥ ೨೦ ॥**

**ವಿಧಿವಾಕ್ಯಮಿದಂ ಶೈವಂ ನಾರ್ಥವಾದಂ ಶಿವಾತ್ಮಕಂ ।**
**ಯಸ್ಸರ್ವಜ್ಞಃ ಸುಸಂಪೂರ್ಣಃ ಸ್ವಭಾವವಿಮಲಃ ಶಿವಃ ॥ ೨೧ ॥**

---

ನೂ, ಪರಿಪೂರ್ಣಸ್ವರೂಪನೂ, ಆದ ಸದಾಶಿವನು ಪುರುಷರನ್ನು ಸಂಸಾರ ಸಮುದ್ರದಿಂದ ಉದ್ಧಾರಮಾಡತಕ್ಕ ಸರ್ವಸ್ವಾಮಿಯಾಗಿರುವನು.

೧೮-೧೯. ಶಿವನು ಆದಿಮಧ್ಯಾಂತವಿಲ್ಲದವನು, ಸ್ವಭಾವವಾಗಿ ಪರಿಶುದ್ಧನು, ಸರ್ವೇಶ್ವರನು, ಸರ್ವಜ್ಞನು, ಪರಿಪೂರ್ಣನು ಎಂದು ಶಿವಾಗಮದಲ್ಲಿ ಹೇಳಿರುವುದು. ಆ ಶಿವನಿಗೆ ಪಂಚಾಕ್ಷರ ಮಂತ್ರವೇ ಅಭಿಧಾನವೆನಿಸುವುದು. ಆ ಪರಶಿವನೇ ಅಭಿಧೇಯನು. ಅಭಿಧಾನಾಭಿಧೇಯ ಸಂಬಂಧವಿರುವುದರಿಂದಲೇ (ವಾಚ್ಯವಾಚಕಸಂಬಂಧ) ಪರಮೇಶ್ವರನು ಮಂತ್ರಸಿದ್ಧನಾಗಿರುವನು ಎಂದರೆ ಮಂತ್ರ ಜಪಮಾಡುವವರಿಗೆ ಫಲದಾಯಕನಾಗಿರುವನು.

೨೦. ಓಂ ನಮಃ ಶಿವಾಯ ಎಂಬ ಷಡಕ್ಷರ ಮಂತ್ರವೇ ಶಿವಜ್ಞಾನ ಸ್ವರೂಪವಾದುದು, ಪರಮಪದ ಸ್ವರೂಪವಾದುದು ಎಂದು ಶಿವನೇ ಹೇಳಿರುವನು.

೨೧. ಈ ಶಿವನ ವಾಕ್ಯವು ವಿಧಿವಾಕ್ಯವಾಗಿರುವುದು. ಅರ್ಥವಾದದ ವಾಕ್ಯವಲ್ಲ. ಸರ್ವಜ್ಞನೂ, ಪರಿಪೂರ್ಣನೂ, ಸ್ವಭಾವವಾಗಿ ಶುದ್ಧಸ್ವರೂಪನೂ, ಸಮಸ್ತ ಲೋಕಕ್ಕೂ ಅನುಗ್ರಹಮಾಡತಕ್ಕವನೂ, ಆದ ಶಿವನು ಕಲ್ಪಿತವಾದ ಅಸತ್ಯವಸ್ತುವಾಗಲಾರನು.

ಲೋಕಾನುಗ್ರಹಕರ್ತಾ ಚ ಸ ಮೃಷಾರ್ಥಂ ಕಥಂ ವದೇತ್ ।
ಯದ್ಯಥಾವಸ್ಥಿತಂ ವಸ್ತು ಗುಣದೋಷೈಃ ಸ್ವಭಾವತಃ ॥ ೨೨ ॥

ಯಾವತ್ಫಲಂ ಚ ತತ್ಪೂರ್ಣಂ ಸರ್ವಜ್ಞಸ್ತು ಯಥಾ ವದೇತ್ ।
ರಾಗಾಜ್ಞಾನಾದಿಭಿರ್ದೋಷೈರ್ಗ್ರಸ್ತತ್ವಾದನೃತಂ ವದೇತ್ ॥ ೨೩ ॥

ತೇ ಚೇಶ್ವರೇ ನ ವಿದ್ಯೇತೇ ಬ್ರೂಯಾತ್ಸ ಕಥಮನ್ಯಥಾ ।
ಅಜ್ಞಾತಾಶೇಷದೋಷೇಣ ಸರ್ವಜ್ಞೇನ ಶಿವೇನ ಯತ್ ।
ಪ್ರಣೀತಮಮಲಂ ವಾಕ್ಯಂ ತತ್ಪ್ರಮಾಣಂ ನ ಸಂಶಯಃ ॥ ೨೪ ॥

ತಸ್ಮಾದೀಶ್ವರವಾಕ್ಯಾನಿ ಶ್ರದ್ಧೇಯಾನಿ ವಿಪಶ್ಚಿತಾ ।
ಯಥಾರ್ಥಪುಣ್ಯಪಾಪೇಷು ತದಶ್ರದ್ಧೋ ವ್ರಜತ್ಯಧಃ ॥ ೨೫ ॥

ಸ್ವರ್ಗಾಪವರ್ಗಸಿದ್ಧ್ಯರ್ಥಂ ಭಾಷಿತಂ ಯತ್ಸುಶೋಭನಂ ।
ವಾಕ್ಯಂ ಮುನಿವರೈಃ ಶಾಂತೈಸ್ತದ್ವಿಜ್ಞೇಯಂ ಸುಭಾಷಿತಂ ॥ ೨೬ ॥

---

೨೨-೨೪. ಸ್ವಾಭಾವಿಕವಾಗಿ ಗುಣದೋಷಗಳಿಂದ ಕೂಡಿದ ವಸ್ತುವು ಫಲವನ್ನು ಕೊಡುವವರೆಗೂ, ಆ ಗುಣಗಳಿಂದ ಪೂರ್ಣವಾಗಿರುವುದು. ಅಸತ್ಯವನ್ನು ಹೇಳತಕ್ಕವರು ಕಾಮ ಅಜ್ಞಾನ ಮುಂತಾದ ದೋಷಗಳಿಂದ ಕೂಡಿದವರಾಗಿರುವುದರಿಂದಲೇ ಅಸತ್ಯವನ್ನು ಹೇಳುವರು. ಇಂತಹ ದೋಷಗಳು ಈಶ್ವರನಲ್ಲಿ ಇಲ್ಲದಿರುವುದರಿಂದ ಅವನು ಅಸತ್ಯವನ್ನು ಹೇಗೆ ಹೇಳುವನು? ದೋಷಗಳೊಂದೂ ಇಲ್ಲದ ಸರ್ವಜ್ಞನಾದ ಶಿವನು ಹೇಳಿದ ಪರಿಶುದ್ಧವಾದ ವಾಕ್ಯವು ಪ್ರಮಾಣವಾದುದೆಂಬ ವಿಷಯದಲ್ಲಿ ಸಂದೇಹವೇ ಇರುವುದಿಲ್ಲ.

೨೫. ಆದುದರಿಂದ ಈಶ್ವರನ ವಾಕ್ಯಗಳನ್ನು ಬುದ್ಧಿವಂತನಾದವನು ನಂಬಬೇಕು. ಪುಣ್ಯಪಾಪಗಳ ವಿಷಯದಲ್ಲಿ ಸತ್ಯಾಂಶವೊಂದಿದ್ದರೆ ಅಪನಂಬಿಕೆಯು ನಾಶವಾಗುವುದು.

೨೬. ಸ್ವರ್ಗಮೋಕ್ಷಗಳ ಪ್ರಾಪ್ತಿಗಾಗಿ ಮುನಿಶ್ರೇಷ್ಠರೂ, ಶಾಂತರೂ ಹೇಳಿದ ಮಂಗಳಕರವಾದ ವಾಕ್ಯಗಳು ಸುಭಾಷಿತವಾಕ್ಯಗಳೆಂದು ತಿಳಿಯಬೇಕು.

**ರಾಗದ್ವೇಷಾನೃತಕ್ರೋಧಕಾಮತೃಷ್ಣಾನುಸಾರಿ ಯತ್ ।**
**ವಾಕ್ಯಂ ನಿರಯಹೇತುತ್ವಾತ್ತದ್ದುರ್ಭಾಷಿತಮುಚ್ಯತೇ ॥ ೨೭ ॥**

**ಸಂಸ್ಕೃತೇನಾಽಪಿ ಕಿಂ ತೇನ ಮೃದುನಾ ಲಲಿತೇನ ವಾ ।**
**ಅವಿದ್ಯಾರಾಗವಾಕ್ಯೇನ ಸಂಸಾರಕ್ಲೇಶಹೇತುನಾ ॥ ೨೮ ॥**

**ಯಚ್ಛ್ರುತ್ವಾ ಜಾಯತೇ ಶ್ರೇಯೋ ರಾಗಾದೀನಾಂ ಚ ಸಂಕ್ಷಯಃ ।**
**ವಿರೂಪಮಪಿ ತದ್ವಾಕ್ಯಂ ವಿಜ್ಞೇಯಮಿತಿ ಶೋಭನಂ ॥ ೨೯ ॥**

**ಬಹುತ್ವೇಽಪಿ ಹಿ ಮಂತ್ರಾಣಾಂ ಸರ್ವಜ್ಞೇನ ಶಿವೇನ ಯಃ ।**
**ಪ್ರಣೀತೋ ವಿಮಲೋ ಮಂತ್ರೋ ನ ತೇನ ಸದೃಶಃ ಕ್ವಚಿತ್ ॥ ೩೦ ॥**

**ಸಾಂಗಾನಿ ವೇದಶಾಸ್ತ್ರಾಣಿ ಸಂಸ್ಥಿತಾನಿ ಷಡಕ್ಷರೇ ।**
**ನ ತೇನ ಸದೃಶಸ್ತಸ್ಮಾನ್ಮಂತ್ರೋಽಪ್ಯಸ್ತ್ಯಪರಃ ಕ್ವಚಿತ್ ॥ ೩೧ ॥**

೨೭. ಪ್ರೀತಿ, ದ್ವೇಷ, ಸುಳ್ಳು, ಕೋಪ, ಕಾಮ, ಅತ್ಯಾಶೆ ಈ ಗುಣಗಳಿಂದ ಕೂಡಿದ ಮಾತುಗಳು ನರಕಕಾರಣಗಳಾದುದರಿಂದ ಅವು ದುರ್ಭಾಷೆಯೆನಿಸುವುವು.

೨೮-೨೯. ಕೆಲವು ವಾಕ್ಯಗಳು ಮೃದುವಾಗಿಯೂ, ಮನೋಹರವಾಗಿಯೂ ಸಂಸ್ಕಾರಯುಕ್ತವಾದುದಾಗಿಯೂ ಇರುವುವು. ಹೀಗಿದ್ದರೂ ಅವು ಸಂಸ್ಕಾರಕಾರಣಗಳಾದ ಅಜ್ಞಾನ, ಕಾಮ, ಈ ಗುಣಗಳಿಂದ ಕೂಡಿದುದಾಗಿದ್ದರೆ ಆ ವಾಕ್ಯಗಳು ಪ್ರಯೋಜನವಾದುವಲ್ಲ, ಯಾವ ವಾಕ್ಯಗಳನ್ನು ಕೇಳಿದರೆ ಶ್ರೇಯಸ್ಸುಂಟಾಗಿ ರಾಗಾದಿದ್ವೇಷಗಳ ನಿವಾರಣೆಯಾಗುವುದೋ ಅಂತಹ ವಾಕ್ಯಗಳು ವಿರೂಪವಾಗಿದ್ದರೂ, ಮಂಗಳಕರವಾದುವೆಂದು ತಿಳಿಯಬೇಕು.

೩೦. ಮಂತ್ರಗಳು ಅನೇಕವಾಗಿದ್ದರೂ, ಸರ್ವಜ್ಞನಾದ ಶಿವನು ಮಾಡಿದ ಪರಿಶುದ್ಧವಾದ ಷಡಕ್ಷರಮಂತ್ರಕ್ಕೆ ಸಮಾನವಾದುದು, ಮತ್ತಾವ ಮಂತ್ರವೂ ಇರುವುದಿಲ್ಲ.

೩೧. ಈ ಷಡಕ್ಷರ ಮಂತ್ರದಲ್ಲಿ ಅಂಗಸಹಿತವಾದ ವೇದಶಾಸ್ತ್ರಗಳೆಲ್ಲವೂ ಅಡಕವಾಗಿರುವುದರಿಂದ ಇದಕ್ಕೆ ಸಮಾನವಾದ ಮತ್ತೊಂದು ಮಂತ್ರವೆಲ್ಲಿಯೂ ಇರುವುದಿಲ್ಲ.

ಸಪ್ತಕೋಟಿಮಹಾಮಂತ್ರೈರುಪಮಂತ್ರೈರನೇಕಧಾ ।
ಮಂತ್ರಃ ಷಡಕ್ಷರೋ ಭಿನ್ನಃ ಸೂತ್ರಂ ವೃತ್ತ್ಯಾತ್ಮನಾ ಯಥಾ ॥ ೩೨ ॥

ಶಿವಜ್ಞಾನಾನಿ ಯಾವಂತಿ ವಿದ್ಯಾಸ್ಥಾನಾನಿ ಯಾನಿ ಚ ।
ಷಡಕ್ಷರಸ್ಯ ಸೂತ್ರಸ್ಯ ತಾನಿ ಭಾಷ್ಯಂ ಸಮಾಸತಃ ॥ ೩೩ ॥

ಕಿಂ ತಸ್ಯ ಬಹುಭಿರ್ಮಂತ್ರೈಶ್ಶಾಸ್ತ್ರೈರ್ವಾ ಬಹುವಿಸ್ತರೈಃ ।
ಯಸ್ಯೋನ್ನಮಶ್ಶಿವಾಯೇತಿ ಮಂತ್ರೋಽಯಂ ಹೃದಿ ಸಂಸ್ಥಿತಃ ॥ ೩೪ ॥

ತೇನಾಧೀತಂ ಶ್ರುತಂ ತೇನ ಕೃತಂ ಸರ್ವಮನುಷ್ಠಿತಂ ।
ಯೋನೋಂ ನಮಶ್ಶಿವಾಯೇತಿ ಮಂತ್ರಾಭ್ಯಾಸಃ ಸ್ಥಿರೀಕೃತಃ ॥ ೩೫ ॥

ನಮಸ್ಕಾರಾದಿಸಂಯುಕ್ತಂ ಶಿವಾಯೇತ್ಯಕ್ಷರತ್ರಯಂ ।
ಜಿಹ್ವಾಗ್ರೇ ವರ್ತತೇ ಯಸ್ಯ ಸಫಲಂ ತಸ್ಯ ಜೀವಿತಂ ॥ ೩೬ ॥

---

೩೨. ಸೂತ್ರವು ಅರ್ಥವ್ಯಕ್ತಿಗಾಗಿ ವೃತ್ತಿರೂಪದಲ್ಲಿ ಬೇರೆಯಾಗುವಂತೆ ಷಡಕ್ಷರ ಮಂತ್ರವು ಸಪ್ತಕೋಟಿ ಮಹಾಮಂತ್ರಗಳ ರೂಪವಾಗಿಯೂ ಉಪ ಮಂತ್ರಗಳ ರೂಪವಾಗಿಯೂ ಭಿನ್ನರೂಪದಿಂದ ವ್ಯಕ್ತವಾಗಿರುವುದು.

೩೩. ಶಿವಜ್ಞಾನವನ್ನುಂಟುಮಾಡುವ ಶಾಸ್ತ್ರಗಳೂ, ವಿದ್ಯಾಸ್ಥಾನಗಳೂ ಎಷ್ಟಿವೆಯೋ ಅವೆಲ್ಲವೂ ಸೂತ್ರರೂಪವಾದ ಷಡಕ್ಷರಕ್ಕೆ ಭಾಷ್ಯರೂಪವಾಗಿರುವವು.

೩೪. ಯಾರ ಹೃದಯದಲ್ಲಿ "ಓಂ ನಮಃ ಶಿವಾಯ" ಎಂಬ ಮಂತ್ರವಿರುವುದೋ ಅವರಿಗೆ ವಿಸ್ತಾರವಾದ ಶಾಸ್ತ್ರಗಳಿಂದಲೂ, ಅನೇಕ ಮಂತ್ರಗಳಿಂದಲೂ ಏನು ಪ್ರಯೋಜನ? ಆ ಮುಖ್ಯವಾದ ಮಂತ್ರವೊಂದಿದ್ದರೆ ಸಾಕು. ಇತರ ಶಾಸ್ತ್ರಗಳ ಅವಶ್ಯಕತೆ ಇಲ್ಲ.

೩೫-೩೬. ಓಂ ನಮಃ ಶಿವಾಯ ಎಂಬ ಮಂತ್ರವನ್ನು ಯಾವ ಮನುಜನು ಜಪಿಸುವನೋ ಅವನು ಸಮಸ್ತ ಶಾಸ್ತ್ರಾಭ್ಯಾಸವನ್ನೂ ಮಾಡಿ ಸಕಲ ಕರ್ಮಗಳನ್ನೂ ಮಾಡಿದ ಪುಣ್ಯಕ್ಕೆ ಭಾಗಿಯಾಗುವನು. ಅವನ ಜನ್ಮವು ಸಾರ್ಥಕವಾದುದಾಗುವುದು. ಚಂಡಾಲನಾಗಲಿ, ನೀಚನಾಗಲಿ, ಮೂಢನಾಗಲಿ,

ಅತ್ಯಂಜೋ ವಾಽಧನೋ ವಾಪಿ ಮೂರ್ಖೋ ವಾ ಪಂಡಿತೋಽಪಿ ವಾ ।
ಪಂಚಾಕ್ಷರಜಪೇ ನಿಷ್ಠೋ ಮುಚ್ಯತೇ ಪಾಪಪಂಜರಾತ್ ॥ ೩೭ ॥

ಇತ್ಯುಕ್ತಂ ಪರಮೇಶೇನ ದೇವ್ಯಾ ಪೃಷ್ಟೇನ ಶೂಲಿನಾ ।
ಹಿತಾಯ ಸರ್ವಮರ್ತ್ಯಾನಾಂ ದ್ವಿಜಾನಾಂ ತು ವಿಶೇಷತಃ ॥ ೩೮ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯಸಂಹಿತಾಯಾ-
ಮುತ್ತರಭಾಗೇ ಪಂಚಾಕ್ಷರಮಾಹಾತ್ಮ್ಯವರ್ಣನಂ ನಾಮ
ದ್ವಾದಶೋಽಧ್ಯಾಯಃ

ಪಂಡಿತನಾಗಲಿ, ಪಂಚಾಕ್ಷರ ಜಪಾಸಕ್ತನಾದರೆ ಆವನು ಪಾಪವೆಂಬ ಪಂಜರ ದಿಂದ ಬಿಡುಗಡೆಯನ್ನು ಹೊಂದುವನು.

೩೮. ಸಮಸ್ತ ಮನುಜರ ಹಿತಕ್ಕಾಗಿಯೂ, ವಿಶೇಷವಾಗಿ ದ್ವಿಜರಾದವರ ಪ್ರಯೋಜನಕ್ಕಾಗಿಯೂ, ದೇವಿಯು ಮಾಡಿದ ಪ್ರಶ್ನೆಗೆ ಉತ್ತರವಾಗಿ ಪರಮೇಶ್ವರನು ಷಡಕ್ಷರಮಂತ್ರದ ಮಹಿಮೆಯನ್ನು ಈ ರೀತಿಯಲ್ಲಿ ಹೇಳಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಏಳನೆಯ ವಾಯುವೀಯಸಂಹಿತೆಯ
ಉತ್ತರಭಾಗದಲ್ಲಿ ಪಂಚಾಕ್ಷರ ಮಾಹಾತ್ಮ್ಯವರ್ಣನವೆಂಬ
ಹನ್ನೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ತ್ರಯೋದಶೋಽಧ್ಯಾಯಃ

॥ ದೇವ್ಯುವಾಚ ॥

**ಕಲೌ ಕಲುಷಿತೇ ಕಾಲೇ ದುರ್ಜಯೇ ದುರತಿಕ್ರಮೇ ।**
**ಅಪುಣ್ಯತಮಸಾಚ್ಛನ್ನೇ ಲೋಕೇ ಧರ್ಮಪರಾಙ್ಮುಖೇ ॥ ೧ ॥**

**ಕ್ಷೀಣೇ ವರ್ಣಾಶ್ರಮಾಚಾರೇ ಸಂಕಟೇ ಸಮುಪಸ್ಥಿತೇ ।**
**ಸರ್ವಾಧಿಕಾರೇ ಸಂದಿಗ್ಧೇ ನಿಶ್ಚಿತೇ ವಾ ವಿಪರ್ಯಯೇ ॥ ೨ ॥**

### ಹದಿಮೂರನೆಯ ಅಧ್ಯಾಯವು.

೧-೩. ಪಾರ್ವತೀದೇವಿಯು ಪರಮೇಶ್ವರನನ್ನು ಪ್ರಶ್ನೆಮಾಡುವಳು- ಎಲೈ ಮಹೇಶ್ವರನೇ, ಕಲಿಯುಗದಲ್ಲಿ ಕಾಲವು ಕೆಟ್ಟುಹೋಗುತ್ತಿರಲು, ಮೀರ ಲಾಗದ ಪಾಪವೆಂಬ ಕತ್ತಲೆಯಿಂದ ಲೋಕವೆಲ್ಲವೂ ಮುಚ್ಚಿಕೊಂಡಿರಲು, ಪಾಪಿ ಗಳಾದ ಜನರು ಧರ್ಮಮಾರ್ಗವನ್ನೂ ವರ್ಣಾಶ್ರಮವನ್ನೂ ಬಿಟ್ಟು ನಾನಾ ವಿಧವಾದ ಸಂಕಟಗಳಿಗೆ ಗುರಿಯಾಗಿ ಪರಿತಪಿಸುವರು. ಅಂತಹಕಾಲದಲ್ಲಿ ಕರ್ಮಾದಿಗಳಿಗೆ ಅಧಿಕಾರಗಳು ಯಾರು ಎಂಬುದು ನಿಶ್ಚಯಿಸಲಾಗದೆ ಗುರುಶಿಷ್ಯ

ತದೋಪದೇಶೇ ವಿಹತೇ ಗುರುಶಿಷ್ಯಕ್ರಮೇ ಗತೇ ।
ಕೇನೋಪಾಯೇನ ಮುಚ್ಯಂತೇ ಭಕ್ತಾಸ್ತವ ಮಹೇಶ್ವರ ॥ ೩ ॥

॥ ಈಶ್ವರ ಉವಾಚ ॥

ಆಶ್ರಿತ್ಯ ಪರಮಾಂ ವಿದ್ಯಾಂ ಹೃದ್ಯಾಂ ಪಂಚಾಕ್ಷರೀಂ ಮಮ ।
ಭಕ್ತ್ಯಾ ಚ ಭಾವಿತಾತ್ಮಾನೋ ಮುಚ್ಯಂತೇ ಕಲಿಜಾ ನರಾಃ ॥ ೪ ॥

ಮನೋವಾಕ್ಕಾಯಜೈರ್ದೋಷೈರ್ವಕ್ತುಂ ಸ್ಮರ್ತುಮಗೋಚರೈಃ ।
ದೂಷಿತಾನಾಂ ಕೃತಘ್ನಾನಾಂ ನಿರ್ದಯಾನಾಂ ಛಲಾತ್ಮನಾಂ ॥ ೫ ॥

ಲುಬ್ಧಾನಾಂ ವಕ್ರಮನಸಾಮಪಿ ಮತ್ಪ್ರವಣಾತ್ಮನಾಂ ।
ಮಮ ಪಂಚಾಕ್ಷರೀವಿದ್ಯಾ ಸಂಸಾರಭಯತಾರಿಣೀ ॥ ೬ ॥

ಮಯ್ಯೈವಮಸಕೃದ್ದೇವಿ ಪ್ರತಿಜ್ಞಾತಂ ಧರಾತಲೇ ।
ಪತಿತೋಽಪಿ ವಿಮುಚ್ಯೇತ ಮದ್ಭಕ್ತೋ ವಿದ್ಯಯಾಽನಯಾ ॥ ೭ ॥

ಕ್ರಮವೂ, ಉಪದೇಶವೂ ನಾಶವಾಗಲು ನಿನ್ನ ಭಕ್ತರು ಯಾವ ಉಪಾಯದಿಂದ ಸಂಸಾರದುಃಖದ ಬಿಡುಗಡೆಯನ್ನು ಹೊಂದುವರು? ಅದನ್ನು ಹೇಳಬೇಕೆನ್ನಲು,

೪-೭. ಈಶ್ವರನಿಂತೆಂದನು—ಎಲೌ ದೇವಿಯೇ, ಮನೋಹರವಾದ ಮತ್ತು ಶ್ರೇಷ್ಠವಾದ ನನ್ನ ಪಂಚಾಕ್ಷರೀಮಂತ್ರವನ್ನಾಶ್ರಯಿಸಿ ಭಕ್ತಿಯಿಂದ ಮನಸ್ಸನ್ನು ಶುದ್ಧಿಮಾಡಿಕೊಂಡರೆ ಕಲಿಯುಗದ ಮನುಜರು ಮೋಕ್ಷವನ್ನು ಪಡೆಯುವರು. ಬಾಯಿನಿಂದ ಹೇಳುವುದಕ್ಕೂ ಮನಸ್ಸಿನಲ್ಲಿ ಊಹಿಸುವುದಕ್ಕೂ ಸಾಧ್ಯವಾಗದ ಮನೋವಾಕ್ಕಾಯಜನ್ಯದೋಷಗಳಿಂದ ಬಿಡುಗಡೆಯನ್ನು ಈ ಪಂಚಾಕ್ಷರೀ ಮಂತ್ರ ಜಪದಿಂದಲೇ ಹೊಂದುವರು. ದುಷ್ಟರಾದ ಜನರೂ, ಉಪಕಾರಸ್ಮರಣೆಯಿಲ್ಲದವರೂ, ದಯಾಶೂನ್ಯರೂ, ಹಠವಾದಿಗಳೂ, ಅತ್ಯಾಚಾರಪರರೂ, ವಕ್ರಸ್ವಭಾವದವರೂ, ಆದರೂ ನನ್ನ ಪಂಚಾಕ್ಷರೀ ವಿದ್ಯೆಯು ಸಂಸಾರದುಃಖವನ್ನು ದಾಟಿಸುವುದು. ಮಹಾಪಾಪಿಯಾದವರೂ ನನ್ನ ಭಕ್ತನಾದರೆ ಈ ಪಂಚಾಕ್ಷರಿಯ ಮಹಿಮೆಯಿಂದ ಮೋಕ್ಷವನ್ನು ಹೊಂದುವನು.

॥ ದೇವ್ಯುವಾಚ ॥

ಕರ್ಮಾಯೋಗ್ಯೋ ಭವೇನ್ಮರ್ತ್ಯಃ ಪತಿತೋ ಯದಿ ಸರ್ವಥಾ ।
ಕರ್ಮಾಯೋಗ್ಯೇನ ಯತ್ಕರ್ಮ ಕೃತಂ ಚ ನರಕಾಯ ಹಿ ।
ತತಃ ಕಥಂ ವಿಮುಚ್ಯೇತ ಪತಿತೋ ವಿದ್ಯಯಾನಯಾ ॥ ೮ ॥

॥ ಈಶ್ವರ ಉವಾಚ ॥

ತಥ್ಯಮೇತತ್ತ್ವಯಾ ಪ್ರೋಕ್ತಂ ತಥಾ ಹಿ ಶೃಣು ಸುಂದರಿ ।
ರಹಸ್ಯಮಿತಿ ಮತ್ವೈತದ್ಗೋಪಿತಂ ಯನ್ಮಯಾ ಪುರಾ ॥ ೯ ॥

ಸಮಂತ್ರಕಂ ಮಾಂ ಪತಿತಃ ಪೂಜಯೇದ್ಯದಿ ಮೋಹಿತಃ ।
ನಾರಕೀ ಸ್ಯಾನ್ನ ಸಂದೇಹೋ ಮಮ ಪಂಚಾಕ್ಷರಂ ವಿನಾ ೧೦ ॥

ಅಬ್ಭಕ್ಷಾ ವಾಯುಭಕ್ಷಾಶ್ಚ ಯೇ ಚಾನ್ಯೇ ವ್ರತಕರ್ಶಿತಾಃ ।
ತೇಷಾಮೇತೈರ್ವ್ರತೈರ್ನಾಸ್ತಿ ಮಮ ಲೋಕಸಮಾಗಮಃ ॥ ೧೧ ॥

---

೮. ದೇವಿಯು ಮತ್ತೆ ಪ್ರಶ್ನೆಮಾಡುತ್ತಾ—ಎಲೈ ಸ್ವಾಮಿಯೇ, ಪಾಪಿಯಾದ ಮನುಜನು ಕರ್ಮಮಾಡಲು ಅಯೋಗ್ಯನು. ಅಂತಹ ಅಯೋಗ್ಯನು ಕರ್ಮವನ್ನು ಮಾಡಿದರೆ ಅದು ಅವನಿಗೆ ನರಕಫಲವನ್ನೇ ಉಂಟುಮಾಡುವುದು. ಹೀಗಿರುವಲ್ಲಿ ಪಾಪಿಯಾದವನು ಈ ಪಂಚಾಕ್ಷರೀ ವಿದ್ಯೆಯಿಂದ ಹೇಗೆ ಮೋಕ್ಷವನ್ನು ಪಡೆವನು? ಇದನ್ನು ತಿಳಿಸಬೇಕೆನ್ನಲು,

೯-೧೦. ಈಶ್ವರನು ಹೇಳುವನು-ಎಲೈ ಸುಂದರಿಯಾದ ಪಾರ್ವತಿಯೇ, ನೀನು ಹೇಳಿದುದು ನಿಜವು. ಈ ಪಂಚಾಕ್ಷರ ಮಂತ್ರವು ರಹಸ್ಯವಾದುದೆಂದು ತಿಳಿದೇ ನಾನು ಇದನ್ನು ಮೊದಲು ಪ್ರಕಾಶಪಡಿಸಲಿಲ್ಲ. ಪಾಪಿಯಾದ ಮನುಜನು ಅಜ್ಞಾನದಿಂದ ಈ ಪಂಚಾಕ್ಷರೀ ಮಂತ್ರವನ್ನು ಬಿಟ್ಟು ಇತರ ಮಂತ್ರಗಳಿಂದ ನನ್ನನ್ನು ಪೂಜೆಮಾಡಿದರೆ ಅವನು ನರಕದುಃಖವನ್ನನುಭವಿಸುವ ವಿಷಯದಲ್ಲಿ ಸಂದೇಹವಿಲ್ಲ.

೧೧. ನೀರನ್ನೂ, ಗಾಳಿಯನ್ನೂ, ಆಹಾರಮಾಡಿಕೊಂಡು ತಪಸ್ಸುಮಾಡಿ ಕೃಶರಾದ ಜನರೂ ಸಹ ಪಂಚಾಕ್ಷರಮಂತ್ರವನ್ನು ಜಪಿಸದಿದ್ದರೆ ಈ ವ್ರತಾದಿಗಳಿಂದ ಅವರಿಗೆ ನನ್ನ ಲೋಕಪ್ರಾಪ್ತಿಯಾಗುವುದಿಲ್ಲ.

**ಭಕ್ತ್ಯಾ ಪಂಚಾಕ್ಷರೇಣೈವ ಯೋ ಹಿ ಮಾಂ ಸಕೃದರ್ಚಯೇತ್ ।**
**ಸೋಽಪಿ ಗಚ್ಛೇನ್ಮಮ ಸ್ಥಾನಂ ಮಂತ್ರಸ್ಯಾಸ್ಯೈವ ಗೌರವಾತ್ ॥ ೧೨ ॥**

**ತಸ್ಮಾತ್ತಪಾಂಸಿ ಯಜ್ಞಾಶ್ಚ ವ್ರತಾನಿ ನಿಯಮಾಸ್ತಥಾ ।**
**ಪಂಚಾಕ್ಷರಾರ್ಚನಸ್ಯೈತೇ ಕೋಟ್ಯಂಶೇನಾಪಿ ನೋ ಸಮಾಃ ॥ ೧೩ ॥**

**ಬದ್ಧೋ ವಾಽಪ್ಯಥ ಮುಕ್ತೋ ವಾ ಪಾಶಾತ್ಪಂಚಾಕ್ಷರೇಣ ಯಃ ।**
**ಪೂಜಯೇನ್ಮಾಂ ಸ ಮುಚ್ಯೇತ ನಾತ್ರ ಕಾರ್ಯಾ ವಿಚಾರಣಾ ॥ ೧೪ ॥**

**ಅರುದ್ರೋ ವಾ ಸರುದ್ರೋ ವಾ ಸಕೃತ್ಪಂಚಾಕ್ಷರೇಣ ಯಃ ।**
**ಪೂಜಯೇತ್ಪತಿತೋ ವಾಽಪಿ ಮೂಢೋ ವಾ ಮುಚ್ಯತೇ ನರಃ ॥ ೧೫ ॥**

**ಷಡಕ್ಷರೇಣ ವಾ ದೇವಿ ತಥಾ ಪಂಚಾಕ್ಷರೇಣ ವಾ ।**
**ಸ ಬ್ರಹ್ಮಾಂಗೇನ ಮಾಂ ಭಕ್ತ್ಯಾ ಪೂಜಯೇದ್ಯದಿ ಮುಚ್ಯತೇ ॥ ೧೬ ॥**

---

೧೨. ಭಕ್ತಿಯಿಂದ ಕೂಡಿದ ಯಾವನಾದರೂ ಪಂಚಾಕ್ಷರ ಮಂತ್ರದಿಂದ ಒಂದು ಬಾರಿ ಪೂಜಿಸಿದರೆ ಅಂಥವನೂ ಕೂಡ ಈ ಮಂತ್ರದ ಮಹಿಮೆಯಿಂದ ನನ್ನ ಸ್ಥಾನಕ್ಕೆ ಹೋಗುವನು.

೧೩. ಆದುದರಿಂದ ತಪಸ್ಸು, ಯಜ್ಞಗಳು, ವ್ರತನಿಯಮಗಳು ಇವೆಲ್ಲವೂ ಪಂಚಾಕ್ಷರ ಮಂತ್ರದಿಂದ ಪೂಜೆಮಾಡುವುದರ ಕೋಟಿಯ ಒಂದಂಶಕ್ಕೂ ಸಮವಾಗಲಾರವು.

೧೪-೧೫. ಮನುಜನು ಪಾಶಬದ್ಧನಾಗಲಿ, ಪಾಶಮುಕ್ತನಾಗಲಿ ಪಂಚಾಕ್ಷರ ಮಂತ್ರದಿಂದ ನನ್ನನ್ನು ಪೂಜಿಸಿದರೆ ಅವನು ಮೋಕ್ಷವನ್ನು ಹೊಂದುವನು. ರುದ್ರಾಕ್ಷಧಾರಣೆಯನ್ನು ಮಾಡಲಿ, ಮಾಡದಿರಲಿ, ಪತಿತನಾಗಲಿ, ಮೂಢನಾಗಲಿ, ಪಂಚಾಕ್ಷರಮಂತ್ರದಿಂದ ಒಂದು ಬಾರಿ ಪೂಜಿಸಿದರೆ ಆ ಮನುಷ್ಯನು ಮೋಕ್ಷವನ್ನು ಹೊಂದಿಯೇ ಹೊಂದುವನು.

೧೬-೧೮. ಎಲೌ ದೇವಿ, ಷಡಕ್ಷರಮಂತ್ರದಿಂದಾಗಲಿ, ಪಂಚಾಕ್ಷರ ಮಂತ್ರದಿಂದಾಗಲಿ, ಬ್ರಹ್ಮವಾಚಕವಾದ ಓಂಕಾರದಿಂದ ಕೂಡಿ ನನ್ನನ್ನು ಭಕ್ತಿಯಿಂದ ಪೂಜಿಸಿದರೆ, ಮುಕ್ತಿಯುಂಟಾಗುವುದು. ಪಾಪಿಯಾಗಲಿ, ಪುಣ್ಯವಂತನಾಗಲಿ, ಜಿತೇಂದ್ರಿಯನಾಗಲಿ, ಜಿತೇಂದ್ರಿಯನಲ್ಲದಿರಲಿ, ಮಂತ್ರೋಪದೇಶವನ್ನು

ಪತಿತೋಽಪತಿತೋ ವಾಪಿ ಮಂತ್ರೇಣಾನೇನ ಪೂಜಯೇತ್ ।
ಮಮ ಭಕ್ತೋ ಜಿತಕ್ರೋಧೋ ಸ ಲಬ್ಧೋಽಲಬ್ಧ ಏವ ವಾ ॥ ೧೭ ॥

ಅಲಬ್ಧಾಲ್ಲಬ್ಧ ಏವೇಹ ಕೋಟಿಕೋಟಿಗುಣಾಧಿಕಃ ।
ತಸ್ಮಾಲ್ಲಬ್ಧ್ವೈವ ಮಾಂ ದೇವಿ ಮಂತ್ರೇಣಾನೇನ ಪೂಜಯೇತ್ ॥ ೧೮ ॥

ಲಬ್ಧ್ವಾ ಸಂಪೂಜಯೇದ್ಯಸ್ತು ಮೈತ್ರ್ಯಾದಿಗುಣಸಂಯುತಃ ।
ಬ್ರಹ್ಮಚರ್ಯರತೋ ಭಕ್ತ್ಯಾ ಮತ್ಸಾದೃಶ್ಯಮವಾಪ್ನುಯಾತ್ ॥ ೧೯ ॥

ಕಿಮತ್ರ ಬಹುನೋಕ್ತೇನ ಭಕ್ತಾಸ್ಸರ್ವೇಽಧಿಕಾರಿಣಃ ।
ಮಮ ಪಂಚಾಕ್ಷರೇ ಮಂತ್ರೇ ತಸ್ಮಾಚ್ಛ್ರೇಷ್ಠತರೋ ಹಿ ಸಃ ॥ ೨೦ ॥

ಪಂಚಾಕ್ಷರಪ್ರಭಾವೇಣ ಲೋಕವೇದಮಹರ್ಷಯಃ ।
ತಿಷ್ಠಂತಿ ಶಾಶ್ವತಾ ಧರ್ಮಾ ದೇವಾಸ್ಸರ್ವಮಿದಂ ಜಗತ್ ॥ ೨೧ ॥

ಗುರುವಿನಿಂದ ಪಡೆದಾಗಲಿ, ಪಡೆಯದೆಯಾಗಲಿ ನನ್ನ ಭಕ್ತನಾದವನು ಈ ಮಂತ್ರದಿಂದ ಪೂಜೆಮಾಡಬೇಕು. ಉಪದೇಶವನ್ನು ಪಡೆಯದವನಿಗಿಂತಲೂ, ಮಂತ್ರೋಪದೇಶವನ್ನು ಪಡೆದವನು ಕೋಟಿಪಾಲು ಹೆಚ್ಚು ಗುಣವುಳ್ಳವನು. ಆದುದರಿಂದ ಗುರುವಿನಿಂದ ಮಂತ್ರೋಪದೇಶವನ್ನು ಪಡೆದೇ ಆ ಮಂತ್ರದಿಂದ ನನ್ನನ್ನು ಪೂಜಿಸಬೇಕು. ಅದೇ ಉತ್ತಮವಾದ ಮಾರ್ಗವು.

೧೯-೨೦. ಗುರೂಪದೇಶದಿಂದ ಮಂತ್ರವನ್ನು ಪಡೆದು ಸರ್ವಪ್ರಾಣಿಗಳಲ್ಲಿಯೂ ಮೈತ್ರಿ ಮುಂತಾದ ಗುಣಗಳಿಂದ ಕೂಡಿ ಬ್ರಹ್ಮಚರ್ಯವ್ರತವಲ್ಲಿದ್ದುಕೊಂಡು ನನ್ನನ್ನು ಪೂಜಿಸುವ ಮನುಷ್ಯನು ನನ್ನ ಸಮಾನನಾಗುವನು. ಈ ವಿಷಯದಲ್ಲಿ ಹೆಚ್ಚಾಗಿ ಹೇಳುವುದೇನು? ನನ್ನ ಪಂಚಾಕ್ಷರಮಂತ್ರವಿಷಯದಲ್ಲಿ ಸಮಸ್ತ ಭಕ್ತರೂ ಅಧಿಕಾರಿಗಳಾಗಿರುವರು. ಆದುದರಿಂದ ಅದು ಅತ್ಯಂತ ಶ್ರೇಷ್ಠವಾದುದಾಗಿರುವುದು.

೨೧. ಪಂಚಾಕ್ಷರ ಮಂತ್ರದ ಮಹಿಮೆಯಿಂದಲೇ ಪ್ರಪಂಚಗಳೂ, ವೇದಗಳೂ, ಋಷಿಗಳೂ, ಸ್ಥಿರವಾದ ಧರ್ಮಗಳೂ, ದೇವತೆಗಳೂ ಸಮಸ್ತ ಜಗತ್ತುಗಳೂ ಇರುವುವು.

**ಪ್ರಲಯೇ ಸಮನುಪ್ರಾಪ್ತೇ ನಷ್ಟೇ ಸ್ಥಾವರಜಂಗಮೇ ।**
**ಸರ್ವಂ ಪ್ರಕೃತಿಮಾಪನ್ನಂ ತತ್ರ ಸಂಲಯಮೇಷ್ಯತಿ ॥ ೨೨ ॥**

**ಏಕೋಽಹಂ ಸಂಸ್ಥಿತೋ ದೇವಿ ನ ದ್ವಿತೀಯೋಽಸ್ತಿ ಕುತ್ರಚಿತ್ ।**
**ತದಾ ವೇದಾಶ್ಚ ಶಾಸ್ತ್ರಾಣಿ ಸರ್ವೇ ಪಂಚಾಕ್ಷರೇ ಸ್ಥಿತಾಃ ॥ ೨೩ ॥**

**ತೇ ನಾಶಂ ನೈವ ಸಂಪ್ರಾಪ್ತಾ ಮಚ್ಛಕ್ತ್ಯಾ ಹ್ಯನುಪಾಲಿತಾಃ ।**
**ತತಃ ಸೃಷ್ಟಿರಭೂನ್ಮತ್ತಃ ಪ್ರಕೃತ್ಯಾತ್ಮಪ್ರಭೇದತಃ ॥ ೨೪ ॥**

**ಗುಣಮೂರ್ತ್ಯಾತ್ಮನಾಂ ಚೈವ ತತೋಽವಾಂತರಸಂಹೃತಿಃ ।**
**ತದಾ ನಾರಾಯಣಃ ಶೇತೇ ದೇವೋ ಮಾಯಾಮಯೀಂ ತನುಂ ॥ ೨೫ ॥**

**ಆಸ್ಥಾಯ ಭೋಗಿಪರ್ಯಂಕಶಯನೇ ತೋಯಮಧ್ಯಗಃ ।**
**ತನ್ನಾಭಿಪಂಕಜಾಜ್ಜಾತಃ ಪಂಚವಕ್ತ್ರಃ ಪಿತಾಮಹಃ । ॥ ೨೬ ॥**

---

೨೨. ಪ್ರಳಯಕಾಲವು ಪ್ರಾಪ್ತವಾಗುತ್ತಲು ಚರಾಚರ ಪ್ರಪಂಚವೆಲ್ಲವೂ ಪ್ರಕೃತಿರೂಪವಾಗಿ ಪಂಚಾಕ್ಷರರೂಪವಾದ ಪರಬ್ರಹ್ಮನಲ್ಲಿ ಲಯವನ್ನು ಹೊಂದುವುದು.

೨೩. ಎಲೌ ದೇವಿಯೇ, ಆ ಸಮಯದಲ್ಲಿ ನಾನೊಬ್ಬನೇ ಇರುವೆನು. ಎರಡನೆಯ ಪದಾರ್ಥವೇ ಇರುವುದಿಲ್ಲ. ಆ ಕಾಲದಲ್ಲಿ ವೇದಗಳೂ,ಶಾಸ್ತ್ರಗಳೂ, ಪಂಚಾಕ್ಷರಮಂತ್ರದಲ್ಲಿ ಅಡಗಿರುವುವು.

೨೪-೨೫. ಆ ವೇದಶಾಸ್ತ್ರಗಳು ನನ್ನ ಶಕ್ತಿಯಿಂದ ನಾಶವಾಗದೇ ಉಳಿದುಕೊಂಡಿರುವುವು. ಆಮೇಲೆ ನನ್ನಿಂದಲೇ ಪ್ರಕೃತಿ ಪುರುಷಭೇದದಿಂದ ಸೃಷ್ಟಿಸಲ್ಪಡುವುವು. ಸತ್ತ್ವರಜಸ್ತಮೋಗುಣಗಳ ಮೂರ್ತಿಸ್ವರೂಪರಾದ ಬ್ರಹ್ಮ, ವಿಷ್ಣು, ರುದ್ರರ ಸೃಷ್ಟಿಯೂ, ಪಂಚಭೂತಾದಿಸೂಕ್ಷ್ಮತತ್ತ್ವಗಳ ಸೃಷ್ಟಿಯೂ ಆಗುವುದು. ಆಗ ನಾರಯಣನು ಮಾಯಾಸ್ವರೂಪವಾದ ಶರೀರವನ್ನು ಧರಿಸಿ ಕ್ಷೀರಸಮುದ್ರದ ಮಧ್ಯದಲ್ಲಿರುವ ಆದಿಶೇಷನ ಹಾಸಿಗೆಯಲ್ಲಿ ಮಲಗಿರುವನು.

೨೬-೨೭. ಆ ವಿಷ್ಣುವಿನ ನಾಭಿಕಮಲದಿಂದ ಐದು ಮುಖವುಳ್ಳ ಬ್ರಹ್ಮನು ಹುಟ್ಟಿದನು. ಆ ಬ್ರಹ್ಮನು ಮೂರು ಲೋಕಗಳನ್ನೂ ಸೃಷ್ಟಿಸ

ಸಿಸೃಕ್ಷಮಾಣೋ ಲೋಕಾಂಸ್ತ್ರೀನ್ನ ಸಶಕ್ತೋ ಹ್ಯಸಹಾಯವಾನ್
ಮುನೀನ್ದಶ ಸಸರ್ಜಾದೌ ಮಾನಸಾನಮಿತೌಜಸಃ ॥ ೨೭ ॥

ತೇಷಾಂ ಸಿದ್ಧಿವಿವೃದ್ಧ್ಯರ್ಥಂ ಮಾಂ ಪ್ರೋವಾಚ ಪಿತಾಮಹಃ ।
ಮತ್ಪುತ್ರಾಣಾಂ ಮಹಾದೇವ ಶಕ್ತಿಂ ದೇಹಿ ಮಹೇಶ್ವರ ॥ ೨೮ ॥

ಇತ್ಯೇವಂ ಪ್ರಾರ್ಥಿತಸ್ತೇನ ಪಂಚವಕ್ತ್ರಧರೋ ಹ್ಯಹಂ ।
ಪಂಚಾಕ್ಷರಾಣಿ ಕ್ರಮಶಃ ಪ್ರೋಕ್ತವಾನ್ಪದ್ಮಯೋನಯೇ ॥ ೨೯ ॥

ಸ ಪಂಚವದನೈಸ್ತಾನಿ ಗೃಹ್ಣನ್ಲೋಕಪಿತಾಮಹಃ ।
ವಾಚ್ಯವಾಚಕಭಾವೇನ ಜ್ಞಾತವಾನ್ಮಾಂ ಮಹೇಶ್ವರಂ ॥ ೩೦ ॥

ಜ್ಞಾತ್ವಾ ಪ್ರಯೋಗಂ ವಿಧಿವತ್ಸಿದ್ಧಮಂತ್ರಃ ಪ್ರಜಾಪತಿಃ ।
ಪುತ್ರೇಭ್ಯಃ ಪ್ರದದೌ ಮಂತ್ರಂ ಮಂತ್ರಾರ್ಥಂ ಚ ಯಥಾತಥಂ ॥ ೩೧ ॥

---

ಬೇಕೆಂದು ಇಚ್ಛಿಸಿ ಮೊದಲು ತನ್ನ ಮನಸ್ಸಿನಿಂದಲೇ ವಿಶೇಷವಾದ ತೇಜೋ ಬಲದಿಂದ ಕೂಡಿದ ಹತ್ತು ಜನ ಮುನಿಗಳನ್ನು ಸೃಷ್ಟಿಸಿದನು.

೨೮-೨೯. ತಾನು ಮನಸ್ಸಿನಿಂದ ಸೃಷ್ಟಿಮಾಡಿದ ಹತ್ತು ಜನ ಮುನಿಗಳ ಕಾರ್ಯವು ಸಿದ್ಧಿಯಾಗುವುದಕ್ಕಾಗಿ ಬ್ರಹ್ಮನು ಮಹೇಶ್ವರನಾದ ನನ್ನನ್ನು ಕುರಿತು, "ಎಲೈ ಸ್ವಾಮಿಯೇ ನನ್ನ ಮಕ್ಕಳಿಗೆ ಶಕ್ತಿಯನ್ನುಂಟುಮಾಡು" ಎಂದು ಪ್ರಾರ್ಥಿಸಲು, ಐದು ಮುಖಗಳುಳ್ಳ ನಾನು ಕ್ರಮವಾಗಿ ಪಂಚಾಕ್ಷರೀ ಮಂತ್ರವನ್ನು ಬ್ರಹ್ಮನಿಗೆ ಹೇಳಿಕೊಟ್ಟೆನು.

೩೦. ಸೃಷ್ಟಿಕರ್ತನಾದ ಬ್ರಹ್ಮನು ತನ್ನ ಐದು ಮುಖಗಳಿಂದ ಪಂಚಾಕ್ಷರಮಂತ್ರವನ್ನು ಗ್ರಹಿಸಿ, ವಾಚ್ಯವಾಚಕಭಾವದಿಂದ ನನ್ನನ್ನೇ ಮಹೇಶ್ವರನೆಂದು ತಿಳಿದುಕೊಂಡನು.

೩೧. ಬ್ರಹ್ಮನು ವಿಧಿಗನುಸಾರವಾಗಿ ಮಂತ್ರದ ಉಪಯೋಗವನ್ನು ತಿಳಿದು ಮಂತ್ರಸಿದ್ಧಿಯನ್ನು ಪಡೆದು, ತನ್ನ ಪುತ್ರರಿಗೂ ಆ ಮಂತ್ರವನ್ನು ಅರ್ಥಸಹಿತವಾಗಿ ಉಪದೇಶಿಸಿದನು.

ತೇ ಚ ಲಬ್ಧ್ವಾ ಮಂತ್ರರತ್ನಂ ಸಾಕ್ಷಾಲ್ಲೋಕಪಿತಾಮಹಾತ್ ।
ತದಾಜ್ಞಪ್ತೇನ ಮಾರ್ಗೇಣ ಮದಾರಾಧನಕಾಂಕ್ಷಿಣಃ ॥ ೩೨ ॥

ಮೇರೋಸ್ತು ಶಿಖರೇ ರಮ್ಯೇ ಮುಂಜವಾನ್ನಾಮ ಪರ್ವತಃ ।
ಮತ್ಪ್ರಿಯಃ ಸತತಂ ಶ್ರೀಮಾನ್ಮದ್ಭಕ್ತೈ ರಕ್ಷಿತಸ್ಸದಾ ॥ ೩೩ ॥

ತಸ್ಯಾಭ್ಯಾಸೇ ತಪಸ್ತೀವ್ರಂ ಲೋಕಂ ಸ್ರಷ್ಟುಂ ಸಮುತ್ಸುಕಾಃ ।
ದಿವ್ಯಂ ವರ್ಷಸಹಸ್ರಂ ತು ವಾಯುಭಕ್ಷಾಸ್ಸಮಾಚರನ್ ॥ ೩೪ ॥

ತೇಷಾಂ ಭಕ್ತಿಮಹಂ ದೃಷ್ಟ್ವಾ ಸದ್ಯಃ ಪ್ರತ್ಯಕ್ಷತಾಮಿಯಾಂ ।
ಋಷಿಂ ಛಂದಶ್ಚ ಕೀಲಂ ಚ ಬೀಜಶಕ್ತಿಂ ಚ ದೈವತಂ ॥ ೩೫ ॥

ನ್ಯಾಸಂ ಷಡಂಗಂ ದಿಗ್ಬಂಧಂ ವಿನಿಯೋಗಮಶೇಷತಃ ।
ಪ್ರೋಕ್ತವಾನಹಮಾರ್ಯಾಣಾಂ ಜಗತ್ಸೃಷ್ಟಿವಿವೃದ್ಧಯೇ ॥ ೩೬ ॥

---

೩೨-೩೪. ಅವರು ಬ್ರಹ್ಮನಿಂದ ಶ್ರೇಷ್ಠವಾದ ಆ ಮಂತ್ರವನ್ನುಪದೇಶ ಮಾಡಿಸಿಕೊಂಡು ಅವನು ಅಪ್ಪಣೆಮಾಡಿದ ಮಾರ್ಗದಲ್ಲಿ (ರೀತಿಯಲ್ಲಿ) ನನ್ನ ಪೂಜೆಯನ್ನು ಮಾಡುತ್ತಾ ಮೇರುಪರ್ವತದ ಶಿಖರದಲ್ಲಿ ಅತ್ಯಂತ ಮನೋಹರವಾದುದೂ ನನ್ನ ಭಕ್ತರುಗಳಿಂದ ಕೂಡಿ ನನಗೆ ಅತ್ಯಂತ ಪ್ರೀತಿಪಾತ್ರವಾದುದೂ ಆದ ಮುಂಜವೆಂಬ ಪರ್ವತದ ಸಮೀಪದಲ್ಲಿ, ಪ್ರಪಂಚವನ್ನು ಸೃಷ್ಟಿಮಾಡಬೇಕೆಂಬ ಅಪೇಕ್ಷೆಯಿಂದ ದೇವಮಾನದ ಒಂದು ಸಾವಿರ ವರ್ಷಗಳವರೆಗೆ ಗಾಳಿಯನ್ನೇ ಆಹಾರಮಾಡಿಕೊಂಡು ತೀವ್ರವಾದ ತಪಸ್ಸನ್ನು ಮಾಡಿದರು.

೩೫-೩೬. ಅವರ ಭಕ್ತಿಯನ್ನು ನೋಡಿ ನಾನು ಒಡನೆಯೇ ಅವರಿಗೆ ಪ್ರತ್ಯಕ್ಷನಾದೆನು. ಅವರು ಮಾಡಬೇಕೆಂದಿರುವ ಪ್ರಪಂಚಸೃಷ್ಟಿಯ ಅಭಿವೃದ್ಧಿಗಾಗಿ ಆ ಪೂಜ್ಯರಾದ ತಪಸ್ವಿಗಳಿಗೆ ಪಂಚಾಕ್ಷರಮಂತ್ರದ ಋಷಿ, ಛಂದಸ್ಸು, ಕೀಲಕ, ಬೀಜ, ಶಕ್ತಿ, ದೇವತೆ ಷಡಂಗನ್ಯಾಸ ದಿಗ್ಬಂಧ, ಮಂತ್ರದ ಉಪಯೋಗ ಇವುಗಳೆಲ್ಲವನ್ನೂ ಅವರಿಗೆ ಉಪದೇಶಮಾಡಿದೆನು.

ತತಸ್ತೇ ಮಂತ್ರಮಾಹಾತ್ಮ್ಯಾದೃಷಯಸ್ತಪಸೈಧಿತಾಃ ।
ಸೃಷ್ಟಿಂ ವಿತನ್ವತೇ ಸಮ್ಯಕ್ಸದೇವಾಸುರಮಾನುಷೀಂ ॥ ೩೭ ॥

ಅಸ್ಯಾಃ ಪರಮವಿದ್ಯಾಯಾಃ ಸ್ವರೂಪಮಧುನೋಚ್ಯತೇ ।
ಆದೌ ನಮಃ ಪ್ರಯೋಕ್ತವ್ಯಂ ಶಿವಾಯ ತು ತತಃ ಪರಂ ॥ ೩೮ ॥

ಸೈಷಾ ಪಂಚಾಕ್ಷರೀ ವಿದ್ಯಾ ಸರ್ವಶ್ರುತಿಶಿರೋಗತಾ ।
ಸರ್ವಜಾತಸ್ಯ ಸರ್ವಸ್ಯ ಬೀಜಭೂತಾ ಸನಾತನೀ ॥ ೩೯ ॥

ಪ್ರಥಮಂ ಮನ್ಮುಖೋದ್ಗೀರ್ಣಾ ಸಾ ಮನ್ಮೈವಾಸ್ತಿ ವಾಚಿಕಾ ।
ತಪ್ತಚಾಮೀಕರಪ್ರಖ್ಯಾ ಪೀನೋನ್ನತಪಯೋಧರಾ ॥ ೪೦ ॥

ಚತುರ್ಭುಜಾ ತ್ರಿನಯನಾ ಬಾಲೇಂದುಕೃತಶೇಖರಾ ।
ಪದ್ಮೋತ್ಪಲಕರಾ ಸೌಮ್ಯಾ ವರದಾಭಯಪಾಣಿಕಾ ॥ ೪೧ ॥

---

೩೭. ಆಮೇಲೆ ಆ ಋಷಿಗಳು ಮಂತ್ರದ ಮಹಿಮೆಯಿಂದ ತಪಸ್ಸನ್ನು ವೃದ್ಧಿಗೊಳಿಸಿ ದೇವಾಸುರಮನುಷ್ಯರ ಸೃಷ್ಟಿಯನ್ನು ಚೆನ್ನಾಗಿ ಮಾಡಿದರು.

೩೮-೩೯. ಇನ್ನು ಈ ಶ್ರೇಷ್ಠವಾದ ಮಂತ್ರವಿದ್ಯೆಯ ಸ್ವರೂಪವನ್ನು ಹೇಳುವೆನು, ಕೇಳು. "ನಮಃ ಶಿವಾಯ" ಎಂಬುದು ಐದು ಅಕ್ಷರದ ಮಂತ್ರವು. ಇದು ವೇದಗಳಲ್ಲಿರುವುದು (ತೈ. ಸ. ೪-೫-೭). ಇದು ಸಮಸ್ತಕ್ಕೂ ಕಾರಣವಾಗಿ ಸಕಲವಸ್ತುಸ್ವರೂಪನಾದ ಪರಮೇಶ್ವರನಿಗೆ ಕಾರಣಸ್ವರೂಪವಾದ ಅನಾದಿಯಾದ ಮಂತ್ರವಾಗಿರುವುದು.

೪೦. ಈ ಮಂತ್ರವು ನನ್ನ ಮುಖದಿಂದಲೇ ಮೊದಲು ಹೊರಟು ನನ್ನನ್ನೇ ಪ್ರತಿಪಾದಿಸುವದು. ಆ ಮಂತ್ರಮೂರ್ತಿಯು ಪುಟವಿಕ್ಕಿದ ಚಿನ್ನದ ಬಣ್ಣವುಳ್ಳದ್ದಾಗಿ, ದುಂಡಾಗಿ ಉಬ್ಬಿ ಮುಂದಕ್ಕೆ ಚಾಚಿರುವ ಸ್ತನಗಳುಳ್ಳದ್ದಾಗಿರುವುದು.

೪೧-೪೨. ಆ ವಿದ್ಯಾಮೂರ್ತಿಗೆ ನಾಲ್ಕು ತೋಳುಗಳೂ ಮೂರು ಕಣ್ಣುಗಳೂ ಇರುವುವು. ಬಾಲಚಂದ್ರನನ್ನು ತಲೆಯಲ್ಲಿ ಧರಿಸಿ, ಕಮಲವನ್ನೂ

**ಸರ್ವಲಕ್ಷಣಸಂಪನ್ನಾ ಸರ್ವಾಭರಣಭೂಷಿತಾ ।**
**ಸಿತಪದ್ಮಾಸನಾಸೀನಾ ನೀಲಕುಂಚಿತಮೂರ್ಧಜಾ ॥ ೪೨ ॥**

**ಅಸ್ಯಾಃ ಪಂಚವಿಧಾ ವರ್ಣಾಃ ಪ್ರಸ್ಫುರದ್ರಶ್ಮಿಮಂಡಲಾಃ ।**
**ಪೀತಃ ಕೃಷ್ಣಸ್ತಥಾ ಧೂಮ್ರಃ ಸ್ವರ್ಣಾಭೋ ರಕ್ತ ಏವ ಚ ॥ ೪೩ ॥**

**ಪೃಥಕ್ಪ್ರಯೋಜ್ಯಾ ಯದ್ಯೇತೇ ಬಿಂದುನಾದವಿಭೂಷಿತಾಃ ।**
**ಅರ್ಧಚಂದ್ರನಿಭೋ ಬಿಂದುರ್ನಾದೋ ದೀಪಶಿಖಾಕೃತಿಃ ॥ ೪೪ ॥**

**ಬೀಜಂ ದ್ವಿತೀಯಂ ಬೀಜೇಷು ಮಂತ್ರಸ್ಯಾಸ್ಯ ವರಾನನೇ ।**
**ದೀರ್ಘಪೂರ್ವಂ ತುರೀಯಸ್ಯ ಪಂಚಮಂ ಶಕ್ತಿಮಾದಿಶೇತ್ ॥ ೪೫ ॥**

**ವಾಮದೇವೋ ನಾಮ ಋಷಿಃ ಪಂಙ್ಕ್ತಿಶ್ಛಂದ ಉದಾಹೃತಂ ।**
**ದೇವತಾ ಶಿವ ಏವಾಹಂ ಮಂತ್ರಸ್ಯಾಸ್ಯ ವರಾನನೇ ॥ ೪೬ ॥**

---

ಸ್ಫಟಿಕದ ಮಾಲೆಯನ್ನೂ ಕೈಯಲ್ಲಿ ಹಿಡಿದುಕೊಂಡು, ಮತ್ತೆರಡು ಕೈಗಳಲ್ಲಿ ವರದ ಅಭಯ ಮುದ್ರೆಗಳನ್ನು ಧರಿಸಿ ಶಾಂತವಾದ ಆಕಾರವುಳ್ಳವಳಾಗಿ ಕಪ್ಪಾದ ಗುಂಗುರು ಕೂದಲುಗಳಿಂದ ಮನೋಹರವಾಗಿ ಒಪ್ಪುತ್ತಾ ಸಮಸ್ತ ಶುಭಲಕ್ಷಣಗಳಿಂದ ಕೂಡಿ ಸಕಲಾಭರಣಗಳನ್ನೂ ಧರಿಸಿ, ಶ್ವೇತಕಮಲದ ಪೀಠದಲ್ಲಿ ಕುಳಿತು ರಾರಾಜಿಸು ತ್ತಿರುವುದು.

೪೩–೪೪. ಈ ಪಂಚಾಕ್ಷರವಿದ್ಯೆಗೆ ಐದು ವರ್ಣಗಳಿರುವುವು. ಆ ಐದು ವರ್ಣಗಳೂ, ಪ್ರಕಾಶಿಸುತ್ತಿರುವ ಹಳದಿ, ಕಪ್ಪು, ಧೂಮ್ರ, ಸುವರ್ಣ, ಕೆಂಪು ಎಂಬ ಐದು ವಿಧವಾದ ಬಣ್ಣಗಳಿಂದ ಕೂಡಿದ ತೇಜಸ್ಸಿನ ಮಂಡಲಗಳಾಗಿರು ವುವು. ಜಪಮಾಡತಕ್ಕವನು ಅರ್ಧಚಂದ್ರಾಕಾರವಾದ ಬಿಂದು, ದೀಪದಶಿಖೆ ಯಂತಿರುವ ನಾದ ಇವುಗಳಿಂದ ಕೂಡಿದ ವರ್ಣಗಳನ್ನು ಬೇರೆಬೇರೆಯಾಗಿ ಉಚ್ಚರಿಸಬೇಕು.

೪೫. ಈ ಮಂತ್ರದಲ್ಲಿ ಎರಡನೆಯ ಅಕ್ಷರವಾದ ಮಂ ಎಂಬುದು ಬೀಜವು ಐದನೆಯ ಅಕ್ಷರವಾದ ಯಂ ಎಂಬುದು ಶಕ್ತಿಯು

೪೬. ಈ ಮಂತ್ರಕ್ಕೆ ವಾಮದೇವನೇ ಋಷಿಯು. ಐದಕ್ಷರವಿರುವುದ ರಿಂದ ಪಂಕ್ತಿ ಎಂಬ ಛಂದಸ್ಸು. ಶಿವನೇ ದೇವತೆಯು.

ಗೌತಮೋಽತ್ರಿರ್ವರಾರೋಹೇ ವಿಶ್ವಾಮಿತ್ರಸ್ತಥಾಂಗಿರಾಃ ।
ಭರದ್ವಾಜಶ್ಚ ವರ್ಣಾನಾಂ ಕ್ರಮಶಶ್ಚರ್ಷಯಃ ಸ್ಮೃತಾಃ ॥ ೪೭ ॥

ಗಾಯತ್ರ್ಯನುಷ್ಟುಪ್ತ್ರಿಷ್ಟುಪ್ಚ ಛಂದಾಂಸಿ ಬೃಹತೀ ವಿರಾಟ್ ।
ಇಂದ್ರೋ ರುದ್ರೋ ಹರಿರ್ಬ್ರಹ್ಮಾ ಸ್ಕಂದಸ್ತೇಷಾಂ ಚ ದೇವತಾಃ ॥ ೪೮ ॥

ಮಮ ಪಂಚಮುಖಾನ್ಯಾಹುಃ ಸ್ಥಾನೇ ತೇಷಾಂ ವರಾನನೇ ।
ಪೂರ್ವಾದೇಶ್ಚೋರ್ಧ್ವಪರ್ಯಂತಂ ನಕಾರಾದಿ ಯಥಾಕ್ರಮಂ ॥ ೪೯ ॥

ಉದಾತ್ತಃ ಪ್ರಥಮೋ ವರ್ಣಶ್ಚತುರ್ಥಶ್ಚ ದ್ವಿತೀಯಕಃ ।
ಪಂಚಮಃ ಸ್ವರಿತಶ್ಚೈವ ತೃತೀಯೋ ನಿಹತಃ ಸ್ಮೃತಃ ॥ ೫೦ ॥

---

೪೭-೪೮. ಇನ್ನು ಈ ಮಂತ್ರದಲ್ಲಿರುವ ಐದು ಅಕ್ಷರಗಳಿಗೂ ಪ್ರತ್ಯೇಕವಾಗಿ ಋಷಿದೇವತಾ ಛಂದಸ್ಸುಗಳನ್ನು ಹೇಳುವೆನು, ಕೇಳು. ಗೌತಮ, ಅತ್ರಿ, ವಿಶ್ವಾಮಿತ್ರ, ಅಂಗಿರಸ್ಸು, ಭರದ್ವಾಜ ಎಂಬ ಋಷಿಗಳು ಈ ಮಂತ್ರದ ಐದು ವರ್ಣಗಳಿಗೂ ಕ್ರಮವಾಗಿ ಋಷಿಗಳೆಂದು ಹೇಳಲ್ಪಡುವರು. ಕ್ರಮವಾಗಿ ಗಾಯತ್ರೀ, ಅನುಷ್ಟುಪ್, ತ್ರಿಷ್ಟುಪ್, ಬೃಹತೀ, ವಿರಾಟ್ ಎಂಬವು ಛಂದಸ್ಸುಗಳು. ಇಂದ್ರ, ರುದ್ರ, ಹರಿ, ಬ್ರಹ್ಮ, ಸ್ಕಂದ ಇವರೇ ದೇವತೆಗಳು.

೪೯. ಸುಂದರಮುಖಿಯಾದ ಎಲೌ ಪಾರ್ವತಿಯೇ! ಪಂಚಾಕ್ಷರ ಮಂತ್ರದಲ್ಲಿರುವ ನಕಾರಾದಿಯಾದ ಐದಕ್ಷರಗಳಿಗೆ ಪೂರ್ವಾದಿಯಾಗಿ ಊರ್ಧ್ವಮುಖಾಂತವಾದ ಎಂದರೆ, ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ, ಊರ್ಧ್ವ ಎಂಬ ಐದು ಮುಖಗಳೇ ಐದು ಸ್ಥಾನಗಳಾಗಿರುವುವು. ನಮಃಶಿವಾಯ ಎಂಬ ಐದಕ್ಷರಗಳು ಶಿವನ ಪಂಚಮುಖಗಳೆಂದು ಮುಖ್ಯಾಭಿಪ್ರಾಯವು.

೫೦. ಈ ಮಂತ್ರದ ಒಂದು, ಎರಡು ಮತ್ತು ನಾಲ್ಕನೆಯ ಅಕ್ಷರಗಳು ಉದಾತ್ತಸ್ವರಗಳು. ಐದನೆಯ ಅಕ್ಷರವು ಸ್ವರಿತವು. ಮೂರನೆಯ ಅಕ್ಷರವು ನಿಹತಸ್ವರವು.

ಮೂಲವಿದ್ಯಾ ಶಿವಂ ಶೈವಂ ಸೂತ್ರಂ ಪಂಚಾಕ್ಷರಂ ತಥಾ ।
ನಾಮಾನ್ಯಸ್ಯ ವಿಜಾನೀಯಾಚ್ಛೈವಂ ಮೇ ಹೃದಯಂ ಮಹತ್ ॥ ೫೧ ॥

ನಕಾರಶ್ಶಿರ ಉಚ್ಯೇತ ಮಕಾರಸ್ತು ಶಿಖೋಚ್ಯತೇ ।
ಶಿಕಾರಃ ಕವಚಂ ತದ್ವದ್ವಕಾರೋ ನೇತ್ರಮುಚ್ಯತೇ ॥ ೫೨ ॥

ಯಕಾರೋಽಸ್ತ್ರಂ ನಮಃ ಸ್ವಾಹಾ ವಷಟ್ ಹುಂ ವೌಷಡಿತ್ಯಪಿ ।
ಫಡಿತ್ಯಪಿ ಚ ವರ್ಣಾನಾಮಂತೇಂಗತ್ವಂ ಯದಾ ತದಾ ॥ ೫೩ ॥

ತತ್ರಾಪಿ ಮೂಲಮಂತ್ರೋಽಯಂ ಕಿಂಚಿದ್ಭೇದಸಮನ್ವಯಾತ್ ।
ತತ್ರಾಪಿ ಪಂಚಮೋ ವರ್ಣೋ ದ್ವಾದಶಸ್ವರಭೂಷಿತಃ ॥ ೫೪ ॥

---

೫೧. ಈ ಮಂತ್ರಕ್ಕೆ ಮೂಲವಿದ್ಯಾ, ಶಿವ, ಶೈವ, ಸೂತ್ರ, ಪಂಚಾಕ್ಷರ ಎಂದು ಐದು ಹೆಸರುಗಳಿರುವುವು. ಇವುಗಳಲ್ಲಿ ಶೈವವೆಂಬ ಹೆಸರು ನನಗೆ ತುಂಬಾ ಇಷ್ಟವಾದುದು.

೫೨-೫೩. ಈ ಪಂಚಾಕ್ಷರಮಂತ್ರದ ವರ್ಣಗಳಿಂದ ಅಂಗನ್ಯಾಸ ಕರನ್ಯಾಸಗಳನ್ನು ಮಾಡಿಕೊಳ್ಳುವ ಕ್ರಮವನ್ನು ಹೇಳುವೆನು. ನ ಎಂಬ ಅಕ್ಷರದಿಂದ ಶಿರಸ್ಸು, ಮ ಎಂಬ ಅಕ್ಷರದಿಂದ ಶಿಖಾ, ಶಿ ಎಂಬ ಅಕ್ಷರದಿಂದ ಕವಚ, ವ ಎಂಬ ಅಕ್ಷರದಿಂದ ನೇತ್ರ, ಯ ಎಂಬ ಅಕ್ಷರದಿಂದ ಅಸ್ತ್ರಮಂತ್ರ, ಇವುಗಳಲ್ಲಿ ನಮಃ ಸ್ವಾಹಾ ವಷಟ್ ಹುಂ ವೌಷಟ್ ಫಟ್ ಎಂಬ ಶಬ್ದಗಳನ್ನು ವಾಕ್ಯಾಂತ್ಯದಲ್ಲಿ ಸೇರಿಸಿ ನ್ಯಾಸಮಾಡಬೇಕು. ಹೇಗೆಂದರೆ ಓಂ ನಂ ಶಿರಸೇ ಸ್ವಾಹಾ, ಓಂ ಮಂ ಶಿಖಾಯೈ ವಷಟ್ ಇತ್ಯಾದಿ.

೫೪. ಆ ನ್ಯಾಸಕಾಲದಲ್ಲಿಯೂ ಕೂಡ ಕೆಲವು ಭೇದಗಳಿಂದ ಕೂಡಿದ ಮೂಲಮಂತ್ರವನ್ನೂ ಹನ್ನೆರಡು ಸ್ವರಗಳಿಂದ ಕೂಡಿದ ಐದನೆಯ ವರ್ಣದ ಉಚ್ಚಾರಣೆಯ ಕ್ರಮವನ್ನೂ ಗುರೂಪದೇಶಕ್ರಮದಿಂದ ತಿಳಿದುಕೊಳ್ಳಬೇಕು.

ತಸ್ಮಾದನೇನ ಮಂತ್ರೇಣ ಮನೋವಾಕ್ಕಾಯಭೇದತಃ ।
ಆವಯೋರರ್ಚನಂ ಕುರ್ಯಾಜ್ಜಪಹೋಮಾದಿಕಂ ತಥಾ ॥ ೫೫ ॥

ಯಥಾಪ್ರಜ್ಞಂ ಯಥಾಕಾಲಂ ಯಥಾಶಾಸ್ತ್ರಂ ಯಥಾಮತಿ ।
ಯಥಾಶಕ್ತಿ ಯಥಾಸಂಪದ್ಯಥಾಯೋಗಂ ಯಥಾರತಿ ॥ ೫೬ ॥

ಯದಾ ಕದಾಪಿ ವಾ ಭಕ್ತ್ಯಾ ಯತ್ರ ಕುತ್ರಾಪಿ ವಾ ಕೃತಾ ।
ಯೇನ ಕೇನಾಪಿ ವಾ ದೇವಿ ಪೂಜಾ ಮುಕ್ತಿಂ ನಯಿಷ್ಯತಿ ॥ ೫೭ ॥

ಮಯ್ಯಾಸಕ್ತೇನ ಮನಸಾ ಯತ್ಕೃತಂ ಮಮ ಸುಂದರಿ ।
ಮತ್ಪ್ರಿಯಂ ಚ ಶಿವಂ ಚೈವ ಕ್ರಮೇಣಾಪ್ಯಕ್ರಮೇಣ ವಾ ॥ ೫೮ ॥

ತಥಾಪಿ ಮಮ ಭಕ್ತಾ ಯೇ ನಾತ್ಯಂತವಿವಶಾಃ ಪುನಃ ।
ತೇಷಾಂ ಸರ್ವೇಷು ಶಾಸ್ತ್ರೇಷು ಮಯೈವ ನಿಯಮಃ ಕೃತಃ ॥ ೫೯ ॥

೫೫-೫೭. ಎಲೌ ದೇವಿಯೇ, ಈ ಪಂಚಾಕ್ಷರ ಮಂತ್ರದಿಂದ ಶಾಸ್ತ್ರ ನಿಯಮವನ್ನನುಸರಿಸಿ ತನಗಿರುವ ಬುದ್ಧಿ, ತಿಳುವಳಿಕೆ, ಕಾಲ, ಶಕ್ತಿ, ಸಂಪತ್ತು, ಯೋಗ್ಯತೆ, ಪ್ರೀತಿ, ಇವುಗಳನ್ನನುಸರಿಸಿ ಮನೋವಾಕ್ಕಾಯಗಳೆಂಬ ತ್ರಿಕರಣ ಪೂರ್ವಕವಾಗಿ ಅರ್ಚನೆ, ಜಪಹೋಮಾದಿಗಳನ್ನು ಮಾಡಬೇಕು. ಯಾವಾಗ ಭಕ್ತಿಯುಂಟಾಗುವುದೋ ಆಗ ಯಾವ ಸ್ಥಳದಲ್ಲಿಯಾದರೂ ತನಗೆ ದೊರೆತ ಯಾವ ಪೂಜಾದ್ರವ್ಯಗಳಿಂದಲಾದರೂ ನನ್ನ ಪೂಜೆಯನ್ನು ಮಾಡಿದರೆ ಅದು ಭಕ್ತನಿಗೆ ಮುಕ್ತಿಯನ್ನು ದೊರಕಿಸಿಕೊಡುವುದು.

೫೮-೫೯. ಸುಂದರಿಯಾದ ಎಲೌ ಪಾರ್ವತಿಯೇ ಕೇಳು, ಕ್ರಮವಾಗಲಿ, ಅಕ್ರಮವಾಗಲಿ ನನ್ನಲ್ಲಿ ಆಸಕ್ತವಾದ ಮನಸ್ಸಿನಿಂದ ನನ್ನ ಭಕ್ತರು ಏನುಮಾಡಿದರೂ, ಅದು ಮಂಗಳಕರವಾಗಿ, ನನಗೆ ಇಷ್ಟವಾದುದಾಗಿರುವುದು. ಇವರು ಅತ್ಯಂತ ವಿವಶಕ್ತರಲ್ಲವಾದುದರಿಂದ ಅವರಿಗಾಗಿ ಸಮಸ್ತ ಶಾಸ್ತ್ರಗಳಲ್ಲಿಯೂ ನಾನೇ ನಿಯಮಗಳನ್ನು ಮಾಡಿರುವೆನು.

**ತತ್ರಾದೌ ಸಂಪ್ರವಕ್ಷ್ಯಾಮಿ ಮಂತ್ರಸಂಗ್ರಹಣಂ ಶುಭಂ ।**
**ಯಂ ವಿನಾ ನಿಷ್ಫಲಂ ಜಾಪ್ಯಂ ಯೇನ ವಾ ಸಫಲಂ ಭವೇತ್ ॥ ೬೦ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-**
**ಮುತ್ತರಭಾಗೇ ಪಂಚಾಕ್ಷರಮಾಹಾತ್ಮ್ಯವರ್ಣನಂ ನಾಮ**
**ತ್ರಯೋದಶೋಽಧ್ಯಾಯಃ**

---

೬೦. ಈ ವಿಷಯದಲ್ಲಿ ಮೊದಲು ಮಂಗಳಕರವಾದ ಮಂತ್ರಗ್ರಹಣ ವಿಚಾರವನ್ನು ಹೇಳುವೆನು. ಇದನ್ನು ತಿಳಿಯದಿದ್ದರೆ ಜಪವು ನಿಷ್ಫಲವಾಗುವುದು, ತಿಳಿದರೆ ಸಫಲವಾಗುವುದು.

ಇಲ್ಲಿಗೆ ಶ್ರೀಶಿವಮಹಾಪುರಾಣದ ಏಳನೆಯ ವಾಯುವೀಯಸಂಹಿತೆಯ
ಉತ್ತರಭಾಗದಲ್ಲಿ ಪಂಚಾಕ್ಷರಮಾಹಾತ್ಮ್ಯವರ್ಣನವೆಂಬ
ಹದಿಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ಚತುರ್ದಶೋಽಧ್ಯಾಯಃ

---

॥ ಈಶ್ವರ ಉವಾಚ ॥

ಆಜ್ಞಾಹೀನಂ ಕ್ರಿಯಾಹೀನಂ ಶ್ರದ್ಧಾಹೀನಂ ವರಾನನೇ ।
ಆಜ್ಞಾರ್ಥಂ ದಕ್ಷಿಣಾಹೀನಂ ಸದಾ ಜಪ್ತಂ ತು ನಿಷ್ಫಲಂ ॥ ೧ ॥

ಆಜ್ಞಾಸಿದ್ಧಂ ಕ್ರಿಯಾಸಿದ್ಧಂ ಶ್ರದ್ಧಾಸಿದ್ಧಂ ಮಮಾತ್ಮಕಂ ।
ಏವಂ ಚೇದ್ದಕ್ಷಿಣಾಯುಕ್ತಂ ಮಂತ್ರಸಿದ್ಧಿರ್ಮಹತ್ಫಲಂ ॥ ೨ ॥

---

## ಹದಿನಾಲ್ಕನೆಯ ಅಧ್ಯಾಯವು.

೧. ಈಶ್ವರನು ಹೇಳಿದನು—ಸುಂದರಮುಖಿಯಾದ ಎಲೌ ದೇವಿ, ಗುರುವಿನ ಆಜ್ಞೆ, ಆಚಾರ, ನಂಬಿಕೆ, ಇವುಗಳಿಲ್ಲದೆಯೂ ಗುರುವಿನ ಅನುಮತಿಗಾಗಿ ದಕ್ಷಿಣೆಯನ್ನು ಕೊಡದೆಯೂ, ಜಪಮಾಡಿದರೆ ಅದು ನಿಷ್ಫಲವಾಗುವುದು.

೨. ಗುರುವಿನ ಆಜ್ಞೆ, ಆಚಾರ, ನಂಬಿಕೆ, ಇವುಗಳಿಂದ ಕೂಡಿ, ನನ್ನ ಸ್ವರೂಪವಾದ ಪಂಚಾಕ್ಷರಮಂತ್ರವನ್ನು ಜಪಿಸಿ ಬಳಿಕ ಗುರುದಕ್ಷಿಣೆಯನ್ನು ಕೊಟ್ಟರೆ ಅಂತಹ ಜಪವು ಸಿದ್ಧಿಯಾಗಿ ಮಹಾಫಲವನ್ನು ಕೊಡುವುದು.

**ಉಪಗಮ್ಯ ಗುರುಂ ವಿಪ್ರಮಾಚಾರ್ಯಂ ತತ್ತ್ವವೇದಿನಂ ।**
**ಜಾಪಿನಂ ಸದ್ಗುಣೋಪೇತಂ ಧ್ಯಾನಯೋಗಪರಾಯಣಂ ॥ ೩ ॥**

**ತೋಷಯೇತ್ತಂ ಪ್ರಯತ್ನೇನ ಭಾವಶುದ್ಧಿಸಮನ್ವಿತಃ ।**
**ವಾಚಾ ಚ ಮನಸಾ ಚೈವ ಕಾಯೇನ ದ್ರವಿಣೇನ ಚ ॥ ೪ ॥**

**ಆಚಾರ್ಯಂ ಪೂಜಯೇದ್ವಿಪ್ರಃ ಸರ್ವದಾತಿಪ್ರಯತ್ನತಃ ।**
**ಹಸ್ತ್ಯಶ್ವರಥರತ್ನಾನಿ ಕ್ಷೇತ್ರಾಣಿ ಚ ಗೃಹಾಣಿ ಚ ॥ ೫ ॥**

**ಭೂಷಣಾನಿ ಚ ವಾಸಾಂಸಿ ಧಾನ್ಯಾನಿ ಚ ಧನಾನಿ ಚ ।**
**ಏತಾನಿ ಗುರವೇ ದದ್ಯಾದ್ಭಕ್ತ್ಯಾ ಚ ವಿಭವೇ ಸತಿ ॥ ೬ ॥**

**ವಿತ್ತಶಾಠ್ಯಂ ನ ಕುರ್ವೀತ ಯದಿಚ್ಛೇತ್ಸಿದ್ಧಿಮಾತ್ಮನಃ ।**
**ಪಶ್ಚಾನ್ನಿವೇದ್ಯ ಸ್ವಾತ್ಮಾನಂ ಗುರವೇ ಸಪರಿಚ್ಛದಂ ॥ ೭ ॥**

೩. ತನಗೆ ಗುರುವಾದವನು ಸದಾಚಾರಯುತನಾಗಿಯೂ, ತತ್ತ್ವವನ್ನು ಬಲ್ಲವನಾಗಿಯೂ ಮಂತ್ರಜಪವನ್ನು ಮಾಡಿ ಸದ್ಗುಣಗಳಿಂದ ಕೂಡಿ ಧ್ಯಾನ ಯೋಗಾಸಕ್ತನಾಗಿಯೂ ಇರಬೇಕು. ಇಂತಹ ಗುರುವಿನ ಸಮೀಪಕ್ಕೆ ಹೋಗಿ ಮನಶ್ಶುದ್ಧಿಯಿಂದ ಆ ಗುರುವನ್ನು ನಮಸ್ಕಾರಶುಶ್ರೂಷಾದಿಗಳಿಂದ ಪ್ರಯತ್ನ ಪೂರ್ವಕವಾಗಿ ಸಂತೋಷಪಡಿಸಬೇಕು.

೪-೬. ಮಂತ್ರಜಪಾಸಕ್ತನಾದ ಭಕ್ತನು ತನಗೆ ಸಂಪತ್ತಿರುವಲ್ಲಿ, ತ್ರಿಕ ರಣಪೂರ್ವಕವಾಗಿ, ಆಚಾರ್ಯನನ್ನು ಪೂಜಿಸಿ ಆನೆ, ಕುದುರೆ, ಭೂಮಿ, ಮನೆ, ಆಭರಣಗಳು, ವಸ್ತ್ರಗಳು, ಧನ ಧಾನ್ಯಗಳು ಇವುಗಳನ್ನು ಭಕ್ತಿಯಿಂದ ಗುರು ವಿಗೆ ಕೊಡಬೇಕು.

೭-೮. ತನಗೆ ಮಂತ್ರಸಿದ್ಧಿಯಾಗಬೇಕಾದರೆ ದ್ರವ್ಯಲೋಭವನ್ನು ಮಾಡದೆ ಗುರುವಿಗೆ ದಕ್ಷಿಣೆಯನ್ನು ಕೊಟ್ಟು ತನ್ನ ಮನಸ್ಸನ್ನು ಗುರುವಿನ ಅಧೀನಮಾಡಿ ತನ್ನ ಶಕ್ತಿಗನುಸಾರವಾಗಿ ವಂಚನೆಯಿಲ್ಲದೆ ವಿಧಿಗನುಸಾರವಾಗಿ

ಏವಂ ಸಂಪೂಜ್ಯ ವಿಧಿವದ್ಯಥಾಶಕ್ತಿ ತ್ವವಂಚಯನ್ ।
ಆದದೀತ ಗುರೋರ್ಮಂತ್ರಂ ಜ್ಞಾನಂ ಚೈವ ಕ್ರಮೇಣ ತು ॥ ೮ ॥

ಏವಂ ತುಷ್ಟೋ ಗುರುಶ್ಶಿಷ್ಯಂ ಪೂಜಕಂ ವತ್ಸರೋಷಿತಂ ।
ಶುಶ್ರೂಷುಮನಹಂಕಾರಂ ಸ್ನಾತಂ ಶುಚಿಮುಪೋಷಿತಂ ॥ ೯ ॥

ಸ್ನಾಪಯಿತ್ವಾ ವಿಶುದ್ಧ್ಯರ್ಥಂ ಪೂರ್ಣಕುಂಭಘೃತೇನ ವೈ ।
ಜಲೇನ ಮಂತ್ರಶುದ್ಧೇನ ಪುಣ್ಯದ್ರವ್ಯಯುತೇನ ಚ ॥ ೧೦ ॥

ಅಲಂಕೃತ್ಯ ಸುವೇಷಂ ಚ ಗಂಧಸ್ರಗ್ವಸ್ತ್ರಭೂಷಣೈಃ ।
ಪುಣ್ಯಾಹಂ ವಾಚಯಿತ್ವಾ ಚ ಬ್ರಾಹ್ಮಣಾನಭಿಪೂಜ್ಯ ಚ ॥ ೧೧ ॥

ಸಮುದ್ರತೀರೇ ನದ್ಯಾಂ ಚ ಗೋಷ್ಠೇ ದೇವಾಲಯೇಽಪಿ ವಾ ।
ಶುಚೌ ದೇಶೇ ಗೃಹೇವಾಪಿ ಕಾಲೇ ಸಿದ್ಧಿಕರೇ ತಿಥೌ ॥ ೧೨ ॥

---

ಗುರುವನ್ನು ಪೂಜಿಸಿ ಕ್ರಮವಾಗಿ ಆ ಗುರುವಿನಿಂದ ಮಂತ್ರವನ್ನೂ, ಜ್ಞಾನವನ್ನೂ ಉಪದೇಶಮಾಡಿಸಿಕೊಳ್ಳಬೇಕು.

೯-೧೦. ಈ ರೀತಿಯಲ್ಲಿ ತೃಪ್ತನಾದ ಗುರುವು ಶಿಷ್ಯನನ್ನು ಒಂದು ವರ್ಷದವರೆಗೂ ಪರೀಕ್ಷಿಸಬೇಕು. ಬಳಿಕ ವ್ರತಾಚರಣೆಯನ್ನು ಮಾಡಿ ಅಹಂಕಾರವನ್ನು ಬಿಟ್ಟು ತನ್ನನ್ನು ಪೂಜಿಸಿ ಸ್ನಾನಾದಿಗಳಿಂದ ಶುದ್ಧನಾಗಿ ಉಪವಾಸವಿದ್ದು ಮಂತ್ರೋಪದೇಶವನ್ನು ಅಪೇಕ್ಷಿಸುತ್ತಿರುವ ಶಿಷ್ಯನಿಗೆ ತುಪ್ಪದಿಂದಲೂ, ಮಂಗಳದ್ರವ್ಯ ಮೊದಲಾದವುಗಳಿಂದ ಕೂಡಿ ಮಂತ್ರಪೂತವಾದ ಕಲಶೋದಕದಿಂದಲೂ, ಶುದ್ಧ್ಯರ್ಥವಾಗಿ ಸ್ನಾನವಮಾಡಿಸಬೇಕು.

೧೧-೧೩. ಬಳಿಕ ಶಿಷ್ಯನನ್ನು ವಸ್ತ್ರಾಭರಣಗಳಿಂದ ಅಲಂಕರಿಸಿ ಪುಣ್ಯಾಹವಾಚನ ಪುರಸ್ಸರವಾಗಿ ಬ್ರಾಹ್ಮಣರನ್ನು ಪೂಜಿಸಿ ಸಮುದ್ರತೀರ, ನದಿ, ದನಗಳ ಕೊಟ್ಟಿಗೆ ದೇವಾಲಯ, ಶುಚಿಯಾದ ಮನೆ ಮೊದಲಾದ ಪ್ರಶಸ್ತವಾದ ಒಂದು ಸ್ಥಳದಲ್ಲಿ ಮಂತ್ರಸಿದ್ಧಿಯನ್ನುಂಟುಮಾಡುವ ತಿಥಿ, ವಾರ, ನಕ್ಷತ್ರ,

ನಕ್ಷತ್ರೇ ಶುಭಯೋಗೇ ಚ ಸರ್ವದೋಷವಿವರ್ಜಿತೇ ।
ಅನುಗೃಹ್ಯ ತತೋ ದದ್ಯಾಜ್ಞಾನಂ ಮಮ ಯಥಾವಿಧಿ ॥ ೧೩ ॥

ಸ್ವರೇಣೋಚ್ಚಾರಯೇತ್ಸಮ್ಯಗೇಕಾಂತೇಽತಿಪ್ರಸನ್ನಧೀಃ ।
ಉಚ್ಚಾರ್ಯೋಚ್ಚಾರಯಿತ್ವಾ ತಮಾವಯೋರ್ಮಂತ್ರಮುತ್ತಮಂ ॥೧೪ ॥

ಶಿವಂ ಚಾಸ್ತು ಶುಭಂ ಚಾಸ್ತು ಶೋಭನೋಽಸ್ತು ಪ್ರಿಯೋಽಸ್ತ್ವಿತಿ ।
ಏವಂ ದದ್ಯಾದ್ಗುರುರ್ಮಂತ್ರಮಾಜ್ಞಾಂ ಚೈವ ತತಃ ಪರಂ ॥ ೧೫ ॥

ಏವಂ ಲಬ್ಧ್ವಾ ಗುರೋರ್ಮಂತ್ರಮಾಜ್ಞಾಂ ಚೈವ ಸಮಾಹಿತಃ ।
ಸಂಕಲ್ಪ್ಯ ಚ ಜಪೇನ್ನಿತ್ಯಂ ಪುರಶ್ಚರಣಪೂರ್ವಕಂ ॥ ೧೬ ॥

ಯಾವಜ್ಜೀವಂ ಜಪೇನ್ನಿತ್ಯಮಷ್ಟೋತ್ತರಸಹಸ್ರಕಂ ।
ಅನನ್ಯಸ್ತತ್ಪರೋ ಭೂತ್ವಾ ಸ ಯಾತಿ ಪರಮಾಂ ಗತಿಂ ॥ ೧೭ ॥

---

ಯೋಗ ಕರಣಗಳನ್ನು ಚೆನ್ನಾಗಿ ನೋಡಿ ಅಂತಹ ಲಗ್ನದಲ್ಲಿ ಆ ಶಿಷ್ಯನನು ಅನುಗ್ರಹಿಸಿ ನನ್ನ ಸಂಬಂಧವಾದ ಜ್ಞಾನವನ್ನು ವಿಧಿಗನುಸಾರವಾಗಿ ಉಪದೇಶಮಾಡಬೇಕು.

೧೪-೧೫. ಗುರುವು ಉತ್ತಮವಾದ ನಮ್ಮ (ಪಾರ್ವತೀಪರಮೇಶ್ವರರ) ಮಂತ್ರವನ್ನು ಗೋಪ್ಯವಾಗಿ ಶಿಷ್ಯನಿಗೆ ಒಳ್ಳೆಯ ಸ್ವರದಿಂದ ಹೇಳಿಕೊಟ್ಟು ಅವನಿಂದ ಹೇಳಿಸಿ ಶಿವಮಸ್ತು, ಶುಭಮಸ್ತು, ಪ್ರಿಯೋಸ್ತು ಎಂದು ಆಶೀರ್ವಾದವನ್ನು ಮಾಡಿ ಬಳಿಕ ಶಿಷ್ಯನಿಗೆ ಮಂತ್ರಜಪಕ್ಕೆ ಆಜ್ಞೆಯನ್ನು ಕೊಡಬೇಕು.

೧೬-೧೭. ಈರೀತಿಯಲ್ಲಿ ಶಿಷ್ಯನು ಗುರುವಿನಿಂದ ಮಂತ್ರಜಪಕ್ಕೆ ಆಜ್ಞೆಯನ್ನು ಪಡೆದು ಸಂಕಲ್ಪಮಾಡಿ ಏಕಾಗ್ರಚಿತ್ತದಿಂದ ಆ ದಿನ ಮೊದಲುಗೊಂಡು ಮರಣ ಪರ್ಯಂತವಾಗಿ ಪ್ರತಿದಿನವೂ ಸಾವಿರದ ಎಂಟು ಬಾರಿ ಜಪಮಾಡುತ್ತಿದ್ದರೆ ಅವನು ಪರಮಗತಿಯನ್ನು ಹೊಂದುವನು.

ಜಪೇದಕ್ಷರಲಕ್ಷಂ ವೈ ಚತುರ್ಗುಣಿತಮಾದರಾತ್ ।
ನಕ್ತಾಶೀ ಸಂಯಮೀ ಯಸ್ಸ ಪೌರಶ್ಚರಣಿಕಃ ಸ್ಮೃತಃ ॥ ೧೮ ॥

ಯಃ ಪುರಶ್ಚರಣಂ ಕೃತ್ವಾ ನಿತ್ಯಜಾಪೀ ಭವೇತ್ಪುನಃ ।
ತಸ್ಯ ನಾಸ್ತಿ ಸಮೋ ಲೋಕೇ ಸ ಸಿದ್ಧಃ ಸಿದ್ಧಿದೋ ಭವೇತ್ ॥ ೧೯ ॥

ಸ್ನಾನಂ ಕೃತ್ವಾ ಶುಚೌ ದೇಶೇ ಬಧ್ವಾ ರುಚಿರಮಾಸನಂ ।
ತ್ವಯಾ ಮಾಂ ಹೃದಿ ಸಂಚಿತ್ಯ ಸಂಚಿತ್ಯ ಸ್ವಗುರುಂ ತತಃ ॥ ೨೦ ॥

ಉದಙ್ಮುಖಃ ಪ್ರಾಙ್ಮುಖೋ ವಾ ಮೌನೀ ಚೈಕಾಗ್ರಮಾನಸಃ ।
ವಿಶೋಧ್ಯ ಪಂಚತತ್ತ್ವಾನಿ ದಹನಪ್ಲಾವನಾದಿಭಿಃ ॥ ೨೧ ॥

ಮಂತ್ರನ್ಯಾಸಾದಿಕಂ ಕೃತ್ವಾ ಸಫಲೀಕೃತವಿಗ್ರಹಃ ।
ಆವಯೋರ್ವಿಗ್ರಹೌ ಧ್ಯಾಯನ್ಪ್ರಾಣಾಪಾನೌ ನಿಯಮ್ಯ ಚ ॥ ೨೨ ॥

---

೧೮-೧೯. ಮಂತ್ರೋಪದೇಶವನ್ನು ಪಡೆದ ಶಿಷ್ಯನು ರಾತ್ರಿ ಒಂದು ಹೊತ್ತು ಊಟಮಾಡುತ್ತ ಜಿತೇಂದ್ರಿಯನಾಗಿರಬೇಕು. ಮಂತ್ರದಲ್ಲಿರುವ ಅಕ್ಷರಗಳ ಸಂಖ್ಯೆಗನುಸಾರವಾಗಿ ಒಂದಕ್ಷರಕ್ಕೆ ಒಂದು ಲಕ್ಷ ಅಥವಾ ನಾಲ್ಕರಷ್ಟು ಮಂತ್ರ ಜಪಮಾಡುವುದೇ ಪುರಶ್ಚರಣೆಯೆನಿಸುವುದು. ಆ ರೀತಿ ಪುರಶ್ಚರಣವನ್ನು ಮುಗಿಸಿ ಪ್ರತಿದಿನವೂ ಜಪಮಾಡುತ್ತಿರಬೇಕು. ಹೀಗೆ ಜಪಮಾಡುವವನು ತಾನು ಮಂತ್ರಸಿದ್ಧನಾಗುವುದಲ್ಲದೆ ಇತರರಿಗೂ ಸಿದ್ಧಿಯನ್ನು ಕೊಡಬಲ್ಲನು. ಅವನಿಗೆ ಸಮಾನರಾದವರು ಈ ಲೋಕದಲ್ಲಿ ಯಾರೂ ಇರುವುದಿಲ್ಲ.

೨೦-೨೨. ಈಗ ಜಪಮಾಡುವ ಕ್ರಮುವನ್ನು ಹೇಳುವೆನು. ಶಿಷ್ಯನು ಸ್ನಾನಮಾಡಿ ಶುದ್ಧಪ್ರದೇಶದಲ್ಲಿ ಪೀಠವನ್ನು ಕಲ್ಪಿಸಿ ಕುಳಿತುಕೊಂಡು ಗುರುವನ್ನೂ, ಉಮಾಮಹೇಶ್ವರ ಸ್ವರೂಪರಾದ ನಮ್ಮನ್ನೂ, ಮನಸ್ಸಿನಲ್ಲಿ ಧ್ಯಾನಿಸಬೇಕು. ಪೂರ್ವ ಅಥವಾ ಉತ್ತರಾಭಿಮುಖವಾಗಿ ಕುಳಿತು ಏಕಾಗ್ರಚಿತ್ತನಾಗಿ ದಹನ ಪ್ಲಾವನರೂಪವಾದ ಶುದ್ಧಿ ಕರ್ಮಗಳಿಂದ ಶರೀರದ ಪಂಚತತ್ತ್ವಗಳನ್ನು

**ವಿದ್ಯಾತ್ಸ್ಥಾನಂ ಸ್ವಕಂ ರೂಪಮೃಷಿಂ ಛಂದೋಽಧಿದೈವತಂ ।**
**ಬೀಜಂ ಶಕ್ತಿಂ ತಥಾ ವಾಕ್ಯಂ ಸ್ಮೃತ್ವಾ ಪಂಚಾಕ್ಷರೀಂ ಜಪೇತ್ ॥ ೨೩ ॥**

**ಉತ್ತಮಂ ಮಾನಸಂ ಜಾಪ್ಯಮುಪಾಂಶುಶ್ಚೈವ ಮಧ್ಯಮಂ ।**
**ಅಧಮಂ ವಾಚಿಕಂ ಪ್ರಾಹುರಾಗಮಾರ್ಥವಿಶಾರದಾಃ ॥ ೨೪ ॥**

**ಉತ್ತಮಂ ರುದ್ರದೈವತ್ಯಂ ಮಧ್ಯಮಂ ವಿಷ್ಣುದೈವತಂ ।**
**ಅಧಮಂ ಬ್ರಹ್ಮದೈವತ್ಯಮಿತ್ಯಾಹುರನುಪೂರ್ವಶಃ ॥ ೨೫ ॥**

**ಯದುಚ್ಚನೀಚಸ್ವರಿತೈಃ ಸ್ಪಷ್ಟಾಸ್ಪಷ್ಟಪದಾಕ್ಷರೈಃ ।**
**ಮಂತ್ರಮುಚ್ಚಾರಯೇದ್ವಾಚಾ ವಾಚಿಕೋಽಯಂ ಜಪಃ ಸ್ಮೃತಃ ॥ ೨೬ ॥**

ಶುದ್ಧಮಾಡಿ ತನ್ನ ಅವಯವಗಳಲ್ಲಿ ಮಂತ್ರನ್ಯಾಸಾದಿಗಳನ್ನು ಮಾಡಿಕೊಂಡು ನಮ್ಮ ಸ್ವರೂಪವನ್ನು ಧ್ಯಾನಿಸುತ್ತ, ಪ್ರಾಣಾಪಾನವಾಯುಗಳನ್ನು ನಿಯಮನ ಮಾಡಿ ಋಷಿದೇವತಾ ಛಂದಸ್ಸುಗಳನ್ನೂ ಬೀಜ, ಶಕ್ತಿವಾಕ್ಯಗಳನ್ನು ಸ್ಮರಿಸಿ ಪಂಚಾಕ್ಷರ ಮಂತ್ರಜಪವನ್ನು ಮಾಡಬೇಕು.

೨೪-೨೫. ಮನಸ್ಸಿನಲ್ಲಿಯೇ ಮಂತ್ರವನ್ನು ಮೆಲ್ಲಗೆ ಯಾರಿಗೂ ಕೇಳಿಸ ವಂತೆ ಹೇಳಿಕೊಳ್ಳುವುದು ಉತ್ತಮಬಗೆಯ ಜಪವು. ಇತರರಿಗೆ ಮಂತ್ರವು ಕೇಳದಂತೆ ಬಾಯಲ್ಲಿ ಮಂತ್ರವನ್ನು ಜಪಿಸುವುದು ಮಧ್ಯಮವು. ಎಲ್ಲರಿಗೂ ಕೇಳುವಂತೆ ಘಟ್ಟಿಯಾಗಿ ಮಂತ್ರೋಚ್ಚಾರಣೆ ಮಾಡುವುದು ಅಧಮಜಪವು. ಹೀಗೆಯೇ ರುದ್ರ, ವಿಷ್ಣು, ಬ್ರಹ್ಮರ ಮಂತ್ರಗಳು ಕ್ರಮವಾಗಿ ಉತ್ತಮ, ಮಧ್ಯ ಮಾಧಮವಾದುದಾಗಿರುವುವು. ಎಂದರೆ ರುದ್ರದೇವತಾತ್ಮಕವಾದ ಮಂತ್ರಗಳು ಉತ್ತಮವೆಂದೂ ವಿಷ್ಣುದೇವತಾತ್ಮಕವಾದ ಮಂತ್ರವು ಮಧ್ಯಮವೆಂದೂ, ಬ್ರಹ್ಮ ದೇವತಾತ್ಮಕವಾದ ಮಂತ್ರವು ಅಧಮವೆಂದೂ ಪರಿಗಣಿಸಲ್ಪಟ್ಟಿರುವುದು.

೨೬-೨೮. ಉಚ್ಚ ನೀಚ ಸ್ವರಿತ ಸ್ವರಗಳಿಂದ ಕೂಡಿ ಸ್ಪಷ್ಟವಾಗಿಯೂ, ಅಸ್ಪಷ್ಟವಾಗಿಯೂ, ಇರುವ ಪದ ಮತ್ತು ಅಕ್ಷರಗಳಿಂದ ಕೂಡಿದ ಮಂತ್ರವನ್ನು

ಜಿಹ್ವಾಮಾತ್ರಪರಿಸ್ಪಂದಾದೀಷದುಚ್ಚಾರಿತೋಽಪಿ ವಾ ।
ಅಪರೈರಶ್ರುತಃ ಕಿಂಚಿಚ್ಛ್ರುತೋ ವೋಪಾಂಶುರುಚ್ಯತೇ ॥ ೨೭ ॥

ಧಿಯಾ ಯದಕ್ಷರಶ್ರೇಣ್ಯಾ ವರ್ಣಾದ್ವರ್ಣಂ ಪದಾತ್ಪದಂ ।
ಶಬ್ದಾರ್ಥಚಿಂತನಂ ಭೂಯಃ ಕಥ್ಯತೇ ಮಾನಸೋ ಜಪಃ ॥ ೨೮ ॥

ವಾಚಿಕಸ್ತ್ವೇಕ ಏವ ಸ್ಯಾದುಪಾಂಶುಃ ಶತಮುಚ್ಯತೇ ।
ಸಾಹಸ್ರಂ ಮಾನಸಃ ಪ್ರೋಕ್ತಃ ಸಗರ್ಭಸ್ತು ಶತಾಧಿಕಃ ॥ ೨೯ ॥

ಪ್ರಾಣಾಯಾಮಸಮಾಯುಕ್ತಸ್ಸಗರ್ಭೋ ಜಪ ಉಚ್ಯತೇ ।
ಆದ್ಯಂತಯೋರಗರ್ಭೋಽಪಿ ಪ್ರಾಣಾಯಾಮಃ ಪ್ರಶಸ್ಯತೇ ॥ ೩೦ ॥

---

ಬಾಯಲ್ಲಿ ಹೇಳುವುದು ವಾಚಕ ಜಪವು. ನಾಲಿಗೆಯನ್ನು ಮಾತ್ರ ಚಲಿಸುತ್ತಾ ಇತರರಿಗೆ ಕೇಳಿಸದಂತೆ ಮಂತ್ರವನ್ನುಚ್ಚರಿಸುವುದು, ಉಪಾಂಶುಜಪವು. ಬುದ್ಧಿಯಲ್ಲಿ (ಮನಸ್ಸಿನಲ್ಲಿಯೇ) ಮಂತ್ರದಲ್ಲಿರುವ ಅಕ್ಷರಗಳ ಮತ್ತು ಪದಗಳ ಅರ್ಥವನ್ನು ಮನನಾದಿಗಳಿಂದ ಮತ್ತೆ ಮತ್ತೆ ಆಲೋಚಿಸುತ್ತಿರುವುದು ಮಾನಸ ಜಪವು.

೨೯. ವಾಚಿಕಮಂತ್ರ ಜಪ ಒಂದಕ್ಕೆ ಒಂದೇ ಫಲವು. ಉಪಾಂಶು ಜಪಕ್ಕೆ ವಾಚಕ ಜಪದ ನೂರರಷ್ಟು ಫಲವು. ಮಾನಸ ಜಪ ಒಂದಕ್ಕೆ ಸಾವಿರ ವಾಚಿಕ ಜಪವು ಸಮಾನವು. ಸಗರ್ಭಜಪವು ಒಂಥು ನೂರು ಪಾಲು ಹೆಚ್ಚಿನದಾಗಿರುವುದು.

೩೦. ಆದಿಯಲ್ಲಿಯೂ, ಅಂತ್ಯದಲ್ಲಿಯೂ, ಪ್ರಾಣಾಯಾಮವನ್ನು ಮಾಡಿ ನಡುವೆ ಮಂತ್ರವನ್ನು ಜಪಿಸುವುದು ಸಗರ್ಭಜಪವೆನಿಸುವುದು. ಪ್ರಾಣಾಯಾಮ ವಿಲ್ಲದೆ ಜಪಮಾಡುವುದು ಅಗರ್ಭಜಪವು. ಜಪಕಾಲದಲ್ಲಿ ಎಂದರೆ ಆದ್ಯಂತ ಕಾಲಗಳಲ್ಲಿ ಪ್ರಾಣಾಯಾಮಮಾಡುವುದು ಶ್ರೇಷ್ಠವಾದುದಾಗಿರುವುದು.

ಚತ್ವಾರಿಂಶತ್ಸಮಾವೃತ್ತೀಃ ಪ್ರಾಣಾನಾಯಮ್ಯ ಸಂಸ್ಮರೇತ್ ।
ಮಂತ್ರಂ ಮಂತ್ರಾರ್ಥವಿದ್ಧೀಮಾನಶಕ್ತಃ ಶಕ್ತಿತೋ ಜಪೇತ್ ॥ ೩೧ ॥

ಪಂಚಕಂ ತ್ರಿಕಮೇಕಂ ವಾ ಪ್ರಾಣಾಯಾಮಂ ಸಮಾಚರೇತ್ ।
ಅಗರ್ಭಂ ವಾ ಸಗರ್ಭಂ ವಾ ಸಗರ್ಭಸ್ತತ್ರ ಶಸ್ಯತೇ ॥ ೩೨ ॥

ಸಗರ್ಭಾದಪಿ ಸಾಹಸ್ರಂ ಸಧ್ಯಾನೋ ಜಪ ಉಚ್ಯತೇ ।
ಏಷು ಪಂಚವಿಧೇಷ್ವೇಕಃ ಕರ್ತವ್ಯಃ ಶಕ್ತಿತೋ ಜಪಃ ॥ ೩೩ ॥

ಅಂಗುಲ್ಯಾ ಜಪಸಂಖ್ಯಾನಮೇಕಮೇವಮುದಾಹೃತಂ ।
ರೇಖಯಾಷ್ಟಗುಣಂ ವಿದ್ಯಾತ್ಪುತ್ರಜೀವೈರ್ದಶಾಧಿಕಂ ॥ ೩೪ ॥

ಶತಂ ಸ್ಯಾಚ್ಛಂಖಮಣಿಭಿಃ ಪ್ರವಾಲೈಸ್ತು ಸಹಸ್ರಕಂ ।
ಸ್ಫಾಟಿಕೈರ್ದಶಸಾಹಸ್ರಂ ಮೌಕ್ತಿಕೈರ್ಲಕ್ಷಮುಚ್ಯತೇ ॥ ೩೫ ॥

---

೩೧-೩೩. ಮಂತ್ರಾರ್ಥವನ್ನು ತಿಳಿದ ಬುದ್ಧಿವಂತನು ನಲವತ್ತುಬಾರಿ ಪ್ರಾಣಾಯಾಮವನ್ನು ಮಾಡಿ ಬಳಿಕ ಆ ಮಂತ್ರಾರ್ಥವನ್ನು ಸ್ಮರಿಸಬೇಕು. ಅಷ್ಟು ಶಕ್ತಿಯಿಲ್ಲದಿದ್ದರೆ ತನ್ನ ಶಕ್ತ್ಯನುಸಾರವಾಗಿ ಐದು, ಮೂರು ಅಥವಾ ಒಂದು ಪ್ರಾಣಾಯಾಮವನ್ನು ಮಾಡಬಹುದು. ಅಗರ್ಭ ಸಗರ್ಭಗಳಲ್ಲಿ ಸಗರ್ಭಜಪವು ಶ್ರೇಷ್ಠವು. ಸಗರ್ಭಜಪಕ್ಕಿಂತಲೂ ಧ್ಯಾನಮಾಡುವುದು ಸಾವಿರ ಪಾಲು ಹೆಚ್ಚಿನದು. ವಾಚಿಕ, ಉಪಾಂಶು, ಮಾನಸ, ಸಗರ್ಭ, ಅಗರ್ಭ ಎಂಬ ಈ ಐದುವಿಧವಾದ ಜಪಗಳಲ್ಲಿ ಮನುಷ್ಯನು ತನ್ನ ಶಕ್ತ್ಯನುಸಾರವಾಗಿ ಯಾವುದಾದರೂ ಒಂದು ಮಾರ್ಗದಿಂದ ಜಪವನ್ನು ಮಾಡಬೇಕು.

೩೪-೩೬. ಬೆರಳನ್ನು ಎಣಿಸಿ ಜಪಮಾಡುವುದಕ್ಕಿಂತ ಬೆರಳಿನ ಗಿಣ್ಣುಗಳಲ್ಲಿರುವಗೆರೆಗಳನ್ನ ಎಣಿಸಿ ಜಪಮಾಡುವುದು ಎಂಟರಷ್ಟು ಫಲಪ್ರದವಾದುದು. ಪುತ್ರಜೀವಿ ಎಂಬ ಮಣಿಯನ್ನೆಣಿಸಿ ಜಪಮಾಡುವುದು ಹತ್ತರಷ್ಟು ಹೆಚ್ಚು ಫಲವು. ಶಂಖದ ಮಣಿಯಿಂದ ನೂರುಪಾಲು, ಹವಳದಿಂದ ಸಾವಿರಪಾಲು, ಸ್ಫಟಿಕಮಣಿಯಿಂದ ಹತ್ತು ಸಾವಿರ ಪಾಲು, ಮುತ್ತುಗಳಿಂದ ಲಕ್ಷಪಾಲು, ಕಮಲ

ಪದ್ಮಾಕ್ಷೈರ್ದಶಲಕ್ಷಂ ತು ಸೌವರ್ಣೈಃ ಕೋಟಿರುಚ್ಯತೇ ।
ಕುಶಗ್ರಂಥ್ಯಾ ಚ ರುದ್ರಾಕ್ಷೈರನಂತಗುಣಿತಂ ಭವೇತ್ ॥ ೩೬ ॥

ತ್ರಿಂಶದಕ್ಷೈಃ ಕೃತಾ ಮಾಲಾ ಧನದಾ ಜಪಕರ್ಮಣಿ ।
ಸಪ್ತವಿಂಶತಿಸಂಖ್ಯಾತೈರಕ್ಷೈಃ ಪುಷ್ಟಿಪ್ರದಾ ಭವೇತ್ ॥ ೩೭ ॥

ಪಂಚವಿಂಶತಿಸಂಖ್ಯಾತೈಃ ಕೃತಾ ಮುಕ್ತಿಂ ಪ್ರಯಚ್ಛತಿ ।
ಅಕ್ಷೈಸ್ತು ಪಂಚದಶಭಿರಭಿಚಾರಫಲಪ್ರದಾ ॥ ೩೮ ॥

ಅಂಗುಷ್ಠಂ ಮೋಕ್ಷದಂ ವಿದ್ಯಾತ್ತರ್ಜನೀಂ ಶತ್ರುನಾಶಿನೀಂ ।
ಮಧ್ಯಮಾಂ ಧನದಾಂ ಶಾಂತಿಂ ಕರೋತ್ಯೇಷಾ ಹ್ಯನಾಮಿಕಾ ॥ ೩೯ ॥

ಅಷ್ಟೋತ್ತರಶತಂ ಮಾಲಾ ತತ್ರ ಸ್ಯಾದುತ್ತಮೋತ್ತಮಾ ।
ಶತಸಂಖ್ಯೋತ್ತಮಾ ಮಾಲಾ ಪಂಚಾಶದ್ಭಿಸ್ತು ಮಧ್ಯಮಾ ॥ ೪೦ ॥

---

ಮಣಿಯಿಂದ ಹತ್ತುಲಕ್ಷಪಾಲು, ಸುವರ್ಣಮಣಿಯಿಂದ ಕೋಟಿಪಾಲು, ದರ್ಭೆಯ ಗಂಟುಗಳು ರುದ್ರಾಕ್ಷಿ ಇವುಗಳಿಂದ ಜಪಮಾಡಿದರೆ ಅನಂತ ಫಲವೂ ಉಂಟಾಗುವುದು.

೩೭-೩೮. ಜಪಮಾಲೆಯಲ್ಲಿ ಮೂವತ್ತು ರುದ್ರಾಕ್ಷಿಗಳಿದ್ದರೆ ಧನ ಪ್ರಾಪ್ತಿಯೂ, ಇಪ್ಪತ್ತೇಳಿದ್ದರೆ ಪುಷ್ಟಿಯೂ, ಇಪ್ಪತ್ತೈದಿದ್ದರೆ ಮುಕ್ತಿಯೂ ಹದಿನೈದಿದ್ದರೆ ಅಭಿಚಾರದ (ಮಾಟ) ಫಲವೂ ಉಂಟಾಗುವುದು.

೩೯. ಜಪಮಾಲೆಯನ್ನು ತಿರುಗಿಸುವಾಗ ಹೆಬ್ಬೆರಳನ್ನು ಪ್ರಯೋಗಿಸಿದರೆ ಮೋಕ್ಷವೂ, ತರ್ಜನಿಯ ಬೆರಳಿಗೆ ಶತ್ರುನಾಶನವೂ, ಮಧ್ಯದ ಬೆರಳಿಗೆ ಧನಪ್ರಾಪ್ತಿಯೂ, ಅನಾಮಿಕೆಗೆ ಶಾಂತಿಯೂ, ಫಲವಾಗಿರುವುದು. ಜಪ ಮಾಡುವವರು ಹೆಬ್ಬೆರಳಿನ ಜೊತೆಗೆ ತಮಗಿಷ್ಟವಾದ ಬೆರಳನ್ನು ಉಪಯೋಗಿಸಬಹುದು.

೪೦-೪೧. ನೂರೆಂಟು ರುದ್ರಾಕ್ಷಿಗಳ ಮಾಲೆಯು ಅತ್ಯುತ್ತಮವಾದುದು. ನೂರು ರುದ್ರಾಕ್ಷಿಗಳ ಮಾಲೆಯೂ ಉತ್ತಮವೇ. ಐವತ್ತರ ಮಾಲೆಯು

ಚತುಃಪಂಚಾಶದಕ್ಷೈಸ್ತು ಹೃಚ್ಛ್ರೇಷ್ಠಾ ಹಿ ಪ್ರಕೀರ್ತಿತಾ ।
ಇತ್ಯೇವಂ ಮಾಲಯಾ ಕುರ್ಯಾಜ್ಜಪಂ ಕಸ್ಯೈ ನ ದರ್ಶಯೇತ್॥ ೪೧ ॥

ಕನಿಷ್ಠಾ ಕ್ಷರಣೀ ಪ್ರೋಕ್ತಾ ಜಪಕರ್ಮಣಿ ಶೋಭನಾ ।
ಅಂಗುಷ್ಠೇನ ಜಪೇಜ್ಜಪ್ಯಮನ್ಯೈರಂಗುಲಿಭಿಸ್ಸಹ ॥ ೪೨ ॥

ಅಂಗುಷ್ಠೇನ ವಿನಾ ಜಪ್ಯಂ ಕೃತಂ ತದಫಲಂ ಯತಃ ।
ಗೃಹೇ ಜಪಂ ಸಮಂ ವಿದ್ಯಾದ್ಗೋಷ್ಠೇ ಶತಗುಣಂ ವಿದುಃ ॥ ೪೩ ॥

ಪುಣ್ಯಾರಣ್ಯೇ ತಥಾರಾಮೇ ಸಹಸ್ರಗುಣಮುಚ್ಯತೇ ।
ಅಯುತಂ ಪರ್ವತೇ ಪುಣ್ಯೇ ನದ್ಯಾಂ ಲಕ್ಷಮುದಾಹೃತಂ ॥ ೪೪ ॥

ಕೋಟಿಂ ದೇವಾಲಯೇ ಪ್ರಾಹುರನಂತಂ ಮಮ ಸನ್ನಿಧೌ ।
ಸೂರ್ಯಸ್ಯಾಗ್ನೇರ್ಗುರೋರಿಂದೋರ್ದೀಪಸ್ಯ ಚ ಜಲಸ್ಯ ಚ ॥ ೪೫ ॥

ಮಧ್ಯಮವು. ಐವತ್ತನಾಲ್ಕು ರುದ್ರಾಕ್ಷಿಗಳ ಮಾಲೆಯು ಮನಸ್ಸಿಗೆ ಪ್ರಶಸ್ತ ವಾದುದು. ಜಪಮಾಡುವಾಗ ಇಂತಹ ಮಾಲೆಗಳಿಂದ ಯಾರಿಗೂ ಮಾಲೆ ಯನ್ನು ತೋರಿಸದೆ ಜಪಮಾಡಬೇಕು.

೪೨. ಜಪಮಾಡುವುದರಲ್ಲಿ ಕಿರುಬೆರಳನ್ನು ಉಪಯೋಗಿಸಿದರೆ ದುಃಖ ನಾಶವಾಗಿ ಉತ್ತಮ ಫಲವನ್ನು ಕೊಡುವುದು. ಹೆಬ್ಬೆರಳಿನ ಜೊತೆಗೆ ಬೇರೆ ಬೆರಳುಗಳನ್ನುಪಯೋಗಿಸಿ ಜಪಮಾಡುವುದು ಒಳ್ಳೆಯದು. ಹೆಬ್ಬೆರಳನ್ನು ಪಯೋಗಿಸದೆ ಜಪಮಾಡಿದುದು ನಿಷ್ಫಲವಾಗುವುದು.

೪೩-೪೫. ಮನೆಯಲ್ಲಿ ಜಪಮಾಡಿದುದಕ್ಕೆ ಒಂದು ಫಲವಾದರೆ ದನ ಗಳ ಕೊಟ್ಟಿಗೆಯಲ್ಲಿ ನೂರರಷ್ಟು, ಪುಣ್ಯಕರವಾದ ಕಾಡಿನಲ್ಲಿಯೂ, ತೋಟ ಗಳಲ್ಲಿಯೂ ಸಾವಿರಪಾಲೂ, ಪುಣ್ಯಕರವಾದ ಪರ್ವತದಲ್ಲಿ ಹತ್ತುಸಾವಿರಪಾಲೂ, ನದೀತೀರದಲ್ಲಿ ಲಕ್ಷಪಾಲೂ, ದೇವಾಲಯದಲ್ಲಿ ಕೋಟಿಪಾಲೂ ಫಲಪ್ರಾಪ್ತಿ ಯಾಗುವುದು. ನನ್ನ ಸನ್ನಿಧಿಯಲ್ಲಿ ಜಪಮಾಡಿದರೆ ಅನಂತ ಫಲಪ್ರಾಪ್ತ ವಾಗುವುದು. ಸೂರ್ಯ, ಅಗ್ನಿ, ಗುರು, ಚಂದ್ರ, ದೀಪ, ನೀರು, ಬ್ರಾಹ್ಮಣರು, ಗೋವುಗಳು ಇವರುಗಳ ಸನ್ನಿಧಿಯಲ್ಲಿ ಮಾಡಿದ ಜಪವು ಪ್ರಶಸ್ತವೆನಿಸುವುದು.

ವಿಪ್ರಾಣಾಂ ಚ ಗವಾಂ ಚೈವ ಸನ್ನಿಧೌ ಶಸ್ಯತೇ ಜಪಃ ।
ತತ್ಪೂರ್ವಾಭಿಮುಖಂ ವಶ್ಯಂ ದಕ್ಷಿಣಂ ಚಾಭಿಚಾರಿಕಂ ॥ ೪೬ ॥

ಪಶ್ಚಿಮಂ ಧನದಂ ವಿದ್ಯಾದೌತ್ತರಂ ಶಾಂತಿದಂ ಭವೇತ್ ।
ಸೂರ್ಯಾಗ್ನಿವಿಪ್ರದೇವಾನಾಂ ಗುರೂಣಾಮಪಿ ಸನ್ನಿಧೌ ॥ ೪೭ ॥

ಅನ್ಯೇಷಾಂ ಚ ಪ್ರಸಕ್ತಾನಾಂ ಮಂತ್ರಂ ನ ವಿಮುಖೋ ಜಪೇತ್ ।
ಉಷ್ಣೀಷೀ ಕಂಚುಕೀ ನಗ್ನೋ ಮುಕ್ತಕೇಶೋ ಗಲಾವೃತಃ ॥ ೪೮ ॥

ಅಪವಿತ್ರಕರೋಽಶುದ್ಧೋ ವಿಲಪನ್ನ ಜಪೇತ್ಕ್ವಚಿತ್ ।
ಕ್ರೋಧಂ ಮದಂ ಕ್ಷುತಂ ತ್ರೀಣಿ ನಿಷ್ಠೀವನವಿಜೃಂಭಣೇ ॥ ೪೯ ॥

---

೪೬-೪೭. ಜಪಮಾಡುವಾಗ ಪೂರ್ವದಿಕ್ಕಿಗೆದುರಾಗಿ ಕುಳಿತು ಮಾಡಿದರೆ ವಶೀಕರಣಶಕ್ತಿಯುಂಟಾಗುವುದು. ದಕ್ಷಿಣಾಭಿಮುಖವಾಗಿ ಕುಳಿತು ಮಾಡಿದರೆ ಅಭಿಚಾರಕರ್ಮ ಸಿದ್ಧಿಯಾಗುವುದು. ಪಶ್ಚಿಮಕ್ಕೆದುರಾಗಿ ಮಾಡಿದರೆ ಧನಪ್ರಾಪ್ತಿಯೂ ಉತ್ತರಾಭಿಮುಖವಾಗಿ ಮಾಡಿದರೆ ಶಾಂತಿಯೂ ಉಂಟಾಗುವುದು. ಸೂರ್ಯ, ಅಗ್ನಿ, ಬ್ರಾಹ್ಮಣ, ದೇವತೆಗಳು, ಗುರುಗಳು, ಶ್ರೇಷ್ಠರಾದ ಇತರ ಜನಗಳು ಇವರಿಗೆ ವಿಮುಖವಾಗಿ ಕುಳಿತು ಜಪಮಾಡಬಾರದು.

೪೮. ತಲೆಯಮೇಲೆ ಪಾಗನ್ನಿಟ್ಟುಕೊಂಡು, ಅಂಗಿಯನ್ನು ತೊಟ್ಟು ಜಪಮಾಡಬಾರದು. ಹಾಗೆಯೇ ಬೆತ್ತಲೆಯಾಗಿಯೂ, ತಲೆಯ ಕೂದಲುಗಳನ್ನು ಬಿಚ್ಚಿಕೊಂಡೂ ಗುತ್ತಿಗೆಗೆ ಬಟ್ಟೆಗಳನ್ನು ಸುತ್ತಿಕೊಂಡೂ ಕೈ ತೊಳೆಯದೆಯೂ ಅಶುದ್ಧವಾಗಿರುವಾಗಲೂ, ಕೋಪ ಅಥವಾ ಅಸಮಾಧಾನದಿಂದ ಗೊಣಗುಟ್ಟುತ್ತಲೂ ಜಪಮಾಡಬಾರದು.

೪೯-೫೦. ಜಪಮಾಡುವಾಗ ಕೋಪ, ಮದ, ಸೀನು, ಕೆಮ್ಮು, ಉಗುಳು ಆಕಳಿಕೆ ನಾಯಿ ಮತ್ತು ನೀಚಜನರ ದರ್ಶನ, ಇವುಗಳು ಉಂಟಾಗಬಾರದು. ಇವುಗಳುಂಟಾದರೆ ಆಚಮನ ಮಾಡಿ ನಿನ್ನೊಡನೆ ಸೇರಿದ (ಪಾರ್ವತಿಯೊಡನಿರುವ ಪರಮೇಶ್ವರನನ್ನು) ನನ್ನನ್ನು ಸ್ಮರಿಸಬೇಕು. ಪ್ರಕಾಶಸ್ವರೂಪ

**ದರ್ಶನಂ ಚ ಶ್ವನೀಚಾನಾಂ ವರ್ಜಯೇಜ್ಜಪಕರ್ಮಣಿ ।**
**ಆಚಾಮೇತ್ಸಂಭವೇ ತೇಷಾಂ ಸ್ಮರೇದ್ವಾ ಮಾಂ ತ್ವಯಾ ಸಹ ॥ ೫೦ ॥**

**ಜ್ಯೋತೀಂಷಿ ಚ ಪ್ರಪಶ್ಯೇದ್ವಾ ಕುರ್ಯಾದ್ವಾ ಪ್ರಾಣಸಂಯಮಂ ।**
**ಅನಾಸನಃ ಶಯಾನೋ ವಾ ಗಚ್ಛನ್ನುತ್ಥಿತಏವ ವಾ ॥ ೫೧ ॥**

**ರಥ್ಯಾಯಾಮಶಿವೇ ಸ್ಥಾನೇ ನ ಜಪೇತ್ತಿಮಿರಾಂತರೇ ।**
**ಪ್ರಸಾರ್ಯ ನ ಜಪೇತ್ಪಾದೌ ಕುಕ್ಕುಟಾಸನ ಏವ ವಾ ॥ ೫೨ ॥**

**ಯಾನಶಯ್ಯಾಧಿರೂಢೋ ವಾ ಚಿಂತಾವ್ಯಾಕುಲಿತೋಽಥ ವಾ ।**
**ಶಕ್ತಶ್ಚೇತ್ಸರ್ವಮೇವೈತದಶಕ್ತಃ ಶಕ್ತಿತೋ ಜಪೇತ್ ॥ ೫೩ ॥**

**ಕಿಮತ್ರ ಬಹುನೋಕ್ತೇನ ಸಮಾಸೇನ ವಚಃ ಶೃಣು ।**
**ಸದಾಚಾರೋ ಜಪಞ್ಛುದ್ಧಂ ಧ್ಯಾಯಞ್ಛದ್ರಂ ಸಮಶ್ನುತೇ ॥ ೫೪ ॥**

---

ಗಳನ್ನು ಅಂದರೆ ಸೂರ್ಯ, ಅಗ್ನಿ ಇವುಗಳ ತೇಜಸ್ಸನ್ನು ನೋಡಬೇಕು ಅಥವಾ ಪ್ರಾಣಾಯಾಮವನ್ನಾದರೂ ಮಾಡಬೇಕು. ಹೀಗೆ ಮಾಡಿದರೆ ಪರಿಶುದ್ಧನಾಗಿ ಜಪಮಾಡಲು ಅರ್ಹತೆಯುಂಟಾಗುವುದು.

೫೧-೫೨. ಪೀಠದಲ್ಲಿ ಕುಳಿತುಕೊಳ್ಳದೆಯೂ, ಮಲಗಿಯೂ, ದಾರಿ ನಡೆಯುತ್ತಲೂ, ನಿಂತುಕೊಂಡೂ, ಅಮಂಗಳವಾದ ಸ್ಥಳದಲ್ಲಿಯೂ ಕತ್ತಲೆಯಲ್ಲಿಯೂ ಜಪಮಾಡಬಾರದು. ಕಾಲುಗಳನ್ನು ಚಾಚಿಕೊಂಡೂ, ಕುಕ್ಕುಟಾಸನದಲ್ಲಿ ಕುಳಿತೂ, ವಾಹನಗಳು, ಹಾಸಿಗೆ, ಇವುಗಳ ಮೇಲೆ ಕುಳಿತುಕೊಂಡೂ ದುಃಖವಾದ ಮನಸ್ಸಿನಿಂದಲೂ ಜಪಮಾಡಬಾರದು.

೫೩-೫೪. ಈ ನಿಯಮಗಳನ್ನೆಲ್ಲ ಅನುಸರಿಸಿ ಜಪಮಾಡಲು ಶಕ್ತಿಯುಳ್ಳ ಮನುಜನು ಎಷ್ಟು ಜಪವನ್ನು ಬೇಕಾದರೂ ಮಾಡಬಹುದು. ಅಶಕ್ತನಾದವನು ಸಾಧ್ಯವಾದಮಟ್ಟಿಗೆ ಮೇಲಿನ ನಿಯಮಗಳನ್ನನುಸರಿಸಿ ಎಷ್ಟು ಸಾಧ್ಯವೋ ಅಷ್ಟು ಜಪಮಾಡಬಹುದು. ಹೆಚ್ಚು ಹೇಳುವುದರಿಂದೇನುಪ್ರಯೋಜನ? ಸದಾಚಾರದಿಂದ ಕೂಡಿದವನು ಜಪಮಾಡುವಾಗ ಶುದ್ಧಸ್ವರೂಪವನ್ನು ಧ್ಯಾನಮಾಡುತ್ತಿದ್ದರೆ ಅವನಿಗೆ ಯಾವಾಗಲೂ ಮಂಗಳವೇ ಉಂಟಾಗುವುದು.

ಆಚಾರಃ ಪರಮೋ ಧರ್ಮ ಆಚಾರಃ ಪರಮಂ ಧನಂ ।
ಆಚಾರಃ ಪರಮಾ ವಿದ್ಯಾ ಆಚಾರಃ ಪರಮಾ ಗತಿಃ ॥ ೫೫ ॥

ಆಚಾರಹೀನಃ ಪುರುಷೋ ಲೋಕೇ ಭವತಿ ನಿಂದಿತಃ ।
ಪರತ್ರ ಚ ಸುಖೀ ನ ಸ್ಯಾತ್ತಸ್ಮಾದಾಚಾರವಾನ್ಭವೇತ್ ॥ ೫೬ ॥

ಯಸ್ಯ ಯದ್ವಿಹಿತಂ ಕರ್ಮ ವೇದೇ ಶಾಸ್ತ್ರೇ ಚ ವೈದಿಕೈಃ ।
ತಸ್ಯ ತೇನ ಸಮಾಚಾರಃ ಸದಾಚಾರೋ ನ ಚೇತರಃ ॥ ೫೭ ॥

ಸದ್ಭಿರಾಚರಿತತ್ವಾಚ್ಚ ಸದಾಚಾರಸ್ಸ ಉಚ್ಯತೇ ।
ಸದಾಚಾರಸ್ಯ ತಸ್ಯಾಹುರಾಸ್ತಿಕ್ಯಂ ಮೂಲಕಾರಣಂ ॥ ೫೮ ॥

---

೫೫-೫೬. ಸದಾಚಾರವೇ ಶ್ರೇಷ್ಠವಾದ ಧರ್ಮವಾಗಿಯೂ, ಧನವಾಗಿಯೂ, ವಿದ್ಯೆಯಾಗಿಯೂ, ಮೋಕ್ಷದಾಯಕವಾದುದಾಗಿಯೂ ಇರುವುದು. ಸದಾಚಾರವಿಲ್ಲದ ಮನುಷ್ಯನನ್ನು ಲೋಕದಲ್ಲಿ ಜನರು ನಿಂದಿಸುವರು. ಅವನಿಗೆ ಪರಲೋಕದಲ್ಲಿಯೂ ಸುಖವಿಲ್ಲ. ಆದುದರಿಂದ ಮನುಷ್ಯನು ಸದಾಚಾರ ಸಂಪನ್ನನಾಗಿರಬೇಕು.

೫೭. ಯಾವ ಮನುಷ್ಯನು ಯಾವ ಕರ್ಮಗಳನ್ನು ಮಾಡಬೇಕೆಂದು ವೇದಗಳಲ್ಲಿಯೂ ಶಾಸ್ತ್ರಗಳಲ್ಲಿಯೂ ಹೇಳಿರುವುದೋ ಅದನ್ನು ವೇದಗಳನ್ನು ತಿಳಿದವರು ನಡೆಸಿಕೊಂಡು ಬರುವರು. ಅದನ್ನು ನೋಡಿ ಎಂದರೆ ಅವರನ್ನನುಸರಿಸಿ ಅದರಂತೆ ಆಚರಣೆಯನ್ನಿಟ್ಟುಕೊಂಡಿರುವುದು ಸದಾಚಾರವೆನಿಸುವುದು. ಬೇರೆಯಾದುದು ಸದಾಚಾರವಲ್ಲ.

೫೮-೫೯. ಸಜ್ಜನರು ನಡೆಸಿಕೊಂಡು ಬರುವ ಧರ್ಮವನ್ನು ಸದಾಚಾರವೆಂದು ಹೇಳುವರು. ಸದಾಚಾರಕ್ಕೆ ಆಸ್ತಿಕ್ಯ ಬುದ್ಧಿಯೇ ಮುಖ್ಯಕಾರಣವಾದುದು. ಆಸ್ತಿಕನಾದವನು ಪ್ರಮಾದಾದಿದೋಷಗಳಿಂದ ಸದಾಚಾರವನ್ನು

**ಆಸ್ತಿಕಶ್ಚೇತ್ಪ್ರಮಾದಾದ್ಯೈಃ ಸದಾಚಾರಾದವಿಚ್ಯುತಃ ।**
**ನ ದುಷ್ಯತಿ ನರೋ ನಿತ್ಯಂ ತಸ್ಮಾದಾಸ್ತಿಕತಾಂ ವ್ರಜೇತ್ ॥ ೫೯ ॥**

**ಯಥೇಹಾಸ್ತಿ ಸುಖಂ ದುಃಖಂ ಸುಕೃತೈರ್ದುಷ್ಕೃತೈರಪಿ ।**
**ತಥಾ ಪರತ್ರ ಚಾಸ್ತೀತಿ ಮತಿರಾಸ್ತಿಕ್ಯಮುಚ್ಯತೇ ॥ ೬೦ ॥**

**ರಹಸ್ಯಮನ್ಯದ್ವಕ್ಷ್ಯಾಮಿ ಗೋಪನೀಯಮಿದಂ ಪ್ರಿಯೇ ।**
**ನ ವಾಚ್ಯಂ ಯಸ್ಯ ಕಸ್ಯಾಪಿ ನಾಸ್ತಿಕಸ್ಯಾಥವಾ ಪಶೋಃ ॥ ೬೧ ॥**

**ಸದಾಚಾರವಿಹೀನಸ್ಯ ಪತಿತಸ್ಯಾಂತ್ಯಜಸ್ಯ ಚ ।**
**ಪಂಚಾಕ್ಷರಾತ್ಪರಂ ನಾಸ್ತಿ ಪರಿತ್ರಾಣಂ ಕಲೌ ಯುಗೇ ॥ ೬೨ ॥**

ಬಿಡುವುದಿಲ್ಲ. ಈ ಕಾರಣದಿಂದ ಅವನು ದುಷ್ಟನಾಗುವುದೂ ಇಲ್ಲ. ಆದುದ ರಿಂದ ಯಾವಾಗಲೂ ಮನುಜನು ಆಸ್ತಿಕನಾಗಿರಬೇಕು.

೬೦. ಪುಣ್ಯಪಾಪಕರ್ಮಗಳಿಂದ ಇಹಲೋಕದಲ್ಲಿ ಸುಖದುಃಖಗಳು ಹೇಗೆ ಉಂಟಾಗುವುವೋ ಹಾಗೆಯೇ ಪರಲೋಕದಲ್ಲಿಯೂ ಉಂಟಾಗುವುದೆಂಬ ತಿಳಿವಳಿಕೆಯನ್ನು ಆಸ್ತಿಕ್ಯಬುದ್ಧಿಯೆಂದು ಹೇಳುವರು.

೬೧. ಪ್ರಿಯೆಯಾದ ಎಲೌ ಪಾರ್ವತಿ, ರಹಸ್ಯವಾದ ಒಂದು ವಿಷಯ ವನ್ನು ಹೇಳುವೆನು. ಅದನ್ನು ಗುಟ್ಟಿನಲ್ಲಿಯೇ ಇಟ್ಟಿರಬೇಕು. ನಾಸ್ತಿಕನಿಗೂ ಪಶುಸಮಾನನಿಗೂ, ಆಚಾರಹೀನನಿಗೂ, ಪಾಪಿಗೂ, ಚಂಡಾಲನಿಗೂ ಇದನ್ನು ಹೇಳಕೂಡದು.

೬೨-೬೩. ಕಲಿಯುಗದಲ್ಲಿ ಜನರ ಸಕಲ ದುಃಖಗಳನ್ನೂ ಪರಿಹರಿಸಿ ರಕ್ಷಣೆಮಾಡತಕ್ಕ ಮಂತ್ರವು ಪಂಚಾಕ್ಷರಮಂತ್ರವಲ್ಲದೆ ಬೇರೊಂದಿಲ್ಲ. ನಡೆ ಯುತ್ತಿರಲಿ, ನಿಂತಿರಲಿ, ಇಷ್ಟಬಂದ ಕೆಲಸವನ್ನು ಮಾಡುತ್ತಿರಲಿ ಅಶುಚಿಯಾ

ಗಚ್ಛತಸ್ತಿಷ್ಠತೋ ವಾಽಪಿ ಸ್ವೇಚ್ಛಯಾ ಕರ್ಮ ಕುರ್ವತಃ ।
ಅಶುಚೇರ್ವಾ ಶುಚೇರ್ವಾಪಿ ಮಂತ್ರೋಽಯಂ ನ ಚ ನಿಷ್ಫಲಃ ॥ ೬೩ ॥

ಅನಾಚಾರವತಾಂ ಪುಂಸಾಮವಿಶುದ್ಧಷಡಧ್ವನಾಂ ।
ಅನಾದಿಷ್ಟೋಽಪಿ ಗುರುಣಾ ಮಂತ್ರೋಽಯಂ ನ ಚ ನಿಷ್ಫಲಃ ॥ ೬೪ ॥

ಅಂತ್ಯಜಸ್ಯಾಪಿ ಮೂರ್ಖಸ್ಯ ಮೂಢಸ್ಯ ಪತಿತಸ್ಯ ಚ ।
ನಿರ್ಮರ್ಯಾದಸ್ಯ ನೀಚಸ್ಯ ಮಂತ್ರೋಽಯಂ ನ ಚ ನಿಷ್ಫಲಃ ॥ ೬೫ ॥

ಸರ್ವಾವಸ್ಥಾಂ ಗತಸ್ಯಾಪಿ ಮಯಿ ಭಕ್ತಿಮತಃ ಪರಂ ।
ಸಿಧ್ಯತ್ಯೇವ ನ ಸಂದೇಹೋ ನಾಪರಸ್ಯ ತು ಕಸ್ಯಚಿತ್ ॥ ೬೬ ॥

ನ ಲಗ್ನತಿಥಿನಕ್ಷತ್ರವಾರಯೋಗಾದಯಃ ಪ್ರಿಯೇ ।
ಅಸ್ಯಾತ್ಯಂತಮವೇಕ್ಷ್ಯಾಃ ಸ್ಯುರ್ನೈಷ ಸುಪ್ತಃ ಸದೋದಿತಃ ॥ ೬೭ ॥

---

ರಲಿ, ಶುಚಿಯಾಗಿರಲಿ, ಈ ಮಂತ್ರ ಜಪಮಾಡುತ್ತಿದ್ದರೆ ಅಲ್ಪಸ್ವಲ್ಪವಾದರೂ ಫಲವಿಲ್ಲದೆ ಹೋಗುವುದಿಲ್ಲ.

೬೪-೬೫. ಸದಾಚಾರವಿಲ್ಲದವನಾಗಲಿ, ಷಡಧ್ವಶುದ್ಧಿಯಿಲ್ಲವವನಾಗಲಿ, ಗುರುವಿನ ಅಪ್ಪಣೆಯನ್ನು ಪಡೆಯದಿರಲಿ, ಈ ಮಂತ್ರಜಪಮಾಡುವವನಿಗೆ ಫಲವಿಲ್ಲದಿರುವುದಿಲ್ಲ. ಚಂಡಾಲನಾಗಲಿ, ಮೂರ್ಖನಾಗಲಿ, ಅಜ್ಞಾನಿಯಾಗಲಿ, ಪಾಪಿಯಾಗಲಿ, ಲೋಕಮರ್ಯಾದೆಯನ್ನು ತಿಳಿಯದವನಾಗಲಿ, ಅತ್ಯಂತ ದುಷ್ಟನಾಗಲಿ ಈ ಮಂತ್ರಜಪಮಾಡಿದವನಿಗೆ ಫಲವಿಲ್ಲದಿರುವುದಿಲ್ಲ. ಅವರವರ ಯೋಗ್ಯತಾನುಸಾರವಾಗಿ ಫಲವಾಗಿಯೇ ಆಗುವುದು.

೬೬. ಯಾವ ಅವಸ್ಥೆಯಲ್ಲಿದ್ದವನಾದರೂ ನನ್ನಲ್ಲಿ ಭಕ್ತಿಯೊಂದಿದ್ದರೆ ಅವನಿಗೆ ಈ ಮಂತ್ರಸಿದ್ಧಿಯಾಗುವುದರಲ್ಲಿ ಸಂದೇಹವಿಲ್ಲ. ಬೇರೆಯವನಿಗೆ ಸಿದ್ಧಿಸಲಾರದು.

೬೭-೬೮. ಪ್ರಿಯೆಯಾದ ಓ ದೇವಿಯೇ, ಈ ಮಂತ್ರಜಪ ಪ್ರಾರಂಭಕ್ಕೆ ಲಗ್ನ, ತಿಥಿ, ನಕ್ಷತ್ರ, ವಾರ, ಯೋಗ ಮುಂತಾದುವನ್ನು ನೋಡಬೇಕಾದುದಿಲ್ಲ.

ಸ ಕದಾಚಿನ್ನ ಕಸ್ಯಾಪಿ ರಿಪುರೇಷ ಮಹಾಮನುಃ ।
ಸುಸಿದ್ಧೋ ವಾsಪಿ ಸಿದ್ಧೋ ವಾ ಸಾಧ್ಯೋ ವಾsಪಿ ಭವಿಷ್ಯತಿ ॥ ೬೮ ॥

ಸಿದ್ಧೇನ ಗುರುಣಾದಿಷ್ಟಸ್ಸುಸಿದ್ಧ ಇತಿ ಕಥ್ಯತೇ ।
ಅಸಿದ್ಧೇನಾಪಿ ವಾ ದತ್ತಸ್ಸಿದ್ಧಸಾಧ್ಯಸ್ತು ಕೇವಲಃ ॥ ೬೯ ॥

ಅಸಾಧಿತಃ ಸಾಧಿತೋ ವಾ ಸಿದ್ಧ್ಯತ್ಯೇವ ನ ಸಂಶಯಃ ।
ಶ್ರದ್ಧಾತಿಶಯಯುಕ್ತಸ್ಯ ಮಯಿ ಮಂತ್ರೇ ತಥಾ ಗುರೌ ॥ ೭೦ ॥

ತಸ್ಮಾನ್ಮಂತ್ರಾಂತರಾಂಸ್ತ್ಯಕ್ತ್ವಾ ಸಾಪಾಯಾನಧಿಕಾರತಃ ।
ಆಶ್ರಯೇತ್ಪರಮಾಂ ವಿದ್ಯಾಂ ಸಾಕ್ಷಾತ್ಪಂಚಾಕ್ಷರೀಂ ಬುಧಃ ॥ ೭೧ ॥

---

ಎಲ್ಲವೂ ಪ್ರಶಸ್ತವೇ. ಈ ಮಂತ್ರವು ಸುಪ್ತಮಂತ್ರವಲ್ಲ, ಎಂದರೆ ಕ್ಲುಪ್ತವಾದ ಯಾವುದೋ ಒಂದು ಕಾಲದಲ್ಲಿ ಮಾತ್ರ ಫಲಕೊಡುವ ಮಂತ್ರವಲ್ಲ. ಯಾವಾಗ ಬೇಕಾದರೂ ಫಲಕೊಡಲು ಸಿದ್ಧವಾದ ಮಂತ್ರವು. ಯಾವಾಗಲಾದರೂ ಯಾರಿಗಾದರೂ ಈ ಮಹಾಮಂತ್ರವು ಹಾನಿಕರವಾದುದಲ್ಲ. ಸುಸಿದ್ಧ, ಸಿದ್ಧ ಸಾಧ್ಯ ರೂಪದಿಂದ ಎಲ್ಲರಿಗೂ ಫಲವನ್ನು ಕೊಡುವುದು.

೬೯-೭೦. ಮಂತ್ರಸಿದ್ಧನಾದ ಗುರುವಿನ ಉಪದೇಶದಿಂದ ಲಭಿಸಿದ ಮಂತ್ರಕ್ಕೆ ಸುಸಿದ್ಧಮಂತ್ರವೆಂದೂ, ಮಂತಸಿದ್ಧಿಯಿಲ್ಲದವನು ಉಪದೇಶಿಸಿದ ಮಂತ್ರಕ್ಕೆ ಸಿದ್ಧಸಾಧ್ಯವೆಂದೂ ಹೆಸರು. ನನ್ನಲ್ಲೂ, ಮಂತ್ರದಲ್ಲೂ ಗುರುವಿನಲ್ಲಿಯೂ ಅತಿಶಯವಾದ ಶ್ರದ್ಧೆ (ನಂಬಿಕೆ)ಯುಳ್ಳವನಿಗೆ ಈ ಮಂತ್ರವು ಉಪದೇಶಪೂರ್ವಕವಾಗಿ ಲಭಿಸಲಿ, ಲಭಿಸದಿರಲಿ ಅದು ಅವನಿಗೆ ಸಿದ್ಧಿಯನ್ನುಂಟು ಮಾಡುವುದು.

೭೧-೭೨. ಆದುದರಿಂದ ವಿದ್ವಾಂಸನಾದವನು ಅಪಾಯಕರವಾದ ಇತರ ಮಂತ್ರಗಳನ್ನು ಬಿಟ್ಟು, ಶ್ರೇಷ್ಠವಾದ ಪಂಚಾಕ್ಷರವಿದ್ಯೆಯನ್ನಾಶ್ರಯಿಸಬೇಕು. ಇತರ ಮಂತ್ರಗಳು ಸಿದ್ಧಿಯಾದರೂ, ಈ ಪಂಚಾಕ್ಷರಮಂತ್ರವು ಸಿದ್ಧಿಯಾಗುವು

ಮಂತ್ರಾಂತರೇಷು ಸಿದ್ಧೇಷು ಮಂತ್ರ ಏಷ ನ ಸಿಧ್ಯತಿ ।
ಸಿದ್ಧೇ ತ್ವಸ್ಮಿನ್ಮಹಾಮಂತ್ರೇ ತೇ ಚ ಸಿದ್ಧಾ ಭವಂತ್ಯುತ ॥ ೭೨ ॥

ಯಥಾ ದೇವೇಷ್ವಲಬ್ಧೋಽಸ್ಮಿ ಲಬ್ಧೇಷ್ವಪಿ ಮಹೇಶ್ವರಿ ।
ಮಯಿ ಲಬ್ಧೇ ತು ತೇ ಲಬ್ಧಾ ಮಂತ್ರೇಷ್ವೇಷು ಸಮೋ ವಿಧಿಃ ॥ ೭೩ ॥

ಯೇ ದೋಷಾಸ್ಸರ್ವಮಂತ್ರಾಣಾಂ ನ ತೇಽಸ್ಮಿನ್ಸಂಭವಂತ್ಯಪಿ ।
ಅಸ್ಯ ಮಂತ್ರಸ್ಯ ಜಾತ್ಯಾದೀನನಪೇಕ್ಷ್ಯ ಪ್ರವರ್ತನಾತ್ ॥ ೭೪ ॥

ತಥಾಪಿ ನೈವ ಕ್ಷುದ್ರೇಷು ಫಲೇಷು ಪ್ರತಿಯೋಗಿಷು ।
ಸಹಸಾ ವಿನಿಯುಂಜೀತ ತಸ್ಮಾದೇಷ ಮಹಾಬಲಃ ॥ ೭೫ ॥

---

ದಿಲ್ಲ. ಈ ಮಹಾಮಂತ್ರವು ಸಿದ್ಧಿಯಾದರೆ ಇತರ ಎಲ್ಲಾ ಮಂತ್ರಗಳೂ ಸಿದ್ಧಿಯಾಗುತ್ತವೆ.

೭೩. ಮಹಾದೇವಿಯಾದ ಓ ಪಾರ್ವತಿಯೇ! ಇತರ ದೇವತೆಗಳು ಪ್ರತ್ಯಕ್ಷರಾದರೂ ನಾನು ಪ್ರತ್ಯಕ್ಷನಾಗುವುದಿಲ್ಲ. ನಾನು ಪ್ರತ್ಯಕ್ಷನಾದ ಮೇಲೆ ಇತರ ದೇವತೆಗಳು ಪ್ರತ್ಯಕ್ಷವಾದಂತೆಯೇ ಸರಿ. ಮಂತ್ರಗಳಿಗೂ ಈ ನಿಯಮವು ಅನ್ವಯಿಸುವುದು.

೭೪-೭೫. ಇತರ ಮಂತ್ರಗಳಿಗೆ ಯಾವ ದೋಷಗಳಿರುವುವೋ ಆ ದೋಷಗಳು ಈ ಮಂತ್ರಕ್ಕೆ ಸಂಭವಿಸುವುದಿಲ್ಲ. ಈ ಮಂತ್ರಜಪಕ್ಕೆ ಜಾತ್ಯಾದಿಗಳ ನಿಯಮವಿರುವುದಿಲ್ಲ. ಸರ್ವರೂ ಇದನ್ನು ಜಪಿಸಬಹುದು. ಹಾಗಾದರೂ ಈ ಮಂತ್ರವನ್ನು ಅಲ್ಪಫಲಗಳಿಗಾಗಿಯೂ, ವಿರುದ್ಧಕಾರ್ಯಗಳಿಗಾಗಿಯೂ ಉಪಯೋಗಿಸಬಾರದು. ಆದುದರಿಂದಲೇ ಈ ಮಂತ್ರವು ಮಹಾಬಲವತ್ತರವಾದ ಮಂತ್ರವಾಗಿರುವುದು.

॥ ಉಪಮನ್ಯುರುವಾಚ ॥

ಏವಂ ಸಾಕ್ಷಾನ್ಮಹಾದೇವ್ಯೈ ಮಹಾದೇವೇನ ಶೂಲಿನಾ ।
ಹಿತಾಯ ಜಗತಾಮುಕ್ತಃ ಪಂಚಾಕ್ಷರವಿಧಿರ್ಯಥಾ ॥ ೭೬ ॥

ಯ ಇದಂ ಕೀರ್ತಯೇದ್ಭಕ್ತ್ಯಾ ಶೃಣುಯಾದ್ವಾ ಸಮಾಹಿತಃ ।
ಸರ್ವಪಾಪವಿನಿರ್ಮುಕ್ತಃ ಪ್ರಯಾತಿ ಪರಮಾಂ ಗತಿಂ ॥ ೭೭ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-
ಮುತ್ತರಭಾಗೇ ಪಂಚಾಕ್ಷರಮಹಿಮವರ್ಣನಂ ನಾಮ
ಚತುರ್ದಶೋಽಧ್ಯಾಯಃ

---

೭೬. ಉಪಮನ್ಯುವು ಹೇಳಿದನು—ಈ ರೀತಿಯಲ್ಲಿ ಶೂಲಾಯುಧ ಧರನಾದ ಮಹಾದೇವನು ಸಾಕ್ಷಾನ್ಮಹಾದೇವಿಯಾದ ಪಾರ್ವತಿಗೆ ಲೋಕಹಿತಾರ್ಥವಾಗಿ ಪಂಚಾಕ್ಷರ ಮಹಾಮಂತ್ರವಿಧಿಯನ್ನು ಹೇಳಿದನು.

೭೭. ಈ ಪಂಚಾಕ್ಷರ ಮಂತ್ರದ ಮಹಿಮೆಯನ್ನು ಭಕ್ತಿಯಿಂದ ಹೇಳುವ ಅಥವಾ ಕೇಳುವ ಮನುಜನು ಸಮಸ್ತ ಪಾಪಗಳನ್ನೂ ಕಳೆದುಕೊಂಡು ಶ್ರೇಷ್ಠವಾದ ಮೋಕ್ಷಪದವಿಯನ್ನು ಹೊಂದುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಏಳನೆಯ ವಾಯವೀಯಸಂಹಿತೆಯ
ಉತ್ತರಭಾಗದಲ್ಲಿ ಪಂಚಾಕ್ಷರ ಮಾಹಾತ್ಮ್ಯವರ್ಣನವೆಂಬ
ಹದಿನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮಹಾ ಪುರಾಣೇ

## ವಾಯುವೀಯಸಂಹಿತಾಯಾಮುತ್ತರಭಾಗೇ

## ಪಂಚದಶೋಽಧ್ಯಾಯಃ

---

॥ ಶ್ರೀ ಕೃಷ್ಣ ಉವಾಚ ॥

**ಭಗವನ್ಮಂತ್ರಮಾಹಾತ್ಮ್ಯಂ ಭವತಾ ಕಥಿತಂ ಪ್ರಭೋ ।**
**ತತ್ಪ್ರಯೋಗವಿಧಾನಂ ಚ ಸಾಕ್ಷಾಚ್ಛ್ರುತಿಸಮಂ ಯಥಾ ॥ ೧ ॥**

**ಇದಾನೀಂ ಶ್ರೋತುಮಿಚ್ಛಾಮಿ ಶಿವಸಂಸ್ಕಾರಮುತ್ತಮಂ ।**
**ಮಂತ್ರಸಂಗ್ರಹಣೇ ಕಿಂಚಿತ್ಸೂಚಿತಂ ನ ತು ವಿಸ್ತೃತಂ ॥ ೨ ॥**

---

## ಹದಿನೈದನೆಯ ಅಧ್ಯಾಯವು

೧-೨. ಶ್ರೀ ಕೃಷ್ಣನು ಪ್ರಶ್ನೆ ಮಾಡುವನು—ಮಹಾಮಹಿಮನಾದ ಎಲೈ ಉಪಮನ್ಯುವೇ, ಪಂಚಾಕ್ಷರ ಮಂತ್ರದ ಮಹಿಮೆಯೆಲ್ಲವನ್ನೂ ಹೇಳಿರುವೆ. ಆ ಮಂತ್ರವನ್ನು ಯಾವಯಾವ ಕಾರ್ಯದಲ್ಲಿ ಹೇಗೆಹೇಗೆ ಪ್ರಯೋಗಿಸಬೇಕೆಂಬ ವೇದೋಕ್ತವಿಧಿಯನ್ನೂ ಸಹ ಹೇಳಿರುವೆ. ಹಿಂದೆ ಮಂತ್ರಗ್ರಹಣ ವಿಷಯದಲ್ಲಿ ಶಿವಸಂಸ್ಕಾರ ವಿಧಿಯನ್ನು ಸ್ವಲ್ಪಮಾತ್ರ ಸೂಚಿಸಿರುವೆ. ವಿಸ್ತಾರವಾಗಿ ಹೇಳಲಿಲ್ಲ. ಆದುದರಿಂದ ಅವುಗಳನ್ನು ವಿಸ್ತಾರವಾಗಿ ಹೇಳಬೇಕು ಎಂದನು.

॥ ಉಪಮನ್ಯುರುವಾಚ ॥

ಹಂತ ತೇ ಕಥಯಿಷ್ಯಾಮಿ ಸರ್ವಪಾಪವಿಶೋಧನಂ ।
ಸಂಸ್ಕಾರಂ ಪರಮಂ ಪುಣ್ಯಂ ಶಿವೇನ ಪರಿಭಾಷಿತಂ ॥ ೩ ॥

ಸಮ್ಯಕ್ಕೃತಾಧಿಕಾರಸ್ಸ್ಯಾತ್ಪೂಜಾದಿಷು ನರೋ ಯತಃ ।
ಸಂಸ್ಕಾರಃ ಕಥ್ಯತೇ ತೇನ ಷಡಧ್ವಪರಿಶೋಧನಂ ॥ ೪ ॥

ದೀಯತೇ ಯೇನ ವಿಜ್ಞಾನಂ ಕ್ಷೀಯತೇ ಪಾಶಬಂಧನಂ ।
ತಸ್ಮಾತ್ಸಂಸ್ಕಾರವಿನ್ಯಾಯಂ ದೀಕ್ಷೇತ್ಯಪಿ ಚ ಕಥ್ಯತೇ ॥ ೫ ॥

ಶಾಂಭವೀ ಚೈವ ಶಾಕ್ತೀ ಚ ಮಾಂತ್ರೀ ಚೈವ ಶಿವಾಗಮೇ ।
ದೀಕ್ಷೋಪದಿಶ್ಯತೇ ತ್ರೇಧಾ ಶಿವೇನ ಪರಮಾತ್ಮನಾ ॥ ೬ ॥

ಗುರೋರಾಲೋಕಮಾತ್ರೇಣ ಸ್ಪರ್ಶಾತ್ಸಂಭಾಷಣಾದಪಿ ।
ಸದ್ಯಸ್ಸಂಜ್ಞಾ ಭವೇಜ್ಜಂತೋಃ ಪಾಶೋಪಕ್ಷಯಕಾರಿಣೀ ॥ ೭ ॥

೩-೫. ಉಪಮನ್ಯುವು ಹೇಳುವನು—ಎಲೈ ಕೃಷ್ಣನೇ, ಕೇಳು. ಸಮಸ್ತ ಪಾಪಗಳನ್ನೂ ನಾಶಮಾಡುವ ಪುಣ್ಯಕರವಾದ ಸಂಸ್ಕಾರವನ್ನು ನಿನಗೆ ಹೇಳುವೆನು. ಅದನ್ನು ಶಿವನೇ ಹೇಳಿರುವನು. ಶಿವನ ಪೂಜಾದಿಗಳ ವಿಷಯದಲ್ಲಿ ಷಡಧ್ವಶುದ್ಧರೂಪವಾದ ಉತ್ತಮವಾದ ಅಧಿಕಾರವನ್ನು ಹೊಂದುವುದರಿಂದ ಅದಕ್ಕೆ ಸಂಸ್ಕಾರವೆಂದು ಹೆಸರು ಬಂದಿರುವುದು. ಈ ಸಂಸ್ಕಾರವು ವಿಜ್ಞಾನವನ್ನುಂಟುಮಾಡಿ ಪಾಶಬಂಧವನ್ನು ಕ್ಷಯಿಸುವುದರಿಂದ ದೀಕ್ಷಾ ಎಂಬ ಮತ್ತೊಂದು ಹೆಸರನ್ನೂ ಹೊಂದಿರುವುದು.

೬. ಪರಮಾತ್ಮನಾದ ಶಿವನು ಶಿವಾಗಮಶಾಸ್ತ್ರದಲ್ಲಿ ಶಾಂಭವೀ, ಶಕ್ತಿ, ಮಾಂತ್ರೀ ಎಂಬ ಮೂರು ವಿಧವಾದ ದೀಕ್ಷೆಗಳನ್ನು ಉಪದೇಶಮಾಡಿರುವನು.

೭-೮. ಗುರುವು ಶಿಷ್ಯನನ್ನು ನೋಡುವುದರಿಂದಲೂ, ಅವನನ್ನು ಸ್ಪರ್ಶಮಾಡುವುದರಿಂದಲೂ ಅವನೊಡನೆ ಮಾತನಾಡುವುದರಿಂದಲೂ, ಆ ಕ್ಷಣ

ಸಾ.ದೀಕ್ಷಾ ಶಾಂಭವೀ ಪ್ರೋಕ್ತಾ ಸಾ ಪುನರ್ಭಿದ್ಯತೇ ದ್ವಿಧಾ ।
ತೀವ್ರಾ ತೀವ್ರತರಾ ಚೇತಿ ಪಾಶೋಪಕ್ಷಯಭೇದತಃ ॥ ೮ ॥

ಯಯಾ ಸ್ಯಾನ್ನಿರ್ವೃತಿಃ ಸದ್ಯಸ್ಸೈವ ತೀವ್ರತರಾ ಮತಾ ।
ತೀವ್ರಾ ತು ಜೀವತೋಽತ್ಯಂತಂ ಪುಂಸಃ ಪಾಪವಿಶೋಧಿಕಾ ॥ ೯ ॥

ಶಾಕ್ತೀ ಜ್ಞಾನವತೀ ದೀಕ್ಷಾ ಶಿಷ್ಯದೇಹಂ ಪ್ರವಿಶ್ಯ ತು ।
ಗುರುಣಾ ಯೋಗಮಾರ್ಗೇಣ ಕ್ರಿಯತೇ ಜ್ಞಾನಚಕ್ಷುಷಾ ॥ ೧೦ ॥

ಮಾಂತ್ರೀ ಕ್ರಿಯಾವತೀ ದೀಕ್ಷಾ ಕುಂಡಮಂಡಲಪೂರ್ವಿಕಾ ।
ಮಂದಮಂದತರೋದ್ದೇಶಾತ್ಕರ್ತವ್ಯಾ ಗುರುಣಾ ಬಹಿಃ ॥ ೧೧ ॥

---

ದಲ್ಲಿಯೇ ಅವನ ಪಾಪರೂಪವಾದ ಪಾಶಗಳು ನಾಶವಾಗಿ ಜ್ಞಾನವುಂಟಾದರೆ ಅದನ್ನೇ ಶಾಂಭವೀದೀಕ್ಷೆಯೆನ್ನುವರು. ಪಾಶವು ನಾಶವಾಗುವ ಕ್ರಮವನ್ನನು ಸರಿಸಿ ಆ ದೀಕ್ಷೇಯು ತೀವ್ರ, ತೀವ್ರತರ ಎಂದು ಎರಡು ಭೇದವಾಗಿರುವುದು.

೯. ಯಾವ ದೀಕ್ಷೆಯಿಂದ ಆ ಕ್ಷಣದಲ್ಲಿಯೇ ಮೋಕ್ಷಸುಖವುಂಟಾಗುವುದೋ ಅದು ತೀವ್ರತರ ದೀಕ್ಷೆಯೆನಿಸುವುದು. ಜೀವಿಸಿರುವ ಪುರುಷನಿಗೆ ದೀಕ್ಷೆಯಿಂದ ಪಾಪಕ್ಷಯವಾಗಿ ಆಮೇಲೆ ಮೋಕ್ಷವುಂಟಾದರೆ ಅದು ತೀವ್ರವೆನಿಸುವುದು. ಇದು ಇಚ್ಛಾಶಕ್ತಿಸ್ವರೂಪವಾದ ದೀಕ್ಷೆಯು.

೧೦. ಗುರುವು ಯೋಗಮಾರ್ಗದಿಂದ ಶಿಷ್ಯನ ಶರೀರವನ್ನು ಪ್ರವೇಶಿಸಿ ಅವನಿಗೆ ಜ್ಞಾನಚಕ್ಷುಸ್ಸನ್ನುಂಟುಮಾಡಿ ಜ್ಞಾನೋಪದೇಶವನ್ನು ಮಾಡುವುದು ಶಾಕ್ತೀ ದೀಕ್ಷೆಯು. ಇದು ಜ್ಞಾನಶಕ್ತಿಸ್ವರೂಪವಾದ ದೀಕ್ಷೆಯು.

೧೧. ಹೋಮಕುಂಡಗಳು, ಮಂಡಲಗಳು ಇವುಗಳನ್ನು ಮಾಡಿಕೊಂಡು ಅತ್ಯಲ್ಪವಾದ ಉದ್ದೇಶಗಳಿಂದ ಹೋಮ, ಪೂಜೆ ಮುಂತಾದ ಹೊರಗಿನ ಕ್ರಿಯಾಕಲಾಪಗಳಿಂದ ಗುರುವು ಶಿಷ್ಯನಿಗೆ ಮಾಡುವ ಮಂತ್ರೋಪದೇಶವು ಮಾಂತ್ರೀ ದೀಕ್ಷೆಯೆನಿಸುವುದು. ಇದು ಕ್ರಿಯಾಶಕ್ತಿಸ್ವರೂಪವಾದ ದೀಕ್ಷೆಯು.

ಶಕ್ತಿಪಾತಾನುಸಾರೇಣ ಶಿಷ್ಯೋಽನುಗ್ರಹಮರ್ಹತಿ ।
ಶೈವಧರ್ಮಾನುಸಾರಸ್ಯ ತನ್ಮೂಲತ್ವಾತ್ಸಮಾಸತಃ ॥ ೧೨ ॥

ಯತ್ರ ಶಕ್ತಿರ್ನ ಪತಿತಾ ತತ್ರ ಶುದ್ಧಿರ್ನ ಜಾಯತೇ ।
ನ ವಿದ್ಯಾ ನ ಶಿವಾಚಾರೋ ನ ಮುಕ್ತಿರ್ನ ಚ ಸಿದ್ಧಯಃ ॥ ೧೩ ॥

ತಸ್ಮಾಲ್ಲಿಂಗಾನಿ ಸಂವೀಕ್ಷ್ಯ ಶಕ್ತಿಪಾತಸ್ಯ ಭೂಯಸಃ ।
ಜ್ಞಾನೇನ ಕ್ರಿಯಯಾ ವಾಽಥ ಗುರುಃ ಶಿಷ್ಯಂ ವಿಶೋಧಯೇತ್ ॥ ೧೪ ॥

ಯೋಽನ್ಯಥಾ ಕುರುತೇ ಮೋಹಾತ್ಸ ವಿನಶ್ಯತಿ ದುರ್ಮತಿಃ ।
ತಸ್ಮಾತ್ಸರ್ವಪ್ರಕಾರೇಣ ಗುರುಃ ಶಿಷ್ಯಂ ಪರೀಕ್ಷಯೇತ್ ॥ ೧೫ ॥

ಲಕ್ಷಣಂ ಶಕ್ತಿಪಾತಸ್ಯ ಪ್ರಬೋಧಾನಂದಸಂಭವಃ ।
ಸಾ ಯಸ್ಮಾತ್ಪರಮಾ ಶಕ್ತಿಃ ಪ್ರಬೋಧಾನಂದರೂಪಿಣೀ ॥ ೧೬ ॥

---

೧೨. ಒಟ್ಟಿನಲ್ಲಿ ಶಿವಧರ್ಮಾಚರಣೆಗೆ ಶಿವನ ಅನುಗ್ರಹವೇ ಕಾರಣವಾದುದರಿಂದ ಶಿಷ್ಯನಮೇಲೆ ಶಿವನ ಅನುಗ್ರಹಶಕ್ತಿಯು ಎಷ್ಟುಮಟ್ಟಿಗೆ ಬೀಳುವುದೋ ಅದಕ್ಕನುಸಾರವಾಗಿ ಗುರುವು ಶಿಷ್ಯನಿಗೆ ಅನುಗ್ರಹಮಾಡುವನು. ಅಥವಾ ಶಿಷ್ಯನು ಗುರುವಿನ ಅನುಗ್ರಹಕ್ಕೆ ಪಾತ್ರನಾಗುವನು.

೧೩-೧೫. ಶಿವನ ಅನುಗ್ರಹಶಕ್ತಿಯು ಎಲ್ಲಿ ಬೀಳುವುದಿಲ್ಲವೋ ಅಲ್ಲಿ ಪರಿಶುದ್ಧಿಯಾಗಲಿ, ವಿದ್ಯೆ, ಸದಾಚಾರ, ಸಿದ್ಧಿ, ಮುಕ್ತಿಗಳಾಗಲಿ ಉಂಟಾಗಲಾರವು. ಆದುದರಿಂದ ಶಿಷ್ಯನಿಗೆ ಶಿವನ ಅನುಗ್ರಹಶಕ್ತಿಯುಂಟಾಗುವುದಕ್ಕೆ ಪ್ರಬಲವಾದ ಚಿಹ್ನೆಗಳನ್ನು ಕಂಡು ಗುರುವು ಜ್ಞಾನದಿಂದಲಾಗಲಿ, ಕ್ರಿಯೆಯಿಂದಲಾಗಲಿ ಶಿಷ್ಯನನ್ನು ಶುದ್ಧಿಮಾಡಬೇಕು. ಹಾಗೆ ಶುದ್ಧಿಮಾಡದೆ ಶಿವದೀಕ್ಷೆಯನ್ನು ಕೊಟ್ಟರೆ ಅಜ್ಞಾನದಿಂದ ದುರ್ಬುದ್ಧಿಯುಳ್ಳ ಶಿಷ್ಯನು ನಾಶವಾಗುವನು. ಆ ಕಾರಣದಿಂದ ಸರ್ವಪ್ರಯತ್ನದಿಂದಲೂ ಗುರುವು ಶಿಷ್ಯನನ್ನು ಚೆನ್ನಾಗಿ ಪರೀಕ್ಷಿಸಬೇಕು.

೧೬-೧೭. ಜ್ಞಾನಾನಂದಸ್ವರೂಪನಾದ ಶಿವನ ಅನುಗ್ರಹಶಕ್ತಿಯು ಶಿಷ್ಯನ ಮೇಲೆ ಬಿದ್ದಿತೆಂಬುವುದನ್ನು ಶಿಷ್ಯನಿಗೆ ಉಂಟಾಗುವ ಜ್ಞಾನಾನಂದವೇ

**ಆನಂದಬೋಧಯೋರ್ಲಿಂಗಮಂತಃಕರಣವಿಕ್ರಿಯಾಃ ।**
**ಯಥಾ ಸ್ಯಾತ್ಕಂಪರೋಮಾಂಚಸ್ವರನೇತ್ರಾಂಗವಿಕ್ರಿಯಾಃ ॥ ೧೭ ॥**

**ಶಿಷ್ಯೋಽಪಿ ಲಕ್ಷಣೈರೇಭಿಃ ಕುರ್ಯಾದ್ಗುರುಪರೀಕ್ಷಣಂ ।**
**ತತ್ಸಂಪರ್ಕೈಃ ಶಿವಾರ್ಚಾದೌ ಸಂಗತೈರ್ವಾಥ ತದ್ಗತೈಃ ॥ ೧೮ ॥**

**ಶಿಷ್ಯಸ್ತು ಶಿಕ್ಷಣೀಯತ್ವಾದ್ಗುರೋರ್ಗೌರವಕಾರಣಾತ್ ।**
**ತಸ್ಮಾತ್ಸರ್ವಪ್ರಯತ್ನೇನ ಗುರೋರ್ಗೌರವಮಾಚರೇತ್ ॥ ೧೯ ॥**

**ಯೋ ಗುರುಃ ಸ ಶಿವಃ ಪ್ರೋಕ್ತೋ ಯಶ್ಶಿವಃ ಸ ಗುರುಸ್ಸ್ಮೃತಃ ।**
**ಗುರುರ್ವಾ ಶಿವ ಏವಾಥ ವಿದ್ಯಾಕಾರೇಣ ಸಂಸ್ಥಿತಃ ॥ ೨೦ ॥**

**ಯಥಾ ಶಿವಸ್ತಥಾ ವಿದ್ಯಾ ಯಥಾ ವಿದ್ಯಾ ತಥಾ ಗುರುಃ ।**
**ಶಿವವಿದ್ಯಾಗುರೂಣಾಂ ಚ ಪೂಜಯಾ ಸದೃಶಂ ಫಲಂ ॥ ೨೧ ॥**

ಮುಂತಾದ ಮುಖ್ಯ ಲಕ್ಷಣಗಳಿಂದ ತಿಳಿಯಬಹುದು. ಮನಸ್ಸಿನ ವಿಕಾರವೇ ಜ್ಞಾನಾನಂದಕ್ಕೆ ಗುರುತಾಗಿರುವುದು. ಆ ವಿಧವಾದ ಮನಸ್ಸಿನ ವಿಕಾರ ವುಂಟಾದಾಗ ಶರೀರದಲ್ಲಿ ನಡುಕ, ರೋಮಾಂಚ ಸ್ವರವಿಕಾರ, ಕಣ್ಣು ಮುಂತಾದ ಅವಯವಗಳ ವಿಕಾರ ಇವುಗಳುಂಟಾಗುವುವು.

೧೮. ಶಿಷ್ಯನೂ ಕೂಡ ಗುರುವು ಮಾಡುವ ಶಿವಪೂಜೆ ಮುಂತಾದ ಕಾರ್ಯಗಳಲ್ಲಿ ಸಹಕರಿಸಿ ಮೇಲೆ ಹೇಳಿದ ಲಕ್ಷಣಗಳಿಂದ ಗುರುವನ್ನೂ ಸಹ ಪರೀಕ್ಷಿಸಬೇಕು.

೧೯-೨೦. ಶಿಷ್ಯನು ಕಲಿಯತಕ್ಕವನು, ಗುರುವು ಕಲಿಸತಕ್ಕವನು. ಆದುದರಿಂದ ಸರ್ವಪ್ರಯತ್ನದಿಂದಲೂ, ಶಿಷ್ಯನು ಗುರುವಿಗೆ ಗೌರವವನ್ನು ತೋರಿಸಬೇಕು. ಗುರುವೇ ಶಿವನು. ಶಿವನೇ ಗುರುವು. ಗುರುವಾಗಲಿ, ಶಿವನಾಗಲಿ ಅವನು ವಿದ್ಯಾಸ್ವರೂಪದಿಂದಿರುವನು.

೨೧. ಶಿವನಂತೆ ವಿದ್ಯೆಯು. ವಿದ್ಯೆಯಂತೆ ಗುರುವು. ಆದುದರಿಂದ ಶಿವ, ವಿದ್ಯೆ, ಗುರು ಇವರಲ್ಲಿ ಯಾರನ್ನು ಪೂಜಿಸಿದರೂ ಸಮಾನವಾದ ಫಲ ವುಂಟಾಗುವುದು.

ಸರ್ವದೇವಾತ್ಮಕಶ್ಚಾಸೌ ಸರ್ವಮಂತ್ರಮಯೋ ಗುರುಃ ।
ತಸ್ಮಾತ್ಸರ್ವಪ್ರಯತ್ನೇನ ತಸ್ಯಾಜ್ಞಾಂ ಶಿರಸಾ ವಹೇತ್ ॥ ೨೨ ॥

ಶ್ರೇಯೋರ್ಥೀ ಯದಿ ಗುರ್ವಾಜ್ಞಾಂ ಮನಸಾಪಿ ನ ಲಂಘಯೇತ್ ।
ಗುರ್ವಾಜ್ಞಾಪಾಲಕೋ ಯಸ್ಮಾಜ್ಜ್ಞಾನಸಂಪತ್ತಿಮಶ್ನುತೇ ॥ ೨೩ ॥

ಗಚ್ಛಂಸ್ತಿಷ್ಠನ್ಸ್ವಪನ್ಭುಂಜನ್ನಾನ್ಯತ್ಕರ್ಮ ಸಮಾಚರೇತ್ ।
ಸಮಕ್ಷಂ ಯದಿ ಕುರ್ವೀತ ಸರ್ವಂ ಚಾನುಜ್ಞಯಾ ಗುರೋಃ ॥ ೨೪ ॥

ಗುರೋರ್ಗೃಹೇ ಸಮಕ್ಷಂ ವಾ ನ ಯಥೇಷ್ಟಾಸನೋ ಭವೇತ್ ।
ಗುರುರ್ದೇವೋ ಯತಃ ಸಾಕ್ಷಾತ್ತದ್ಗೃಹಂ ದೇವಮಂದಿರಂ ॥ ೨೫ ॥

ಪಾಪಿನಾಂ ಚ ಯಥಾ ಸಂಗಾತ್ತತ್ಪಾಪಾತ್ಪತಿತೋ ಭವೇತ್ ।
ಯಥೇಹ ವಹ್ನಿಸಂಪರ್ಕಾನ್ಮಲಂ ತ್ಯಜತಿ ಕಾಂಚನಂ ॥ ೨೬ ॥

---

೨೨-೨೩. ಗುರುವು ಸಮಸ್ತ ದೇವತಾಸ್ವರೂಪನಾಗಿಯೂ, ಸಮಸ್ತ ಮಂತ್ರಸ್ವರೂಪನಾಗಿಯೂ, ಇರುವನು. ಆದುದರಿಂದ ಸರ್ವಪ್ರಯತ್ನದಿಂದಲೂ ಅವನ ಅಪ್ಪಣೆಯನ್ನು ಶಿರಸಾವಹಿಸಬೇಕು. ಶ್ರೇಯಸ್ಸನ್ನು ಬಯಸುವವನು ಗುರುವಿನ ಅಪ್ಪಣೆಯನ್ನು ಮನಸ್ಸಿನಲ್ಲಿಯೂ ಸಹ ಮೀರಬಾರದು. ಗುರುವಿನ ಅಪ್ಪಣೆಯನ್ನು ನಡೆಸುವವನು ಜ್ಞಾನವೆಂಬ ಸಂಪತ್ತನ್ನು ಅನುಭವಿಸುವನು.

೨೪. ತಿರುಗಾಡುವುದು ನಿಂತಿರುವುದು, ಮಲಗಿರುವುದು, ಊಟಮಾಡುವುದು ಮುಂತಾದ ಕೆಲಸಗಳನ್ನು ಗುರುವಿನ ಎದುರಿಗೆ ಮಾಡಬಾರದು. ಹಾಗೆ ಮಾಡಬೇಕಾದರೆ ಗುರುವಿನ ಅಪ್ಪಣೆಯಿಂದ ಮಾಡಬಹುದು.

೨೫. ಗುರುವಿನ ಮನೆಯಲ್ಲಾಗಲಿ, ಅವನ ಎದುರಿಗಾಗಲಿ ತನಗಿಷ್ಟ ಬಂದಂತೆ ಪೀಠದಲ್ಲಿ ಕುಳಿತುಕೊಳ್ಳಬಾರದು. ಗುರುವೇ ಸಾಕ್ಷಾದ್ದೇವನು ಅವನ ಮನೆಯೇ ದೇವಾಲಯವು. ಆದುದರಿಂದ ಶಿಷ್ಯನು ತಕ್ಕಂತೆ ನಡೆದುಕೊಳ್ಳಬೇಕು.

೨೬-೨೮. ಪಾಪಿಗಳ ಸಂಗದಿಂದ ಪುಣ್ಯವಂತನೂ ಪತಿತನಾಗುವನು. ಸಜ್ಜನರ ಸಂಗದಿಂದ ಪಾಪಿಯು ತನ್ನ ಪಾಪವನ್ನು ಕಳೆದುಕೊಳ್ಳುವನು. ಚಿನ್ನ

**ತಥೈವ ಗುರುಸಂಪರ್ಕಾತ್ಪಾಪಂ ತ್ಯಜತಿ ಮಾನವಃ ।**
**ಯಥಾ ವಹ್ನಿಸಮೀಪಸ್ಥೋ ಘೃತಕುಂಭಂ ವಿಲೀಯತೇ ॥ ೨೭ ॥**

**ತಥಾ ಪಾಪಂ ವಿಲೀಯೇತ ಹ್ಯಾಚಾರ್ಯಸ್ಯ ಸಮೀಪತಃ ।**
**ಯಥಾ ಪ್ರಜ್ವಲಿತೋ ವಹ್ನಿಃ ಶುಷ್ಕಮಾರ್ದ್ರಂ ಚ ನಿರ್ದಹೇತ್ ॥ ೨೮ ॥**

**ತಥಾಯಮಪಿ ಸಂತುಷ್ಟೋ ಗುರುಃ ಪಾಪಂ ಕ್ಷಣಾದ್ದಹೇತ್ ।**
**ಮನಸಾ ಕರ್ಮಣಾ ವಾಚಾ ಗುರೋಃ ಕ್ರೋಧಂ ನ ಕಾರಯೇತ್ ॥ ೨೯ ॥**

**ತಸ್ಯ ಕ್ರೋಧೇನ ದಹ್ಯಂತೇ ಹ್ಯಾಯುಃಶ್ರೀಜ್ಞಾನಸತ್ಕ್ರಿಯಾಃ ।**
**ತತ್ಕ್ರೋಧಕಾರಿಣೋ ಯೇ ಸ್ಯುಸ್ತೇಷಾಂ ಯಜ್ಞಾಶ್ಚ ನಿಷ್ಫಲಾಃ ॥ ೩೦ ॥**

---

ವನ್ನು ಬೆಂಕಿಯಲ್ಲಿ ಕಾಯಿಸುವುದರಿಂದ ಅದು ತನ್ನಲ್ಲಿರುವ ಕೊಳೆಯನ್ನು ಕಳೆದುಕೊಳ್ಳುವಂತೆ ಗುರುವಿನ ಸಂಬಂಧದಿಂದ ಮನುಜನು ತನ್ನ ಪಾಪವನ್ನು ನಾಶಮಾಡಿಕೊಳ್ಳುವನು. ಬೆಂಕಿಯ ಸಮೀಪದಲ್ಲಿರುವ ತುಪ್ಪ ತುಂಬಿದ ಕೊಡವನ್ನಿಟ್ಟದ್ದರೆ ಅದರಲ್ಲಿರುವ ತುಪ್ಪವು ಕರಗುವಂತೆ ಗುರುವಿನ ಸಮೀಪದಲ್ಲಿರುವವನ ಪಾಪವು ಕರಗಿಹೋಗುವುದು. ಚೆನ್ನಾಗಿ ಉರಿಯುತ್ತಿರುವ ಬೆಂಕಿಯು ಒಣಗಿದ ಮತ್ತು ಹಸಿಯ ಕಟ್ಟಿಗೆಗಳನ್ನು ಸುಟ್ಟುಬಿಡುವಂತೆ ಗುರುವು ಪ್ರಸನ್ನನಾದಲ್ಲಿ ಅವನು ಶಿಷ್ಯನ ಎಲ್ಲ ಪಾಪಗಳನ್ನೂ ಒಂದು ಕ್ಷಣದೊಳಗೆ ನಾಶಮಾಡಿಬಿಡುವನು.

೨೯-೩೦. ಮನೋವಾಕ್ಕಾಯ ಕರ್ಮಗಳಾದ ತ್ರಿಕರಣದಿಂದಲೂ, ಗುರುವಿಗೆ ಕೋಪವನ್ನುಂಟುಮಾಡಬಾರದು. ಅವನ ಕೋಪದಿಂದ ಶಿಷ್ಯನ ಆಯುಸ್ಸು, ಸಂಪತ್ತು, ಜ್ಞಾನ, ಸದಾಚಾರ, ಇವುಗಳೆಲ್ಲ ನಾಶವಾಗುವುವು. ಗುರುವಿಗೆ ಕೋಪವನ್ನುಂಟುಮಾಡಿದವರ ಯಜ್ಞಗಳೂ, ಯಮನಿಯಮಾದಿ ಯೋಗಾಂಗಗಳೂ, ಫಲವಿಲ್ಲದೆ ಹೋಗುವುವು. ಈ ವಿಷಯದಲ್ಲಿ ಸಂದೇಹವಿಲ್ಲ.

**ಯಮಾಶ್ಚ ನಿಯಮಾಶ್ಚೈವ ನಾತ್ರ ಕಾರ್ಯಾ ವಿಚಾರಣಾ ।**
**ಗುರೋರ್ವಿರುದ್ಧಂ ಯದ್ವಾಕ್ಯಂ ನ ವದೇಜ್ಜಾತುಚಿನ್ನರಃ ॥ ೩೧ ॥**

**ವದೇದ್ಯದಿ ಮಹಾಮೋಹಾದ್ರೌರವಂ ನರಕಂ ವ್ರಜೇತ್ ।**
**ಮನಸಾ ಕರ್ಮಣಾ ವಾಚಾ ಗುರುಮುದ್ದಿಶ್ಯ ಯತ್ನತಃ ॥ ೩೨ ॥**

**ಶ್ರೇಯೋಽರ್ಥೀ ಚೇನ್ನರೋ ಧೀಮಾನ್ನ ಮಿಥ್ಯಾಚಾರಮಾಚರೇತ್ ।**
**ಗುರೋರ್ಹಿತಂ ಪ್ರಿಯಂ ಕುರ್ಯಾದಾದಿಷ್ಟೋ ವಾ ನ ವಾ ಸದಾ ॥ ೩೩ ॥**

**ಅಸಮಕ್ಷಂ ಸಮಕ್ಷಂ ವಾ ತಸ್ಯ ಕಾರ್ಯಂ ಸಮಾಚರೇತ್ ।**
**ಇತ್ಥಮಾಚಾರವಾನ್ಭಕ್ತೋ ನಿತ್ಯಮುದ್ಯುಕ್ತಮಾನಸಃ ॥ ೩೪ ॥**

---

೩೧-೩೨. ಮನುಷ್ಯನು ಎಂತಹ ಸಮಯದಲ್ಲಿಯೂ ಗುರುವಿಗೆ ವಿರೋಧವಾಗಿ ಮಾತನಾಡಬಾರದು. ಅಜ್ಞಾನದಿಂದ ಹಾಗೆ ಮಾತನಾಡಿದರೆ ಅವನಿಗೆ ರೌರವವೆಂಬ ನರಕವು ಪ್ರಾಪ್ತವಾಗುವುದು. ಶ್ರೇಯಸ್ಸನ್ನಪೇಕ್ಷಿಸುವ ಮನುಷ್ಯನು ಮನಸ್ಸಿನಲ್ಲಿ ಒಂದು, ಮಾತಿನಲ್ಲಿ ಒಂದು, ಕಾರ್ಯದಲ್ಲಿ ಒಂದು ಹೀಗೆ ಒಂದಕ್ಕೊಂದಕ್ಕೆ ವಿರುದ್ಧವಾದ ಕಪಟಾಚಾರಗಳನ್ನು ಗುರುವಿನ ವಿಷಯದಲ್ಲಿ ಮಾಡಬಾರದು.

೩೩. ಗುರುವು ಅಪ್ಪಣೆಮಾಡಲಿ ಮಾಡದಿರಲಿ, ಅವನು ಎದುರಿಗೆ ಇರಲಿ ಇಲ್ಲದಿರಲಿ, ಅವನಿಗೆ ಹಿತವೂ, ಇಷ್ಟವೂ ಆದ ಕೆಲಸವನ್ನೇ ಶಿಷ್ಯನಾದವನು ನಿರ್ವಂಚನೆಯಿಂದ ಮಾಡಬೇಕು.

೩೪-೩೫. ಹೀಗೆ ಆಚಾರವಂತನೂ, ಭಕ್ತನೂ, ಪ್ರಯತ್ನಪೂರ್ವಕವಾದ ಮನಸ್ಸುಳ್ಳವನೂ, ಗುರುವಿಗೆ ಹಿತವನ್ನು ಮಾಡುವವನೂ, ಆದ ಶಿಷ್ಯನು ಆ ಗುರುವಿನಿಂದ ಶಿವಧರ್ಮವನ್ನು ಕಲಿಯಲು ಯೋಗ್ಯನಾಗುವನು. ಗುರುವೂ ಸಹಗುಣವಂತನೂ ,ಬುದ್ಧಿವಂತನೂ, ಪರಮಾನಂದಸ್ವರೂಪವನ್ನು ಪ್ರಕಾಶಪಡಿಸ

ಗುರುಪ್ರಿಯಕರಃ ಶಿಷ್ಯಃ ಶೈವಧರ್ಮಾಂಸ್ತತೋಽರ್ಹತಿ ।
ಗುರುಶ್ಚೇದ್ಗುಣವಾನ್ಪ್ರಾಜ್ಞಃ ಪರಮಾನಂದಭಾಸಕಃ ॥ ೩೫ ॥

ತತ್ತ್ವವಿಚ್ಛಿವಸಂಸಕ್ತೋ ಮುಕ್ತಿದೋ ನ ತು ಚಾಪರಃ ।
ಸಂವಿತ್ಸಂಜನನಂ ತತ್ತ್ವಂ ಪರಮಾನಂದಸಂಭವಂ ॥ ೩೬ ॥

ತತ್ತತ್ತ್ವಂ ವಿದಿತಂ ಯೇನ ಸ ಏವಾನಂದದರ್ಶಕಃ ।
ನ ಪುನರ್ನಾಮಮಾತ್ರೇಣ ಸಂವಿದಾ ರಹಿತಸ್ತು ಯಃ ॥ ೩೭ ॥

ಅನ್ಯೋನ್ಯಂ ತಾರಯೇನ್ನೌಕಾ ಕಿಂ ಶಿಲಾ ತಾರಯೇಚ್ಛಿಲಾಂ ।
ಏತಸ್ಯ ನಾಮಮಾತ್ರೇಣ ಮುಕ್ತಿರ್ವೈ ನಾಮಮಾತ್ರಿಕಾ ॥ ೩೮ ॥

ತಜ್ಞವನೂ, ತತ್ತ್ವಜ್ಞನೂ, ಶಿವನಲ್ಲಿಯೇ ಆಸಕ್ತವಾದ ಮನಸ್ಸುಳ್ಳವನೂ ಆದರೆ ಶಿಷ್ಯನಿಗೆ ಮುಕ್ತಿಯನ್ನು ಕೊಡಲು ಶಕ್ತನಾಗುವನು. ಮತ್ತೊಬ್ಬನಿಗೆ ಇಂತಹ ಶಕ್ತಿಯು ಬರಲಾರದು.

೩೬. ಪರಬ್ರಹ್ಮಸ್ವರೂಪವನ್ನು ತಿಳಿಯುವುದರಿಂದ ಉಂಟಾದ ಜ್ಞಾನವು ಪರಮಾನಂದವನ್ನುಂಟುಮಾಡುವುದು. ಅಂತಹ ಪರಬ್ರಹ್ಮಸ್ವರೂಪವನ್ನು ಚೆನ್ನಾಗಿ ಬಲ್ಲ ಗುರುವೇ ಶಿಷ್ಯನಿಗೆ ಆನಂದಸ್ವರೂಪವನ್ನು ತೋರಿಸಬಲ್ಲನು.

೩೭-೩೮. ಹೆಸರಿನಮಟ್ಟಿಗೆ ಗುರುವೆನಿಸಿಕೊಂಡು ಜ್ಞಾನಹೀನನಾದವನು ಶಿಷ್ಯನಿಗೆ ಆನಂದಸ್ವರೂಪವನ್ನು ತೋರಿಸಲಾರನು. ಒಂದು ದೋಣಿಯು ಮತ್ತೊಂದು ದೋಣಿಯನ್ನು ದಡಕ್ಕೆ ಸೇರಿಸಬಲ್ಲುದು. ನೀರಿನಲ್ಲಿ ಮುಳುಗಿರುವ ಒಂದು ಕಲ್ಲು ಮತ್ತೊಂದು ಕಲ್ಲನ್ನು ದಡಕ್ಕೆ ತಂದು ಸೇರಿಸಲು ಸಾಧ್ಯವೇ? ಹೆಸರುಮಟ್ಟಿಗೆ ಗುರುವಾದವನಿಂದ ಮುಕ್ತಿಯೂ, ಹೆಸರು ಮಾತ್ರಕ್ಕೆ ಉಂಟಾಗುವುದು. ಬ್ರಹ್ಮಾನಂದವು ಅನುಭವಕ್ಕೆ ಬರುವುದಿಲ್ಲ.

ಯೈಃ ಪುನರ್ವಿದಿತಂ ತತ್ತ್ವಂ ತೇ ಮುಕ್ತಾ ಮೋಚಯಂತ್ಯಪಿ ।
ತತ್ತ್ವಹೀನೇ ಕುತೋ ಬೋಧಃ ಕುತೋ ಹ್ಯಾತ್ಮಪರಿಗ್ರಹಃ ॥ ೩೯ ॥

ಪರಿಗ್ರಹವಿನಿರ್ಮುಕ್ತಃ ಪಶುರಿತ್ಯಭಿಧೀಯತೇ ।
ಪಶುಭಿಃ ಪ್ರೇರಿತಶ್ಚಾಪಿ ಪಶುತ್ವಂ ನಾತಿ ವರ್ತತೇ ॥ ೪೦ ॥

ತಸ್ಮಾತ್ತತ್ತ್ವವಿದೇವೇಹ ಮುಕ್ತೋ ಮೋಚಕ ಇಷ್ಯತೇ ।
ಸರ್ವಲಕ್ಷಣಸಂಯುಕ್ತಃ ಸರ್ವಶಾಸ್ತ್ರವಿದಪ್ಯಯಂ ॥ ೪೧ ॥

ಸರ್ವೋಪಾಯವಿಧಿಜ್ಞೋಽಪಿ ತತ್ತ್ವಹೀನಸ್ತು ನಿಷ್ಫಲಃ ।
ಯಸ್ಯಾನುಭವಪರ್ಯಂತಾ ಬುದ್ಧಿಸ್ತತ್ತ್ವೇ ಪ್ರವರ್ತತೇ ॥ ೪೨ ॥

---

೩೯-೪೦. ಯಾರು ತತ್ತ್ವವನ್ನು ಬಲ್ಲವರೋ ಅವರು ತಮ್ಮ ದುಃಖವನ್ನೂ ಕಳೆದುಕೊಂಡು ಮತ್ತೊಬ್ಬರ ದುಃಖವನ್ನೂ ಬಿಡಿಸಬಲ್ಲರು. ತತ್ತ್ವಜ್ಞಾನವಿಲ್ಲದವರಿಗೆ ತಿಳುವಳಿಕೆಯಿಲ್ಲ. ಆತ್ಮಸ್ವರೂಪಪ್ರಾಪ್ತಿಯೂ ಇಲ್ಲ. ಆತ್ಮಸ್ವರೂಪಪ್ರಾಪ್ತಿಯಿಲ್ಲದವನೇ ಪಶುವೆನಿಸುವನು. ಪಶುಗಳು ಅವನನ್ನು ಎಷ್ಟು ಪ್ರೇರಿಸಿದರೂ, ಆ ಪಶುತ್ತ್ವವು ಹೋಗುವುದಿಲ್ಲ.

೪೧. ಆದುದರಿಂದ ಸಮಸ್ತ ಲಕ್ಷಣಗಳಿಂದಲೂ ಕೂಡಿ, ಸಮಸ್ತ ಶಾಸ್ತ್ರಗಳನ್ನೂ ತಿಳಿದು, ತತ್ತ್ವವನ್ನು ತಿಳಿದವನೇ ತಾನೂ ಮುಕ್ತನಾಗಿ ಇತರರಿಗೂ ಮೋಕ್ಷವನ್ನು ಕೊಡಬಲ್ಲನು. ಎಷ್ಟೇ ಯುಕ್ತಿಗಳನ್ನು ತಿಳಿದಿದ್ದರೂ, ತತ್ತ್ವಜ್ಞಾನಲ್ಲದಿದ್ದರೆ ಅವನ ಪ್ರಯತ್ನವೆಲ್ಲ ನಿಷ್ಫಲವಾಗುವುದು ಅಥವಾ ಅವನಿಂದ ಲೋಕಕ್ಕೆ ಯಾವ ಪ್ರಯೋಜನವೂ ಇಲ್ಲದೇ ಹೋಗುವುದು.

೪೨-೪೩. ಯಾವನ ಬುದ್ಧಿಯು ಅನುಭವಪರ್ಯಂತವಾಗಿ ತತ್ತ್ವವಿಚಾರದಲ್ಲಿಯೇ ಪ್ರವರ್ತಿಸುತ್ತಿರುವುದೋ ಅಂಥವನ ದರ್ಶನ ಮುಂತಾದುವುಗಳಿಂದ ಪರಮಾನಂದವುಂಟಾಗುವುದು. ಆದುದರಿಂದ ಯಾವ ಮನುಷ್ಯನ

ತಸ್ಯಾವಲೋಕನಾದ್ಯೈಶ್ಚ ಪರಾನಂದೋಽಭಿಜಾಯತೇ ।
ತಸ್ಮಾದ್ಯಸ್ಯೈವ ಸಂಪರ್ಕಾತ್ಪ್ರಬೋಧಾನಂದಸಂಭವಃ ॥ ೪೩ ॥
ಗುರುಂ ತಮೇವ ವೃಣುಯಾನ್ನಾಪರಂ ಮತಿಮಾನ್ನರಃ ।
ಸ ಶಿಷ್ಯೈರ್ವಿನಯಾಚಾರಚತುರೈರುಚಿತೋ ಗುರುಃ ॥ ೪೪ ॥
ಯಾವದ್ವಿಜ್ಞಾಯತೇ ತಾವತ್ಸೇವನೀಯೋ ಮುಮುಕ್ಷುಭಿಃ ।
ಜ್ಞಾತೇ ತಸ್ಮಿನ್ಸ್ಥಿರಾ ಭಕ್ತಿರ್ಯಾವತ್ತತ್ತ್ವಂ ಸಮಾಶ್ರಯೇತ್ ॥ ೪೫ ॥
ನ ತು ತತ್ತ್ವಂ ತ್ಯಜೇಜ್ಜಾತು ನೋಪೇಕ್ಷೇತ ಕಥಂಚನ ।
ಯತ್ರಾನಂದಃ ಪ್ರಬೋಧೋ ವಾ ನಾಲ್ಪಮಪ್ಯುಪಲಭ್ಯತೇ ॥ ೪೬ ॥
ವತ್ಸರಾದಪಿ ಶಿಷ್ಯೇಣ ಸೋಽನ್ಯಂ ಗುರುಮುಪಾಶ್ರಯೇತ್ ।
ಗುರುಮನ್ಯಂ ಪ್ರಪನ್ನೇಽಪಿ ನಾವಮನ್ಯೇತ ಪೌರ್ವಿಕಂ ॥ ೪೭ ॥

---

ಸಂಪರ್ಕದಿಂದ ಎಂದರೆ ಸಹವಾಸದಿಂದ ತಿಳಿವಳಿಕೆಯೂ, ಆನಂದವೂ ಉಂಟಾಗುವುದೋ ಅಂಥವನನ್ನೇ ಗುರುವನ್ನಾಗಿ ಮಾಡಿಕೊಳ್ಳಬೇಕು. ಮತ್ತೊಬ್ಬನಲ್ಲ.

೪೪-೪೫. ವಿನಯವಂತರೂ, ಸದಾಚಾರನಿರತರೂ, ಮುಮುಕ್ಷುಗಳೂ, ಆದ ಶಿಷ್ಯರು ಗುರುವಿನ ಯೋಗ್ಯತೆಯನ್ನು ತಿಳಿಯುವವರಿಗೂ ಅವನ ಸೇವೆಯನ್ನು ಮಾಡುತ್ತಿರಬೇಕು. ಅವನ ಯೋಗ್ಯತೆಯನ್ನು ತಿಳಿದಮೇಲೆ ತತ್ತ್ವಜ್ಞಾನವಾಗುವವರೆಗೂ, ಅವನಲ್ಲಿ ಸ್ಥಿರವಾದ ಭಕ್ತಿಯನ್ನಿಟ್ಟಿರಬೇಕು. ಯಾವಾಗಲೂ ಗುರುವನ್ನು ಉಪೇಕ್ಷೆ ಮಾಡಬಾರದು. ತತ್ತ್ವವಿಚಾರವನ್ನೂ ಬಿಡಬಾರದು.

೪೬-೪೭. ಒಂದು ವರ್ಷದವರೆಗೂ ಸೇವಿಸಿದರೂ, ಯಾವ ಗುರುವಿನಲ್ಲಿ ಆನಂದವಾಗಲಿ ಜ್ಞಾನವಾಗಲಿ ಸ್ವಲ್ಪವಾದರೂ ಸಿಕ್ಕದಿರುವುದೋ ಅಂತಹ ಸಂದರ್ಭದಲ್ಲಿ ಆ ಗುರುವನ್ನು ಬಿಟ್ಟು ಬೇರೆ ಗುರುವನ್ನು ಆಶ್ರಯಿಸಬೇಕು. ಬೇರೆ ಗುರುವನ್ನು ಆಶ್ರಯಿಸಿದರೂ ಹಿಂದಿನ ಗುರುವಿಗೆ ಅವಮಾನಮಾಡಬಾರದು. ಹೀಗೆಯೇ ಗುರುವಿನ ಸಹೋದರರು, ಮಕ್ಕಳು, ಬೋಧಕರು, ಪ್ರೇರಕರು ಇವರುಗಳನ್ನೂ ಅಪಮಾನಮಾಡಬಾರದು.

ಗುರೋರ್ಭ್ರಾತೄಂಸ್ತಥಾ ಪುತ್ರಾನ್ಬೋಧಕಾನ್ಪ್ರೇರಕಾನಪಿ ।
ತತ್ರಾದಾವುಪಸಂಗಮ್ಯ ಬ್ರಾಹ್ಮಣಂ ವೇದಪಾರಗಂ ।
ಗುರುಮಾರಾಧಯೇತ್ಪ್ರಾಜ್ಞಂ ಶುಭಗಂ ಪ್ರಿಯದರ್ಶನಂ ॥ ೪೮ ॥

ಸರ್ವಾಭಯಪ್ರದಾತಾರಂ ಕರುಣಾಕ್ರಾಂತಮಾನಸಂ ।
ತೋಷಯೇತ್ತಂ ಪ್ರಯತ್ನೇನ ಮನಸಾ ಕರ್ಮಣಾ ಗಿರಾ ॥ ೪೯ ॥

ತಾವದಾರಾಧಯೇಚ್ಛಿಷ್ಯಃ ಪ್ರಸನ್ನೋಽಸೌ ಭವೇದ್ಯಥಾ ।
ತಸ್ಮಿನ್ಪ್ರಸನ್ನೇ ಶಿಷ್ಯಸ್ಯ ಸದ್ಯಃ ಪಾಪಕ್ಷಯೋ ಭವೇತ್ ॥ ೫೦ ॥

ತಸ್ಮಾದ್ಧನಾನಿ ರತ್ನಾನಿ ಕ್ಷೇತ್ರಾಣಿ ಚ ಗೃಹಾಣಿ ಚ ।
ಭೂಷಣಾನಿ ಚ ವಾಸಾಂಸಿ ಯಾನಶಯ್ಯಾಸನಾನಿ ಚ ॥ ೫೧ ॥

ಏತಾನಿ ಗುರವೇ ದದ್ಯಾದ್ಭಕ್ತ್ಯಾ ವಿತ್ತಾನುಸಾರತಃ ।
ವಿತ್ತಶಾಠ್ಯಂ ನ ಕುರ್ವೀತ ಯದೀಚ್ಛೇತ್ಪರಮಾಂ ಗತಿಂ ॥ ೫೨ ॥

---

೪೮-೪೯. ಈ ಸಂದರ್ಭಗಳಲ್ಲಿ ಮೊದಲು ವೇದಗಳನ್ನು ಚೆನ್ನಾಗಿ ತಿಳಿದವನೂ, ಬ್ರಹ್ಮಜ್ಞಾನಿಯೂ, ನೋಡುವುದಕ್ಕೆ ಸೌಮ್ಯನಾದವನೂ, ಎಲ್ಲ ವಿಷಯಗಳಲ್ಲಿಯೂ ಅಭಯವನ್ನು ಕೊಡತಕ್ಕವನೂ, ದಯೆಯಿಂದ ಕೂಡಿದ ಮನಸ್ಸುಳ್ಳವನೂ ಆದ ಗುರುವಿನ ಸಮೀಪಕ್ಕೆ ಹೋಗಿ ಮನೋವಾಕ್ಕಾಯ ಕರ್ಮಗಳಿಂದ ಪ್ರಯತ್ನಪೂರ್ವಕವಾಗಿ ಅವನನ್ನು ಸಂತೋಷಪಡಿಸಬೇಕು.

೫೦. ಶಿಷ್ಯನಾದವನು ಗುರುವು ಪ್ರಸನ್ನನಾಗುವವರೆಗೂ, ಅವನನ್ನು ಪೂಜಿಸುತ್ತಿರಬೇಕು. ಆ ಗುರುವು ಪ್ರಸನ್ನನಾದರೆ ಶಿಷ್ಯನ ಪಾಪಗಳೆಲ್ಲವೂ ಆ ಕ್ಷಣದಲ್ಲಿಯೇ ನಾಶವಾಗುವುವು.

೫೧-೫೨. ಆದಕಾರಣ ಗುರುವಿಗೆ ಧನ, ರತ್ನಗಳು, ಭೂಮಿ, ಮನೆ, ಆಭರಣಗಳು, ವಸ್ತ್ರಗಳು, ಸಂಚಾರಸಾಧನಗಳು, ಹಾಸಿಗೆ ಮುಂತಾದುವುಗಳನ್ನು ಧನಲೋಭಮಾಡದೆ ತನ್ನ ಯೋಗ್ಯತೆಗೆ ಅನುಸಾರವಾಗಿ ಕೊಟ್ಟು ಭಕ್ತಿಯಿಂದ ಸೇವಿಸಬೇಕು. ಹೀಗೆ ಮಾಡಿದರೆ ಪರಮಗತಿಯುಂಟಾಗುವುದು.

ಸ ಏವ ಜನಕೋ ಮಾತಾ ಭರ್ತಾ ಬಂಧುರ್ಧನಂ ಸುಖಂ ।
ಸಖಾ ಮಿತ್ರಂ ಚ ಯತ್ತಸ್ಮಾತ್ಸರ್ವಂ ತಸ್ಮೈ ನಿವೇದಯೇತ್ ॥ ೫೩ ॥

ನಿವೇದ್ಯ ಪಶ್ಚಾತ್ಸ್ವಾತ್ಮಾನಂ ಸಾನ್ವಯಂ ಸಪರಿಗ್ರಹಂ ।
ಸಮರ್ಪ್ಯ ಸೋದಕಂ ತಸ್ಮೈ ನಿತ್ಯಂ ತದ್ವಶಗೋ ಭವೇತ್ ॥ ೫೪ ॥

ಯದಾ ಶಿವಾಯ ಸ್ವಾತ್ಮಾನಂ ದತ್ತವಾನ್ದೇಶಿಕಾತ್ಮನೇ ।
ತದಾ ಶೈವೋ ಭವೇದ್ದೇಹೀ ನ ತತೋಽಸ್ತಿ ಪುನರ್ಭವಃ ॥ ೫೫ ॥

ಗುರುಶ್ಚ ಸ್ವಾಶ್ರಿತಂ ಶಿಷ್ಯಂ ವರ್ಷಮೇಕಂ ಪರೀಕ್ಷಯೇತ್ ।
ಬ್ರಾಹ್ಮಣಂ ಕ್ಷತ್ರಿಯಂ ವೈಶ್ಯಂ ದ್ವಿವರ್ಷಂ ಚ ತ್ರಿವರ್ಷಕಂ ॥ ೫೬ ॥

ಪ್ರಾಣದ್ರವ್ಯಪ್ರದಾನಾದ್ಯೈರಾದೇಶೈಶ್ಚ ಸಮಾಸಮೈಃ ।
ಉತ್ತಮಾಂಶ್ಚಾಧಮೇ ಕೃತ್ವಾ ನೀಚಾನುತ್ತಮಕರ್ಮಣಿ ॥ ೫೭ ॥

---

೫೩-೫೪. ತಂದೆ, ತಾಯಿ, ರಕ್ಷಕ, ನಂಟ, ಹಣ, ಸುಖ, ಸ್ನೇಹಿತ ಎಲ್ಲವೂ ಆ ಗುರುವೇ ಆದುದರಿಂದ ಎಲ್ಲವನ್ನೂ ಅವನಿಗೆ ಸಮರ್ಪಿಸಿ ತನ್ನನ್ನೂ ತನ್ನ ವಂಶದವರನ್ನೂ, ಕುಟುಂಬದವರನ್ನೂ, ಉದಕದಾನಪೂರ್ವಕವಾಗಿ ಸಮರ್ಪಿಸಿ ಯಾವಾಗಲೂ ಅವನ ಅಧೀನವಾಗಿರಬೇಕು.

೫೫. ಶಿಷ್ಯನು ಗುರುಸ್ವರೂಪನಾದ ಶಿವನಿಗೆ ತನ್ನ ಆತ್ಮಸಮರ್ಪಣೆಯನ್ನು ಮಾಡಿದಮೇಲೆ ಆ ಜೀವನು ಶೈವನಾಗುವನು. ಅವನಿಗೆ ಪುನರ್ಜನ್ಮವು ಬರುವುದಿಲ್ಲ.

೫೬. ಗುರುವೂ ಕೂಡ ತನ್ನನ್ನು ಆಶ್ರಯಿಸಿದ ಶಿಷ್ಯರಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರನ್ನು ಕ್ರಮವಾಗಿ ಒಂದು, ಎರಡು, ಮೂರು ವರ್ಷಗಳವರೆಗೆ ಪರೀಕ್ಷಿಸಬೇಕು. ಕಷ್ಟಕರವಾದ ಕೆಲಸಗಳನ್ನು ಹೇಳಿದಾಗ ಶಿಷ್ಯರು ಅದನ್ನು ದ್ರವ್ಯವ್ಯಯದಿಂದಲೂ, ಸಂದರ್ಭಬಿದ್ದರೆ ಪ್ರಾಣವನ್ನು ತೆತ್ತಾದರೂ ನಿರ್ವಹಿಸಬಲ್ಲರೆಂಬುದನ್ನು ಚೆನ್ನಾಗಿ ಪರೀಕ್ಷಿಸಿ ತಿಳಿದುಕೊಳ್ಳಬೇಕು.

೫೭-೫೮. ಉತ್ತಮ ಶಿಷ್ಯರನ್ನು ನೀಚ ಕೆಲಸದಲ್ಲಿಯೂ, ನೀಚರನ್ನು ಉತ್ತಮಕೆಲಸದಲ್ಲಿಯೂ, ನಿಯೋಗಿಸಿ ಪರೀಕ್ಷಿಸಬೇಕು. ಗುರುವು ಶಿಷ್ಯರನ್ನು

ಆಕ್ರುಷ್ಟಾಸ್ತಾಡಿತಾ ವಾಪಿ ಯೇ ವಿಷಾದಂ ನ ಯಾಂತ್ಯಪಿ ।
ತೇ ಯೋಗ್ಯಾಃ ಸಂಯುತಾಃ ಶುದ್ಧಾಃ ಶಿವಸಂಸ್ಕಾರಕರ್ಮಣಿ ॥ ೫೮ ॥

ಅಹಿಂಸಕಾ ದಯಾವಂತೋ ನಿತ್ಯಮುದ್ಯುಕ್ತಚೇತಸಃ ।
ಅಮಾನಿನೋ ಬುದ್ಧಿಮಂತಸ್ತ್ಯಕ್ತಸ್ಪರ್ಧಾಃ ಪ್ರಿಯಂವದಾಃ ॥ ೫೯ ॥

ಋಜವೋ ಮೃದವಃ ಸ್ವಚ್ಛಾ ವಿನೀತಾಃ ಸ್ಥಿರಚೇತಸಃ ।
ಶೌಚಾಚಾರಸಮಾಯುಕ್ತಾಃ ಶಿವಭಕ್ತಾ ದ್ವಿಜಾತಯಃ ॥ ೬೦ ॥

ಏವಂ ವೃತ್ತಸಮೋಪೇತಾ ವಾಙ್ಮನಃ ಕಾಯಕರ್ಮಭಿಃ ।
ಶೋಧ್ಯಾ ಬೋಧ್ಯಾ ಯಥಾನ್ಯಾಯಮಿತಿ ಶಾಸ್ತ್ರೇಷು ನಿಶ್ಚಯಃ ॥ ೬೧ ॥

---

ಎಳೆದರೂ, ಹೊಡೆದರೂ, ಅವರು ವಿಷಾದಪಡದಿದ್ದರೆ ಅಂಥವರೇ ಶಿವಸಂಸ್ಕಾರ ರೂಪವಾದ ಕರ್ಮದಲ್ಲಿ ಯೋಗ್ಯರೂ, ಪರಿಶುದ್ಧರೂ, ಜಿತೇಂದ್ರಿಯರೂ ಆದ ಶಿಷ್ಯರಾಗುವರು.

೫೯-೬೦. ಅಹಿಂಸಾಗುಣವುಳ್ಳವರೂ, ದಯಾಶಾಲಿಗಳೂ, ಉದ್ಯೋಗ ದಲ್ಲಿ ಆಸಕ್ತವಾದ ಮನಸ್ಸುಳ್ಳವರೂ, ಸ್ವಾಭಿಮಾನವಿಲ್ಲದವರೂ, ಬುದ್ಧಿವಂತರೂ ಮತ್ತೊಬ್ಬರಮೇಲೆ ಸ್ಪರ್ಧೆಮಾಡದವರೂ, ಹಿತವಾದ ಮಾತನಾಡುವವರೂ, ಸರ ಳವೂ ಮೃದುವೂ ಆದ ಸ್ವಭಾವದವರೂ, ಶುದ್ಧರೂ ನಮ್ರತೆಯುಳ್ಳವರೂ, ಸ್ಥಿರ ವಾದ ಮನಸ್ಸಿನವರೂ, ಪರಿಶುದ್ಧವಾದ ಆಚಾರದಿಂದ ಕೂಡಿದವರೂ ಆದ ದ್ವಿಜರೇ ಶಿವಭಕ್ತರೆನಿಸುವರು.

೬೧. ಮನೋವಾಕ್ಕಾಯರೂಪವಾದ ತ್ರಿಕರಣಗಳಲ್ಲಿಯೂ ಈರೀತಿ ಯಾದ ನಡತೆಯನ್ನು ಹೊಂದಿದವರೇ ಶುದ್ಧಿಗೆ ಯೋಗ್ಯರು. ಅವರಿಗೇ ಜ್ಞಾನ ಬೋಧೆಯನ್ನು ಮಾಡಬೇಕು ಎಂದು ಶಾಸ್ತ್ರಗಳಲ್ಲಿ ನಿಶ್ಚಯಿಸಿರುವುದು.

ನಾಧಿಕಾರಃ ಸ್ವತೋ ನಾರ್ಯಾಃ ಶಿವಸಂಸ್ಕಾರಕರ್ಮಣಿ ।
ನಿಯೋಗಾದ್ಭರ್ತುರಸ್ತ್ಯೇವ ಭಕ್ತಿಯುಕ್ತಾ ಯದೀಶ್ವರೇ ॥ ೬೨ ॥

ತಥೈವ ಭರ್ತೃಹೀನಾಯಾ ಪುತ್ರಾದೇರಭ್ಯನುಜ್ಞಯಾ ।
ಅಧಿಕಾರೋ ಭವತ್ಯೇವ ಕನ್ಯಾಯಾಃ ಪಿತುರಾಜ್ಞಯಾ ॥ ೬೩ ॥

ಶೂದ್ರಾಣಾಂ ಮರ್ತ್ಯಜಾತೀನಾಂ ಪತಿತಾನಾಂ ವಿಶೇಷತಃ ।
ತಥಾ ಸಂಕರಜಾತೀನಾಂ ನಾಧ್ವಶುದ್ಧಿರ್ವಿಧೀಯತೇ ।
ತೇಽಪ್ಯಕೃತ್ರಿಮಭಾವಾಶ್ಚೇಚ್ಛಿವೇ ಪರಮಕಾರಣೆ ॥ ೬೪ ॥

ಪಾದೋದಕಪ್ರದಾನಾದ್ಯೈಃ ಕುರ್ಯುಃ ಪಾಪವಿಶೋಧನಂ ।
ಅತ್ರಾನುಲೋಮಜಾತಾ ಯೇ ಯುಕ್ತಾ ಏವ ದ್ವಿಜಾತಿಷು ॥ ೬೫ ॥

ತೇಷಾಮಧ್ವವಿಶುದ್ಧ್ಯಾದಿ ಕುರ್ಯಾನ್ಮಾತೃಕುಲೋಚಿತಂ ।
ಯಾ ತು ಕನ್ಯಾ ಸ್ವಪಿತ್ರಾದ್ಯೈಃ ಶಿವಧರ್ಮೇ ನಿಯೋಜಿತಾ ॥ ೬೬ ॥

೬೨-೬೩. ಸ್ತ್ರೀಯರಿಗೆ ಶಿವಸಂಸ್ಕಾರರೂಪವಾದ ಕರ್ಮದಲ್ಲಿ ಸ್ವತಃ ಅಧಿಕಾರವಿರುವುದಿಲ್ಲ. ಸ್ತ್ರೀಯರು ಈಶ್ವರನಲ್ಲಿ ಭಕ್ತಿಯಿಂದ ಕೂಡಿದವರಾಗಿದ್ದರೆ ಅವರಿಗೆ ಗಂಡನ ಅಪ್ಪಣೆಯಿಂದ ಅಧಿಕಾರವು ಬರುವುವು. ಗಂಡನಿಲ್ಲದವಳಿಗೆ ಪುತ್ರಾದಿಗಳ ಅಪ್ಪಣೆಯಿಂದಲೂ, ಕನ್ಯೆಗೆ ತಂದೆಯ ಅಪ್ಪಣೆಯಿಂದಲೂ ಅಧಿಕಾರವು ಪ್ರಾಪ್ತವಾಗುವುದು.

೬೪. ಮನುಷ್ಯಜಾತಿಯಲ್ಲಿ ಶೂದ್ರರಿಗೂ, ಪತಿತರಿಗೂ, ಸಂಕರಜಾತಿಯವರಿಗೂ ಷಡಧ್ವಶುದ್ಧಿರೂಪವಾದ ಕರ್ಮಗಳಿಲ್ಲ. ಅವರು ಶಿವನಲ್ಲಿ ಸರಳವಾದ ಭಕ್ತಿಯುಳ್ಳವರಾಗಿದ್ದರೆ, ಶಿವಭಕ್ತರಿಗೆ ಕಾಲಿಗೆ ನೀರುಕೊಡುವುದು ಮುಂತಾದ ಉಪಚಾರಗಳಿಂದ ತಮ್ಮ ಪಾಪಗಳನ್ನು ಕಳದುಕೊಳ್ಳಬಹುದು.

೬೫-೬೬. ದ್ವಿಜರಲ್ಲಿ ಉತ್ತಮವರ್ಣದ ಸ್ತ್ರೀಯಲ್ಲಿ, ಅಧಮವರ್ಣದ ಪುರುಷನಿಂದ ಹುಟ್ಟಿದ ಅನುಲೋಮಜಾತಿಯವರಿಗೆ ಷಡಧ್ವಶುದ್ಧಿ ಮುಂತಾದ ಕರ್ಮಗಳನ್ನು ತಾಯಿಯ ವರ್ಣಕ್ಕನುಸಾರವಾಗಿ ಮಾಡಬೇಕು. ಕನ್ಯೆಯು

ಸಾ ಭಕ್ತಾಯ ಪ್ರದಾತವ್ಯಾ ನಾಪರಾಯ ವಿರೋಧಿನೇ ।
ದತ್ತಾ ಚೇತ್ಪ್ರತಿಕೂಲಾಯ ಪ್ರಮಾದಾದ್ಬೋಧಯೇತ್ಪತಿಂ ॥ ೬೭ ॥

ಅಶಕ್ತಾ ತಂ ಪರಿತ್ಯಜ್ಯ ಮನಸಾ ಧರ್ಮಮಾಚರೇತ್ ।
ಯಥಾ ಮುನಿವರಂ ತ್ಯಕ್ತ್ವಾ ಪತಿಮತ್ರಿಂ ಪತಿವ್ರತಾ ॥ ೬೮ ॥

ಕೃತಕೃತ್ಯಾಭವತ್ಪೂರ್ವಂ ತಪಸಾರಾಧ್ಯ ಶಂಕರಂ ।
ಯಥಾ ನಾರಾಯಣಂ ದೇವಂ ತಪಸಾರಾಧ್ಯ ಪಾಂಡವಾಃ ॥ ೬೯ ॥

ಪತೀಂಲ್ಲಬ್ಧವತೀ ಧರ್ಮೇ ಗುರುಭಿರ್ನ ನಿಯೋಜಿತಾ ।
ಅಸ್ವಾತಂತ್ರ್ಯಕೃತೋ ದೋಷೋ ನೇಹಾಸ್ತಿ ಪರಮಾರ್ಥತಃ ॥ ೭೦ ॥

ಶಿವಧರ್ಮೇ ನಿಯುಕ್ತಾಯಾಃ ಶಿವಶಾಸನಗೌರವಾತ್ ।
ಬಹುನಾತ್ರ ಕಿಮುಕ್ತೇನ ಯೋಽಪಿ ಕೋಽಪಿ ಶಿವಾಶ್ರಯಃ ॥ ೭೧ ॥

---

ತಂದೆಯ ಅಪ್ಪಣೆಯಿಂದ ಶಿವಧರ್ಮಾಸಕ್ತಳಾದರೆ ಆ ಕನ್ಯೆಯನ್ನು ಶಿವಭಕ್ತನಿಗೇ ಕೊಟ್ಟು ಮದುವೆಮಾಡಬೇಕು. ಹಾಗೆ ಮಾಡದೆ ಪ್ರಮಾದದಿಂದ ಭಕ್ತನಲ್ಲ ದವನಿಗೆ ಕೊಟ್ಟರೆ ಪತಿಯಾದವನಿಗೆ ಅವಳು ಜ್ಞಾನಬೋಧೆಯನ್ನು ಮಾಡಬೇಕು.

೬೮. ಆ ಪತಿಗೆ ಜ್ಞಾನಬೋಧೆಮಾಡಲು ಶಕ್ತಳಲ್ಲದೇ ಹೋದರೆ ಅವ ನನ್ನು ಬಿಟ್ಟು ಮನಸ್ಸಿನಲ್ಲಿಯೇ ಶಿವಧರ್ಮವನ್ನಾಚರಿಸಬೇಕು. ಹಿಂದೆ ಪತಿ ವ್ರತೆಯಾದ ಅನಸೂಯೆಯು ಮುನಿಶ್ರೇಷ್ಠನಾದ ಅತ್ರಿಯನ್ನು ಬಿಟ್ಟು ತಪಸ್ಸಿ ನಿಂದ ಶಿವನನ್ನು ತೃಪ್ತಿಪಡಿಸಿ ಕೃತಾರ್ಥಳಾದಳು.

೬೯-೭೦. ಗುರೂಪದೇಶವಿಲ್ಲದಿದ್ದರೂ, ದ್ರೌಪದಿಯು ತಪಸ್ಸಿನಿಂದ ನಾರಾಯಣನನ್ನು ಪೂಜಿಸಿ ಪಾಂಡವರನ್ನು ಪತಿಯಾಗಿ ಪಡೆದಳು. ಶಿವಧರ್ಮ ದಲ್ಲಿ ಆಸಕ್ತಳಾದ ದ್ರೌಪದಿಗೆ ಶಿವನ ಅಪ್ಪಣೆಯ ಗೌರವದಿಂದ ಶಿವಧರ್ಮದಲ್ಲಿ ಸ್ವಾತಂತ್ರ್ಯವಿಲ್ಲವೆಂಬ ದೋಷವು ಸಂಭವಿಸಲಿಲ್ಲ.

೭೧. ಹೆಚ್ಚು ಹೇಳುವುದೇನು? ಶಿವನಲ್ಲಿ ಭಕ್ತಿಯಿರುವ ಯಾವ ಮನುಷ್ಯನಾದರೂ ಗುರುವಿಗೆ ಅಧೀನನಾಗಿ ಮಂತ್ರಸಂಸ್ಕಾರರೂಪವಾದ ದೀಕ್ಷೆ

ಸಂಸ್ಕಾರ್ಯೋ ಗುರ್ವಧೀನಶ್ಚೇತ್ಸಂಸ್ಕ್ರಿಯಾ ನ ಪ್ರಭಿದ್ಯತೇ ।
ಗುರೋರಾಲೋಕನಾದೇವ ಸ್ಪರ್ಶಾತ್ಸಂಭಾಷಣಾದಪಿ ॥ ೭೨ ॥

ಯಸ್ಯ ಸಂಜಾಯತೇ ಪ್ರಜ್ಞಾ ತಸ್ಯ ನಾಸ್ತಿ ಪರಾಜಯಃ ।
ಮನಸಾ ಯಸ್ತು ಸಂಸ್ಕಾರಃ ಕ್ರಿಯತೇ ಯೋಗವರ್ತ್ಮನಾ ॥ ೭೩ ॥

ಸ ನೇಹ ಕಥಿತೋ ಗುಹ್ಯೋ ಗುರುವಕ್ತ್ರೈಕಗೋಚರಃ ।
ಕ್ರಿಯಾವಾನ್ಯಸ್ತು ಸಂಸ್ಕಾರಃ ಕುಂಡಮಂಡಲಪೂರ್ವಕಃ ।
ಸ ವಕ್ಷ್ಯತೇ ಸಮಾಸೇನ ತಸ್ಯ ಶಕ್ಯೋ ನ ವಿಸ್ತರಃ ॥ ೭೪ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-
ಮುತ್ತರಭಾಗೇ ದೀಕ್ಷಾವಿಧಾನೇ ಗುರುಮಾಹಾತ್ಮ್ಯವರ್ಣನಂ ನಾಮ
ಪಂಚದಶೋಽಧ್ಯಾಯಃ

---

ಯನ್ನು ವಹಿಸುವುದಾದರೆ ಸಂಸ್ಕಾರರೂಪ ಕರ್ಮವು ಗುರುಪರಂಪರೆಯಾಗಿ ಬಂದೇತೀರುವುದು. ಜೀರೆಯಾಗುವುದಿಲ್ಲ.

೭೨. ಗುರುವು ನೋಡುವುದರಿಂದಲೂ, ಮುಟ್ಟುವುದರಿಂದಲೂ, ಮಾತನಾಡುವುದರಿಂದಲೂ, ಯಾವ ಶಿಷ್ಯನಿಗೆ ಜ್ಞಾನೋತ್ಪತ್ತಿಯಾಗುವುದೋ ಅವನಿಗೆ ಅಪಜಯವಿಲ್ಲ.

೭೩. ಯೋಗಮಾರ್ಗದಿಂದ ಮನಸ್ಸಿನಿಂದಲೇ ಶಿಷ್ಯನಿಗೆ ಶಿವಧರ್ಮ ಸಂಸ್ಕಾರವನ್ನು ಮಾಡುವ ಕರ್ಮವು ಗೋಪ್ಯವಾದುದರಿಂದ ಅದನ್ನು ಇಲ್ಲಿ ಹೇಳಲಿಲ್ಲ. ಅದು ಗುರುಮುಖದಿಂದಲೇ ತಿಳಿಯಬೇಕಾದುದಾಗಿರುವುದು.

೭೪. ಅಗ್ನಿಕುಂಡವನ್ನೂ, ಮಂಡಲಗಳನ್ನೂ ಮಾಡಿ ಕ್ರಿಯಾರೂಪವಾದ ಮಂತ್ರದೀಕ್ಷೆಯನ್ನು ಕೊಡುವ ಕ್ರಮವನ್ನು ಸಂಗ್ರಹವಾಗಿ ಮುಂದೆ ಹೇಳುವೆನು. ವಿಸ್ತಾರವಾಗಿ ಹೇಳಲು ಸಾಧ್ಯವಾಗುವುದಿಲ್ಲ.

ಇಲ್ಲಿಗೆ ಶಿವಪುರಾಣದ ಏಳನೆಯ ವಾಯವೀಯಸಂಹಿತೆಯ ಉತ್ತರಭಾಗದಲ್ಲಿ
ದೀಕ್ಷಾವಿಧಾನ, ಗುರುಮಹಾತ್ಮ್ಯಕಥನವೆಂಬ ಹದಿನೈದನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮಹಾ ಪುರಾಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ಷೋಡಶೋಽಧ್ಯಾಯಃ

---

॥ ಉಪಮನ್ಯುರುವಾಚ ॥

ಪುಣ್ಯೇಽಹನಿ ಶುಚೌ ದೇಶೇ ಬಹುದೋಷವಿವರ್ಜಿತೇ ।
ದೇಶಿಕಃ ಪ್ರಥಮಂ ಕುರ್ಯಾತ್ಸಂಸ್ಕಾರಂ ಸಮಯಾಹ್ವಯಂ ॥ ೧ ॥

ಪರೀಕ್ಷ್ಯ ಭೂಮಿಂ ವಿಧಿವದ್ಗಂಧವರ್ಣರಸಾದಿಭಿಃ ।
ಶಿಲ್ಪಶಾಸ್ತ್ರೋಕ್ತಮಾರ್ಗೇಣ ಮಂಟಪಂ ತತ್ರ ಕಲ್ಪಯೇತ್ ॥ ೨ ॥

---

### ಹದಿನಾರನೆಯ ಅಧ್ಯಾಯವು

೧. ಗುರುವು ಶುಭದಿನದಲ್ಲಿ ದೋಷಗಳಿಲ್ಲದ ಶುದ್ಧ ಪ್ರದೇಶದಲ್ಲಿ ಶಿಷ್ಯನಿಗೆ ಸಮಯವೆಂಬ ಸಂಸ್ಕಾರವನ್ನು ಮೊದಲು ಮಾಡಬೇಕು.

೨. ಆ ಸಂಸ್ಕಾರಕ್ಕಾಗಿ ಭೂಮಿಯ ವಾಸನೆ, ಬಣ್ಣ, ರಸ ಇವುಗಳು ಪ್ರಶಸ್ತವಾಗಿವೆಯೋ ಎಂದು ಪರೀಕ್ಷಿಸಿ ಶಿಲ್ಪಶಾಸ್ತ್ರದಲ್ಲಿ ಹೇಳಿರುವಂತೆ ಆ ಭೂಮಿಯಲ್ಲಿ ಮಂಟಪವನ್ನು ಕಟ್ಟಬೇಕು.

ಕೃತ್ವಾ ವೇದಿಂ ಚ ತನ್ಮಧ್ಯೇ ಕುಂಡಾನಿ ಪರಿಕಲ್ಪಯೇತ್ ।
ಅಷ್ಟದಿಕ್ಷು ತಥಾ ದಿಕ್ಷು ತತ್ರೈಶಾನ್ಯಾಂ ಪುನಃ ಕ್ರಮಾತ್ ॥ ೩ ॥

ಪ್ರಧಾನಕುಂಡಂ ಕುರ್ವೀತ ಯದ್ವಾ ಪಶ್ಚಿಮಭಾಗತಃ ।
ಪ್ರಧಾನಮೇಕಮೇವಾಥ ಕೃತ್ವಾ ಶೋಭಾಂ ಪ್ರಕಲ್ಪಯೇತ್ ॥ ೪ ॥

ವಿತಾನಧ್ವಜಮಾಲಾಭಿರ್ವಿವಿಧಾಭಿರನೇಕಶಃ ।
ವೇದಿಮಧ್ಯೇ ತತಃ ಕುರ್ಯಾನ್ಮಂಟಪಂ ಶುಭಲಕ್ಷಣಂ ॥ ೫ ॥

ರತ್ನಹೇಮಾದಿಭಿಶ್ಚೂರ್ಣೈರೀಶ್ವರಾವಾಹನೋಚಿತಂ ।
ಸಿಂದೂರಶಾಲಿನೀವಾರಚೂರ್ಣೈರೇವಾಥ ನಿರ್ಧನಃ ॥ ೬ ॥

ಏಕಹಸ್ತಂ ದ್ವಿಹಸ್ತಂ ವಾ ಸಿತಂ ವಾ ರಕ್ತಮೇವ ವಾ ।
ಏಕಹಸ್ತಸ್ಯ ಪದ್ಮಸ್ಯ ಕರ್ಣಿಕಾಷ್ಟಾಂಗುಲಾ ಮತಾ ॥ ೭ ॥

---

೩-೬. ಆ ಮಂಟಪದ ಮಧ್ಯದಲ್ಲಿ ಒಂದು ಜಗುಲಿಯನ್ನು ಮಾಡಿ ಆಮೇಲೆ ಎಂಟು ದಿಕ್ಕುಗಳಲ್ಲಿಯೂ ಹೋಮಕುಂಡಗಳನ್ನು ಮಾಡಬೇಕು. ಪ್ರಧಾನ (ಮುಖ್ಯ) ಕುಂಡವು ಈಶಾನ್ಯಭಾಗದಲ್ಲಿಯಾಗಲಿ, ಪಶ್ಚಿಮಭಾಗದಲ್ಲಿಯಾಗಲಿ ಇರಬೇಕು. ಆ ಪ್ರಧಾನ ಕುಂಡಕ್ಕೆ ಬಗೆಬಗೆಯ ಬಾವುಟಗಳನ್ನೂ ಮೇಲುಕಟ್ಟುಗಳನ್ನೂ, ಕಟ್ಟಿ ಅಲಂಕಾರಮಾಡಬೇಕು. ಆ ಜಗುಲಿಯ ನಡುವೆ ಶುಭಲಕ್ಷಣದಿಂದ ಕೂಡಿದ ಮಂಟಪವನ್ನು ಮಾಡಿ ಈಶ್ವರನ ಪೂಜೆಗೆ ಯೋಗ್ಯವಾಗುವಂತೆ ಬಣ್ಣಬಣ್ಣದ ರಂಗವಲ್ಲಿಗಳನ್ನಿಡಬೇಕು. ಧನವಂತನು ರತ್ನ, ಚಿನ್ನ ಇವುಗಳ ಹುಡಿಯಿಂದಲೂ, ಧನಹೀನನು ಅಕ್ಕಿ ತೃಣಧಾನ್ಯ ಇವುಗಳಿಂದ ಮಾಡಿದ ಹಿಟ್ಟಿನಿಂದಲೂ ರಂಗವಲ್ಲಿಯನ್ನಿಡಬೇಕು.

೭-೮. ಒಂದು ಅಥವಾ ಎರಡು ಮೊಳ ಉದ್ದದ ಬಿಳುಪು ಅಥವಾ ಕೆಂಪುಬಣ್ಣದ ಪದ್ಮವನ್ನು ನಿರ್ಮಿಸಬೇಕು. ಒಂದು ಮೊಳದಳತೆಯ ಪದ್ಮಕ್ಕೆ ನಡುವೆ ಇರುವ ಕರ್ಣಿಕೆಯು ಎಂಟಂಗುಲವಿರಬೇಕು. ಕೇಸರಗಳು ನಾಲ್ಕಂಗುಲವಿರಬೇಕು. ಮಿಕ್ಕಭಾಗವು ಅಷ್ಟದಳಪದ್ಮವು. ಎರಡು ಮೊಳದಳತೆಯ

ಕೇಸರಾಣಿ ತದರ್ಧಾನಿ ಶೇಷಂ ಚಾಷ್ಟದಳಾದಿಕಂ ।
ದ್ವಿಹಸ್ತಸ್ಯ ತು ಪದ್ಮಸ್ಯ ದ್ವಿಗುಣಂ ಕರ್ಣಿಕಾದಿಕಂ ॥ ೮ ॥

ಕೃತ್ವಾ ಶೋಭೋಪಶೋಭಾಢ್ಯಾಮೈಶಾನ್ಯಾಂ ತಸ್ಯ ಕಲ್ಪಯೇತ್ ।
ಏಕಹಸ್ತಂ ತದರ್ಧಂ ವಾ ಪುನರ್ವೇದ್ಯಾಂ ತು ಮಂಡಲಂ ॥ ೯ ॥

ವ್ರೀಹಿತಂಡುಲಸಿದ್ಧಾರ್ಥತಿಲಪುಷ್ಪಕುಶಾಸ್ತೃತೇ ।
ತತ್ರ ಲಕ್ಷಣಸಂಯುಕ್ತಂ ಶಿವಕುಂಭಂ ಪ್ರಸಾಧಯೇತ್ ॥ ೧೦ ॥

ಸೌವರ್ಣಂ ರಾಜತಂ ವಾऽಪಿ ತಾಮ್ರಜಂ ಮೃಣ್ಮಯಂ ತು ವಾ ।
ಗಂಧಪುಷ್ಪಾಕ್ಷತಾಕೀರ್ಣಕುಶದೂರ್ವಾಂಕುರಾಚಿತಂ ॥ ೧೧ ॥

ಸಿತಸೂತ್ರಾವೃತಂ ಕಂಠೇ ನವವಸ್ತ್ರಯುಗಾವೃತಂ ।
ಶುದ್ಧಾಂಬುಪೂರ್ಣಮುತ್ಕೂರ್ಚಂ ಸದ್ರವ್ಯಂ ಸಪಿಧಾನಕಂ ॥ ೧೨ ॥

---

ಪದ್ಮಕ್ಕೆ ಕರ್ಣಿಕಾದಿಗಳು ಎರಡರಷ್ಟು ಅಳತೆಯಿಂದಿರಬೇಕು, ಎಂದರೆ ಹದಿನಾರಂಗುಲ, ಎಂಟಂಗುಲವಿರಬೇಕು.

೯. ಆ ಪದ್ಮಕ್ಕೆ ಅಲಂಕಾರಾದಿಗಳನ್ನು ಮಾಡಿ ಅದಕ್ಕೆ ಈಶಾನ್ಯದಿಕ್ಕಿನಲ್ಲಿ ಒಂದುಮೊಳ ಅಥವಾ ಅರ್ಧಮೊಳ ವಿಸ್ತಾರವಾದ ಮಂಡಲವನ್ನು ಜಗುಲಿಯ ಮೇಲೆ ಕಲ್ಪಿಸಬೇಕು.

೧೦–೧೬. ಆ ಮಂಡಲದಮೇಲೆ ಅಕ್ಕಿ, ಬಿಳಿಸಾಸುವೆ, ಎಳ್ಳು, ಹೂ, ದರ್ಭೆ ಇವುಗಳನ್ನ ಹಾಸಿ, ಅದರಮೇಲೆ ಲಕ್ಷಣವಾದ ಶಿವಕಲಶವನ್ನಿಟ್ಟು ಅಲಂಕರಿಸಬೇಕು. ಕಲಶವು ಚಿನ್ನ, ಬೆಳ್ಳಿ, ತಾಮ್ರ ಅಥವಾ ಮಣ್ಣಿನದಾದರೂ ಆಗಬಹುದು. ಆ ಕಲಶಕ್ಕೆ ಗಂಧ, ಹೂ, ಅಕ್ಷತೆ, ದರ್ಭೆ, ಗರಿಕೆ ಇವುಗಳನ್ನು ಹಾಕಿ ಕಂಠಕ್ಕೆ ಬಿಳಿಯದಾರವನ್ನು ಕಟ್ಟಿ ಹೊಸದಾದ ಒಂದು ಜೊತೆ ವಸ್ತ್ರವನ್ನು ಹೊದಿಸಿ ಶುದ್ಧವಾದ ನೀರನ್ನು ತುಂಬಿ ಕೂರ್ಚೆಯನ್ನು ಮೇಲುಮುಖವಾಗಿ ಹಾಕಿ ಅದರೊಳಕ್ಕೆ ಹಾಕಬೇಕಾದ ಮಂಗಳದ್ರವ್ಯಗಳನ್ನೂ ನೀರನ್ನೂ ಹಾಕಿ ಮುಚ್ಚಿಡಬೇಕು.

ಭೃಂಗಾರಂ ವರ್ಧಿನೀಂ ಚಾಪಿ ಶಂಖಂ ಚ ಚಕ್ರಮೇವ ವಾ ।
ವಿನಾ ಸೂತ್ರಾದಿಕಂ ಸರ್ವಂ ಪದ್ಮಪತ್ರಮಥಾऽಪಿ ವಾ ॥ ೧೩ ॥

ತಸ್ಯಾಸನಾರವಿಂದಸ್ಯ ಕಲ್ಪಯೇದುತ್ತರೇ ದಲೇ ।
ಅಗ್ರತಶ್ಚಂದನಾಂಭೋಭಿರಸ್ತ್ರರಾಜಸ್ಯ ವರ್ಧಿನೀಂ ॥ ೧೪ ॥

ಮಂಡಲಸ್ಯ ತತಃ ಪ್ರಾಚ್ಯಾಂ ಮಂತ್ರಕುಂಭೇ ಚ ಪೂರ್ವವತ್ ।
ಕೃತ್ವಾ ವಿಧಿವದೀಶಸ್ಯ ಮಹಾಪೂಜಾಂ ಸಮಾಚರೇತ್ ॥ ೧೫ ॥

ಅಥಾರ್ಣವಸ್ಯ ತೀರೇ ವಾ ನದ್ಯಾಂ ಗೋಷ್ಠೇऽಪಿ ವಾ ಗಿರೌ ।
ದೇವಾಗಾರೇ ಗೃಹೇ ವಾऽಪಿ ದೇಶೇऽನ್ಯಸ್ಮಿನ್ಮನೋಹರೇ ॥ ೧೬ ॥

ಕೃತ್ವಾ ಪೂರ್ವೋದಿತಂ ಸರ್ವಂ ವಿನಾ ವಾ ಮಂಡಪಾದಿಕಂ ।
ಮಂಡಲಂ ಪೂರ್ವವತ್ಕೃತ್ವಾ ಸ್ಥಂಡಿಲಂ ಚ ವಿಭಾವಸೋಃ ॥ ೧೭ ॥

ಪ್ರವಿಶ್ಯ ಪೂಜಾಭವನಂ ಪ್ರಹೃಷ್ಟವದನೋ ಗುರುಃ ।
ಸರ್ವಮಂಗಳಸಂಯುಕ್ತಃ ಸಮಾಚರಿತನೈತ್ಯಕಃ ॥ ೧೮ ॥

---

೧೩. ಗಿಂಡಿ, ಉದ್ಧರಣೆ, ಶಂಖ, ಚಕ್ರ, ಪದ್ಮಪತ್ರ ಇವುಗಳನ್ನು ಆ ಪದ್ಮಪೀಠದ ಉತ್ತರದಿಕ್ಕಿನ ದಳದಲ್ಲಿ ಕಲ್ಪಿಸಬೇಕು.

೧೪–೧೫. ಮಂಡಲದ ಪೂರ್ವದಿಕ್ಕಿಗೆ ಶಿವಕಲಶದ ಮುಂಭಾಗದಲ್ಲಿ ಗಂಧದ ನೀರಿನಿಂದ ಅಸ್ತ್ರಶ್ರೇಷ್ಠವಾದ ತ್ರಿಶೂಲಾಕೃತಿಗೆ ಒಂದು ಕಲಶವನ್ನು ಸ್ಥಾಪಿಸಿ ಬಳಿಕ ಕಲ್ಪವಿಧಿಗನುಸಾರವಾಗಿ ಈಶ್ವರನ ಮಹಾಪೂಜೆಯನ್ನು ಮಾಡಬೇಕು.

೧೬-೧೯. ಆಮೇಲೆ ಗುರುವು ಸಂತುಷ್ಟಾಂತರಂಗನಾಗಿ ಸಮುದ್ರತೀರ, ನದಿ, ದನಗಳ ಕೊಟ್ಟಿಗೆ, ಪರ್ವತ, ದೇವಸ್ಥಾನ, ಮನೆ ಮುಂತಾದ ಪ್ರಶಸ್ತಸ್ಥಳಗಳಲ್ಲಿಯಾಗಲಿ ಮತ್ತೆ ಎಲ್ಲಿಯಾದರೂ ಮನೋಹರವಾದ ಸ್ಥಳದಲ್ಲಿಯಾಗಲಿ ಹಿಂದೆ ಹೇಳಿದಂತೆ ಮಂಡಪಾದಿಗಳನ್ನು ಮಾಡಿ ಸಿದ್ಧಪಡಿಸಿಕೊಳ್ಳಬೇಕು. ಅಥವಾ ಮಂಡಪಾದಿಗಳಿಲ್ಲದಿದ್ದರೂ ಇರಬಹುದು. ಅಗ್ನಿಸ್ಥಾಪನೆಗಾಗಿ ಸ್ಥಂಡಿಲ

ಮಹಾಪೂಜಾಂ ಮಹೇಶಸ್ಯ ಕೃತ್ವಾ ಮಂಡಲಮಧ್ಯತಃ ।
ಶಿವಕುಂಭೇ ತಥಾ ಭೂಯಃ ಶಿವಮಾವಾಹ್ಯ ಪೂಜಯೇತ್ ॥ ೧೯ ॥

ಪಶ್ಚಿಮಾಭಿಮುಖಂ ಧ್ಯಾತ್ವಾ ಯಜ್ಞರಕ್ಷಕಮೀಶ್ವರಂ ।
ಅರ್ಚಯೇದಸ್ತ್ರವರ್ಧನ್ಯಾಮಸ್ತ್ರಮೀಶಸ್ಯ ದಕ್ಷಿಣೇ ॥ ೨೦ ॥

ಮಂತ್ರಕುಂಭೇ ಚ ವಿನ್ಯಸ್ಯ ಮಂತ್ರಂ ಮಂತ್ರವಿಶಾರದಃ ।
ಕೃತ್ವಾ ಮುದ್ರಾದಿಕಂ ಸರ್ವಂ ಮಂತ್ರಯಾಗಂ ಸಮಾಚರೇತ್ ॥ ೨೧ ॥

ತತಃ ಶಿವಾನಲೇ ಹೋಮಂ ಕುರ್ಯಾದ್ದೇಶಿಕಸತ್ತಮಃ ।
ಪ್ರಧಾನಕುಂಡೇ ಪರಿತೋ ಜುಹುಯುಶ್ಚಾಪರೇ ದ್ವಿಜಾಃ ॥ ೨೨ ॥

ಆಚಾರ್ಯಾತ್ಪಾದಮರ್ಧಂ ವಾ ಹೋಮಸ್ತೇಷಾಂ ವಿಧೀಯತೇ ।
ಪ್ರಧಾನಕುಂಡ ಏವಾಥ ಜುಹುಯಾದ್ದೇಶಿಕೋತ್ತಮಃ ॥ ೨೩ ॥

---

ವನ್ನೂ ಮಾಡಿ ನಿತ್ಯಕರ್ಮವನ್ನು ಮಾಡಿದಮೇಲೆ ಪೂಜಾಭವನವನ್ನು ಪ್ರವೇಶಿಸಿ ಸಕಲ ಮಂಗಳದ್ರವ್ಯಗಳಿಂದ ಮಂಡಲದ ಮಧ್ಯದಲ್ಲಿರುವ ಶಿವಕುಂಭದಲ್ಲಿ ಶಿವನನ್ನು ಆವಾಹನೆಮಾಡಿ ಮಹಾಪೂಜೆಯನ್ನು ಮಾಡಬೇಕು.

೨೦. ಯಜ್ಞರಕ್ಷಕನಾದ ಈಶ್ವರನನ್ನು ಪಶ್ಚಿಮಾಭಿಮುಖವಾಗಿರುವಂತೆ ಧ್ಯಾನಮಾಡಿ, ಈಶ್ವರನ ಬಲಗಡೆಯಲ್ಲಿ ಅಸ್ತ್ರವರ್ಧಿನೀ ಎಂಬ ಕಲಶದಲ್ಲಿ ಅಸ್ತ್ರವನ್ನು ಪೂಜಿಸಬೇಕು.

೨೧. ಮಂತ್ರಪುರಶ್ಚರಣವಿಧಿಯನ್ನೆಲ್ಲ ಬಲ್ಲ ಗುರುವು ಮಂತ್ರಕಲಶದಲ್ಲಿ ಮಂತ್ರನ್ಯಾಸವನ್ನು ಮಾಡಿ ಮುದ್ರಾದಿಗಳನ್ನೆಲ್ಲ ಪ್ರದರ್ಶಿಸಿ ಮಂತ್ರಯಾಗವನ್ನು ಪ್ರಾರಂಭಿಸಬೇಕು.

೨೨-೨೩. ಆಮೇಲೆ ಗುರುಶ್ರೇಷ್ಠನು ಶಿವಾಗ್ನಿಯಲ್ಲಿ ಹೋಮವನ್ನು ಮಾಡಬೇಕು. ಪ್ರಧಾನವಾದ ಅಗ್ನಿಕುಂಡದ ಸುತ್ತಲೂ ಮಿಕ್ಕ ಋತ್ವಿಕ್ಕುಗಳು ಹೋಮಮಾಡಬೇಕು. ಗುರುವು ಮಾಡುವ ಹೋಮಸಂಖ್ಯೆಯ ಕಾಲುಭಾಗ ಅಥವಾ ಅರ್ಧಭಾಗ ಹೋಮವನ್ನು ಋತ್ವಿಕ್ಕುಗಳು ಮಾಡಬೇಕು. ಗುರು

**ಸ್ವಾಧ್ಯಾಯಮುಪರೇ ಕುರ್ಯುಃ ಸ್ತೋತ್ರಂ ಮಂಗಲವಾಚನಂ ।**
**ಜಪಂ ಚ ವಿಧಿವಚ್ಚಾನ್ಯೇ ಶಿವಭಕ್ತಿಪರಾಯಣಾಃ ॥ ೨೪ ॥**

**ನೃತ್ಯಂ ಗೀತಂ ಚ ವಾದ್ಯಂ ಚ ಮಂಗಲಾನ್ಯಪರಾಣಿ ಚ ।**
**ಪೂಜನಂ ಚ ಸದಸ್ಯಾನಾಂ ಕೃತ್ವಾ ಸಮ್ಯಗ್ವಿಧಾನತಃ ॥ ೨೫ ॥**

**ಪುಣ್ಯಾಹಂ ಕಾರಯಿತ್ವಾಥ ಪುನಃ ಸಂಪೂಜ್ಯ ಶಂಕರಂ ।**
**ಪ್ರಾರ್ಥಯೇದ್ದೇಶಿಕೋ ದೇವಂ ಶಿಷ್ಯಾನುಗ್ರಹಕಾಮ್ಯಯಾ ॥ ೨೬ ॥**

**ಪ್ರಸೀದ ದೇವದೇವೇಶ ದೇಹಮಾವಿಶ್ಯ ಮಾಮಕಂ ।**
**ವಿಮೋಚಯೈನಂ ವಿಶ್ವೇಶ ಘೃಣಯಾ ಚ ಘೃಣಾನಿಧೇ ॥ ೨೭ ॥**

---

ಶ್ರೇಷ್ಠನು ಮುಖ್ಯವಾದ ಪ್ರಧಾನಾಗ್ನಿಕುಂಡದಲ್ಲಿಯೇ ಹೋಮವನ್ನು ಮಾಡಬೇಕು.

೨೪-೨೫. ಹೋಮಮಾಡುವಕಾಲದಲ್ಲಿ ಶಿವನಲ್ಲಿ ಭಕ್ತಿಯುಳ್ಳ ಕೆಲವರು ದ್ವಿಜಶ್ರೇಷ್ಠರು ವೇದಾಧ್ಯಯನವನ್ನೂ ಮತ್ತೆ ಕೆಲವರು ಸ್ತೋತ್ರಗಳನ್ನೂ, ಕೆಲವರು ಮಂಗಳಶ್ಲೋಕಗಳ ಪಾಠವನ್ನೂ, ಕೆಲವರು ಮಂತ್ರಜಪವನ್ನೂ, ಮಾಡುತ್ತಿರಬೇಕು. ನೃತ್ಯ ಗೀತ, ವಾದ್ಯಗಳನ್ನೂ, ಇತರ ಮಂಗಳಕಾರ್ಯಗಳನ್ನೂ, ಸಭಾಜನರ ಪೂಜೆಯನ್ನೂ ವಿಧಿಯನ್ನನುಸರಿಸಿ ಮಾಡಬೇಕು.

೨೬. ಆಮೇಲೆ ಶಿಷ್ಯನಿಂದ ಪುಣ್ಯಾಹವನ್ನು ಮಾಡಿಸಿ ಮತ್ತೆ ಶಂಕರನನ್ನು ಪೂಜಿಸಿ ಗುರುವು ಶಿಷ್ಯನಿಗೆ ಅನುಗ್ರಹಮಾಡಬೇಕೆಂಬ ಅಪೇಕ್ಷೆಯಿಂದ ಶಿವನನ್ನು ಪ್ರಾರ್ಥಿಸಬೇಕು.

೨೭. ದೇವದೇವನೂ, ದಯಾನಿಧಿಯೂ, ಪ್ರಪಂಚಕ್ಕೆ ಸ್ವಾಮಿಯೂ ಆದ ಎಲೈ ಶಿವನೇ, ನನ್ನ ದೇಹವನ್ನು ಪ್ರವೇಶಿಸಿ ನಮ್ಮನ್ನು ಈ ಸಂಸಾರದುಃಖದಿಂದ ಬಿಡುಗಡೆಯನ್ನು ಮಾಡು ಎಂದು ಪ್ರಾರ್ಥಿಸಬೇಕು.

ಅಥ ಚೈವಂ ಕರೋಮೀತಿ ಲಬ್ಧಾನುಜ್ಞಸ್ತು ದೇಶಿಕಃ ।
ಆನೀಯೋಪ್ರೋಷಿತಂ ಶಿಷ್ಯಂ ಹವಿಷ್ಯಾಶಿನಮೇವ ವಾ ॥ ೨೮ ॥

ಏಕಾಶನಂ ವಾ ವಿರತಂ ಸ್ನಾತಂ ಪ್ರಾತಃ ಕೃತಕ್ರಿಯಂ ।
ಜಪಂತಂ ಪ್ರಣವಂ ದೇವಂ ಧ್ಯಾಯಂತಂ ಕೃತಮಂಗಳಂ ॥ ೨೯ ॥

ದ್ವಾರಸ್ಯ ಪಶ್ಚಿಮಸ್ಯಾಗ್ರಮಂಡಲೇ ದಕ್ಷಿಣಸ್ಯ ವಾ ।
ದರ್ಭಾಸನೇ ಸಮಾಸೀನಂ ವಿಧಾಯೋದಙ್ಮುಖಂ ಶಿಶುಂ ॥ ೩೦ ॥

ಸ್ವಯಂ ಪ್ರಾಗ್ವದನಸ್ತಿಷ್ಠನ್ನೂರ್ಧ್ವಕಾಯಂ ಕೃತಾಂಜಲಿಂ ।
ಸಂಪ್ರೋಕ್ಷ್ಯ ಪ್ರೋಕ್ಷಣೀತೋಯಮೂರ್ಧನ್ಯಸ್ತ್ರೇಣ ಮುದ್ರಯಾ ॥ ೩೧ ॥

ಪುಷ್ಪಕ್ಷೇಪೇಣ ಸಂತಾಡ್ಯ ಬಧ್ನೀಯಾಲ್ಲೋಚನಂ ಗುರುಃ ।
ದುಕೂಲಾರ್ಧೇನ ವಸ್ತ್ರೇಣ ಮಂತ್ರಿತೇನ ನವೇನ ಚ ॥ ೩೨ ॥

---

೨೮–೩೦. ಆಮೇಲೆ ಗುರುವು ಮುಂದೆ ಹೀಗೆ ಮಾಡುವೆನೆಂದು ಶಿವನ ಅಪ್ಪಣೆಯನ್ನು ಪಡೆದು ಅಲ್ಲಿಗೆ ಶಿಷ್ಯನನ್ನು ಕರೆತರಬೇಕು. ಆ ಶಿಷ್ಯನು ಹಿಂದಿನದಿನ ಉಪವಾಸದಿಂದಿರಬೇಕು ಅಥವಾ ಹವಿಸ್ಸನ್ನು ಆಹಾರವಾಗಿ ತೆಗೆದು ಕೊಳ್ಳಬಹುದು. ಅಶಕ್ತನಾದಲ್ಲಿ ಒಪ್ಪತ್ತು ಊಟಮಾಡಬಹುದು. ಮರುದಿನ ಸ್ನಾನಮಾಡಿ, ಪ್ರಾತಃಕಾಲದ ಕರ್ಮಗಳನ್ನೆಲ್ಲ ಮುಗಿಸಿ ವಿರಕ್ತನಾಗಿ ಪ್ರಣವ ಜಪವನ್ನು ಮಾಡುತ್ತಾ ಈಶ್ವರನನ್ನೇ ಧ್ಯಾನಿಸುತ್ತಿರಬೇಕು. ಇಂತಹ ಶಿಷ್ಯ ನನ್ನು ಕರೆದುಕೊಂಡು ಒಂದು ಪಶ್ಚಿಮದಿಕ್ಕಿನ ಬಾಗಿಲಿನ ಮುಂಭಾಗದಲ್ಲಿರುವ ಮಂಡಲದಲ್ಲಿಯಾಗಲಿ, ದಕ್ಷಿಣದಿಕ್ಕಿನ ಮಂಡಲದಲ್ಲಿಯಾಗಲಿ ದರ್ಭಾಸನದಲ್ಲಿ ಉತ್ತರಾಭಿಮುಖವಾಗಿ ಕುಳ್ಳಿರಿಸಿ ತಾನು ಪೂರ್ವಾಭಿಮುಖವಾಗಿ ನಿಂತುಕೊಂಡು ಶಿಷ್ಯನ ಕೈಗಳನ್ನು ಅಂಜಲಿಮಾಡಿ,

೩೧–೩೪. ಪ್ರೋಕ್ಷಣಪಾತ್ರೆಯಲ್ಲಿದ್ದ ನೀರನ್ನು ಅವನಮೇಲೆ ಪ್ರೋಕ್ಷಿಸಿ ಆ ಶಿಷ್ಯನ ತಲೆಯಮೇಲೆ ಅಸ್ತ್ರಮುದ್ರೆಯಿಂದ ಹೂಗಳನ್ನು ಚೆಲ್ಲಿ, ಗುರುವು ಅವನ ಹೊಸದಾದ ರೇಷ್ಮೆಯ ವಸ್ತ್ರದ ಅರ್ಧಭಾಗದಿಂದ ಮಂತ್ರಪೂರ್ವಕವಾಗಿ

ತತಃ ಪ್ರವೇಶಯೇಚ್ಛಿಷ್ಯಂ ಗುರುರ್ದ್ವಾರೇಣ ಮಂಗಲಂ ।
ಸೋಽಪಿ ತೇನೇರಿತಃ ಶಂಭೋರಾಚರೇತ್ತ್ರಿಃ ಪ್ರದಕ್ಷಿಣಂ ॥ ೩೩ ॥

ತತಃ ಸುವರ್ಣಸಂಮಿಶ್ರಂ ದತ್ವಾ ಪುಷ್ಪಾಂಜಲಿಂ ಪ್ರಭೋಃ ।
ಪ್ರಾಙ್ಮುಖಶ್ಚೋದಙ್ಮುಖೋ ವಾ ಪ್ರಣಮೇದ್ದಂಡವತ್ಕ್ಷಿತೌ ॥ ೩೪ ॥

ತತಃ ಸಂಪ್ರೋಕ್ಷ್ಯ ಮೂಲೇನ ಶಿರಸ್ಯಸ್ತ್ರೇಣ ಪೂರ್ವವತ್ ।
ಸಂತಾಡ್ಯ ದೇಶಿಕಸ್ತಸ್ಯ ಮೋಚಯೇನ್ನೇತ್ರಬಂಧನಂ ॥ ೩೫ ॥

ಸ ದೃಷ್ಟ್ವಾ ಮಂಡಲಂ ಭೂಯಃ ಪ್ರಣಮೇತ್ಸಾಂಜಲಿಃ ಪ್ರಭುಂ ।
ಅಥಾಸೀನಂ ಶಿವಾಚಾರ್ಯೋ ಮಂಡಲಸ್ಯ ತು ದಕ್ಷಿಣೇ ॥ ೩೬ ॥

ಉಪವೇಶ್ಯಾತ್ಮನಃ ಸವ್ಯೇ ಶಿಷ್ಯಂ ದರ್ಭಾಸನೇ ಗುರುಃ ।
ಆರಾಧ್ಯ ಚ ಮಹಾದೇವಂ ಶಿವಹಸ್ತಂ ಪ್ರವಿನ್ಯಸೇತ್ ॥ ೩೭ ॥

---

ಅವನ ಕಣ್ಣನ್ನು ಮುಚ್ಚಬೇಕು. ಆಮೇಲೆ ಗುರುವು ಶುಭವಾದ ದಾರಿಯಿಂದ ಶಿಷ್ಯನನ್ನು ಕರೆದುಕೊಂಡು ಹೋಗಬೇಕು. ಶಿಷ್ಯನು ಗುರುವಿನ ಮಾತಿನಂತೆ ಶಿವನಿಗೆ ಮೂರು ಪ್ರದಕ್ಷಿಣೆಯನ್ನು ಮಾಡಿ ಸುವರ್ಣಸಹಿತವಾದ ಪುಷ್ಪಾಂಜಲಿಯನ್ನು ಸಮರ್ಪಿಸಿ ಪೂರ್ವಾಭಿಮುಖವಾಗಿಯಾಗಲೀ, ಉತ್ತರಾಭಿಮುಖವಾಗಿಯಾಗಲಿ, ಭೂಮಿಯಮೇಲೆ ಸಾಷ್ಟಾಂಗನಮಸ್ಕಾರವನ್ನು ಮಾಡಬೇಕು.

೩೫. ಆಮೇಲೆ ಗುರುವು ಮೂಲಮಂತ್ರದಿಂದ ಶಿಷ್ಯನನ್ನು ಪ್ರೋಕ್ಷಿಸಿ ಹಿಂದಿನಂತೆ ಅಸ್ತ್ರಮುದ್ರೆಯಿಂದ ತಲೆಯಮೇಲೆ ಹೊಡೆದು ಕಣ್ಣಿಗೆ ಕಟ್ಟಿದ ವಸ್ತ್ರವನ್ನು ಬಿಚ್ಚಬೇಕು. ಶಿಷ್ಯನು ಮತ್ತೆ ಮಂಡಲವನ್ನು ನೋಡಿ ಕೈಜೋಡಿಸಿಕೊಂಡು ಶಿವನಿಗೆ ನಮಸ್ಕಾರವನ್ನು ಮಾಡಬೇಕು.

೩೬-೩೯. ಆಮೇಲೆ ಗುರುವು ಮಂಡಲದ ದಕ್ಷಿಣಭಾಗದಲ್ಲಿ ಕುಳಿತಿರುವ ಶಿಷ್ಯನನ್ನು ತನ್ನ ಬಲಗಡೆಯಿರುವ ದರ್ಭಾಸನದಲ್ಲಿ ಕುಳ್ಳಿರಿಸಿ ಶಿವನನ್ನು ಪೂಜಿಸಿ ಹಸ್ತದಿಂದ ಶಿವನನ್ನು ಸ್ಪರ್ಶಮಾಡುತ್ತಾ ಶಿವಮಂತ್ರವನ್ನು ಉಪದೇಶಿಸಬೇಕು. ಶಿವನಲ್ಲಿ ವಿಶೇಷವಾದ ಪ್ರೀತಿಯಿಂದ ಕೂಡಿದ ಗುರುವು ಶಿವತೇಜೋ

**ಶಿವತೇಜೋಮಯಂ ಪಾಣಿಂ ಶಿವಮಂತ್ರಮುದೀರಯೇತ್ ।**
**ಶಿವಾಭಿಮಾನಸಂಪನ್ನೋ ನ್ಯಸೇಚ್ಛಿಷ್ಯಸ್ಯ ಮಸ್ತಕೇ ॥ ೩೮ ॥**

**ಸರ್ವಾಂಗಾಲಂಬನಂ ಚೈವ ಕುರ್ಯಾತ್ತೇನೈವ ದೇಶಿಕಃ ।**
**ಶಿಷ್ಯೋಽಪಿ ಪ್ರಣಮೇದ್ಭೂಮೌ ದೇಶಿಕಾಕೃತಿಮೀಶ್ವರಂ ॥ ೩೯ ॥**

**ತತಃ ಶಿವಾನಲೇ ದೇವಂ ಸಮಭ್ಯರ್ಚ್ಯ ಯಥಾವಿಧಿ ।**
**ಹುತಾಹುತಿತ್ರಯಂ ಶಿಷ್ಯಮುಪವೇಶ್ಯ ಯಥಾ ಪುರಾ ॥ ೪೦ ॥**

**ದರ್ಭಾಗ್ರೈಃ ಸಂಸ್ಪೃಶಂಸ್ತಂ ಚ ವಿದ್ಯಯಾತ್ಮಾನಮಾವಿಶೇತ್ ।**
**ನಮಸ್ಕೃತ್ಯ ಮಹಾದೇವಂ ನಾಡೀಸಂಧಾನಮಾಚರೇತ್ ॥ ೪೧ ॥**

**ಶಿವಶಾಸ್ತ್ರೋಕ್ತಮಾರ್ಗೇಣ ಕೃತ್ವಾ ಪ್ರಾಣಸ್ಯ ನಿರ್ಗಮಂ ।**
**ಶಿಷ್ಯದೇಹಪ್ರವೇಶಂ ಚ ಸ್ಮೃತ್ವಾ ಮಂತ್ರಾಂಸ್ತು ತರ್ಪಯೇತ್ ॥ ೪೨ ॥**

---

ರೂಪವಾದ ತನ್ನ ಹಸ್ತವನ್ನು ಶಿಷ್ಯನ ತಲೆಯಮೇಲಿಟ್ಟು ಬಳಿಕ ಅದೇ ಕೈಯಿಂದ ಶಿಷ್ಯನ ಸಮಸ್ತ ಅವಯವಗಳನ್ನೂ ಸ್ಪರ್ಶಮಾಡಬೇಕು. ಶಿಷ್ಯನೂ, ಗುರು ಸ್ವರೂಪನಾದ ಈಶ್ವರನಿಗೆ ಭೂಮಿಯಮೇಲೆ ಸಾಷ್ಟಾಂಗ ನಮಸ್ಕಾರವನ್ನು ಮಾಡಬೇಕು.

೪೦-೪೧. ಬಳಿಕ ವಿಧಿಗನುಸಾರವಾಗಿ ಶಿವನನ್ನು ಪೂಜಿಸಿ ಶಿವಾಗ್ನಿಯಲ್ಲಿ ಮೂರು ಆಹುತಿಗಳನ್ನು ನೀಡುವ ಹೋಮಮಾಡಿಸಿ ಶಿಷ್ಯನನ್ನು ಹಿಂದಿನಂತೆ ಕುಳ್ಳಿರಿಸಿ ದರ್ಭೆಯ ತುದಿಗಳಿಂದ ಅವನನ್ನೂ ತನ್ನನ್ನೂ ಸ್ಪರ್ಶಮಾಡುತ್ತಾ ಪಂಚಾಕ್ಷರವಿದ್ಯೆಯನ್ನು ಅನುಗ್ರಹಿಸಬೇಕು. ತರುವಾಯ ಮಹಾದೇವನಿಗೆ ನಮಸ್ಕರಿಸಿ ನಾಡೀ ಸಂಧಾನಕಾರ್ಯವನ್ನು ನಡೆಸಬೇಕು.

೪೨-೪೩. ಅದೆಂತೆಂದರೆ—ಗುರುವು ಶಿವಶಾಸ್ತ್ರೋಕ್ತಮಾರ್ಗದಿಂದ ತನ್ನ ಪ್ರಾಣವು ತನ್ನ ಶರೀರದಿಂದ ಹೊರಟು ಶಿಷ್ಯನ ದೇಹವನ್ನು ಪ್ರವೇಶಿಸಿದಂತೆ ಭಾವಿಸಿ, ಮೂಲಮಂತ್ರದಿಂದ ತರ್ಪಣವನ್ನು ಮಾಡಬೇಕು. ಆ ತರ್ಪಣಕ್ಕಾಗಿ

ಸಂತರ್ಪಣಾಯ ಮೂಲಸ್ಯ ತೇನೈವಾಹುತಯೋ ದಶ ।
ದೇಯಾಸ್ತಿಸ್ರಸ್ತಥಾಂಗಾನಾಮಂಗೈರೇವ ಯಥಾಕ್ರಮಂ ॥ ೪೩ ॥

ತತಃ ಪೂರ್ಣಾಹುತಿಂ ದತ್ವಾ ಪ್ರಾಯಶ್ಚಿತ್ತಾಯ ದೇಶಿಕಃ ।
ಪುನರ್ದಶಾಹುತೀಃ ಕುರ್ಯಾನ್ಮೂಲಮಂತ್ರೇಣ ಮಂತ್ರವಿತ್ ॥ ೪೪ ॥

ಪುನಸ್ಸಂಪೂಜ್ಯ ದೇವೇಶಂ ಸಮ್ಯಗಾಚಮ್ಯ ದೇಶಿಕಃ ।
ಹುತ್ವಾ ಚೈವ ಯಥಾನ್ಯಾಯಂ ಸ್ವಜಾತ್ಯಾ ವೈಶ್ಯಮುದ್ಧರೇತ್ ॥ ೪೫ ॥

ತಸ್ಯೈವಂ ಜನಯೇತ್ಕ್ಷಾತ್ರಮುದ್ಧಾರಂ ಚ ತತಃ ಪುನಃ ।
ಕೃತ್ವಾ ತಥೈವ ವಿಪ್ರತ್ವಂ ಜನಯೇದಸ್ಯ ದೇಶಿಕಃ ॥ ೪೬ ॥

ರಾಜನ್ಯಂ ಚೈವ ಮುದ್ಧೃತ್ಯ ಕೃತ್ವಾ ವಿಪ್ರಂ ಪುನಸ್ತಯೋಃ ।
ರುದ್ರತ್ವಂ ಜನಯೇದ್ವಿಪ್ರೇ ರುದ್ರನಾಮ್ನೈವ ಸಾಧಯೇತ್ ॥ ೪೭ ॥

ಮೂಲಮಂತ್ರದಿಂದ ಅಗ್ನಿಯಲ್ಲಿ ಹತ್ತು ಹೋಮವನ್ನು ಮಾಡಬೇಕು. ಹಾಗೆಯೇ ಅಂಗಮಂತ್ರಗಳಿಂದ ಕ್ರಮವಾಗಿ ಮೂರು ಹೋಮಗಳನ್ನು ಮಾಡಬೇಕು.

೪೪-೪೫. ಆಮೇಲೆ ಗುರುವು ಪೂರ್ಣಾಹುತಿಹೋಮವನ್ನು ಮಾಡಿ ಪ್ರಾಯಶ್ಚಿತ್ತಹೋಮಕ್ಕಾಗಿ ಮೂಲಮಂತ್ರದಿಂದ ಮತ್ತೆ ಹತ್ತು ಹೋಮಗಳನ್ನು ಮಾಡಬೇಕು. ಆಮೇಲೆ ಶಿವನನ್ನು ಮತ್ತೆ ಪೂಜಿಸಿ ಆಚಮನಮಾಡಿ ವಿಧಿಗನುಸಾರವಾಗಿ ಹೋಮವನ್ನು ಮಾಡಿ ಮುಗಿಸಬೇಕು. ಈರೀತಿ ಶಿಷ್ಯನ ವೈಶ್ಯಭಾವವನ್ನು ಪವಿತ್ರಗೊಳಿಸಿ ಉದ್ಧಾರಮಾಡಬೇಕು.

೪೬-೪೭. ಇದಾದಮೇಲೆ ಆ ವೈಶ್ಯನಿಗೆ ಕ್ಷತ್ರಿಯತ್ವವನ್ನುಂಟುಮಾಡಿ ಆಮೇಲೆ ಆ ಕ್ಷತ್ರಿಯತ್ವವನ್ನು ಉದ್ಧರಿಸಿ, ಅವನಿಗೆ ಬ್ರಾಹ್ಮಣತ್ವವನ್ನುಂಟುಮಾಡಿ ಬ್ರಾಹ್ಮಣತ್ವವನ್ನುದ್ಧರಿಸಿ ಆ ಬ್ರಾಹ್ಮಣನಿಗೆ ರುದ್ರತ್ವವನ್ನುಂಟುಮಾಡಬೇಕು. ಕೊನೆಗೆ ರುದ್ರನಾಮವೇ ಸ್ಥಿರವಾಗಿ ನಿಲ್ಲುವುದು.

**ಪ್ರೋಕ್ಷಣಂ ತಾಡನಂ ಕೃತ್ವಾ ಶಿಶೋಃ ಸ್ವಾತ್ಮಾನಮಾತ್ಮನಿ ।**
**ಶಿವಾತ್ಮಕಮನುಸ್ಮೃತ್ಯ ಸ್ಫುರಂತಂ ವಿಸ್ಫುಲಿಂಗವತ್ ॥ ೪೮ ॥**

**ನಾಡ್ಯಾ ಯಥೋಕ್ತಯಾ ವಾಯುಂ ರೇಚಯೇನ್ಮಂತ್ರತೋ ಗುರುಃ ।**
**ನಿರ್ಗಮ್ಯ ಪ್ರವಿಶೇನ್ನಾಡ್ಯಾ ಶಿಷ್ಯಸ್ಯ ಹೃದಯಂ ತಥಾ ॥ ೪೯ ॥**

**ಪ್ರವಿಶ್ಯ ತಸ್ಯ ಚೈತನ್ಯಂ ನೀಲಬಿಂದುನಿಭಂ ಸ್ಮರನ್ ।**
**ಸ್ವತೇಜಸಾಪಾಸ್ತಮಲಂ ಜ್ವಲಂತಮನುಚಿಂತಯೇತ್ ॥ ೫೦ ॥**

**ತಮಾದಾಯ ತಯಾ ನಾಡ್ಯಾ ಮಂತ್ರೀ ಸಂಹಾರಮುದ್ರಯಾ ।**
**ಪೂರಕೇಣ ನಿವೇಶ್ಯೈನಮೇಕೀಭಾವಾರ್ಥಮಾತ್ಮನಃ ॥ ೫೧ ॥**

**ಕುಂಭಕೇನ ತಥಾ ನಾಡ್ಯಾ ರೇಚಕೇನ ಯಥಾ ಪುರಾ ।**
**ತಸ್ಮಾದಾದಾಯ ಶಿಷ್ಯಸ್ಯ ಹೃದಯೇ ತನ್ನಿವೇಶಯೇತ್ ॥ ೫೨ ॥**

---

೪೮-೫೦- ಗುರುವು ಶಿಷ್ಯನನ್ನು ನೀರಿನಿಂದ ಪ್ರೋಕ್ಷಿಸಿ ಕೈಯಿಂದತಟ್ಟಿ ದೊಡ್ಡ ಬೆಂಕಿಯಲ್ಲಿರುವ ಸಣ್ಣ ಕಿಡಿಯಂತೆ ಪರಮಾತ್ಮನಲ್ಲಿ ತನ್ನ ಆತ್ಮವು ಹೇಗೊ ಹಾಗೆ ಆ ಶಿಷ್ಯನನ್ನು ಶಿವಸ್ವರೂಪನೆಂದೇ ಭಾವಿಸಿ ಯೋಗಶಾಸ್ತ್ರೋಕ್ತವಾದ ಮಾರ್ಗದಿಂದ ಮಂತ್ರಪೂರ್ವಕವಾಗಿ ನಾಡಿಯಿಂದ ಪ್ರಾಣವಾಯುವನ್ನು ಹೊರಕ್ಕೆತಂದು ಆ ವಾಯುಮಾರ್ಗದಿಂದ ತಾನೂ ಹೊರಗೆಬಂದು ಶಿಷ್ಯನ ನಾಡೀ ಮಾರ್ಗದಿಂದ ಅವನ ಹೃದಯಕ್ಕೆ ಪ್ರವೇಶಿಸಿ ನೀಲಿಬಣ್ಣದ ಒಂದು ಬಿಂದುವಿಗೆ ಸಮಾನವಾದ ಶಿಷ್ಯನ ಚೈತನ್ಯವನ್ನು ಪ್ರವೇಶಿಸಿ ಆ ಚೈತನ್ಯವನ್ನು ಸ್ಮರಿಸುತ್ತ ತನ್ನ ತೇಜಸ್ಸಿನಿಂದ ಶಿಷ್ಯನ ಚೈತನ್ಯದೋಷಗಳನ್ನು ಕಳೆದು ಪ್ರಕಾಶಸ್ವರೂಪನಾದ ಅವನನ್ನು ಧ್ಯಾನಮಾಡುತ್ತಿರಬೇಕು.

೫೧-೫೨. ಮಂತ್ರಜ್ಞನಾದ ಗುರುವು ಸಂಹಾರಮುದ್ರೆಯಿಂದ ಕೂಡಿ ಶಿಷ್ಯನ ನಾಡೀಮಾರ್ಗದಿಂದ ಪ್ರವೇಶಿಸಿ ಶಿಷ್ಯನ ಆತ್ಮಸ್ವರೂಪವನ್ನು ತೆಗೆದುಕೊಂಡು ತನ್ನ ಆತ್ಮನಲ್ಲಿ ಶಿಷ್ಯನ ಆತ್ಮವು ಐಕ್ಯವಾಗಬೇಕೆಂದು ಹಿಂದೆ ಹೇಳಿದಂತೆ ಪೂರಕ, ಕುಂಭಕ, ರೇಚಕ ಎಂಬ ಪ್ರಾಣಾಯಾಮಕ್ರಮದಿಂದ ಶಿಷ್ಯನ

ತಮಾಲಭ್ಯ ಶಿವಾಲ್ಲಬ್ಧಂ ತಸ್ಮೈ ದತ್ವೋಪವೀತಕಂ ।
ಹುತ್ವಾಹುತಿತ್ರಯಂ ಪಶ್ಚಾದ್ದದ್ಯಾತ್ಪೂರ್ಣಾಹುತಿಂ ತತಃ ॥ ೫೩ ॥

ದೇವಸ್ಯ ದಕ್ಷಿಣೇ ಶಿಷ್ಯಮುಪವೇಶ್ಯ ವರಾಸನೇ ।
ಕುಶಪುಷ್ಪಪರಿಸ್ತೀರ್ಣೇ ಬದ್ಧಾಂಜಲಿರುದಙ್ಮುಖಂ ॥ ೫೪ ॥

ಸ್ವಸ್ತಿಕಾಸನಮಾರೂಢಂ ವಿಧಾಯ ಪ್ರಾಙ್ಮುಖಃ ಸ್ವಯಂ ।
ವರಾಸನಸ್ಥಿತೋ ಮಂತ್ರೈರ್ಮಹಾಮಂಗಲನಿಸ್ವನೈಃ ॥ ೫೫ ॥

ಸಮಾದಾಯ ಘಟಂ ಪೂರ್ಣಂ ಪೂರ್ವಮೇವ ಪ್ರಸಾದಿತಂ ।
ಧ್ಯಾಯಮಾನಃ ಶಿವಂ ಶಿಷ್ಯಮಭಿಷಿಂಚೇತ ದೇಶಿಕಃ ॥ ೫೬ ॥

ಅಥಾಪಸುದ್ಯ ಸ್ನಾನಾಂಬು ಪರಿಧಾಯ ಸಿತಾಂಬರಂ ।
ಆಚಾಂತೋಽಲಂಕೃತಃ ಶಿಷ್ಯಃ ಪ್ರಾಂಜಲಿರ್ಮಂಟಪಂ ವ್ರಜೇತ್ ॥ ೫೭ ॥

---

ಆತ್ಮವನ್ನು ಗ್ರಹಿಸಿ ಅವನ ಹೃದಯಪ್ರದೇಶದಲ್ಲಿ ಆ ಆತ್ಮನನ್ನು ಇರಿಸಬೇಕು. ಆ ಶಿಷ್ಯಾತ್ಮನನ್ನು ಪರಿಗ್ರಹಿಸಿ ಶಿವನಿಂದ ತನಗೆ ಬಂದ ಉಪವೀತವನ್ನು ಆ ಶಿಷ್ಯನಿಗೂ ಕೊಟ್ಟು ಆಮೇಲೆ ಮೂರು ಹೋಮಗಳನ್ನು ಮಾಡಿ ಪೂರ್ಣಾಹುತಿಯನ್ನು ಮಾಡಬೇಕು.

೫೪-೫೬. ಶಿವನ ದಕ್ಷಿಣದಿಕ್ಕಿನಲ್ಲಿ, ಶಿಷ್ಯನನ್ನು ಶ್ರೇಷ್ಠವಾದ ದರ್ಭೆ ಮತ್ತು ಹೂಗಳನ್ನು ಹಾಸಿದ ಪೀಠದಲ್ಲಿ ಕೈಜೋಡಿಸಿಕೊಂಡು ಉತ್ತರಮುಖವಾಗಿ ಕುಳ್ಳಿರಿಸಿ ತಾನು ಸ್ವಸ್ತಿಕಾಸನದಲ್ಲಿ ಪೂರ್ವಾಭಿಮುಖವಾಗಿ ಕುಳಿತು, ಹಿಂದೆಯೇ ಪೂಜೆಮಾಡಿ ಅಲಂಕರಿಸಿದ ಪೂರ್ಣಕಲಶವನ್ನು ತೆಗೆದುಕೊಂಡು ಮಂಗಳವಾದ್ಯಗಳು ಧ್ವನಿಮಾಡುತ್ತಿರಲು ಮಂತ್ರಗಳನ್ನು ಹೇಳುತ್ತ, ಶಿವನನ್ನು ಧ್ಯಾನಿಸುತ್ತಾ ಆ ಕಲಶದ ನೀರಿನಿಂದ ಗುರುವು ಶಿಷ್ಯನಿಗೆ ಅಭಿಷೇಕವನ್ನು ಮಾಡಬೇಕು.

೫೭-೫೮. ಆಮೇಲೆ ಶಿಷ್ಯನು ಸ್ನಾನಮಾಡಿದ ನೀರನ್ನು ಒರಸಿಕೊಂಡು ಬಿಳಿಯ ವಸ್ತ್ರವನ್ನು ಉಟ್ಟು ಆಚಮನವನ್ನು ಮಾಡಿ ಅಲಂಕಾರಮಾಡಿಕೊಂಡು ಕೈಜೋಡಿಸಿಕೊಂಡು ಮಂಟಪಕ್ಕೆ ಬರಬೇಕು. ಅವನನ್ನು ಗುರುವು ಹಿಂದಿ

**ಉಪವೇಶ್ಯ ಯಥಾಪೂರ್ವಂ ತಂ ಗುರುರ್ದರ್ಭವಿಷ್ಟರೇ ।**
**ಸಂಪೂಜ್ಯ ಮಂಡಲೇ ದೇವಂ ಕರನ್ಯಾಸಂ ಸಮಾಚರೇತ್ ॥ ೫೮ ॥**

**ತತಸ್ತು ಭಸ್ಮನಾ ದೇವಂ ಧ್ಯಾಯನ್ಮನಸಿ ದೇಶಿಕಃ ।**
**ಸಮಾಲಭೇತ ಪಾಣಿಭ್ಯಾಂ ಶಿಶುಂ ಶಿವಮುದೀರಯೇತ್ ॥ ೫೯ ॥**

**ಅಥ ತಸ್ಯ ಶಿವಾಚಾರ್ಯೋ ದಹನಪ್ಲಾವನಾದಿಕಂ ।**
**ಸಕಲೀಕರಣಂ ಕೃತ್ವಾ ಮಾತೃಕಾನ್ಯಾಸವರ್ತ್ಮನಾ ॥ ೬೦ ॥**

**ತತಃ ಶಿವಾಸನಂ ಧ್ಯಾತ್ವಾ ಶಿಷ್ಯಮೂರ್ಧನಿ ದೇಶಿಕಃ ।**
**ತತ್ರಾವಾಹ್ಯ ಯಥಾನ್ಯಾಯಮರ್ಚಯೇನ್ಮನಸಾ ಶಿವಂ ॥ ೬೧ ॥**

**ಪ್ರಾರ್ಥಯೇತ್ಪ್ರಾಂಜಲಿರ್ದೇವಂ ನಿತ್ಯಮತ್ರ ಸ್ಥಿತೋ ಭವ ।**
**ಇತಿ ವಿಜ್ಞಾಪ್ಯ ತಂ ಶಂಭೋಸ್ತೇಜಸಾ ಭಾಸುರಂ ಸ್ಮರೇತ್ ॥ ೬೨ ॥**

**ಸಂಪೂಜ್ಯಾಥ ಶಿವಂ ಶೈವೀಮಾಜ್ಞಾಂ ಪ್ರಾಪ್ಯ ಶಿವಾತ್ಮಿಕಾಂ ।**
**ಕರ್ಣೇ ಶಿಷ್ಯಸ್ಯ ಶನಕೈಃ ಶಿವಮಂತ್ರಮುದೀರಯೇತ್ ॥ ೬೩ ॥**

---

ನಂತೆ ದರ್ಭಾಸನದಲ್ಲಿ ಕುಳ್ಳಿರಿಸಿ ಮಂಡಲದಲ್ಲಿ ಶಿವನನ್ನು ಪೂಜಿಸಿ ಕರನ್ಯಾಸವನ್ನು ಪ್ರಾರಂಭಿಸಬೇಕು.

೫೯-೬೧. ಆಮೇಲೆ ಗುರುವು ತನ್ನ ಮನಸ್ಸಿನಲ್ಲಿ ಶಿವನನ್ನು ಧ್ಯಾನಿಸುತ್ತ ಕೈಗಳಿಂದ ಭಸ್ಮವನ್ನು ತೆಗೆದುಕೊಂಡು ಶಿವನಾಮವನ್ನುಚ್ಚರಿಸಿ ದಹನ, ಪ್ಲಾವನ, ಸಕಲೀಕರಣಗಳನ್ನುಮಾಡಿ ಮಾತೃಕಾನ್ಯಾಸಪೂರ್ವಕವಾಗಿ ಶಿಷ್ಯನ ನೆತ್ತಿಯಲ್ಲಿ ಶಿವಾಸನವನ್ನು ಧ್ಯಾನಿಸಿ ಅಲ್ಲಿ ಶಿವನನ್ನು ಆವಾಹನೆಮಾಡಿ ವಿಧಿಗನುಸಾರವಾಗಿ ಮನಸ್ಸಿನಿಂದಲೇ ಶಿವಪೂಜೆಯನ್ನು ಮಾಡಬೇಕು.

೬೨-೬೩. ಕೈಮುಗಿದುಕೊಂಡು, ಎಲೈ ದೇವನೇ ಯಾವಾಗಲೂ ನೀನು ಇಲ್ಲಿ ಸ್ಥಿರವಾಗಿ ನೆಲಸಿರು ಎಂಬುದಾಗಿ ಪ್ರಾರ್ಥನೆಮಾಡಿಕೊಂಡು ಆ ಶಿಷ್ಯನು ಶಿವನ ತೇಜಸ್ಸಿನಿಂದ ಪ್ರಕಾಶವುಳ್ಳವನಾದನೆಂದು ಭಾವಿಸಿ, ಬಳಿಕ ಶಿವ

ಸ ತು ಬದ್ಧಾಂಜಲಿಃ ಶ್ರುತ್ವಾ ಮಂತ್ರಂ ತದ್ಗತಮಾನಸಃ ।
ಶನೈಸ್ತಂ ವ್ಯಾಹರೇಚ್ಛಿಷ್ಯಶ್ಶಿವಾಚಾರ್ಯಸ್ಯ ಶಾಸನಾತ್ ॥ ೬೪ ॥

ತತಃ ಶಾಕ್ತಂ ಚ ಸಂದಿಶ್ಯ ಮಂತ್ರಂ ಮಂತ್ರವಿಚಕ್ಷಣಃ ।
ಉಚ್ಚಾರಯಿತ್ವಾ ಚ ಸುಖಂ ತಸ್ಮೈ ಮಂಗಲಮಾದಿಶೇತ್ ॥ ೬೫ ॥

ತತಃ ಸಮಾಸಾನ್ಮಂತ್ರಾರ್ಥಂ ವಾಚ್ಯವಾಚಕಯೋಗತಃ ।
ಸಮಾದಿಶ್ಯೇಶ್ವರಂ ರೂಪಂ ಯೋಗಮಾಸನಮಾದಿಶೇತ್ ॥ ೬೬ ॥

ಅಥ ಗುರ್ವಾಜ್ಞಯಾ ಶಿಷ್ಯಃ ಶಿವಾಗ್ನಿಗುರುಸನ್ನಿಧೌ ।
ಭಕ್ತ್ಯೈವಮಭಿಸಂಧಾಯ ದೀಕ್ಷಾವಾಕ್ಯಮುದೀರಯೇತ್ ॥ ೬೭ ॥

ವರಂ ಪ್ರಾಣಪರಿತ್ಯಾಗಶ್ಛೇದನಂ ಶಿರಸೋಽಪಿ ವಾ ।
ನ ತ್ವನಭ್ಯರ್ಚ್ಯ ಭುಂಜೀಯ ಭಗವಂತಂ ತ್ರಿಲೋಚನಂ ॥ ೬೮ ॥

---

ನನ್ನು ಪೂಜಿಸಿ ಅವನ ಅಜ್ಞೆಯನ್ನು ಪಡೆದು ಶಿಷ್ಯನ ಕಿವಿಯಲ್ಲಿ ಮೆಲ್ಲಗೆ ಆ ಮಂತ್ರವನ್ನು ಉಚ್ಚರಿಸಬೇಕು.

೬೪-೬೬. ಆಮೇಲೆ ಮಂತ್ರಜ್ಞನಾದ ಗುರುವು ದೇವೀ ಮಂತ್ರವನ್ನು ಉಪದೇಶಿಸಿ, ಶಿಷ್ಯನಿಂದ ಮಂತ್ರಗಳನ್ನು ಹೇಳಿಸಿ ಅವನಿಗೆ ಮಂಗಳಕರವಾದ ಆಶೀರ್ವಾದವನ್ನು ಮಾಡಿ ವಾಚ್ಯವಾಚಕಸಂಬಂಧದಿಂದ ಮಂತ್ರಾರ್ಥವನ್ನು ಸಂಗ್ರಹವಾಗಿ ಹೇಳಿ ಈಶ್ವರಸ್ವರೂಪವನ್ನೂ, ಯೋಗಶಾಸ್ತ್ರಸಂಬಂಧವಾದ ಆಸನಾದಿಗಳನ್ನೂ ಉಪದೇಶಿಸಬೇಕು.

೬೭. ಬಳಿಕ ಗುರುವಿನ ಅಪ್ಪಣೆಯಿಂದ ಶಿಷ್ಯನು ಶಿವಾಗ್ನಿಗುರುಗಳ ಸಮೀಪದಲ್ಲಿ ಭಕ್ತಿಯಿಂದ ಪ್ರತಿಜ್ಞಾಪೂರ್ವಕವಾಗಿ ದೀಕ್ಷಾವಾಕ್ಯಗಳನ್ನು ಹೇಳಬೇಕು.

೬೮-೭೦. ಮಹಾಮಹಿಮನೂ ತ್ರಿಲೋಚನನೂ ಆದ ಶಿವನನ್ನು ಪೂಜಿಸದೆ ಊಟಮಾಡುವುದಿಲ್ಲ. ಶಿವಪೂಜೆಯನ್ನು ಮಾಡದೆ ಊಟಮಾಡುವುದಕ್ಕಿಂತಲೂ ಪ್ರಾಣತ್ಯಾಗವಾಗಲಿ ಶಿರಶ್ಛೇದನವಾಗಲಿ ಉತ್ತಮವೆಂದು ಭಾವಿಸು

ಸ ಏವ ದದ್ಯಾನ್ನಿಯತೋ ಯಾವನ್ಮೋಹವಿಪರ್ಯಯಃ ।
ತಾವದಾರಾಧಯೇದ್ದೇವಂ ತನ್ನಿಷ್ಠಸ್ತತ್ಪರಾಯಣಃ ॥ ೬೯ ॥

ತತಃ ಸ ಸಮಯೋ ನಾಮ ಭವಿಷ್ಯತಿ ಶಿವಾಶ್ರಮೋ ।
ಲಬ್ಧಾಧಿಕಾರೋ ಗುರ್ವಾಜ್ಞಾಪಾಲಕಸ್ತದ್ವಶೋ ಭವೇತ್ ॥ ೭೦ ॥

ಅತಃ ಪರಂ ನ್ಯಸ್ತಕರೋ ಭಸ್ಮಾದಾಯ ಸ್ವಹಸ್ತತಃ ।
ದದ್ಯಾಚ್ಛಿಷ್ಯಾಯ ಮೂಲೇನ ರುದ್ರಾಕ್ಷಂ ಚಾಭಿಮಂತ್ರಿತಂ ॥ ೭೧ ॥

ಪ್ರತಿಮಾ ವಾsಪಿ ದೇವಸ್ಯ ಗೂಢದೇಹಮಥಾಪಿ ವಾ ।
ಪೂಜಾ ಹೋಮಜಪಧ್ಯಾನಸಾಧನಾನಿ ಚ ಸಂಭವೇ ॥ ೭೨ ॥

---

ವೆನು. ಆ ಶಿವನೇ ನಿಯತವಾಗಿ ಭಕ್ತರ ಇಷ್ಟಾರ್ಥಗಳನ್ನು ಕೊಡುವನು ಎಂದು ಹೇಳಬೇಕು. ಅನಂತರ ಅಜ್ಞಾನವು ನಾಶವಾಗುವವರೆಗೂ ಏಕಾಗ್ರ ಚಿತ್ತನಾಗಿ ಶಿವನನ್ನು ಪೂಜಿಸುತ್ತಾ ಇರಬೇಕು. ಇದನ್ನೇ ಶಿವಾಶ್ರಮಧರ್ಮ ವೆಂದೂ, ಸಮಯಾಚಾರವೆಂದೂ ಕರೆಯುವರು. ಅಧಿಕಾರವನ್ನು ಹೊಂದಿ ಗುರುವಿನ ಅಪ್ಪಣೆಯನ್ನು ನಡೆಸುವ ಮನುಷ್ಯನು ಗುರುವಿನ ಅಧೀನವಾಗಿರ ಬೇಕು.

೭೧. ಬಳಿಕ ಗುರುವು ಅನುಗ್ರಹಾರ್ಥವಾಗಿ ಶಿಷ್ಯನ ಶರೀರದಮೇಲೆ ಕೈಯ್ಯನ್ನಿಟ್ಟು ತನ್ನ ಕೈಯಿಂದ ಭಸ್ಮವನ್ನು ತೆಗೆದುಕೊಂಡು ಮೂಲಮಂತ್ರ ದಿಂದ ಅಭಿಮಂತ್ರಿಸಿ ರುದ್ರಾಕ್ಷಿಯೊಡನೆ ಶಿಷ್ಯನಿಗೆ ಕೊಡಬೇಕು.

೭೨-೭೩. ಗುರುವು ತನ್ನಲ್ಲಿರುವ ಶಿವನ ಪ್ರತಿಮೆಯನ್ನಾಗಲಿ, ಲಿಂಗ ವನ್ನಾಗಲಿ ಪೂಜಾ, ಹೋಮ, ಜಪ, ಧ್ಯಾನಗಳಿಗೆ ಉಪಯೋಗವಾಗುವ ವಸ್ತು ಗಳನ್ನಾಗಲಿ ಶಿಷ್ಯನಿಗೆ ಕೊಡಬೇಕು. ಆ ಶಿಷ್ಯನು ಗುರುವು ಕೊಟ್ಟದ್ದನ್ನು

ಸೋऽಪಿ ಶಿಷ್ಯಃ ಶಿವಾಚಾರ್ಯಾಲ್ಲಬ್ಧಾನಿ ಬಹುಮಾನತಃ ।
ಆದದೀತಾಜ್ಞಯಾ ತಸ್ಯ ದೇಶಿಕಸ್ಯ ನ ಚಾನ್ಯಥಾ ॥ ೭೩ ॥

ಆಚಾರ್ಯಾದಾಪ್ತಮಖಿಲಂ ಶಿರಸ್ಯಾದಾಯ ಭಕ್ತಿತಃ ।
ರಕ್ಷಯೇತ್ಪೂಜಯೇಚ್ಚೈಂಭುಂ ಮಠೇ ವಾ ಗೃಹ ಏವ ವಾ ॥ ೭೪ ॥

ಅತಃಪರಂ ಶಿವಾಚಾರಮಾದಿಶೇದಸ್ಯ ದೇಶಿಕಃ ।
ಭಕ್ತಿಶ್ರದ್ಧಾನುಸಾರೇಣ ಪ್ರಜ್ಞಯಾಶ್ವಾನುಸಾರತಃ ॥ ೭೫ ॥

ಯದುಕ್ತಂ ಯತ್ಸಮಾಜ್ಞಾತಂ ಯಚ್ಚೈವಾನ್ಯತ್ಪ್ರಕೀರ್ತಿತಂ ।
ಶಿವಾಚಾರ್ಯೇಣ ಸಮಯೀ ತತ್ಸರ್ವಂ ಶಿರಸಾ ವಹೇತ್ ॥ ೭೬ ॥

ಶಿವಾಗಮಸ್ಯ ಗ್ರಹಣಂ ವಾಚನಂ ಶ್ರವಣಂ ತಥಾ ।
ದೇಶಿಕಾದೇಶತಃ ಕುರ್ಯಾನ್ನ ಸ್ವೇಚ್ಛಾತೋ ನ ಚಾನ್ಯತಃ ॥ ೭೭ ॥

---

ಅತ್ಯಂತ ಪ್ರೀತಿಗೌರವಗಳಿಂದ ಆ ಗುರುವಿನ ಆಜ್ಞಾನುಸಾರವಾಗಿ ತೆಗೆದುಕೊಳ್ಳಬೇಕು.

೭೪. ಶಿಷ್ಯನು ಗುರುವು ಕೊಟ್ಟಿದ್ದೆಲ್ಲವನ್ನೂ, ಭಕ್ತಿಯಿಂದ ತೆಗೆದುಕೊಂಡು ಶಿರಸಾವಹಿಸಿ (ತಲೆಯಮೇಲಿಟ್ಟುಕೊಂಡು) ರಕ್ಷಿಸುತ್ತ ಅವುಗಳಿಂದ ಮಠದಲ್ಲಾಗಲಿ ಮನೆಯಲ್ಲಾಗಲಿ ಶಿವಪೂಜೆಯನ್ನು ಮಾಡುತ್ತಿರಬೇಕು.

೭೫-೭೬. ಆಮೇಲೆ ಗುರುವು ಶಿಷ್ಯನ ಬುದ್ಧಿ, ನಂಬಿಕೆ ಇವುಗಳಿಗನುಸಾರವಾಗಿ ಶಿವಾಚಾರವನ್ನು (ಶಿವಧರ್ಮವನ್ನು) ಉಪದೇಶಿಸಬೇಕು. ಶಿಷ್ಯನು ಆ ಸಂಸ್ಕಾರಸಮಯದಲ್ಲಿ ಗುರವು ಹೇಳಿದ ಮತ್ತು ಆಜ್ಞೆಮಾಡಿದ ಎಲ್ಲಾ ವಿಷಯಗಳನ್ನೂ ಶಿರಸಾವಹಿಸಿ ಅದರಂತೆ ನಡೆಯಬೇಕು.

೭೭. ಶಿಷ್ಯನು ಗುರುವಿನ ಅಪ್ಪಣೆಯಂತೆ ಶಿವಾಗಮಶಾಸ್ತ್ರವನ್ನು ಕೇಳುವುದು, ಓದುವುದು, ಅದರಲ್ಲಿ ಹೇಳುವ ವಿಷಯಗಳನ್ನು ಗ್ರಹಿಸುವುದು. ಈ

**ಇತಿ ಸಂಕ್ಷೇಪತಃ ಪ್ರೋಕ್ತಃ ಸಂಸ್ಕಾರಃ ಸಮಯಾಹ್ವಯಃ ।**
**ಸಾಕ್ಷಾಚ್ಛಿವಪುರಪ್ರಾಪ್ತೌ ನೃಣಾಂ ಪರಮಸಾಧನಂ ॥ ೭೮ ॥**

**ಇತಿ ಶ್ರೀಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-**
**ಮುತ್ತರಭಾಗೇ ಶಿಷ್ಯಸಂಸ್ಕಾರವರ್ಣನಂ ನಾಮ**
**ಷೋಡಶೋಽಧ್ಯಾಯಃ**

---

ಕಾರ್ಯಗಳನ್ನು ಮಾಡಬೇಕು. ಇವುಗಳನ್ನು ತನ್ನ ಮನಬಂದಂತೆಯಾಗಲಿ, ಗುರುವಲ್ಲದೆ ಇತರರು ಹೇಳಿದಂತೆಯಾಗಲಿ ಮಾಡಬಾರದು.

೭೮. ಈರೀತಿ ಮನುಷ್ಯರಿಗೆ ಸಾಕ್ಷಾಚ್ಛಿವಪುರವಾದ ಕೈಲಾಸಪ್ರಾಪ್ತಿಗೆ ಮುಖ್ಯ ಸಾಧನವಾದ ಸಮಯವೆಂಬ ಶಿಷ್ಯಸಂಸ್ಕಾರಕ್ರಮವನ್ನು ಸಂಕ್ಷೇಪವಾಗಿ ಹೇಳಿರುವೆನು.

ಇಲ್ಲಿಗೆ ಶ್ರೀಶಿವಮಹಾಪುರಾಣದ ಏಳನೆಯ ವಾಯವೀಯಸಂಹಿತೆಯ
ಉತ್ತರಭಾಗದಲ್ಲಿ ಶಿಷ್ಯಸಂಸ್ಕಾರವರ್ಣನವೆಂಬ ಹದಿನಾರನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮಹಾ ಪುರಾಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ಸಪ್ತದಶೋಽಧ್ಯಾಯಃ

---

॥ ಉಪಮನ್ಯುರುವಾಚ ॥

**ಅತಃ ಪರಂ ಸಮಾವೇಕ್ಷ್ಯ ಗುರುಃ ಶಿಷ್ಯಸ್ಯ ಯೋಗ್ಯತಾಂ ।**
**ಷಡಧ್ವಶುದ್ಧಿಂ ಕುರ್ವೀತ ಸರ್ವಬಂಧವಿಮುಕ್ತಯೇ ॥ ೧ ॥**

**ಕಲಾ ತತ್ತ್ವಂ ಚ ಭುವನಂ ವರ್ಣಂ ಪದಮತಃಪರಂ ।**
**ಮಂತ್ರಶ್ಚೇತಿ ಸಮಾಸೇನ ಷಡಧ್ವಾ ಪರಿಪಠ್ಯತೇ ॥ ೨ ॥**

---

### ಹದಿನೇಳನೆಯ ಅಧ್ಯಾಯವು.

೧. ಉಪಮನ್ಯುವಿಂತೆಂದನು—ಶಿಷ್ಯನಿಗೆ ಮಂತ್ರೋಪದೇಶರೂಪವಾದ ಸಂಸ್ಕಾರವಾದಮೇಲೆ ಗುರುವು ಶಿಷ್ಯನ ಯೋಗ್ಯತೆಯನ್ನು ನೋಡಿಕೊಂಡು ಅವನ ಸಮಸ್ತ ಪಾಪರೂಪವಾದ ಬಂಧಗಳ ನಿವೃತ್ತಿಗಾಗಿ ಷಡಧ್ವಶುದ್ಧಿರೂಪವಾದ ಸಂಸ್ಕಾರವನ್ನು ಮಾಡಬೇಕು.

೨. ಕಲಾ, ತತ್ತ್ವ, ಭುವನ, ವರ್ಣ, ಪದ, ಮಂತ್ರ ಎಂಬಿವೇ ಷಡಧ್ವಗಳು.

ನಿವೃತ್ತ್ಯಾದ್ಯಾಃ ಕಲಾಃ ಪಂಚ ಕಲಾಧ್ವಾ ಕಥ್ಯತೇ ಬುಧೈಃ ।
ವ್ಯಾಪ್ತಾಃ ಕಲಾಭಿರಿತರೇ ತ್ವಧ್ವಾನಃ ಪಂಚ ಪಂಚಭಿಃ ॥ ೩ ॥

ಶಿವತತ್ತ್ವಾದಿಭೂಮ್ಯಂತಂ ತತ್ತ್ವಾಧ್ವಾ ಸಮುದಾಹೃತಃ ।
ಷಡ್ವಿಂಶತ್ಸಂಖ್ಯಯೋಪೇತಃ ಶುದ್ಧಾಶುದ್ಧೋಭಯಾತ್ಮಕಃ ॥ ೪ ॥

ಆಧಾರಾದ್ಯುನ್ಮನಾಂತಶ್ಚ ಭುವನಾಧ್ವಾ ಪ್ರಕೀರ್ತಿತಃ ।
ವಿನಾ ಭೇದೋಪಭೇದಾಢ್ಯಃ ಷಷ್ಟಿಸಂಖ್ಯಾಸಮನ್ವಿತಃ ॥ ೫ ॥

ಪಂಚಾಶದ್ರುದ್ರರೂಪಾಸ್ತು ವರ್ಣಾ ವರ್ಣಾಧ್ವಸಂಜ್ಞಿತಾಃ ।
ಅನೇಕಭೇದಸಂಪನ್ನಃ ಪದಾಧ್ವಾ ಸಮುದಾಹೃತಃ ॥ ೬ ॥

---

೩. ನಿವೃತ್ತಿಯೇ ಮುಂತಾದ ಎಂದರೆ—ನಿವೃತ್ತಿ, ಪ್ರತಿಷ್ಠಾ, ವಿದ್ಯಾ ಶಾಂತಿ, ಶಾಂತಾತೀತ ಎಂಬ ಐದು ಕಲೆಗಳು ಕಲಾಧ್ವವೆನಿಸುವುದು. ಈ ಕಲಾಧ್ವಗಳು ಇತರ ಐದು ಅಧ್ವಗಳನ್ನು ವ್ಯಾಪಿಸಿಕೊಂಡಿರುವುವು.

೪. ಶಿವತತ್ತ್ವವೇ ಮೊದಲಾಗಿ ಭೂಮಿತತ್ತ್ವದವರೆಗೆ ಶುದ್ಧಾಶುದ್ಧ ರೂಪದಿಂದಿರುವ ಇಪ್ಪತ್ತಾರು ತತ್ತ್ವಗಳು ತತ್ತ್ವಾಧ್ವವೆನಿಸುವುವು. ಇವುಗಳನ್ನು ಹಿಂದೆಯೇ ಹೇಳಿದೆ.

೫. ಆಧಾರಶಕ್ತಿ ಮೊದಲಾಗಿ ಉನ್ಮನೀಶಕ್ತಿಯವರೆಗೆ ಭೇದೋಪಭೇದಗಳಿಲ್ಲದ ಅರವತ್ತು ತತ್ತ್ವಗಳು ಭುವನಾಧ್ವವೆನಿಸುವುದು.

೬. ರುದ್ರಸ್ವರೂಪವಾದ ಐವತ್ತು ಅಕ್ಷರಗಳೇ ವರ್ಣಾಧ್ವವೆನಿಸುವುದು. ಪದಾಧ್ವವು ಅನೇಕ ಭೇದಗಳುಳ್ಳದಾಗಿರುವುದು. ಸಮಸ್ತವಾದ ಉಪಮಂತ್ರಗಳಿಂದ ಕೂಡಿದ ಮಂತ್ರಾಧ್ವವು ಪರಾವಿದ್ಯೆಯಿಂದ ವ್ಯಾಪ್ತವಾದುದಾಗಿರುವುದು.

**ಸರ್ವೋಪಮಂತ್ರೈರ್ಮಂತ್ರಾಧ್ವಾ ವ್ಯಾಪ್ತಃ ಪರಮವಿದ್ಯಯಾ ।**
**ಯಥಾ ಶಿವೋ ನ ತತ್ತ್ವೇಷು ಗಣ್ಯತೇ ತತ್ತ್ವನಾಯಕಃ ॥ ೭ ॥**

**ಮಂತ್ರಾಧ್ವನಿ ನ ಗಣ್ಯೇತ ತಥಾಸೌ ಮಂತ್ರನಾಯಕಃ ।**
**ಕಲಾಧ್ವನೋ ವ್ಯಾಪಕತ್ತ್ವಂ ವ್ಯಾಪ್ಯತ್ತ್ವಂ ಚೇತರಾಧ್ವನಾಂ ॥ ೮ ॥**

**ನ ವೇತ್ತಿ ತತ್ತ್ವತೋ ಯಸ್ಸ ನೈವಾರ್ಹತ್ಯಧ್ವಶೋಧನಂ ।**
**ಷಡ್ವಿಧಸ್ಯಾಧ್ವನೋ ರೂಪಂ ನ ಯೇನ ವಿದಿತಂ ಭವೇತ್ ॥ ೯ ॥**

**ವ್ಯಾಪ್ಯವ್ಯಾಪಕತಾ ತೇನ ಜ್ಞಾತುಮೇವ ನ ಶಕ್ಯತೇ ।**
**ತಸ್ಮಾದಧ್ವಸ್ವರೂಪಂ ಚ ವ್ಯಾಪ್ಯವ್ಯಾಪಕತಾಂ ತಥಾ ॥ ೧೦ ॥**

**ಯಥಾವದವಗಮ್ಯೈವ ಕುರ್ಯಾದಧ್ವವಿಶೋಧನಂ ।**
**ಕುಂಡಮಂಡಲಪರ್ಯಂತಂ ತತ್ರ ಕೃತ್ವಾ ಯಥಾ ಪುರಾ ॥ ೧೧ ॥**

---

೭. ಶಿವನು ತತ್ತ್ವಗಳಿಗೆಲ್ಲ ಸ್ವಾಮಿಯಾದುದರಿಂದ ಇಪ್ಪತ್ತಾರು ತತ್ತ್ವಗಳಲ್ಲಿ ಶಿವನನ್ನು ಸೇರಿಸಲಿಲ್ಲ. ಹಾಗೆಯೇ ಆ ಶಿವನು ಮಂತ್ರಗಳಿಗೆಲ್ಲಾ ಸ್ವಾಮಿಯಾದುದರಿಂದ ಮಂತ್ರಾಧ್ವದಲ್ಲಿಯೂ ಸೇರಿಲ್ಲ.

೮. ಕಲಾಧ್ವವು ವ್ಯಾಪಕವಾದುದು [ಸೂಕ್ಷ್ಮವು] ಇತರಾಧ್ವಗಳು ವ್ಯಾಪ್ಯವಾದುವು. (ಸ್ಥೂಲ) ಎಂದರೆ ಕಲಾಧ್ವವು ಇತರ ಐದು ಅಧ್ವಗಳನ್ನು ವ್ಯಾಪಿಸಿಕೊಂಡಿರುವುದು. ಇದರ ಸ್ವರೂಪವನ್ನು ನಿಜವಾಗಿ ತಿಳಿಯದವನು ಅಧ್ವಶೋಧನೆಗೆ ಯೋಗ್ಯನಾಗಲಾರನು.

೯-೧೦. ಮನುಷ್ಯನು ಷಡ್ವಿಧಸ್ವರೂಪವನ್ನು ತಿಳಿಯದಿದ್ದರೆ ಅದರ ವ್ಯಾಪ್ಯವ್ಯಾಪಕ (ಸ್ಥೂಲ ಸೂಕ್ಷ್ಮ) ಸ್ವರೂಪಗಳನ್ನೂ ತಿಳಿಯಲಾಗುವುದಿಲ್ಲ. ಆದುದರಿಂದ ಷಡಧ್ವಸ್ವರೂಪವನ್ನೂ ಅದರ ವ್ಯಾಪ್ಯವ್ಯಾಪಕಭಾವವನ್ನೂ ಚೆನ್ನಾಗಿ ತಿಳಿದುಕೊಂಡು ಅಧ್ವಶುದ್ಧಿಯನ್ನು ಮಾಡಿಕೊಳ್ಳಬೇಕು.

೧೧-೧೨. ಹಿಂದೆ ಹೇಳಿದಂತೆ ಕುಂಡಮಂಡಲಗಳನ್ನು ಮಾಡಿ ಅವುಗಳ ಪೂರ್ವದಿಕ್ಕಿನಲ್ಲಿ ಎರಡು ಮೊಳದಳತೆಯ ಕಲಶಮಂಡಲವನ್ನು ಮಾಡ

ದ್ವಿಹಸ್ತಮಾನಂ ಕುರ್ವೀತ ಪ್ರಾಚ್ಯಾಂ ಕಲಶಮಂಡಲಂ ।
ತತಃ ಸ್ನಾತಃ ಶಿವಾಚಾರ್ಯಃ ಸಶಿಷ್ಯಃ ಕೃತನೈತ್ಯಕಃ ॥ ೧೨ ॥

ಪ್ರವಿಶ್ಯ ಮಂಡಲಂ ಶಂಭೋಃ ಪೂಜಾಂ ಪೂರ್ವವದಾಚರೇತ್ ।
ತತ್ರಾಢಕಾವರೈಸ್ಸಿದ್ಧಂ ತಂಡುಲೈಃ ಪಾಯಸಂ ಪ್ರಭೋಃ ॥ ೧೩ ॥

ಅರ್ಧಂ ನಿವೇದ್ಯ ಹೋಮಾಯ ಶೇಷಂ ಸಮುಪಕಲ್ಪಯೇತ್ ।
ಪುರತಃ ಕಲ್ಪಿತೇ ವಾಥ ಮಂಡಲೇ ವರ್ಣಮಂಡಿತೇ ॥ ೧೪ ॥

ಸ್ಥಾಪಯೇತ್ಪಂಚಕಲಶಾನ್ ದಿಕ್ಷು ಮಧ್ಯೇ ಚ ದೇಶಿಕಃ ।
ತೇಷು ಬ್ರಹ್ಮಾಣಿ ಮೂಲಾರ್ಣೈರ್ಬಿಂದುನಾದಸಮನ್ವಿತೈಃ ॥ ೧೫ ॥

ನಮ ಆದ್ಯೈರ್ಯಕಾರಾಂತೈಃ ಕಲ್ಪಯೇತ್ಕಲ್ಪವಿತ್ತಮಃ ।
ಈಶಾನಂ ಮಧ್ಯಮೇ ಕುಂಭೇ ಪುರುಷಂ ಪುರತಃ ಸ್ಥಿತೇ ॥ ೧೬ ॥

---

ಬೇಕು. ಆಮೇಲೆ ಗುರುವು ಶಿಷ್ಯನೊಡನೆ ಸ್ನಾನವನ್ನು ಮಾಡಿ ನಿತ್ಯಕರ್ಮಗಳನ್ನು ಮಾಡಿಕೊಂಡು ಮಂಡಲವನ್ನು ಪ್ರವೇಶಿಸಿ ಹಿಂದಿನಂತೆ ಶಿವನ ಪೂಜೆಯನ್ನು ಮಾಡಬೇಕು.

೧೩. ಈ ಸಂದರ್ಭದಲ್ಲಿ ಆಢಕವೆಂಬ ಒಂದು ಅಳತೆಯಷ್ಟು ಅಕ್ಕಿಯಿಂದ ಪಾಯಸವನ್ನು ಮಾಡಿ ಅರ್ಧಭಾಗವನ್ನು ಸ್ವಾಮಿಗೆ ನಿವೇದನಮಾಡಿ ಮಿಕ್ಕುದನ್ನು ಹೋಮಕ್ಕಾಗಿ ಇಡಬೇಕು.

೧೪-೧೫. ಕಲ್ಪವನ್ನು ತಿಳಿದ ಗುರುವು ಮುಂಭಾಗದಲ್ಲಿ ಬಣ್ಣಬಣ್ಣಗಳ ರಂಗವಲ್ಲಿಯಿಂದ ಅಲಂಕರಿಸಿ, ಮಂಡಲದಲ್ಲಿ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಕಲಶಗಳನ್ನೂ, ಮಧ್ಯದಲ್ಲಿ ಪ್ರಧಾನಕಲಶವನ್ನೂ ಹೀಗೆ ಐದು ಕಲಶಗಳನ್ನು ಸ್ಥಾಪಿಸಿ, ಆ ಕಲಶಗಳಲ್ಲಿ ಓಂಕಾರಸಹಿತವಾದ ನಮಃಶಿವಾಯ ಎಂಬ ಮೂಲಮಂತ್ರಗಳನ್ನು ಕಲ್ಪಿಸಬೇಕು. ಅದೇ ಪಂಚಬ್ರಹ್ಮ ಕಲಶಗಳು.

೧೬-೧೭. ಮಧ್ಯಕಲಶದಲ್ಲಿ ಈಶಾನನನ್ನೂ, ಪೂರ್ವದಿಕ್ಕಿನ ಕಲಶದಲ್ಲಿ ತತ್ಪುರಷನನ್ನೂ, ದಕ್ಷಿಣಕಲಶದಲ್ಲಿ ಅಘೋರನನ್ನೂ, ಉತ್ತರಕಲಶದಲ್ಲಿ ವಾಮ

**ಅಘೋರಂ ದಕ್ಷಿಣೇ ವಾಮೇ ವಾಮಂ ಸದ್ಯಂ ಚ ಪಶ್ಚಿಮೇ ।**
**ರಕ್ಷಾಂ ವಿಧಾಯ ಮುದ್ರಾಂ ಚ ಬಧ್ವಾ ಕುಂಭಾಭಿಮಂತ್ರಣಂ ॥ ೧೭ ॥**

**ಕೃತ್ವಾ ಶಿವಾನಲ್ಯೈರ್ಹೋಮಂ ಪ್ರಾರಭೇತ ಯಥಾ ಪುರಾ ।**
**ಯದರ್ಧಂ ಪಾಯಸಂ ಪೂರ್ವಂ ಹೋಮಾರ್ಥಂ ಪರಿಕಲ್ಪಿತಂ ॥ ೧೮ ॥**

**ಹುತ್ವಾ ಶಿಷ್ಯಸ್ಯ ತಚ್ಛೇಷಂ ಭೋಕ್ತುಂ ಸಮುಪಕಲ್ಪಯೇತ್ ।**
**ತರ್ಪಣಾಂತಂ ಚ ಮಂತ್ರಾಣಾಂ ಕೃತ್ವಾ ಕರ್ಮ ಯಥಾ ಪುರಾ ॥ ೧೯ ॥**

**ಹುತ್ವಾ ಪೂರ್ಣಾಹುತಿಂ ತೇಷಾಂ ತತಃ ಕುರ್ಯಾತ್ಪ್ರದೀಪನಂ ।**
**ಓಂಕಾರಾದನುಹುಂಕಾರಂ ತತೋ ಮೂಲಂ ಫಡಂತಕಂ ॥ ೨೦ ॥**

**ಸ್ವಾಹಾಂತಂ ದೀಪನೇ ಪ್ರಾಹುರಂಗಾನಿ ಚ ಯಥಾಕ್ರಮಂ ।**
**ತೇಷಾಮಾಹುತಯಸ್ತಿಸ್ರೋ ದೇಯಾ ದೀಪನಕರ್ಮಣಿ ॥ ೨೧ ॥**

---

ದೇವನನ್ನೂ, ಪಶ್ಚಿಮಕಲಶದಲ್ಲಿ ಸದ್ಯೋಜಾತನನ್ನೂ ಆವಾಹನೆಮಾಡಿ ಮುದ್ರಾದಿಗಳನ್ನು, ಪ್ರದರ್ಶಿಸಿ ಕಲಶಮಂತ್ರಗಳಿಂದಲೂ, ಪಂಚಬ್ರಹ್ಮಮಂತ್ರಗಳಿಂದಲೂ ಅಭಿಮಂತ್ರಿಸಿ, ಹಿಂದಿನಂತೆ ಶಿವಾಗ್ನಿಯಲ್ಲಿ ಹೋಮವನ್ನು ಮಾಡಲು ಆರಂಭಿಸಬೇಕು.

೧೮-೧೯. ಹಿಂದೆ ಹೋಮಕ್ಕಾಗಿ ಗೊತ್ತುಮಾಡಿದ ಅರ್ಧಭಾಗ ಪಾಯಸವನ್ನು ಹೋಮಮಾಡಿ, ಮಿಕ್ಕುದನ್ನು ಶಿಷ್ಯನಿಗೆ ಭೋಜನಕ್ಕಾಗಿ ಕೊಡಬೇಕು. ಮಂತ್ರಗಳಿಂದ ತರ್ಪಣಾಂತವಾಗಿ ಹಿಂದಿನಂತೆ ಕರ್ಮಗಳನ್ನೂ ಪೂರ್ಣಾಹುತಿಯನ್ನೂ ಮಾಡಿ, ಆಮೇಲೆ ಪ್ರದೀಪವೆಂಬ ಕರ್ಮವನ್ನು ಮಾಡಬೇಕು.

೨೦-೨೧. "ಓಂ ಹುಂ ನಮಃ ಶಿವಾಯ ಸ್ವಾಹಾ'' ಎಂಬುವೇ ದೀಪನಕರ್ಮಕ್ಕೆ ಮೂಲಮಂತ್ರವು. ಈ ಮಂತ್ರದಿಂದ ಅಗ್ನಿಯಲ್ಲಿ ಮೂರು ಆಹುತಿಗಳನ್ನು ಕೊಡಬೇಕು. ಒಂದೊಂದು ಮಂತ್ರೋಚ್ಚಾರಣೆಯಲ್ಲಿಯೂ, ಪ್ರಕಾಶಸ್ವರೂಪವಾದ ಶಿವನ ಮೂರ್ತಿಧ್ಯಾನವನ್ನು ಮಾಡಬೇಕು.

ಮಂತ್ರೈರೇಕೈಕಶಸ್ತೈಸ್ತು ವಿಚಿಂತ್ಯಾ ದೀಪ್ತಮೂರ್ತಯಃ ।
ತ್ರಿಗುಣಂ ತ್ರಿಗುಣೀಕೃತ್ಯ ದ್ವಿಜಕನ್ಯಾಕೃತಂ ಸಿತಂ ॥ ೨೨ ॥

ಸೂತ್ರಂ ಸೂತ್ರೇಣ ಸಂಮಂತ್ರ್ಯ ಶಿಖಾಗ್ರೇ ಬಂಧಯೇಚ್ಛಿಶೋಃ ।
ಚರಣಾಂಗುಷ್ಠಪರ್ಯಂತಮೂರ್ಧ್ವಕಾಯಸ್ಯ ತಿಷ್ಠತಃ ॥ ೨೩ ॥

ಲಂಬಯಿತ್ವಾ ತು ತತ್ಸೂತ್ರಂ ಸುಷುಮ್ನಾಂ ತತ್ರ ಯೋಜಯೇತ್ ।
ಚೈತನ್ಯಂ ಸಮುಪಾದಾಯ ಮೂಲಮಂತ್ರೇಣ ಮಂತ್ರವಿತ್ ॥ ೨೪ ॥

ಹುತ್ವಾಹುತಿತ್ರಯಂ ತಸ್ಯಾಸ್ಸಾನ್ನಿಧ್ಯಮುಪಕಲ್ಪಯೇತ್ ।
ಹೃದಿ ಸಂತಾಡ್ಯ ಶಿಷ್ಯಸ್ಯ ಪುಷ್ಪಕ್ಷೇಪೇಣ ಪೂರ್ವವತ್ ॥ ೨೫ ॥

ಚೈತನ್ಯಂ ಸಮುಪಾದಾಯ ದ್ವಾದಶಾಂತೇ ನಿವೇದ್ಯ ಚ ।
ಸೂತ್ರಂ ಸೂತ್ರೇಣ ಸಂಯೋಜ್ಯ ಸಂರಕ್ಷ್ಯಾಸ್ತ್ರೇಣ ವರ್ಮಣಾ ॥ ೨೬ ॥

---

೨೨-೨೩. ಬ್ರಾಹ್ಮಣಕನ್ಯೆಯು ಮಾಡಿದ ಮೂರೆಳೆಯುಳ್ಳ ಬಿಳಿಯದಾರವನ್ನು ಮೂರಾವೃತ್ತಿ ಜೋಡಿಸಿ ಮೂಲಮಂತ್ರದಿಂದಭಿಮಂತ್ರಿಸಿ ಶಿಷ್ಯನ ತಲೆಯ ಕೂದಲಿಗೆ ಕಟ್ಟಿ, ನಿಂತಿರುವ ಶಿಷ್ಯನ ಕಾಲಿನ ಹೆಬ್ಬೆರಳಿನವರೆಗೆ ಇಳಿಯಬಿಟ್ಟು ಅದನ್ನು ಸುಷುಮ್ನಾನಾಡಿಯೆಂದು ಭಾವಿಸಬೇಕು.

೨೪-೨೬. ಮೂಲಮಂತ್ರೋಚ್ಚಾರಣೆಯಿಂದ ಚೈತನ್ಯವನ್ನು ಭಾವನೆಮಾಡಿ, ಅಗ್ನಿಯಲ್ಲಿ ಮೂರು ಹೋಮವನ್ನು ಮಾಡಿ, ಶಿಷ್ಯನಿಗೆ ಚೈತನ್ಯವು ಸನ್ನಿಧಿಯಾದಂತೆ ಭಾವಿಸಿ ಶಿಷ್ಯನ ಹೃದಯಪ್ರದೇಶದಲ್ಲಿ ಹಿಂದೆ ಮಾಡಿದಂತೆ ಹೂಗಳಿಂದ ಹೊಡೆದು ಶಿಷ್ಯಚೈತನ್ಯಕ್ಕೆ ತನ್ನ ಚೈತನ್ಯವನ್ನು ಕೂಡಿಸಿ, ಚೈತನ್ಯಸ್ಥಾಪನೆಯನ್ನೂ ಮಾಡಿ, ಹಿಂದೆ ಹೇಳಿದ ದಾರಗಳು ಹನ್ನೆರಡನ್ನು ಒಂದಕ್ಕೊಂದು ಸೇರಿಸಿ ಅಸ್ತ್ರಮುದ್ರೆಯಿಂದಲೂ, ಕವಚಮುದ್ರೆಯಿಂದಲೂ, ಶಿಷ್ಯನ ಶರೀರವನ್ನು ರಕ್ಷಿಸಿ ಆ ಹನ್ನೆರಡು ದಾರಗಳ ಗೌಸನ್ನು ಹಾಕಬೇಕು.

ಅವಗುಂಠ್ಯಾಥ ತತ್ಸೂತ್ರಂ ಶಿಷ್ಯದೇಹಂ ವಿಚಿಂತಯೇತ್ ।
ಮೂಲತ್ರಯಮಯಂ ಪಾಶಂ ಭೋಗಭೋಗ್ಯತ್ವಲಕ್ಷಣಂ ॥ ೨೭ ॥

ವಿಷಯೇಂದ್ರಿಯದೇಹಾದಿಜನಕಂ ತಸ್ಯ ಭಾವಯೇತ್ ।
ವ್ಯೋಮಾದಿಭೂತರೂಪಿಣ್ಯಃ ಶಾಂತ್ಯತೀತಾದಯಃ ಕಲಾಃ ॥ ೨೮ ॥

ಸೂತ್ರೇ ಸ್ವನಾಮಭಿರ್ಯೋಜ್ಯಾಃ ಪೂಜ್ಯಶ್ಚೈವ ನಮೋಯುತೈಃ ।
ಅಥವಾ ಬೀಜಭೂತೈಸ್ತತ್ಕೃತ್ವಾ ಪೂರ್ವೋದಿತಂ ಕ್ರಮಾತ್ ॥ ೨೯ ॥

ತತೋ ಮಲಾದೇಸ್ತತ್ತ್ವಾದೌ ವ್ಯಾಪ್ತಿಂ ಸಮವಲೋಕಯೇತ್ ।
ಕಲಾವ್ಯಾಪ್ತಿಂ ಮಲಾದೌ ಚ ಹುತ್ವಾ ಸಂದೀಪಯೇತ್ಕಲಾಃ ॥ ೩೦ ॥

ಶಿಷ್ಯಂ ಶಿರಸಿ ಸಂತಾಡ್ಯ ಸೂತ್ರಂ ದೇಹೇ ಯಥಾಕ್ರಮಂ ।
ಶಾಂತ್ಯತೀತಪದೇ ಸೂತ್ರಂ ಲಾಂಛಯೇನ್ಮಂತ್ರಮುಚ್ಚರನ್ ॥ ೩೧ ॥

---

೨೭-೨೮. ಆ ದಾರಗಳಲ್ಲಿ ಜಾತಿ, ಆಯು, ಭೇದ ಎಂಬ ಮೂರು ಎಳೆಗಳುಳ್ಳ ಒಂದನ್ನು ಭೋಗಭೋಗ್ಯಸ್ವರೂಪವಾದ ವಿಷಯ ಇಂದ್ರಿಯ, ದೇಹ ಇವುಗಳನ್ನುಂಟುಮಾಡುವ ಪಾಶವೆಂದು ಭಾವಿಸಬೇಕು. ಮಿಕ್ಕ ದಾರಗಳಲ್ಲಿ ಆಕಾಶಾದಿ ಪಂಚಭೂತರೂಪಗಳನ್ನೂ, ಶಾಂತ್ಯತೀತಾದಿ ಕಲೆಗಳನ್ನೂ ಭಾವನೆಮಾಡಿ ಒಂದೊಂದು ನಾಮಗಳಿಂದಲೂ ನಮೋಂತವಾಗಿ ಉಚ್ಚರಿಸಿ ಪೂಜೆಮಾಡಬೇಕು.

೨೯-೩೦. ಅಥವಾ ಹಿಂದೆ ಹೇಳಿದ ಬೀಜಮಂತ್ರಗಳಿಂದ ಕ್ರಮವಾಗಿ ಪೂಜೆಗಳನ್ನು ಮಾಡಬೇಕು. ಆಮೇಲೆ ತತ್ತ್ವಗಳಲ್ಲಿ ಮಲಾದಿಗಳ ವ್ಯಾಪ್ತಿಯನ್ನೂ, ಮಲಾದಿಗಳಲ್ಲಿ ಕಲಾವ್ಯಾಪ್ತಿಯನ್ನೂ ಭಾವಿಸಿ ಹೋಮಗಳನ್ನುಮಾಡಿ ಕಲೆಯನ್ನು ಪ್ರಕಾಶಗೊಳಿಸಬೇಕು.

೩೧-೩೨. ಶಿಷ್ಯನ ತಲೆಯಮೇಲೆ ತಾಡನಮಾಡಿ ಕ್ರಮವಾಗಿ ದಾರವನ್ನು ಅವನ ಶರೀರದಲ್ಲಿ ಶಾಂತ್ಯತೀತವೆಂಬ ಕಲಾಸ್ಥಾನದಲ್ಲಿ ಗುರುತಾಗಿಟ್ಟು ಮಂತ್ರವನ್ನುಚ್ಚರಿಸಬೇಕು. ಈರೀತಿಯಲ್ಲಿ ಶಾಂತ್ಯತೀತಕಲಾಸ್ಥಾನ ಮೊದಲು

ಏವಂ ಕೃತ್ವಾ ನಿವೃತ್ತ್ಯಂತಂ ಶಾಂತ್ಯತೀತಮನುಕ್ರಮಾತ್ ।
ಹುತ್ವಾಹುತಿತ್ರಯಂ ಪಶ್ಚಾನ್ಮಂಡಲೇ ಚ ಶಿವಂ ಯಜೇತ್ ॥ ೩೨ ॥

ದೇವಸ್ಯ ದಕ್ಷಿಣೇ ಶಿಷ್ಯಮುಪವೇಶ್ಯೋತ್ತರಾಮುಖಂ ।
ಸದರ್ಭೇ ಮಂಡಲೇ ದದ್ಯಾದ್ಧೋಮಶಿಷ್ಟಂ ಚರುಂ ಗುರುಃ ॥ ೩೩ ॥

ಶಿಷ್ಯಸ್ತದ್ಗುರುಣಾ ದತ್ತಂ ಸತ್ಕೃತ್ಯ ಶಿವಪೂರ್ವಕಂ ।
ಭುಕ್ತ್ವಾ ಪಶ್ಚಾದ್ದ್ವಿರಾಚಮ್ಯ ಶಿವಮಂತ್ರಮುದೀರಯೇತ್ ॥ ೩೪ ॥

ಅಪರೇ ಮಂಡಲೇ ದದ್ಯಾತ್ಪಂಚಗವ್ಯಂ ತಥಾ ಗುರುಃ ।
ಸೋಽಪಿ ತಚ್ಛಕ್ತಿತಃ ಪೀತ್ವಾ ದ್ವಿರಾಚಮ್ಯ ಶಿವಂ ಸ್ಮರೇತ್ ॥ ೩೫ ॥

ತೃತೀಯೇ ಮಂಡಲೇ ಶಿಷ್ಯಮುಪವೇಶ್ಯ ಯಥಾ ಪುರಾ ।
ಪ್ರದದ್ಯಾದ್ದಂತಪವನಂ ಯಥಾಶಾಸ್ತ್ರೋಕ್ತಲಕ್ಷಣಂ ॥ ೩೬ ॥

---

ಗೊಂಡು ನಿವೃತ್ತ್ಯಂತವಾದ ಕಲಾಸ್ಥಾನದವರಗೆ ಮಾಡಿ, ಬಳಿಕ ಮೂರು ಹೋಮಗಳನ್ನು ಮಾಡಿ ಮಂಡಲದಲ್ಲಿ ಶಿವನನ್ನು ಪೂಜಿಸಬೇಕು.

೩೩-೩೪. ದೇವನ ದಕ್ಷಿಣದಿಕ್ಕಿನಲ್ಲಿ ಶಿಷ್ಯನನ್ನು ಉತ್ತರಮುಖವಾಗಿ ದರ್ಭಾಸನದಲ್ಲಿ ಕುಳ್ಳಿರಿಸಿ, ಗುರುವು ಹೋಮಮಾಡಿ ಮಿಕ್ಕ ಚರುವನ್ನು ಅವನಿಗೆ ಕೊಡಬೇಕು. ಗುರುವು ಕೊಟ್ಟ ಆ ಚರುಶೇಷವನ್ನು ಶಿಷ್ಯನು ಶಿವಮಂತ್ರೋಚ್ಚಾರಣೆಯನ್ನು ಮಾಡುತ್ತ ಭಕ್ತಿಯಿಂದ ತೆಗೆದುಕೊಂಡು ತಿಂದು, ಎರಡಾವೃತ್ತಿ ಆಚಮನವನ್ನು ಮಾಡಿ ಶಿವಮಂತ್ರವನ್ನು ಜಪಿಸಬೇಕು.

೩೫. ಬಳಿಕ ಮತ್ತೊಂದು ಮಂಡಲದಲ್ಲಿ ಗುರುವು ಶಿಷ್ಯನನ್ನು ಕುಳ್ಳಿರಿಸಿ ಪಂಚಗವ್ಯವನ್ನು ಕೊಡಬೇಕು. ಶಿಷ್ಯನು ತನ್ನ ಶಕ್ತ್ಯನುಸಾರವಾಗಿ ಅದನ್ನು ಪಾನಮಾಡಿ, ಎರಡಾವೃತ್ತಿ ಆಚಮನವನ್ನು ಮಾಡಿ ಶಿವಸ್ಮರಣೆಯನ್ನು ಮಾಡಬೇಕು.

೩೬-೩೭. ಆಮೇಲೆ ಗುರುವು ಶಿಷ್ಯನನ್ನು ಮೂರನೆಯ ಮಂಡಲದಲ್ಲಿ ಮೊದಲಿನಂತೆ ಕುಳ್ಳಿರಿಸಿ ಶಾಸ್ತ್ರೋಕ್ತಲಕ್ಷಣದಿಂದ ಕೂಡಿದ ದಂತಶೋಧನ

ಅಗ್ರೇಣ ತಸ್ಯ ಮೃದುನಾ ಪ್ರಾಙ್ಮುಖೋ ವಾಽಪ್ಯುದಙ್ಮುಖಃ ।
ವಾಚಂ ನಿಯಮ್ಯ ಚಾಸೀನಶ್ಶಿಷ್ಯೋ ದಂತಾನ್ವಿಶೋಧಯೇತ್ ॥ ೩೭ ॥

ಪ್ರಕ್ಷಾಲ್ಯ ದಂತಪವನಂ ತ್ಯಕ್ತ್ವಾಽಽಚಮ್ಯ ಶಿವಂ ಸ್ಮರೇತ್ ।
ಪ್ರವಿಶೇದ್ದೇಶಿಕಾದಿಷ್ಟಃ ಪ್ರಾಂಜಲಿಃ ಶಿವಮಂದಿರಂ ॥ ೩೮ ॥

ತ್ಯಕ್ತಂ ತದ್ದಂತಪವನಂ ದೃಶ್ಯತೇ ಗುರುಣಾ ಯದಿ ।
ಪ್ರಾಗುದಕ್ಪಶ್ಚಿಮೋ ವಾಗ್ರೇ ಶಿವಮನ್ಯಚ್ಛಿವೇತರಂ ॥ ೩೯ ॥

ಅಶಸ್ತಾಶಾಮುಖೇ ತಸ್ಮಿನ್ಗುರುಸ್ತದ್ದೋಷಶಾಂತಯೇ ।
ಶತಮರ್ಧಂ ತದರ್ಧಂ ವಾ ಜುಹುಯಾನ್ಮೂಲಮಂತ್ರತಃ ॥ ೪೦ ॥

---

ಕಾಷ್ಠವನ್ನು [ಹಲ್ಲುಜ್ಜಿಕೊಳ್ಳುವ ಕಡ್ಡಿ] ಕೊಡಬೇಕು. ಶಿಷ್ಯನು ಪೂರ್ವ ಅಥವಾ ಉತ್ತರದಿಕ್ಕಿಗೆ ಅಭಿಮುಖವಾಗಿ ಕುಳಿತು ಮೌನವಾಗಿ ಆ ದಂತಕಾಷ್ಠದ ಮೃದುವಾದ ತುದಿಯಿಂದ ಹಲ್ಲುಗಳನ್ನು ಉಜ್ಜಿ ತೊಳೆದುಕೊಂಡು ಆ ಕಡ್ಡಿಯನ್ನು ತೊಳೆದು ಬಿಸುಟ್ಟು, ಆಚಮನವನ್ನು ಮಾಡಿ ಶಿವಸ್ಮರಣೆಯನ್ನು ಮಾಡಬೇಕು.

೩೮–೪೦. ಆಮೇಲೆ ಗುರುವಿನ ಅಪ್ಪಣೆಯಿಂದ ಶಿವಮಂದಿರಕ್ಕೆ ಪ್ರವೇಶಮಾಡಬೇಕು. ಆ ಬಿಸುಟ ದಂತಕಾಷ್ಠವನ್ನು ಗುರುವು ನೋಡಿದರೆ ಆ ಕಡ್ಡಿಯ ತುದಿಯು ಪೂರ್ವ, ಉತ್ತರ, ಪಶ್ಚಿಮದಿಕ್ಕುಗಳಲ್ಲಿ ಯಾವುದಾದರೂ ಒಂದು ಕಡೆಗೆ ಬಿದ್ದಿದ್ದರೆ ಒಳ್ಳೆಯದು. ದಕ್ಷಿಣಾಗ್ರವಾಗಿ ಬಿದ್ದಿದ್ದರೆ ಒಳ್ಳೆಯದಲ್ಲ. ಆದುದರಿಂದ ಅದು ಅಮಂಗಳವಾದ ದಿಕ್ಕಿಗೆ ತುದಿಯಾಗಿ ಬಿದ್ದ ದೋಷಶಾಂತಿಗಾಗಿ ಗುರುವು ಮೂಲಮಂತ್ರದಿಂದ ನೂರು ಅಥವಾ ಐವತ್ತು ಅಥವಾ ಇಪ್ಪತ್ತೈದು ಹೋಮಗಳನ್ನು ಮಾಡಬೇಕು.

ತತಃ ಶಿಷ್ಯಂ ಸಮಾಲಭ್ಯ ಜಪಿತ್ವಾ ಕರ್ಣಯೋಃ ಶಿವಂ ।
ದೇವಸ್ಯ ದಕ್ಷಿಣೇ ಭಾಗೇ ತಂ ಶಿಷ್ಯಮಧಿವಾಸಯೇತ್ ॥ ೪೧ ॥

ಅಹತಾಸ್ತರಣಾಸ್ತೀರ್ಣೇ ಸದರ್ಭಶಯನೇ ಶುಚಿಃ ।
ಮಂತ್ರಿತೇಽನ್ಯಃ ಶಿವಂ ಧ್ಯಾಯನ್ಸ್ವಯೀತ ಪ್ರಾಕ್ಶಿರಾ ನಿಶಿ ॥ ೪೨ ॥

ಶಿಖಾಯಾಂ ಬದ್ಧಸೂತ್ರಸ್ಯ ಶಿಖಯಾ ತಚ್ಛಿಖಾಂ ಗುರುಃ ।
ಆಬದ್ಧ್ಯಾಹತವಸ್ತ್ರೇಣ ತಮಾಚ್ಛಾದ್ಯ ಚ ವರ್ಮಣಾ ॥ ೪೩ ॥

ರೇಖಾತ್ರಯಂ ಚ ಪರಿತೋ ಭಸ್ಮನಾ ತಿಲಸರ್ಷಪೈಃ ।
ಕೃತ್ವಾಸ್ತ್ರಜಪ್ತೈಸ್ತದ್ಬಾಹ್ಯೇ ದಿಗೀಶಾನಾಂ ಬಲಿಂ ಹರೇತ್ ॥ ೪೪ ॥

---

೪೧–೪೨. ಆಮೇಲೆ ಶಿಷ್ಯನನ್ನು ಸ್ಪರ್ಶಮಾಡಿಕೊಂಡು ಕಿವಿಯಲ್ಲಿ ಶಿವ ಮಂತ್ರವನ್ನು ಜಪಿಸಿ ದೇವನ ದಕ್ಷಿಣಭಾಗ (ಬಲಭಾಗ) ದಲ್ಲಿ ಶಿಷ್ಯನನ್ನು ಕುಳ್ಳಿರಿಸಿರಬೇಕು. ಶಿಷ್ಯನು ಅಲ್ಲಿ ದರ್ಭೆಯಿಂದಲೂ, ಹೊಸದಾದ ವಸ್ತ್ರಗಳಿಂದಲೂ, ಮಾಡಿ ಅಭಿಮಂತ್ರಿಸಿದ ಹಾಸಿಗೆಯಲ್ಲಿ ಶಿವನನ್ನು ಧ್ಯಾನಿಸುತ್ತ ಪೂರ್ವದಿಕ್ಕಿಗೆ ತಲೆಯನ್ನು ಮಾಡಿಕೊಂಡು ಆ ರಾತ್ರಿ ಮಲಗಿರಬೇಕು.

೪೩–೪೪. ಶಿಷ್ಯನ ತಲೆಯ ಕೂದಲಿಗೆ ದಾರವನ್ನು ಕಟ್ಟಬೇಕೆಂದು ಹಿಂದೆಯೇ ಹೇಳಿದೆಯಷ್ಟೆ. ಈಗ ಆ ಶಿಖೆಗೆ ಹೊಸವಸ್ತ್ರದ ತುದಿಯನ್ನು ಕಟ್ಟಿ ಆ ವಸ್ತ್ರವನ್ನೇ ಶಿಷ್ಯನಿಗೆ ಕವಚಮಂತ್ರದಿಂದ ಹೊದಿಸಿ, ಅವನ ಸುತ್ತಲೂ ಭಸ್ಮ, ಎಳ್ಳು, ತುಪ್ಪ ಈ ಮೂರು ವಸ್ತುಗಳಿಂದ ಮೂರು ರೇಖೆಗಳನ್ನು ಮಾಡಿ ಅಸ್ತ್ರ ಮಂತ್ರಗಳನ್ನು ಜಪಿಸಿ ಆ ರೇಖೆಗಳ ಹೊರಗೆ ದಿಕ್ಪಾಲಕರಿಗೆ ಬಲಿಯನ್ನು ಹಾಕಬೇಕು.

ಶಿಷ್ಯೋಽಪಿ ಪರತೋಽನಶ್ನನ್ನತ್ರೈವಮಧಿವಾಸನಂ ।
ಪ್ರಬುದ್ಧೋತ್ಥಾಯ ಗುರವೇ ಸ್ವಪ್ನಂ ದೃಷ್ಟಂ ನಿವೇದಯೇತ್ ॥ ೪೫ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-
ಮುತ್ತರಭಾಗೇ ಶಿವದೀಕ್ಷಾವಿಧಾನವರ್ಣನಂ ನಾಮ
ಸಪ್ತದಶೋಽಧ್ಯಾಯಃ

---

೪೫. ಅಲ್ಲಿಂದ ಮುಂದಕ್ಕೆ ಶಿಷ್ಯನು ಭೋಜನವನ್ನು ಮಾಡದೆ ರಾತ್ರಿ ಅಲ್ಲಿಯೇ ಮಲಗಿದ್ದು ಎಚ್ಚರವಾದಮೇಲೆ ಎದ್ದು ತಾನು ಕಂಡ ಸ್ವಪ್ನವನ್ನು ಗುರುವಿಗೆ ಹೇಳಬೇಕು.

ಇಲ್ಲಿಗೆ ಶಿವಮಹಾಪುರಾಣದ ವಾಯವೀಯಸಂಹಿತೆಯ ಉತ್ತರಭಾಗದಲ್ಲಿ
ಶಿವದೀಕ್ಷಾವಿಧಾನವರ್ಣನವೆಂಬ ಹದಿನೇಳನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವಮಹಾಪುರಾಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ಅಷ್ಟಾದಶೋಽಧ್ಯಾಯಃ

---

॥ ಉಪಮನ್ಯುರುವಾಚ ॥

**ತತಃ ಸ್ನಾನಾದಿಕಂ ಸರ್ವಂ ಸಮಾಪ್ಯಾಚಾರ್ಯಚೋದಿತಃ ।**
**ಗಚ್ಛೇದ್ಬದ್ಧಾಂಜಲಿರ್ಧ್ಯಾಯನ್ಶಿವಮಂಡಲಪಾರ್ಶ್ವತಃ ॥ ೧ ॥**

**ಅಥ ಪೂಜಾಂ ವಿನಾ ಸರ್ವಂ ಕೃತ್ವಾ ಪೂರ್ವದಿನೇ ಯಥಾ ।**
**ನೇತ್ರಬಂಧನಪರ್ಯಂತಂ ದರ್ಶಯೇನ್ಮಂಡಲಂ ಗುರುಃ ॥ ೨ ॥**

---

## ಹದಿನೆಂಟನೆಯ ಅಧ್ಯಾಯವು

೧-೨. ಆಮೇಲೆ ಶಿಷ್ಯನು ಗುರುವಿನ ಅಪ್ಪಣೆಯಂತೆ ಸ್ನಾನಾದಿ ನಿತ್ಯ ಕರ್ಮಗಳೆಲ್ಲವನ್ನೂ ಮಾಡಿ ಕೈಮುಗಿದುಕೊಂಡು ಶಿವಧ್ಯಾನವನ್ನು ಮಾಡುತ್ತ ಮಂಡಲದ ಸಮೀಪಕ್ಕೆ ಬರಬೇಕು. ಗುರವು ಹಿಂದಿನ ದಿನದಂತೆ ಪೂಜೆಯೊಂದನ್ನು ಬಿಟ್ಟು ಮಿಕ್ಕುದೆಲ್ಲವನ್ನೂ ಶಿಷ್ಯನ ಕಣ್ಣುಗಳನ್ನು ಕಟ್ಟುವ ಪರ್ಯಂತವಾಗಿ ಮಾಡಿ ಅವನಿಗೆ ಮಂಡಲದರ್ಶನವನ್ನು ಮಾಡಿಸಬೇಕು.

ಬದ್ಧನೇತ್ರೇಣ ಶಿಷ್ಯೇಣ ಪುಷ್ಪಾವಕಿರಣೇ ಕೃತೇ ।
ಯತ್ರಾಪತಂತಿ ಪುಷ್ಪಾಣಿ ತಸ್ಯ ನಾಮಾಸ್ಯ ಸಂದಿಶೇತ್ ॥ ೩ ॥

ತಂ ಚೋಪನೀಯ ನಿರ್ಮಾಲ್ಯಮಂಡಲೇಽಸ್ಮಿನ್ಯಥಾ ಪುರಾ ।
ಪೂಜಯೇದ್ದೇವಮೀಶಾನಂ ಜುಹುಯಾಚ್ಚ ಶಿವಾನಲೇ ॥ ೪ ॥

ಶಿಷ್ಯೇಣ ಯದಿ ದುಃಸ್ವಪ್ನೋ ದೃಷ್ಟಸ್ತದ್ದೋಷಶಾಂತಯೇ ।
ಶತಮರ್ಧಂ ತದರ್ಧಂ ವಾ ಜುಹುಯಾನ್ಮೂಲವಿದ್ಯಯಾ ॥ ೫ ॥

ತತಃ ಸೂತ್ರಂ ಶಿಖಾಬದ್ಧಂ ಲಂಬಯಿತ್ವಾ ಯಥಾ ಪುರಾ ।
ಆಧಾರಪೂಜಾಪ್ರಭೃತಿ ಯನ್ನಿವೃತ್ತಿಕಲಾಶ್ರಯಂ ॥ ೬ ॥

ವಾಗೀಶ್ವರೀಪೂಜನಾಂತಂ ಕುರ್ಯಾದ್ಧೋಮಪುರಸ್ಸರಂ ।
ಅಥ ಪ್ರಣಮ್ಯ ವಾಗೀಶಂ ನಿವೃತ್ತೇರ್ವ್ಯಾಪಿಕಾಂ ಸತೀಂ ॥ ೭ ॥

---

೩-೪. ಕಣ್ಣುಗಳನ್ನು ಕಟ್ಟಿಸಿಕೊಂಡಿದ್ದ ಶಿಷ್ಯನು ಹೂಗಳನ್ನು ಚೆಲ್ಲಿದ ಮೇಲೆ, ಆ ಹೂಗಳು ಯಾವ ಮಂಡಲ ಅಥವಾ ದೇವತಾಸ್ಥಾನದಲ್ಲಿ ಬೀಳುವುದೋ ಆ ಹೆಸರನ್ನು ಶಿಷ್ಯನಿಗಿಡಬೇಕು. ಹಿಂದಿನಂತೆ ಆ ನಿರ್ಮಾಲ್ಯವನ್ನು ತೆಗೆದು ಆ ಮಂಡಲದಲ್ಲಿ ಶಿವನನ್ನು ಪೂಜಿಸಿ ಶಿವಾಗ್ನಿಯಲ್ಲಿ ಹೋಮವನ್ನು ಮಾಡಬೇಕು.

೫-೬. ಶಿಷ್ಯನಿಗೆ ದುಷ್ಟವಾದ ಸ್ವಪ್ನಗಳಾಗಿದ್ದನೆ ಅದರ ಶಾಂತಿಗಾಗಿ ಮೂಲಮಂತ್ರದಿಂದ ನೂರು ಅಥವಾ ಐವತ್ತು ಅಥವಾ ಇಪ್ಪತ್ತೈದು ಹೋಮಗಳನ್ನು ಮಾಡಬೇಕು. ಬಳಿಕ ತಲೆಯ ಕೂದಲಿಗೆ ಕಟ್ಟಿದ್ದ ದಾರವನ್ನು ಹಿಂದಿನಂತೆ ಇಳಿಯಬಿಟ್ಟು, ಆಧಾರಪೂಜಾ ಮೊದಲುಮಾಡಿಕೊಂಡು ನಿವೃತ್ತಿಕಲಾಶ್ರಯವಾದ ವಾಗೀಶ್ವರೀಪೂಜೆಯವರೆಗೂ ಪೂಜೆಯನ್ನೂ ಹೋಮವನ್ನೂ ಮಾಡಬೇಕು.

೭-೮. ಆಮೇಲೆ ವಾಗೀಶ್ವರನಾದ ಬ್ರಹ್ಮನಿಗೆ ನಮಸ್ಕಾರವನ್ನು ಮಾಡಿ ವಾಗ್ವೃತ್ತಿಯಲ್ಲಿ ವ್ಯಾಪಿಸಿರುವ ಸರಸ್ವತಿಗೂ ನಮಸ್ಕರಿಸಿ, ಮಂಡಲದಲ್ಲಿ ಶಿವ

ಮಂಡಲೇ ದೇವಮಭ್ಯರ್ಚ್ಯ ಹುತ್ವಾ ಚೈವಾಹುತಿತ್ರಯಂ ।
ಪ್ರಾಪಯೇಚ್ಚ ಶಿಶೋಃ ಪ್ರಾಪ್ತಿಂ ಯುಗಪತ್ಸರ್ವಯೋನಿಷು ॥ ೮ ॥

ಸೂತ್ರದೇಹೇऽಥ ಶಿಷ್ಯಸ್ಯ ತಾಡನಪ್ರೋಕ್ಷಣಾದಿಕಂ ।
ಕೃತ್ವಾತ್ಮಾನಂ ಸಮಾದಾಯ ದ್ವಾದಶಾಂತೇ ನಿವೇದ್ಯ ಚ ॥ ೯ ॥

ತತೋऽಸ್ಯಾದಾಯ ಮೂಲೇನ ಮುದ್ರಯಾ ಶಾಸ್ತ್ರದೃಷ್ಟಯಾ ।
ಯೋಜಯೇನ್ಮನಸಾಚಾರ್ಯೋ ಯುಗಪತ್ಸರ್ವಯೋನಿಷು ॥ ೧೦ ॥

ದೇವಾನಾಂ ಜಾತಯಶ್ಚಾಷ್ಟೌ ತಿರಶ್ಚಾಂ ಪಂಚ ಜಾತಯಃ ।
ಜಾತ್ಯೈಕಯಾ ಚ ಮಾನುಷ್ಯಾ ಯೋನಯಶ್ಚ ಚತುರ್ದಶ ॥ ೧೧ ॥

ತಾಸು ಸರ್ವಾಸು ಯುಗಪತ್ಪ್ರವೇಶಾಯ ಶಿಶೋರ್ಧಿಯಾ ।
ವಾಗೀಶಾನ್ಯಾಂ ಯಥಾನ್ಯಾಯಂ ಶಿಷ್ಯಾತ್ಮಾನಂ ನಿವೇಶಯೇತ್ ॥ ೧೨ ॥

---

ನನ್ನು ಪೂಜಿಸಿ ಮೂರು ಆಹುತಿಗಳಿಂದ ಹೋಮಮಾಡಿ ಏಕಕಾಲದಲ್ಲಿ ಶಿಷ್ಯನಿಗೆ ಸಕಲ ಯೋನಿಪ್ರಾಪ್ತಿಯನ್ನುಂಟುಮಾಡಿದಂತೆ ಭಾವಿಸಬೇಕು.

೯-೧೦. ಗುರುವು ಶಿಷ್ಯನ ಸೂತ್ರದೇಹವೆಂದರೆ ಜೀವಾತ್ಮಕರೂಪವಾದ ದೇಹದಲ್ಲಿ ತಾಡನ ಪ್ರೋಕ್ಷಣಾದಿಗಳನ್ನು ಮಾಡಿ, ಜೀವಾತ್ಮನನ್ನು ಗ್ರಹಿಸಿ ಹನ್ನೆರಡಾವೃತ್ತಿ ಶಿವಸಮರ್ಪಣೆಯನ್ನು ಮಾಡಿ ಮತ್ತೆ ಆ ಜೀವಾತ್ಮನನ್ನು ಗ್ರಹಿಸಿ ಮೂಲಮಂತ್ರದಿಂದ ಶಾಸ್ತ್ರೋಕ್ತವಾದ ಮುದ್ರಾದರ್ಶನದಿಂದ ಏಕಕಾಲದಲ್ಲಿ ಸಕಲ ಯೋನಿಗಳಲ್ಲಿಯೂ ಸಂಬಂಧವಾದಂತೆ ಮನಸ್ಸಿನಲ್ಲಿ ಭಾವಿಸಬೇಕು.

೧೧-೧೨. ದೇವತೆಗಳ ಎಂಟು ಜಾತಿಗಳು, 'ತಿರ್ಯಕ್' ಪ್ರಾಣಿಗಳ ಐದು ಜಾತಿಗಳು, ಮನುಷ್ಯಜಾತಿಯೊಂದು ಹೀಗೆ ಒಟ್ಟು ಹದಿನಾಲ್ಕು ಜಾತಿಗಳಾದುವು. ಇವುಗಳಲ್ಲೆಲ್ಲ ಏಕಕಾಲದಲ್ಲಿ ಶಿಷ್ಯನ ಪ್ರಾಣಶರೀರವು ಪ್ರವೇಶಿಸುವುದಕ್ಕಾಗಿ ಬುದ್ಧಿಯಿಂದಲೇ ವಾಗೀಶ್ವರೀದೇವಿಯಲ್ಲಿ ಶಿಷ್ಯಾತ್ಮನನ್ನು ಇಡಬೇಕು.

ಗರ್ಭನಿಷ್ಪತ್ತಯೇ ದೇವಂ ಸಂಪೂಜ್ಯ ಪ್ರಣಿಪತ್ಯ ಚ ।
ಹುತ್ವಾ ಚೈವ ಯಥಾನ್ಯಾಯಂ ನಿಷ್ಪನ್ನಂ ತದನುಸ್ಮರೇತ್ ॥ ೧೩ ॥

ನಿಷ್ಪನ್ನಸ್ಯೈವಮುತ್ಪತ್ತಿಮನುವೃತ್ತಿಂ ಚ ಕರ್ಮಣಾ ।
ಆರ್ಜವಂ ಭೋಗನಿಷ್ಪತ್ತಿಃ ಕುರ್ಯಾತ್ಪ್ರೀತಿಂ ಪರಾಂ ತಥಾ ॥ ೧೪ ॥

ನಿಷ್ಕೃತ್ಯರ್ಥಂ ಚ ಜಾತ್ಯಾಯುರ್ಭೋಗಸಂಸ್ಕಾರಸಿದ್ಧಯೇ ।
ಹುತ್ವಾಽಹುತಿತ್ರಯಂ ದೇವಂ ಪ್ರಾರ್ಥಯೇದ್ದೇಶಿಕೋತ್ತಮಃ ॥ ೧೫ ॥

ಭೋಕ್ತೃತ್ವವಿಷಯಾಸಂಗಮಲಂ ತತ್ಕಾಯಶೋಧನಂ ।
ಕೃತ್ವೈವಮೇವ ಶಿಷ್ಯಸ್ಯ ಛಿಂದ್ಯಾತ್ಪಾಶತ್ರಯಂ ತತಃ ॥ ೧೬ ॥

ನಿಷ್ಕೃತ್ಯಾ ಪರಿಬದ್ಧಸ್ಯ ಪಾಶಸ್ಯಾತ್ಯಂತಭೇದತಃ ।
ಕೃತ್ವಾ ಶಿಷ್ಯಸ್ಯ ಚೈತನ್ಯಂ ಸ್ವಚ್ಛಂ ಮನ್ಯೇತ ಕೇವಲಂ ॥ ೧೭ ॥

---

೧೩-೧೪. ಗರ್ಭೋತ್ಪತ್ತಿಗಾಗಿ ಶಿವನನ್ನು ಪೂಜಿಸಿ ನಮಸ್ಕರಿಸಿ ಹೋಮಮಾಡಿ ಶಿಷ್ಯನು ಗರ್ಭಗತನಾದನೆಂದು ಭಾವಿಸಬೇಕು. ಗರ್ಭೋತ್ಪತ್ತಿಯಾದಮೇಲೆ ಕರ್ಮಗಳಿಂದಲೇ ಉತ್ಪತ್ತಿ, ಜೀವನ, ಋಜುತ್ವ, ಸುಖಾನುಭವ ಇವುಗಳನ್ನುಂಟುಮಾಡಿ ಬಳಿಕ ಆ ಶಿಷ್ಯನಮೇಲೆ ವಿಶೇಷ ಪ್ರೀತಿಯನು ಗುರುವು ಇಟ್ಟುಕೊಳ್ಳಬೇಕು.

೧೫-೧೬. ಪ್ರಾಯಶ್ಚಿತ್ತಾರ್ಥವಾಗಿಯೂ, ಜಾತ್ಯಾಯುರ್ಭೋಗಸಿದ್ಧಿಗಾಗಿಯೂ, ಮೂರು ಹೋಮಗಳನ್ನು ಮಾಡಿ ಗುರುವು ದೇವನಾದ ಶಿವನ ಪ್ರಾರ್ಥನೆಯನ್ನು ಮಾಡಬೇಕು. ವಿಷಯಸಂಬಂಧ ಭೋಕ್ತೃತ್ವರೂಪವಾದ ಅಭಿಮಾನವೆಂಬ ಕೊಳೆಯನ್ನು ಬಿಟ್ಟುಬಿಡುವುದೇ ಕಾಯಶೋಧನೆಯೆನಿಸುವುದು. ಹೀಗೆ ಕಾಯಶೋಧನೆಯನ್ನುಂಟುಮಾಡಿ ಶಿಷ್ಯನ ಮೂರು ವಿಧವಾದ ಪಾಶಗಳನ್ನು ಹರಿಯಬೇಕು.

೧೭. ಪ್ರಾಯಶ್ಚಿತ್ತವನ್ನು ಮಾಡಿಕೊಂಡು ಪಾಶಚ್ಛೇದನೆಯನ್ನು ಹೊಂದಿದ ಶಿಷ್ಯನ ಚೈತನ್ಯವನ್ನು ಅತ್ಯಂತ ಸ್ವಚ್ಛವಾದುದೆಂದು ತಿಳಿಯಬೇಕು.

ಹುತ್ವಾ ಪೂರ್ಣಾಹುತಿಂ ವನ್ಹೌ ಬ್ರಹ್ಮಾಣಂ ಪೂಜಯೇತ್ತತಃ ।
ಹುತ್ವಾಹುತಿತ್ರಯಂ ತಸ್ಮೈ ಶಿವಾಜ್ಞಾಮನುಸಂದಿಶೇತ್ ॥ ೧೮ ॥

ಪಿತಾಮಹ ತ್ವಯಾ ನಾಸ್ಯ ಯಾತುಃ ಶೈವಂ ಪರಂ ಪದಂ ।
ಪ್ರತಿಬಂಧೋ ವಿಧಾತವ್ಯಃ ಶೈವಾಜ್ಞೈಷಾ ಗರೀಯಸೀ ॥ ೧೯ ॥

ಇತ್ಯಾದಿಶ್ಯ ತಮಭ್ಯರ್ಚ್ಯ ವಿಸೃಜ್ಯ ಚ ವಿಧಾನತಃ ।
ಸಮಭ್ಯರ್ಚ್ಯ ಮಹಾದೇವಂ ಜುಹುಯಾದಾಹುತಿತ್ರಯಂ ॥ ೨೦ ॥

ನಿವೃತ್ತ್ಯಾ ಶುದ್ಧಮುದ್ಧೃತ್ಯ ಶಿಷ್ಯಾತ್ಮಾನಂ ಯಥಾ ಪುರಾ ।
ನಿವೇಶ್ಯಾತ್ಮನಿ ಸೂತ್ರೇ ಚ ವಾಗೀಶಂ ಪೂಜಯೇತ್ತತಃ ॥ ೨೧ ॥

ಹುತ್ವಾಹುತಿತ್ರಯಂ ತಸ್ಮೈ ಪ್ರಣಮ್ಯ ಚ ವಿಸೃಜ್ಯ ತಾಂ ।
ಕುರ್ಯಾನ್ನಿವೃತ್ತೇಃ ಸಂಧಾನಂ ಪ್ರತಿಷ್ಠಾಂ ಕಲಯಾ ಸಹ ॥ ೨೨ ॥

---

೧೮. ಅಗ್ನಿಯಲ್ಲಿ ಪೂರ್ಣಾಹುತಿಹೋಮವನ್ನು ಮಾಡಿ ಆಮೇಲೆ ಬ್ರಹ್ಮನನ್ನು ಪೂಜಿಸಿ ಅವನಿಗಾಗಿ ಮೂರು ಹೋಮಗಳನ್ನು ಮಾಡಿ ತರುವಾಯ ಶಿವಾಜ್ಞೆಯನ್ನು ಹೇಳಬೇಕು.

೧೯-೨೦. ಎಲೈ ಬ್ರಹ್ಮನೇ, ಈ ಶಿಷ್ಯನಿಗೆ ಶಿವನ ಪರಮಪದಪ್ರಾಪ್ತಿ ರೂಪ ಫಲವು ನಾಶವಾಗದಿರಲಿ. ಹಾಗೆ ನಾಶವಾಗದಿರುವುದಕ್ಕೆ ಪ್ರತಿಬಂಧಕ ಗಳು ಏನುಬೇಕೋ ಅವುಗಳನ್ನು ನೀನು ಮಾಡು. ಇದು ಶಿವನ ಆಜ್ಞೆಯು ಎಂದು ಹೇಳಿ ಬ್ರಹ್ಮನನ್ನು ಪೂಜಿಸಿ ವಿಸರ್ಜನೆಮಾಡಿ ಶಿವನನ್ನು ಪೂಜಿಸಿ ಮೂರು ಆಹುತಿಗಳನ್ನು ಹೋಮಮಾಡಬೇಕು.

೨೧. ನಿವೃತ್ತಿಕಲೆಯಿಂದ ಶುದ್ಧನಾದ ಶಿಷ್ಯಾತ್ಮನನ್ನು ಹಿಂದಿನಂತೆ ಉದ್ಧರಿಸಿ ಸೂತ್ರಾತ್ಮರೂಪವಾದ ಕಲೆಯಲ್ಲಿಟ್ಟು ಬ್ರಹ್ಮನನ್ನು ಪೂಜಿಸಬೇಕು.

೨೨-೨೩. ಆ ಬ್ರಹ್ಮನಿಗಾಗಿ ಮೂರು ಹೋಮಗಳನ್ನು ಮಾಡಿ ನಮಸ್ಕರಿಸಿ ಸೂತ್ರಾತ್ಮರೂಪನಾದ ಕಲೆಯನ್ನು ವಿಸರ್ಜಿಸಿ ಶಿಷ್ಯಾತ್ಮನನ್ನು ಪ್ರತಿಷ್ಠಾ

**ಸಂಧಾನೇ ಯುಗಪತ್ಪೂಜಾಂ ಕೃತ್ವಾ ಹುತ್ವಾऽऽಹುತಿತ್ರಯಂ ।**
**ಶಿಷ್ಯಾತ್ಮಾನಂ ಪ್ರತಿಷ್ಠಾಯಾಂ ಪ್ರವೇಶಂ ತ್ವಥ ಭಾವಯೇತ್ ॥ ೨೩ ॥**

**ತತಃ ಪ್ರತಿಷ್ಠಾಮಾವಾಹ್ಯ ಕೃತ್ವಾऽಶೇಷಂ ಪುರೋದಿತಂ ।**
**ತದ್ವ್ಯಾಪ್ತಿಂ ವ್ಯಾಪಿಕಾಂ ತಸ್ಯ ವಾಗೀಶಾನೀಂ ಚ ಭಾವಯೇತ್ ॥ ೨೪ ॥**

**ಪೂರ್ಣೇಂದುಮಂಡಲಪ್ರಖ್ಯಾಂ ಕೃತ್ವಾ ಶೇಷಂ ಚ ಪೂರ್ವವತ್ ।**
**ವಿಷ್ಣವೇ ಸಂವಿಶೇದಾಜ್ಞಾಂ ಶಿವಸ್ಯ ಪರಮಾತ್ಮನಃ ॥ ೨೫ ॥**

**ವಿಷ್ಣೋರ್ವಿಸರ್ಜನಾದ್ಯಂ ಚ ಕೃತ್ವಾ ಶೇಷಂ ಚ ವಿದ್ಯಯಾ ।**
**ಪ್ರತಿಷ್ಠಾಮನುಸಂಧಾಯ ತಸ್ಯಾಂ ಚಾಪಿ ಯಥಾ ಪುರಾ ॥ ೨೬ ॥**

**ಕೃತ್ವಾऽನುಚಿಂತ್ಯ ತದ್ವ್ಯಾಪ್ತಿಂ ವಾಗೀಶಾಂ ಚ ಯಥಾಕ್ರಮಂ ।**
**ದೀಪ್ತಾಗ್ನೌ ಪೂರ್ಣಹೋಮಾಂತಂ ಕೃತ್ವಾ ಶೇಷಂ ಚ ಪೂರ್ವವತ್ ॥೨೭॥**

---

ಕಲೆಯಲ್ಲಿ ಕೂಡಿಸಿ ಏಕಕಾಲದಲ್ಲಿ ಪೂಜೆಯನ್ನೂ, ಮೂರು ಹೋಮಗಳನ್ನೂ ಮಾಡಿ ಶಿಷ್ಯಾತ್ಮನು ಪ್ರತಿಷ್ಠಾಕಲೆಯಲ್ಲಿ ಪ್ರವೇಶಮಾಡಿದಂತೆ ಭಾವಿಸಬೇಕು.

೨೪-೨೫. ಆಮೇಲೆ ಪ್ರತಿಷ್ಠಾಕಲೆಯನ್ನು ಪೂಜಿಸಿ ಹಿಂದೆ ಹೇಳಿದಂತೆ ಸಕಲ ಕರ್ಮಗಳನ್ನೂ ಮಾಡಿ ಆ ಪ್ರತಿಷ್ಠಾಕಲೆಯ ವ್ಯಾಪನೆಯನ್ನೂ, ಪೂರ್ಣ ಚಂದ್ರಮಂಡಲದಂತೆ ಪ್ರಕಾಶಿಸುವ ವಾಗೀಶ್ವರೀ ದೇವಿಯನ್ನೂ ಮನಸ್ಸಿನಲ್ಲಿ ಭಾವನೆಮಾಡಬೇಕು. ಹಿಂದಿನಂತೆ ಪೂಜಾಹೋಮಾದಿಗಳನ್ನು ಮಾಡಿ ಶಿವನ ಆಜ್ಞೆಯನ್ನು ವಿಷ್ಣುವಿಗೆ ಹೇಳಬೇಕು.

೨೬-೨೭. ಮಹಾಮಂತ್ರದಿಂದಲೇ ವಿಷ್ಣುವಿನ ಪೂಜಾ ವಿಸರ್ಜನಾದಿಗಳನ್ನು ಮಾಡಿ, ಹಿಂದಿನಂತೆ ಪ್ರತಿಷ್ಠಾಕಲೆಯಲ್ಲಿ ಅನುಸಂಧಾನಮಾಡಿ, ಹಿಂದಿನಂತೆ ಅದರ ವ್ಯಾಪ್ತಿಯನ್ನೂ ಚಿಂತಿಸಿ, ವಾಗೀಶ್ವರೀ ದೇವಿಯನ್ನು ಪೂಜಿಸಿ ಅಗ್ನಿಯಲ್ಲಿ ಪೂರ್ಣಾಹುತಿಪರ್ಯಂತವಾಗಿ ಹಿಂದಿನಂತೆ ಮಾಡಬೇಕು.

ನೀಲರುದ್ರಮುಪಸ್ಥಾಯ ತಸ್ಮೈ ಪೂಜಾದಿಕಂ ತಥಾ ।
ಕೃತ್ವಾ ಕರ್ಮ ಶಿವಾಜ್ಞಾಂ ಚ ದದ್ಯಾತ್ಪೂರ್ವೋಕ್ತವರ್ತ್ಮನಾ ॥ ೨೮ ॥

ತತಸ್ತಮಪಿ ಚೋದ್ವಾಸ್ಯ ಕೃತ್ವಾ ತಸ್ಯಾಥ ಶಾಂತಯೇ ।
ವಿದ್ಯಾಕಲಾಂ ಸಮಾಧಾಯ ತದ್ವ್ಯಾಪ್ತಿಂ ಚಾವಲೋಕಯೇತ್ ॥ ೨೯ ॥

ಸ್ವಾತ್ಮನೋ ವ್ಯಾಪಿಕಾಂ ತದ್ವದ್ವಾಗೀಶೀಂ ಚ ಯಥಾ ಪುರಾ ।
ಬಾಲಾರ್ಕಸದೃಶಾಕಾರಾಂ ಭಾಸಯಂತೀಂ ದಿಶೋ ದಶ ॥ ೩೦ ॥

ತತಃ ಶೇಷಂ ಯಥಾ ಪೂರ್ವಂ ಕೃತ್ವಾ ದೇವಂ ಮಹೇಶ್ವರಂ ।
ಆವಾಹ್ಯಾರಾಧ್ಯ ಹುತ್ವಾಸ್ಮೈ ಶಿವಾಜ್ಞಾಂ ಮನಸಾ ದಿಶೇತ್ ॥ ೩೧ ॥

ಮಹೇಶ್ವರಂ ತಥೋತ್ಸೃಜ್ಯ ಕೃತ್ವಾಸ್ಯಾಂ ಚ ಕಲಾಮಿಮಾಂ ।
ಶಾಂತ್ಯತೀತಾಂ ಕಲಾಂ ನೀತ್ವಾ ತದ್ವ್ಯಾಪ್ತಿಮವಲೋಕಯೇತ್ ॥ ೩೨ ॥

---

೨೮-೨೯. ಆಮೇಲೆ ನೀಲರುದ್ರದೇವನ ಸಮೀಪಕ್ಕೆ ಹೋಗಿ ಅವನಿಗೆ ಪೂಜಾದಿಗಳನ್ನು ಮಾಡಿ ಹಿಂದಿನಂತೆ ಶಿವನ ಆಜ್ಞೆಯನ್ನು ಹೇಳಬೇಕು. ಆಮೇಲೆ ಆ ನೀಲರುದ್ರನನ್ನೂ ಉದ್ವಾಸನೆಮಾಡಿ ಅದರ ಶಾಂತಿಗಾಗಿ ವಿದ್ಯಾ ಕಲೆಯನ್ನು ಸ್ಥಾಪಿಸಿ ಅದರ ವ್ಯಾಪನೆಯನ್ನು ವಿಮರ್ಶಿಸಬೇಕು.

೩೦-೩೧. ಗುರುವು ತನ್ನಲ್ಲಿ ವಿದ್ಯಾಕಲೆಯನ್ನು ಆವಾಹನೆಮಾಡಿ ಬಾಲ ಸೂರ್ಯನ ಸಮಾನಕಾಂತಿಯಿಂದ ಪ್ರಕಾಶಿಸಿ ಹತ್ತುದಿಕ್ಕುಗಳನ್ನೂ ಬೆಳಗುತ್ತಿರುವ ವಾಗೀಶ್ವರೀ ದೇವಿಯನ್ನು ಹಿಂದಿನಂತೆ ಪೂಜಿಸಿ ಮಿಕ್ಕ ಹೋಮಾದಿಗಳನ್ನು ಹಿಂದಿನಂತೆ ಮಾಡಿ ಮಹೇಶ್ವರನನ್ನು ಪೂಜಿಸಿ ಹೋಮಮಾಡಿ ಶಿವನ ಆಜ್ಞೆ ಯನ್ನು ಮನಸ್ಸಿನಿಂದಲೇ ಹೇಳಬೇಕು.

೩೨-೩೩. ಮಹೇಶ್ವರನನ್ನು ವಿಸರ್ಜಿಸಿದಮೇಲೆ ಶಿಷ್ಯಾತ್ಮನನು ಶಾಂತ್ಯತೀತಕಲಾಸ್ಥಾನಕ್ಕೆ ತೆಗೆದುಕೊಂಡು ಹೋಗಿ ಆ ಕಲಾವ್ಯಾಪ್ತಿಯನು

ಸ್ವಾತ್ಮನೋ ವ್ಯಾಪಿಕಾಂ ತದ್ವದ್ವಾಗೀಶಾಂ ಚ ವಿಚಿಂತಯೇತ್ ।
ನಭೋಮಂಡಲಸಂಕಾಶಾಂ ಪೂರ್ಣಾಂತಂ ಚಾಪಿ ಪೂರ್ವವತ್ ॥ ३३ ॥

ಕೃತ್ವಾ ಶೇಷವಿಧಾನೇನ ಸಮಭ್ಯರ್ಚ್ಯ ಸದಾಶಿವಂ ।
ತಸ್ಮೈ ಸಮಾದಿಶೇದಾಜ್ಞಾಂ ಶಂಭೋರಮಿತಕರ್ಮಣಃ ॥ ३४ ॥

ತತ್ರಾಪಿ ಚ ಯಥಾಪೂರ್ವಂ ಶಿವಂ ಶಿರಸಿ ಪೂರ್ವವತ್ ।
ಸಮಭ್ಯರ್ಚ್ಯ ಚ ವಾಗೀಶಂ ಪ್ರಣಮ್ಯ ಚ ವಿಸರ್ಜಯೇತ್ ॥ ३५ ॥

ತತಶ್ಶಿವೇನ ಸಂಪ್ರೋಕ್ಷ್ಯ ಶಿಷ್ಯಂ ಶಿರಸಿ ಪೂರ್ವವತ್ ।
ವಿಲಯಂ ಶಾಂತ್ಯತೀತಾಯಾಃ ಶಕ್ತಿತತ್ತ್ವೇಽಥ ಚಿಂತಯೇತ್ ॥ ३६ ॥

ಷಡಧ್ವನಃ ಪರೇ ಪಾರೇ ಸರ್ವಾಧ್ವವ್ಯಾಪಿನೀಂ ಪರಾಂ ।
ಕೋಟಿಸೂರ್ಯಪ್ರತೀಕಾಶಾಂ ಶೈವೀಂ ಶಕ್ತಿಂ ಚ ಚಿಂತಯೇತ್ ॥ ३७ ॥

---

ವಿಮರ್ಶಿಸಿ ಹಿಂದಿನಂತೆ ಆಕಾಶಮಂಡಲದಂತೆ ಪ್ರಕಾಶಿಸುವ ವಾಗೀಶ್ವರೀದೇವಿಯನ್ನು ಧ್ಯಾನಮಾಡಬೇಕು.

३४-३५. ಹಿಂದಿನಂತೆ ಪೂರ್ಣಾಹುತಿಯಪರ್ಯಂತವಾಗಿ ಹೋಮವನ್ನು ಮಾಡಿ ಮಿಕ್ಕ ಕರ್ಮಗಳನ್ನೆಲ್ಲ ಮಾಡಿ ಸದಾಶಿವನನ್ನು ಪೂಜಿಸಿ ಶಿಷ್ಯನಿಗೆ ಶಿವನ ಆಜ್ಞೆಯನ್ನು ಹೇಳಬೇಕು. ಅಲ್ಲಿಯೂ ಹಿಂದಿನಂತೆ ಶಿವನನ್ನು ಪೂಜಿಸಿ ಬ್ರಹ್ಮನಿಗೆ ನಮಸ್ಕರಿಸಿ ವಿಸರ್ಜನೆಯನ್ನು ಮಾಡಬೇಕು.

३६. ಆಮೇಲೆ ಗುರುವು ಶಿವಜಲದಿಂದ ಶಿಷ್ಯನ ತಲೆಯಮೇಲೆ ಪ್ರೋಕ್ಷಿಸಿ ಶಾಂತ್ಯತೀತವಾದ ಶಕ್ತಿತತ್ತ್ವದಲ್ಲಿ ಶಿಷ್ಯಾತ್ಮನು ವಿಲಯವಾದಂತೆ ಭಾವಿಸಬೇಕು.

३७. ಷಡಧ್ವಚಕ್ರದಿಂದಾಚೆಗೆ ಸಮಸ್ತಾಧ್ವಗಳನ್ನೂ ವ್ಯಾಪಿಸಿರುವ ಕೋಟಿಸೂರ್ಯಸಮಾನವಾದ ಪ್ರಕಾಶವುಳ್ಳ ಶಿವಶಕ್ತಿಯು ಇರುವುದೆಂದು ತಿಳಿಯಬೇಕು.

ತದಗ್ರೇ ಶಿಷ್ಯಮಾನೀಯ ಶುದ್ಧಸ್ಫಟಿಕನಿರ್ಮಲಂ ।
ಪ್ರಕ್ಷಾಲ್ಯ ಕರ್ತರೀಂ ಪಶ್ಚಾಚ್ಛಿವಶಾಸ್ತ್ರೋಕ್ತಮಾರ್ಗತಃ ॥ ೩೮ ॥

ಕುರ್ಯಾತ್ತಸ್ಯ ಶಿಖಾಚ್ಛೇದಂ ಸಹಸೂತ್ರೇಣ ದೇಶಿಕಃ ।
ತತಸ್ತಾಂ ಗೋಮಯೇ ನ್ಯಸ್ಯ ಶಿವಾಗ್ನೌ ಜುಹುಯಾಚ್ಛಿಖಾಂ ॥ ೩೯ ॥

ವೌಷಡಂತೇನ ಮೂಲೇನ ಪುನಃ ಪ್ರಕ್ಷಾಲ್ಯ ಕರ್ತರೀಂ ।
ಹಸ್ತೇ ಶಿಷ್ಯಸ್ಯ ಚೈತನ್ಯಂ ತದ್ದೇಹೇ ವಿನಿವರ್ತಯೇತ್ ॥ ೪೦ ॥

ತತಃ ಸ್ನಾತಂ ಸಮಾಚಾಂತಂ ಕೃತಸ್ವಸ್ತ್ಯಯನಂ ಶಿಶುಂ ।
ಪ್ರವೇಶ್ಯ ಮಂಡಲಾಭ್ಯಾಸಂ ಪ್ರಣಿಪತ್ಯ ಚ ದಂಡವತ್ ॥ ೪೧ ॥

ಪೂಜಾಂ ಕೃತ್ವಾ ಯಥಾನ್ಯಾಯಂ ಕ್ರಿಯಾನ್ವೈಕಲ್ಯಶುದ್ಧಯೇ ।
ವಾಚಕೇನೈವ ಮಂತ್ರೇಣ ಜುಹುಯಾದಾಹುತಿತ್ರಯಂ ॥ ೪೨ ॥

---

೩೮–೪೦. ಸ್ಫಟಿಕದಂತೆ ಪರಿಶುದ್ಧನಾದ ಶಿಷ್ಯನನ್ನು ಗುರುವು ಶಕ್ತಿತತ್ತ್ವದಮುಂದೆ ಕರೆದುಕೊಂಡು ಬಂದು ಕತ್ತರಿಯನ್ನು ತೊಳೆದು ಶಿವಶಾಸ್ತ್ರೋಕ್ತರೀತಿಯಿಂದ ಶಿಷ್ಯನ ತಲೆಯ ಕೂದಲನ್ನು ದಾರದೊಡನೆ ಕತ್ತರಿಸಿ ಅದನ್ನು ಸಗಣಿಯಲ್ಲಿಟ್ಟು, ಮೂಲಮಂತ್ರದೊಡನೆ ವೌಷಟ್ ಎಂಬುದನ್ನು ಪ್ರಯೋಗಿಸಿ ಶಿವಾಗ್ನಿಯಲ್ಲಿ ಆ ಶಿಖೆಯನ್ನು ಹೋಮಮಾಡಬೇಕು ಮತ್ತೆ ಕತ್ತರಿಯನ್ನು ತೊಳೆದು ತನ್ನ ಕೈಯಲ್ಲಿರುವ ಶಿಷ್ಯನ ಜೀವಚೈತನ್ಯವನ್ನು ಶಿಷ್ಯನದೇಹಕ್ಕೆ ಸೇರಿಸಬೇಕು.

೪೧–೪೨. ಆಮೇಲೆ ಸ್ನಾನಮಾಡಿ ಆಚಮನಾನಂತರದಲ್ಲಿ ಸ್ವಸ್ತಿವಾಚನವನ್ನು ಮಾಡಿದಮೇಲೆ ಶಿಷ್ಯನನ್ನು ಮಂಡಲದ ಸಮೀಪಕ್ಕೆ ಕರೆದುಕೊಂಡು ಹೋಗಿ ಸಾಷ್ಟಾಂಗನಮಸ್ಕಾರವನ್ನು ಮಾಡಿ ವಿಧಿಗನುಸಾರವಾಗಿ ಪೂಜಿಸಿ ಕ್ರಿಯಾಕಲ್ಪದ ಶುದ್ಧಿಗಾಗಿ ಮಂತ್ರವನ್ನು ಗಟ್ಟಿಯಾಗಿ ಉಚ್ಚರಿಸಿ ಮೂರು ಹೋಮಗಳನ್ನು ಮಾಡಬೇಕು. ಉಪಾಂಶೂಚ್ಚಾರಣೆಯಿಂದ ಮೂರು ಹೋಮ

ಸ್ವಬೀಜೈಃ ಸೂತ್ರಮಂತ್ರಂ ಚ ನ್ಯಸ್ಯಾಂಗೈಸ್ತಂ ಶಿವಾತ್ಮಕಂ ।
ಬುಧ್ವಾ ತಂ ಹೃದಯಾಂಭೋಜೇ ದೇವಮಾವಾಹ್ಯ ಪೂಜಯೇತ್ ॥ ೫೨ ॥

ಆಶಾಸ್ಯ ನಿತ್ಯಸಾಂನಿಧ್ಯಂ ಶಿವಸ್ವಾತ್ಮ್ಯಂ ಶಿಶೌ ಗುರುಃ ।
ಶಿವತೇಜೋಮಯಸ್ಯಾಸ್ಯ ಶಿಶೋರಾಪಾದಯೇದ್ಗುಣಾನ್ ॥ ೫೩ ॥

ಅಣಿಮಾದೀನ್ಪ್ರಸೀದೇತಿ ಪ್ರದದ್ಯಾದಾಹುತಿತ್ರಯಂ ।
ತಥೈವ ತು ಗುಣಾನೇವ ಪುನರಸ್ಯೋಪಪಾದಯೇತ್ ॥ ೫೪ ॥

ಸರ್ವಜ್ಞತಾಂ ತಥಾ ತೃಪ್ತಿಂ ಬೋಧಂ ಚಾದ್ಯಂತವರ್ಜಿತಂ ।
ಅಲುಪ್ತಶಕ್ತಿಂ ಸ್ವಾತಂತ್ರ್ಯಮನಂತಾಂ ಶಕ್ತಿಮೇವ ಚ ॥ ೫೫ ॥

ತತೋ ದೇವಮನುಜ್ಞಾಪ್ಯ ಸದ್ಯಾದಿಕಲಶೈಸ್ತು ತಂ ।
ಅಭಿಷಿಂಚೇತ ದೇವೇಶಂ ಧ್ಯಾಯನ್ ಹೃದಿ ಯಥಾಕ್ರಮಂ ॥ ೫೬ ॥

---

೫೨–೫೩. ಶಿಷ್ಯನ ಅಂಗಗಳಲ್ಲಿ ಬೀಜಾಕ್ಷರಗಳಿಂದಲೂ, ಸೂತ್ರಗಳಿಂದಲೂ ಕೂಡಿದ ಮಂತ್ರವನ್ನಿಟ್ಟು ಅವನನ್ನು ಶಿವಸ್ವರೂಪನೆಂದೇ ತಿಳಿದು ತನ್ನ ಹೃದಯಕಮಲದಲ್ಲಿ ಶಿವನನ್ನು ಆವಾಹನೆಮಾಡಿ ಪೂಜಿಸಬೇಕು. ಆಮೇಲೆ ಗುರುವು ಶಿಷ್ಯನಿಗೆ ಶಿವಸ್ವರೂಪವೂ, ಯಾವಾಗಲೂ ಶಿವಸಾನ್ನಿಧ್ಯವೂ, ಶಿವನ ತೇಜಸ್ಸೂ ಉಂಟಾಗಬೇಕೆಂದು ಹರಸಿ ಈ ಗುಣಗಳನ್ನು ಶಿಷ್ಯನಲ್ಲಿ ಉಂಟು ಮಾಡಬೇಕು.

೫೪–೫೫. ಅಮೇಲೆ ಅಣಿಮಾದಿಶಕ್ತಿಗಳನ್ನು ಶಿಷ್ಯನಿಗೆ ಅನುಗ್ರಹಿಸಬೇಕೆಂದು ಅಗ್ನಿಯಲ್ಲಿ ಮೂರುಹೋಮಗಳನ್ನು ಮಾಡಿ ಶಿಷ್ಯನಿಗೆ ಸರ್ವಜ್ಞತ್ವ, ತೃಪ್ತಿ, ಸಂಪೂರ್ಣಜ್ಞಾನ, ಕಡಮೆಯಾಗದ ಶಕ್ತಿ, ಸ್ವತಂತ್ರತೆ ಮುಂತಾದ ಗುಣಗಳನ್ನು ಉಂಟುಮಾಡಬೇಕು.

೫೬. ಆಮೇಲೆ ಶಿವನ ಅಪ್ಪಣೆಯನ್ನು ತೆಗೆದುಕೊಂಡು ಸದ್ಯೋಜಾತಾದಿ ಪಂಚಕಲಶಗಳಲ್ಲಿರುವ ನೀರಿನಿಂದ ಶಿವನನ್ನು ಮನಸ್ಸಿನಲ್ಲಿ ಧ್ಯಾನ ಮಾಡುತ್ತ ಶಿಷ್ಯನಿಗೆ ಆ ನೀರನ್ನು ಅಭಿಷೇಕಮಾಡಬೇಕು.

**ಅಥೋಽಪವೇಶ್ಯ ತಂ ಶಿಷ್ಯಂ ಶಿವಮಭ್ಯರ್ಚ್ಯ ಪೂರ್ವವತ್ |**
**ಲಬ್ಧಾನುಜ್ಞಃ ಶಿವಾಚ್ಛೈವೀಂ ವಿದ್ಯಾಮಸ್ಮೈ ಸಮಾದಿಶೇತ್ ॥ ೫೭ ॥**

**ಓಂಕಾರಪೂರ್ವಿಕಾಂ ತತ್ರ ಸಂಪುಟಾಂ ತು ನಮೋಽಂತಗಾಂ |**
**ಶಿವಶಕ್ತಿಯುತಾಂ ಚೈವ ಶಕ್ತಿವಿದ್ಯಾಂ ಚ ತಾದೃಶೀಂ ॥ ೫೮ ॥**

**ಋಷಿಂ ಛಂದಶ್ಚ ದೇವಂ ಚ ಶಿವತಾಂ ಶಿವಯೋಸ್ತಥಾ |**
**ಪೂಜಾಂ ಸಾವರಣಾಂ ಶಂಭೋರಾಸನಾನಿ ಚ ಸಂದಿಶೇತ್ ॥ ೫೯ ॥**

**ಪುನಃ ಸಂಪೂಜ್ಯ ದೇವೇಶಂ ಯನ್ಮಯಾ ಸಮನುಷ್ಠಿತಂ |**
**ಸುಕೃತಂ ಕುರು ತತ್ಸರ್ವಮಿತಿ ವಿಜ್ಞಾಪಯೇಚ್ಛಿವಂ ॥ ೬೦ ॥**

**ಸಹಶಿಷ್ಯೋ ಗುರುರ್ದೇವಂ ದಂಡವತ್ಕ್ಷಿತಿಮಂಡಲೇ |**
**ಪ್ರಣಮ್ಯೋದ್ವಾಸಯೇತ್ತಸ್ಮಾನ್ಮಂಡಲಾತ್ಪಾವಕಾದಪಿ ॥ ೬೧ ॥**

೫೭. ಆಮೇಲೆ ಶಿಷ್ಯನನ್ನು ಕುಳ್ಳಿರಿಸಿ ಮೊದಲಿನಂತೆ ಶಿವನನ್ನು ಪೂಜಿಸಿ ಶಿವನ ಅಪ್ಪಣೆಯನ್ನು ಪಡೆದು ಶಿವವಿದ್ಯೆಯಾದ ಷಡಕ್ಷರಮಂತ್ರವನ್ನು ಆ ಶಿಷ್ಯನಿಗೆ ಉಪದೇಶಿಸಬೇಕು.

೫೮-೬೦. "ಓಂನಮಃಶಿವಾಯ'' ಎಂದು ಶಿವಶಕ್ತಿಗಳಿಂದ ಕೂಡಿದ ಮಂತ್ರವನ್ನೂ ಇದರಂತೆಯೇ ಶಕ್ತಿವಿದ್ಯೆಯನ್ನೂ, ಋಷಿದೇವತಾ ಛಂದಸ್ಸುಗಳೊಡನೆಯೂ, ಆವರಣ ಪೂಜಾಸಹಿತವಾಗಿ ಉಪದೇಶಮಾಡಿ ಮತ್ತೆ ದೇವನನ್ನು ಪೂಜಿಸಿ ತಾನು ಮಾಡಿದ ಸಕಲ ಪೂಜಾದಿವ್ಯಾಪಾರಗಳೂ, ಸಫಲವಾಗಲೆಂದು ಪ್ರಾರ್ಥನೆಯನ್ನು ಮಾಡಿಕೊಳ್ಳಬೇಕು.

೬೧. ಬಳಿಕ ಶಿಷ್ಯಸಹಿತನಾದ ಗುರುವು ಭೂಮಿಯಮೇಲೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ದೇವನನ್ನು ಆ ಮಂಡಲದಿಂದಲೂ ಅಗ್ನಿಯಿಂದಲೂ, ಉದ್ವಾಸನೆಯನ್ನು ಮಾಡಬೇಕು.

ತತಃ ಸದಸಿಕಾಃ ಸರ್ವೇ ಪೂಜ್ಯಾಃ ಪೂಜಾರ್ಹಕಾಃ ಕ್ರಮಾತ್ ॥ ೬೨ ॥

ಸೇವ್ಯಾ ವಿತ್ತಾನುಸಾರೇಣ ಸದಸ್ಯಾಶ್ಚ ಸಹರ್ತ್ವಿಜಾಃ ।
ವಿತ್ತಶಾಠ್ಯಂ ನ ಕುರ್ವೀತ ಯದೀಚ್ಛೇಚ್ಛಿವಮಾತ್ಮನಃ ॥ ೬೩ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯಸಂಹಿತಾಯಾ-
ಮುತ್ತರಭಾಗೇ ಷಡಧ್ವಶುದ್ಧ್ಯಾದಿಕಥನಂ ನಾಮ
ಅಷ್ಟಾದಶೋಽಧ್ಯಾಯಃ

---

೬೨-೬೩. ಆಮೇಲೆ ಶಿಷ್ಯನು ತನ್ನ ದ್ರವ್ಯಾನುಕೂಲಕ್ಕನುಸಾರವಾಗಿ ಪೂಜಾಯೋಗ್ಯರಾದ ಸದಸ್ಯರನ್ನೂ ಋತ್ವಿಕ್ಕುಗಳನ್ನೂ ಕ್ರಮವಾಗಿ ಪೂಜಿಸಬೇಕು. ತನಗೆ ಶುಭವಾಗಬೇಕೆಂಬ ಅಪೇಕ್ಷೆಯಿದ್ದರೆ ಧನವ್ಯಯವಿಷಯದಲ್ಲಿ ಲೋಭ ಬುದ್ಧಿಯನ್ನು ಮಾಡಬಾರದು.

ಇಲ್ಲಿಗೆ ಶಿವಪುರಾಣದ ಏಳನೆಯ ವಾಯುವೀಯಸಂಹಿತೆಯ ಉತ್ತರಭಾಗದಲ್ಲಿ
ಷಡಧ್ವಶುದ್ಧಿಕಥನವರ್ಣನವೆಂಬ ಹದಿನೆಂಟನೆಯ ಅಧ್ಯಾಯವು
ಮುಗಿದುದು



॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವಮಹಾಪುರಾಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

# ಏಕೋನವಿಂಶೋಽಧ್ಯಾಯಃ

---

**॥ ಉಪಮನ್ಯುರುವಾಚ ॥**

**ಅತಃ ಪರಂ ಪ್ರವಕ್ಷ್ಯಾಮಿ ಸಾಧಕಂ ನಾಮ ನಾಮತಃ ।**
**ಸಂಸ್ಕಾರಮಂತ್ರಮಾಹಾತ್ಮ್ಯಂ ಕಥನೇ ಸೂಚಿತಂ ಮಯಾ ॥ ೧ ॥**

**ಸಂಪೂಜ್ಯ ಮಂಡಲೇ ದೇವಂ ಸ್ಥಾಪ್ಯ ಕುಂಭೇ ಚ ಪೂರ್ವವತ್ ।**
**ಹುತ್ವಾ ಶಿಷ್ಯಮನುಷ್ಣೀಷಂ ಪ್ರಾಪಯೇದ್ಭುವಿ ಮಂಡಲೇ ॥ ೨ ॥**

---

## ಹತ್ತೊಂಭತ್ತನೆಯ ಅಧ್ಯಾಯ.

೧. ಉಪಮನ್ಯುವಿಂತೆಂದನು:—ಇಲ್ಲಿಂದ ಮುಂದಕ್ಕೆ ಹಿಂದೆ ಸೂಚಿಸಿದಂತೆ ಸಾಧಕಸಂಸ್ಕಾರವನ್ನೂ ಮಂತ್ರಮಾಹಾತ್ಮ್ಯೆಯನ್ನೂ ಹೇಳುವೆನು.

೨-೪. ಶ್ರೇಷ್ಠನಾದ ಗುರುವು ಹಿಂದೆ ಹೇಳಿದಂತೆ ಮಂಡಲಗಳನ್ನೂ ಕುಂಡಗಳನ್ನೂ ಮಾಡಿ ಕಲಶವನ್ನು ಸ್ಥಾಪಿಸಿ ಶಿವನನ್ನು ಪೂಜಿಸಿ ಆ ಮಂಡಲದ ಮೇಲೆ ಬರಿಯ ತಲೆಯಿಂದಿರುವ ಶಿಷ್ಯನನ್ನು ಕುಳ್ಳಿರಿಸಿ ಹಿಂದಿನಂತೆಯೇ ಮೂಲ

ಪೂರ್ಣಾಂತಂ ಪೂರ್ವವತ್ಕೃತ್ವಾ ಹುತ್ವಾಹುತಿಶತಂ ತಥಾ ।
ಸಂತರ್ಪ್ಯ ಮೂಲಮಂತ್ರೇಣ ಕಲಶೈರ್ದೇಶಿಕೋತ್ತಮಃ ॥ ೩ ॥

ಸಂದೀಪ್ಯ ಚ ಯಥಾಪೂರ್ವಂ ಕೃತ್ವಾ ಪೂರ್ವೋದಿತಂ ಕ್ರಮಾತ್ ।
ಅಭಿಷಿಚ್ಯ ಯಥಾಪೂರ್ವಂ ಪ್ರದದ್ಯಾನ್ಮಂತ್ರಮುತ್ತಮಂ ॥ ೪ ॥

ತತ್ರ ವಿದ್ಯೋಪದೇಶಾಂತಂ ಕೃತ್ವಾ ವಿಸ್ತರಶಃ ಕ್ರಮಾತ್ ।
ಪುಷ್ಪಾಂಬುನಾ ಶಿಶೋಃ ಪಾಣೌ ವಿದ್ಯಾಂ ಶೈವೀಂ ಸಮರ್ಪಯೇತ್ ॥ ೫ ॥

ತನ್ವೈಹಿಕಾಮುಷ್ಮಿಕಯೋಃ ಸರ್ವಸಿದ್ಧಿಫಲಪ್ರದಃ ।
ಭವತ್ಯೇವ ಮಹಾಮಂತ್ರಃ ಪ್ರಸಾದಾತ್ಪರಮೇಷ್ಠಿನಃ ॥ ೬ ॥

ಇತ್ಯುಕ್ತ್ವಾ ದೇವಮಭ್ಯರ್ಚ್ಯ ಲಬ್ಧಾನುಜ್ಞಃ ಶಿವಾದ್ಗುರುಃ ।
ಸಾಧನಂ ಶಿವಯೋಗಂ ಚ ಸಾಧಕಾಯ ಸಮಾದಿಶೇತ್ ॥ ೭ ॥

---

ಮಂತ್ರದಿಂದ ನೂರು ಹೋಮಗಳನ್ನು ಮಾಡಿ ಮೂಲಮಂತ್ರದಿಂದ ತರ್ಪಣವನ್ನು ಮಾಡಿ ಹಿಂದಿನಂತೆಯೇ ಮೂಲಮಂತ್ರದಿಂದ ಶಿಷ್ಯನಿಗೆ ಕಲಶೋದಕವನ್ನು ಅಭಿಷೇಕಮಾಡಿ ಮಂತ್ರೋಪದೇಶವನ್ನು ಮಾಡಬೇಕು.

೫. ಪಂಚಾಕ್ಷರಮಂತ್ರ ವಿದ್ಯೋಪದೇಶಪರ್ಯಂತವಾಗಿ ಮಾಡಬೇಕಾದ ಸಂಸ್ಕಾರಗಳನ್ನೆಲ್ಲ ಕ್ರಮವಾಗಿ ಮಾಡಿ ಶಿಷ್ಯನ ಕೈಯ್ಯಲ್ಲಿ ಹೂವನ್ನೂ, ನೀರನ್ನೂ ಕೊಟ್ಟು ಶಿವಾತ್ಮಕವಾದ ಪಂಚಾಕ್ಷರವಿದ್ಯೆಯನ್ನು ಅವನಿಗುಪದೇಶಿಸಿ ಅವನನ್ನು ಕುರಿತು—

೬–೭. ಶಿವನ ಅಪ್ಪಣೆಯನ್ನು ಪಡೆದು ನಾನು ನಿನಗೆ ಈ ಮಂತ್ರವನ್ನು ಪದೇಶಿಸಿರುವೆನು. ಈ ಮಹಾಮಂತ್ರವು ಶಿವನ ಅನುಗ್ರಹದಿಂದ ಇಹಪರ ಗಳಲ್ಲಿ ಸಕಲ ಇಷ್ಟಾರ್ಥಗಳನ್ನೂ ಕೊಡುವುದು ಎಂದು ಹೇಳಿ, ಶಿವನನ್ನು ಪೂಜಿಸಿ ಸಾಧಕನಾದ ಶಿಷ್ಯನಿಗೆ ಶಿವಯೋಗವನ್ನೂ ಅದರ ಸಾಧನವನ್ನೂ ಉಪದೇಶಿಸ ಬೇಕು.

ತಚ್ಛ್ರುತ್ವಾ ಗುರುಸಂದೇಶಂ ಕ್ರಮಶೋ ಮಂತ್ರಸಾಧಕಃ ।
ಪುರತೋ ವಿನಿಯೋಗಸ್ಯ ಮಂತ್ರಸಾಧನಮಾಚರೇತ್ ॥ ೮ ॥

ಸಾಧನಂ ಮೂಲಮಂತ್ರಸ್ಯ ಪುರಶ್ಚರಣಮುಚ್ಯತೇ ।
ಪುರತಶ್ಚರಣೀಯತ್ವಾದ್ವಿನಿಯೋಗಾಖ್ಯಕರ್ಮಣಃ ॥ ೯ ॥

ನಾತ್ಯಂತಂ ಕರಣೀಯಂ ತು ಮುಮುಕ್ಷೋರ್ಮಂತ್ರಸಾಧನಂ ।
ಕೃತಂ ತು ತದಿಹಾನ್ಯತ್ರ ತಸ್ಯಾಪಿ ಶುಭದಂ ಭವೇತ್ ॥ ೧೦ ॥

ಶುಭೇಽಹನಿ ಶುಭೇ ದೇಶೇ ಕಾಲೇ ವಾ ದೋಷವರ್ಜಿತೇ.।
ಶುಕ್ಲದಂತನಖಃ ಸ್ನಾತಃ ಕೃತಪೂರ್ವಾಹ್ಣಿಕಕ್ರಿಯಃ ॥ ೧೧ ॥

ಅಲಂಕೃತ್ಯ ಯಥಾ ಲಬ್ಧೈರ್ಗಂಧಮಾಲ್ಯವಿಭೂಷಣೈಃ ।
ಸೋಷ್ಣೀಷಃ ಸೋತ್ತರಾಸಂಗಃ ಸರ್ವಶುಕ್ಲಸಮಾಹಿತಃ ॥ ೧೨ ॥

---

೮. ಮಂತ್ರವನ್ನು ಸಾಧನಮಾಡತಕ್ಕ ಶಿಷ್ಯನು ಗುರುವಿನ ಉಪದೇಶವನ್ನು ಕೇಳಿ, ಮುಂದೆ ಮಂತ್ರದ ಉಪಯೋಗಕ್ಕಾಗಿ ಮಂತ್ರಸಾಧನೆಯ ರೂಪವಾದ ಕರ್ಮವನ್ನು ಆಚರಿಸಬೇಕು.

೯. ಮುಂದೆ ವಿನಿಯೋಗರೂಪವಾದ ಕರ್ಮಕ್ಕೆ ಉಪಯೋಗವಾದ ಸಾಧನವಾದುದರಿಂದ ಮೂಲಮಂತ್ರಜಪವನ್ನು ಪುರಶ್ಚರಣವೆಂದು ಹೇಳುವರು.

೧೦. ಮುಮುಕ್ಷುವಾದವನಿಗೆ ಮಂತ್ರಸಾಧನೆಯು ವಿಶೇಷವಾಗಿ ಆವಶ್ಯಕವಿಲ್ಲ. ಆದರೂ ಅವನು ಮಂತ್ರಪುರಶ್ಚರಣೆಯನ್ನು ಮಾಡಿದರೆ ಅದು ಇಹಪರಗಳಲ್ಲಿ ಶುಭವನ್ನೇ ಉಂಟುಮಾಡುವುದು.

೧೧-೧೨. ಮಂತ್ರಸಾಧಕನು ಶುಭದಿನದಲ್ಲಿ, ಶುಭಕರವಾದ ಪ್ರದೇಶದಲ್ಲಿ, ದೋಷವಿಲ್ಲದ ಲಗ್ನದಲ್ಲಿ, ಹಲ್ಲುಗಳನ್ನುಜ್ಜಿಕೊಂಡು ಉಗುರುಗಳ ಕೊಳೆಯನ್ನು ತೊಳೆದು ಸ್ನಾನಮಾಡಿ, ಪ್ರಾತಸ್ಸಂಧ್ಯಾದಿಗಳನ್ನು ಮಾಡಿ ಗಂಧಮಾಲ್ಯಾದಿಗಳಿಂದಲೂ, ಶುಭ್ರವಾದ ಬಿಳಿಯ ವಸ್ತ್ರಗಳಿಂದಲೂ ಅಲಂಕರಿಸಿಕೊಂಡು,

ದೇವಾಲಯೇ ಗೃಹೇऽನ್ಯಸ್ಮಿನ್ದೇಶೇ ವಾ ಸುಮನೋಹರೇ ।
ಸುಖೇನಾಭ್ಯಸ್ತಪೂರ್ವೇಣ ತ್ವಾಸನೇನ ಕೃತಾಸನಃ ॥ ೧೩ ॥

ತನುಂ ಕೃತ್ವಾತ್ಮನಃ ಶೈವೀಂ ಶಿವಶಾಸ್ತ್ರೋಕ್ತವರ್ತ್ಮನಾ ।
ಸಂಪೂಜ್ಯ ದೇವದೇವೇಶಂ ನಕುಲೀಶ್ವರಮೀಶ್ವರಂ ॥ ೧೪ ॥

ನಿವೇದ್ಯ ಪಾಯಸಂ ತಸ್ಮೈ ಸಮಾಪ್ಯಾರಾಧನಂ ಕ್ರಮಾತ್ ।
ಪ್ರಣಿಪತ್ಯ ಚ ತಂ ದೇವಂ ಪ್ರಾಪ್ತಾನುಜ್ಞಶ್ಚ ತನ್ಮುಖಾತ್ ॥ ೧೫ ॥

ಕೋಟಿವಾರಂ ತದರ್ಧಂ ವಾ ತದರ್ಧಂ ವಾ ಜಪೇಚ್ಛಿವಂ ।
ಲಕ್ಷವಿಂಶತಿಕಂ ವಾಪಿ ದಶಲಕ್ಷಮಥಾಪಿ ವಾ ॥ ೧೬ ॥

ತತಶ್ಚ ಪಾಯಸಾಕ್ಷಾರಲವಣೈಕಮಿತಾಶನಃ ।
ಅಹಿಂಸಕಃ ಕ್ಷಮಾ ಶಾಂತೋ ದಾಂತಶ್ಚೈವ ಸದಾ ಭವೇತ್ ॥ ೧೭ ॥

---

೧೩-೧೫. ದೇವಾಲಯ, ಮನೆ, ಮುಂತಾದ ಮನೋಹರವಾದ ಪ್ರದೇಶದಲ್ಲಿ ತನಗೆ ಅಭ್ಯಾಸವಾಗಿರುವ ಸುಖಾಸನದಲ್ಲಿ ಕುಳಿತು ಶಿವಶಾಸ್ತ್ರೋಕ್ತಮಾರ್ಗದಿಂದ ತನ್ನ ಶರೀರವನ್ನು ಶಿವಶರೀರವಂತೆ ಭಾವಿಸಿಕೊಂಡು, ದೇವದೇವನಾದ ನಕುಲೀಶ್ವರನನ್ನು ಪೂಜಿಸಿ, ಪಾಯಸವನ್ನು ನಿವೇದನಮಾಡಿ ಪೂಜೆಯನ್ನು ಕ್ರಮವಾಗಿ ಮುಗಿಸಿ, ಆ ದೇವನಿಗೆ ನಮಸ್ಕಾರವನ್ನು ಮಾಡಿ ಆ ದೇವನ ಅಪ್ಪಣೆಯನ್ನು ಪಡೆದು ಶಿವಮಂತ್ರವನ್ನು ಕೋಟಿಸಂಖ್ಯೆಯಾಗಲಿ, ಅರ್ಧಕೋಟಿಯಾಗಲಿ, ಕಾಲುಕೋಟಿಯಾಗಲಿ ಜಪವನ್ನು ಮಾಡಬೇಕು.

೧೬-೧೭. ಅಥವಾ ಇಪ್ಪತ್ತುಲಕ್ಷ, ಇಲ್ಲದಿದ್ದರೆ ಹತ್ತುಲಕ್ಷ, ಜಪವನ್ನಾದರೂ ಮಾಡಬೇಕು. ಆ ಜಪವನ್ನು ಮಾಡಿದಮೇಲೆ ಕಾರ, ಉಪ್ಪು, ಇವುಗಳನ್ನುಪಯೋಗಿಸದೆ ಪಾಯಸವನ್ನೇ ಮಿತವಾಗಿ ಒಂದು ಹೊತ್ತು ಭೋಜನ ಮಾಡಬೇಕು. ಮಂತ್ರಪುರಶ್ಚರಣಕಾಲದಲ್ಲಿ ಪ್ರಾಣಿಹಿಂಸೆ ಮಾಡದೆ, ಕ್ಷಮಾಗುಣವುಳ್ಳವನಾಗಿಯೂ, ಶಾಂತನಾಗಿಯೂ, ಯಾವಾಗಲೂ ಇಂದ್ರಿಯನಿಗ್ರಹವುಳ್ಳವನಾಗಿಯೂಇರಬೇಕು.

**ಅಲಾಭೇ ಪಾಯಸಸ್ಯಾಶ್ನನ್ಫಲಮೂಲಾದಿಕಾನಿ ವಾ ।**
**ವಿಹಿತಾನಿ ಶಿವೇನೈವ ವಿಶಿಷ್ಟಾನ್ಯುತ್ತರೋತ್ತರಂ ॥ ೧೮ ॥**

**ಚರುಂ ಭಕ್ಷ್ಯಮಥೋ ಸಕ್ತುಕಣಾನ್ಯಾವಕಮೇವ ಚ ।**
**ಶಾಕಂ ಪಯೋ ದಧಿ ಘೃತಂ ಮೂಲಂ ಫಲಮಥೋದಕಂ ॥ ೧೯ ॥**

**ಅಭಿಮಂತ್ರ್ಯ ಚ ಮಂತ್ರೇಣ ಭಕ್ಷ್ಯಭೋಜ್ಯಾದಿಕಾನಿ ಚ ।**
**ಸಾಧನೇऽಸ್ಮಿನ್ವಿಶೇಷೇಣ ನಿತ್ಯಂ ಭುಂಜೀತ ವಾಗ್ಯತಃ ॥ ೨೦ ॥**

**ಮಂತ್ರಾಷ್ಟಶತ ಪೂತೇನ ಜಲೇನ ಶುಚಿನಾ ವ್ರತೀ ।**
**ಸ್ನಾಯಾನ್ನದೀನದೋತ್ಥೇನ ಪ್ರೋಕ್ಷಯೇದ್ವಾಥ ಶಕ್ತಿತಃ ॥ ೨೧ ॥**

**ತರ್ಪಯೇಚ್ಚ ತಥಾ ನಿತ್ಯಂ ಜುಹುಯಾಚ್ಚ ಶಿವಾನಲೇ ।**
**ಸಪ್ತಭಿಃ ಪಂಚಭಿರ್ದ್ರವ್ಯೈಸ್ತ್ರಿಭಿರ್ವಾಥ ಘೃತೇನ ವಾ ॥ ೨೨ ॥**

---

೧೮-೨೦. ಪಾಯಸವು ದೊರೆಯದಿದ್ದರೆ ಶಾಸ್ತ್ರವಿಹಿತವಾದ ಹಣ್ಣುಗಳನ್ನೂ, ಗೆಡ್ಡೆಗೆಣಸುಗಳನ್ನೂ ಉಪಯೋಗಿಸಬೇಕು. ಮುಂದೆ ಹೇಳುವ ಪದಾರ್ಥಗಳು ಕ್ರಮವಾಗಿ ಒಂದಕ್ಕಿಂತ ಒಂದು ಶ್ರೇಷ್ಠವಾದುವುಗಳೆಂದು ತಿಳಿಯಬೇಕು. ಅವುಗಳಾವುವೆಂದರೆ ಅನ್ನ, ಭಕ್ಷ್ಯ, ಹಿಟ್ಟು, ಯವೆಯೆಂಬ ಧಾನ್ಯ ಸೊಪ್ಪುಗಳು, ಹಾಲು, ಮೊಸರು, ತುಪ್ಪ, ಗೆಡ್ಡೆಗಳು, ಹಣ್ಣುಗಳು, ನೀರು. ಸಾಧಕನು ಯಾವ ಆಹಾರವನ್ನಾದರೂ, ಮೊದಲು ಮಂತ್ರದಿಂದ ಅಭಿಮಂತ್ರಿಸಿ ಬಳಿಕ ಅದನ್ನು ಉಪಯೋಗಿಸಬೇಕು. ಆಹಾರವನ್ನು ತಿನ್ನುವಾಗ ಮೌನವಾಗಿರಬೇಕು.

೨೧-೨೨. ಮಂತ್ರಪುರಶ್ಚರಣವ್ರತವನ್ನು ಮಾಡುವವನು ನದೀ ಜಲಾದಿಗಳಲ್ಲಿ ಸ್ನಾನಮಾಡುವಾಗ ನೂರೆಂಟುಬಾರಿ ಮಂತ್ರದಿಂದ ನೀರನ್ನು ಅಭಿಮಂತ್ರಿಸಿ ಸ್ನಾನಮಾಡಬೇಕು. ಅಥವಾ ಶಕ್ತ್ಯನುಸಾರವಾಗಿ ಮಂತ್ರದಿಂದ ನೀರನ್ನು ಪ್ರೋಕ್ಷಿಸಿಕೊಳ್ಳಬೇಕು. ಪ್ರತಿದಿನವೂ ಮಂತ್ರದಿಂದ ತರ್ಪಣವನ್ನು ಮಾಡಬೇಕು. ಮತ್ತು ಶಿವಾಗ್ನಿಯಲ್ಲಿ ಹೋಮವನ್ನೂ ಮಾಡಬೇಕು. ಹೋಮಕ್ಕೆ ಏಳು ಅಥವಾ ಮೂರು ದ್ರವ್ಯಗಳನ್ನು ಪಯೋಗಿಸಬೇಕು. ಅಥವಾ ತುಪ್ಪವು ಒಂದೇ ಆದರೂ ಆಗಬಹುದು.

ಇತ್ಥಂ ಭಕ್ತ್ಯಾ ಶಿವಂ ಶೈವೋ ಯಃ ಸಾಧಯತಿ ಸಾಧಕಃ ।
ತಸ್ಯೇಹಾಮುತ್ರ ದುಷ್ಪ್ರಾಪಂ ನ ಕಿಂಚಿದಪಿ ವಿದ್ಯತೇ ॥ ೨೩ ॥
ಅಥವಾಽಹರಹರ್ಮಂತ್ರಂ ಜಪೇದೇಕಾಗ್ರಮಾನಸಃ ।
ಅನಶ್ನನ್ನೇವ ಸಾಹಸ್ರಂ ವಿನಾ ಮಂತ್ರಸ್ಯ ಸಾಧನಂ ॥ ೨೪ ॥
ನ ತಸ್ಯ ದುರ್ಲಭಂ ಕಿಂಚಿನ್ನ ತಸ್ಯಾಸ್ತ್ಯಶುಭಂ ಕ್ವಚಿತ್ ।
ಇಹ ವಿದ್ಯಾಂ ಶ್ರಿಯಂ ಸೌಖ್ಯಂ ಲಬ್ಧ್ವಾ ಮುಕ್ತಿಂ ಚ ವಿಂದತಿ ॥ ೨೫ ॥
ಸಾಧನೇ ವಿನಿಯೋಗೇ ಚ ನಿತ್ಯೇ ನೈಮಿತ್ತಿಕೇ ತಥಾ ।
ಜಪೇಜ್ಜಲೈರ್ಭಸ್ಮನಾ ಚ ಸ್ನಾತ್ವಾ ಮಂತ್ರೇಣ ಚ ಕ್ರಮಾತ್ ॥ ೨೬ ॥
ಶುಚಿರ್ಬದ್ಧಶಿಖಸ್ಸೂತ್ರೀ ಸಪವಿತ್ರಕರಸ್ತಥಾ ।
ಧೃತತ್ರಿಪುಂಡ್ರರುದ್ರಾಕ್ಷೋ ವಿದ್ಯಾಂ ಪಂಚಾಕ್ಷರೀಂ ಜಪೇತ್ ॥ ೨೭ ॥

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-ಮುತ್ತರಭಾಗೇ ಸಾಧಕಸಂಸ್ಕಾರಮಂತ್ರಮಾಹಾತ್ಮ್ಯವರ್ಣನಂ ನಾಮ ಏಕೋನವಿಂಶೋಽಧ್ಯಾಯಃ**

---

೨೩-೨೫. ಈ ರೀತಿಯಲ್ಲಿ ಭಕ್ತಿಯಿಂದ ಯಾವ ಸಾಧಕನು ಶಿವಮಂತ್ರವನ್ನು ಸಾಧಿಸುವನೋ ಅವನಿಗೆ ಇಹಪರಗಳಲ್ಲಿ ದೊರೆಯಲಸಾಧ್ಯವಾದ ವಸ್ತುಗಳಾವುವೂ ಇರುವುದಿಲ್ಲ. ಪ್ರತಿದಿನವೂ ಏಕಾಗ್ರಚಿತ್ತದಿಂದ ನಿರಾಹಾರನಾಗಿ ಮಂತ್ರಜಪಸಾಧನಗಳಾವುವೂ ಇಲ್ಲದೆ ಒಂದುಸಾವಿರ ಜಪಮಾಡಿದರೆ ಅವನಿಗೆ ದುರ್ಲಭವಾದ ವಸ್ತುವಾವುದೂ ಇರುವುದಿಲ್ಲ. ಅವನಿಗೆ ಎಲ್ಲಿಯೂ ಯಾವ ಅಶುಭವೂ ಉಂಟಾಗುವುದಿಲ್ಲ. ಅವನು ಇಹಲೋಕದಲ್ಲಿ ವಿದ್ಯೆಯನ್ನೂ ಸಂಪತ್ತನ್ನೂ ಸೌಖ್ಯವನ್ನೂ ಪಡೆದು ಪರದಲ್ಲಿ ಮುಕ್ತಿಯನ್ನು ಹೊಂದುವನು.

೨೬-೨೭. ಸಾಧನಕಾಲದಲ್ಲಿಯೂ, ಮಂತ್ರವನ್ನು ವಿನಿಯೋಗಿಸುವ ಸಮಯದಲ್ಲೂ ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನಸಮಯದಲ್ಲಿಯೂ, ನೀರಿನಿಂದಾಗಲಿ, ಭಸ್ಮದಿಂದಾಗಲಿ, ಕ್ರಮವಾಗಿ ಮಂತ್ರಪೂರ್ವಕವಾಗಿ ಸ್ನಾನವನ್ನು ಮಾಡಿ ಜಪಮಾಡಬೇಕು. ಶುಚಿಯಾಗಿಯೂ, ತಲೆಯ ಕೂದಲನ್ನು ಗಂಟು ಹಾಕಿಕೊಂಡೂ, ಯಜ್ಞೋಪವೀತವನ್ನು ಧರಿಸಿಯೂ, ಪವಿತ್ರವನ್ನು ಕೈಯ್ಯಲ್ಲಿ ಧರಿಸಿಯೂ, ಭಸ್ಮತ್ರಿಪುಂಡ್ರವನ್ನೂ ರುದ್ರಾಕ್ಷಿಯನ್ನೂ ಧರಿಸಿಯೂ ಪಂಚಾಕ್ಷರ ಮಂತ್ರವನ್ನು ಜಪಿಸಬೇಕು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯವೀಯಸಂಹಿತೆಯ ಉತ್ತರ ಭಾಗವಲ್ಲಿ ಸಾಧಕಸಂಸ್ಕಾರ ಮತ್ತು ಮಂತ್ರಮಾಹಾತ್ಮ್ಯಕಥನವೆಂಬ ಹತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ವಿಂಶೋಽಧ್ಯಾಯಃ

॥ ಉಪಮನ್ಯುರುವಾಚ ॥

ಅಥೈವಂ ಸಂಸ್ಕೃತಂ ಶಿಷ್ಯಂ ಕೃತಪಾಶುಪತವ್ರತಂ ।
ಆಚಾರ್ಯತ್ವೇಽಭಿಷಿಂಚೇತ ತದ್ಯೋಗತ್ವೇನ ಚಾನ್ಯಥಾ ॥ ೧ ॥

ಮಂಡಲಂ ಪೂರ್ವವತ್ಕೃತ್ವಾ ಸಂಪೂಜ್ಯ ಪರಮೇಶ್ವರಂ ।
ಸ್ಥಾಪಯೇತ್ಪಂಚ ಕಲಶಾನ್ದಿಕ್ಷು ಮಧ್ಯೇ ಚ ಪೂರ್ವವತ್ ॥ ೨ ॥

---

## ಇಪ್ಪತ್ತನೆಯ ಅಧ್ಯಾಯವು

೧. ಉಪಮನ್ಯುವಿಂತೆಂದನು:— ಆಮೇಲೆ ಹಿಂದಿನಂತೆ ಷಡಧ್ವಶುದ್ಧಿಯೇ ಮೊದಲಾದ ಸಂಸ್ಕಾರಗಳಿಂದ ಸಂಸ್ಕೃತನಾಗಿ ಪಾಶುಪತವ್ರತವನ್ನಾಚರಿಸಿದ ಶಿಷ್ಯನನ್ನು ಗುರುವು ಆಚಾರ್ಯಪದವಿಗೆ ಯೋಗ್ಯತೆಯುಂಟಾದುದನ್ನು ತಿಳಿದು ಆ ಪದವಿಯನ್ನುಂಟುಮಾಡುವುಕ್ಕಾಗಿ ಅವನಿಗೆ ಅಭಿಷೇಕವನ್ನು ಮಾಡಬೇಕು.

೨–೩. ಅದಕ್ಕಾಗಿ ಹಿಂದಿನಂತೆ ಮಂಡಲಗಳನ್ನು ಮಾಡಿ ಪರಮೇಶ್ವರನನ್ನು ಪೂಜಿಸಿ ನಾಲ್ಕುದಿಕ್ಕುಗಳಲ್ಲಿಯೂ, ಮಧ್ಯದಲ್ಲಿಯೂ, ಐದು ಕಲಶಗಳನ್ನು

**ನಿವೃತ್ತಿಂ ಪುರತೋನ್ಯಸ್ಯ ಪ್ರತಿಷ್ಠಾಂ ಪಶ್ಚಿಮೇ ಘಟೇ ।**
**ವಿದ್ಯಾಂ ದಕ್ಷಿಣತಃ ಶಾಂತಿಮುತ್ತರೇ ಮಧ್ಯತಃ ಪರಾಂ ॥ ೩ ॥**

**ಕೃತ್ವಾ ರಕ್ಷಾದಿಕಂ ತತ್ರ ಬಧ್ವಾ ಮುದ್ರಾಂ ಚ ಧೈನವೀಂ ।**
**ಅಭಿಮಂತ್ರ್ಯ ಘಟಾನ್ ಹುತ್ವಾ ಪೂರ್ಣಾಂತಂ ಚ ಯಥಾ ಪುರಾ ॥ ೪ ॥**

**ಪ್ರವೇಶ್ಯ ಮಂಡಲೇ ಶಿಷ್ಯಮನುಷ್ಣೀಷಂ ಚ ದೇಶಿಕಃ ।**
**ತರ್ಪಣಾದ್ಯಂ ತು ಮಂತ್ರಾಣಾಂ ಕುರ್ಯಾತ್ಪೂರ್ವಾವಸಾನಕಂ ॥ ೫ ॥**

**ತತಃ ಸಂಪೂಜ್ಯ ದೇವೇಶಮನುಜ್ಞಾಪ್ಯ ಚ ಪೂರ್ವವತ್ ।**
**ಅಭಿಷೇಕಾಯ ತಂ ಶಿಷ್ಯಮಾಸನಂ ತ್ವಧಿರೋಹಯೇತ್ ॥ ೬ ॥**

**ಸಕಲೀಕೃತ್ಯ ತಂ ಪಶ್ಚಾತ್ಕಲಾಪಂಚಕರೂಪಿಣಂ ।**
**ನ್ಯಸ್ತಮಂತ್ರತನುಂ ಬಧ್ವಾ ಶಿವಂ ಶಿಷ್ಯಂ ಸಮರ್ಪಯೇತ್ ॥ ೭ ॥**

---

ಸ್ಥಾಪಿಸಬೇಕು. ಪೂರ್ವದಿಕ್ಕಿನಲ್ಲಿ ನಿವೃತ್ತಿಕಲಾ ಕಲಶವನ್ನೂ, ಪಶ್ಚಿಮದಲ್ಲಿ ಪ್ರತಿಷ್ಠಾ ಕಲಾ ಕಲಶವನ್ನೂ, ದಕ್ಷಿಣದಲ್ಲಿ ವಿದ್ಯಾಕಲಶವನ್ನೂ ಉತ್ತರದಲ್ಲಿ ಶಾಂತಿ ಕಲಶವನ್ನೂ ಮಧ್ಯದಲ್ಲಿ ಪರಾಶಕ್ತಿಯ ಕಲಶವನ್ನೂ ಸ್ಥಾಪಿಸಬೇಕು.

೪–೫. ಆ ಕಲಶಗಳಿಗೆ ರಕ್ಷಾಬಂಧನೆಯನ್ನು ಮಾಡಿ ಧೇನುಮುದ್ರೆಯನ್ನು ಪ್ರದರ್ಶಿಸಿ, ಮಂತ್ರಗಳಿಂದ ಅಭಿಮಂತ್ರಿಸಿ, ಅಗ್ನಿಯಲ್ಲಿ ಹಿಂದಿನಂತೆ ಪೂರ್ಣಾಹುತಿಪರ್ಯಂತವಾಗಿ ಹೋಮವನ್ನು ಮಾಡಿ, ಗುರುವು ಶಿಷ್ಯನನ್ನು ಬರಿಯತಲೆಯಲ್ಲಿ ಮಂಡಲದಮೇಲೆ ಕುಳ್ಳಿರಿಸಿ ಹಿಂದಿನಂತೆ ಮಂತ್ರಗಳಿಂದ ತರ್ಪಣಾದಿಗಳನ್ನು ಮಾಡಬೇಕು.

೬. ಆಮೇಲೆ ಶಿವನನ್ನು ಪೂಜಿಸಿ ಅವನ ಅಪ್ಪಣೆಯನ್ನು ಪಡೆದು ಹಿಂದಿನಂತೆಯೇ ಅಭಿಷೇಕಮಾಡುವುದಕ್ಕಾಗಿ ಶಿಷ್ಯನನ್ನು ಪೀಠದಮೇಲೆ ಕುಳ್ಳಿರಿಸಬೇಕು.

೭–೮. ಆಮೇಲೆ ಮಂತ್ರನ್ಯಾಸಾದಿಗಳನ್ನು ಮಾಡಿ ಶುದ್ಧನಾಗಿರುವ ಶಿಷ್ಯನನ್ನು ಪಂಚಕಲಾರೂಪದಿಂದಿರುವ ಶಿವನಿಗೆ ಸಮರ್ಪಿಸಬೇಕು. ಆಮೇಲೆ

**ತತೋ ನಿವೃತ್ತಿಕುಂಭಾದಿಘಟಾನುದ್ಧೃತ್ಯ ವೈ ಕ್ರಮಾತ್ |**
**ಮಧ್ಯಮಾನ್ತಾಚ್ಛಿವೇ ನೈವ ಶಿಷ್ಯಂ ತಮಭಿಷೇಚಯೇತ್ ॥ ೮ ॥**

**ಶಿವಹಸ್ತಂ ಸಮುಸ್ಥಾರ್ಯಥ ಶಿಶೋಃ ಶಿರಸಿ ದೇಶಿಕಃ |**
**ಶಿವಭಾವಸಮಾಪನ್ನಃ ಶಿವಾಚಾರ್ಯಂ ತಮಾದಿಶೇತ್ ॥ ೯ ॥**

**ಅಥಾಲಂಕೃತ್ಯ ತಂ ದೇವಮಾರಾಧ್ಯ ಶಿವಮಂಡಲೇ |**
**ಶತಮಷ್ಟೋತ್ತರಂ ಹುತ್ವಾ ದದ್ಯಾತ್ಪೂರ್ಣಾಹುತಿಂ ತತಃ ॥ ೧೦ ॥**

**ಪುನಃ ಸಂಪೂಜ್ಯ ದೇವೇಶಂ ಪ್ರಣಮ್ಯ ಭುವಿ ದಂಡವತ್ |**
**ಶಿರಸ್ಯಂಜಲಿಮಾಧಾಯ ಶಿವಂ ವಿಜ್ಞಾಪಯೇದ್ಗುರುಃ ॥ ೧೧ ॥**

**ಭಗವಂಸ್ತ್ವತ್ಪ್ರಸಾದೇನ ದೇಶಿಕೋಽಯಂ ಮಯಾ ಕೃತಃ |**
**ಅನುಗೃಹ್ಯ ತ್ವಯಾ ದೇವ ದಿವ್ಯಾಜ್ಞಾಸ್ಮೈ ಪ್ರದೀಯತಾಂ ॥ ೧೨ ॥**

---

ನಿವೃತ್ತಿಕಲಶವೇ ಮೊದಲಾದ ಮಧ್ಯದ ಕಲಶಪರ್ಯಂತವಾದ ಕಲಶಗಳನ್ನು ಎತ್ತಿ ಅವುಗಳ ನೀರಿನಿಂದ ಶಿಷ್ಯನಿಗೆ ಅಭಿಷೇಕವನ್ನು ಮಾಡಬೇಕು.

೯-೧೦. ಗುರುವು ಶಿಷ್ಯನ ತಲೆಯಮೇಲೆ ತನ್ನ ಮಂಗಳಕರವಾದ ಹಸ್ತವನ್ನಿಟ್ಟು, ನೀನು ಶಿವಭಾವವನ್ನು ಹೊಂದಿ ಶಿವಾಚಾರ್ಯನಾದೆ ಎಂದು ಅವನಿಗೆ ಆಜ್ಞೆಮಾಡಬೇಕು ಆಮೇಲೆ ಶಿವಮಂಡಲದಲ್ಲಿ ಶಿವನಿಗೆ ಅಲಂಕಾರಮಾಡಿ ಪೂಜಿಸಿ, ನೂರೆಂಟು ಹೋಮಗಳನ್ನುಮಾಡಿ ಪೂರ್ಣಾಹುತಿಯನ್ನುಮಾಡಬೇಕು.

೧೧-೧೨. ಗುರುವು ಮತ್ತೆ ಶಿವನನ್ನು ಪೂಜಿಸಿ ಭೂಮಿಯಮೇಲೆ ಸಾಷ್ಟಾಂಗನಮಸ್ಕಾರವನ್ನು ಮಾಡಿ ತಲೆಯಮೇಲೆ ಕೈಜೋಡಿಸಿ, ಎಲೈ ಮಹಾ ಮಹಿಮನಾದ ಶಿವನೇ, ನಿನ್ನ ಅನುಗ್ರಹದಿಂದ ಈ ಶಿಷ್ಯನನ್ನು ಸಂಸ್ಕಾರದಿಂದ ನಾನು ಗುರುವಾಗಿ ಮಾಡಿರುವೆನು. ಸ್ವಾಮಿಯಾದ ನೀನು ಅನುಗ್ರಹಮಾಡಿ ಇವನಿಗೆ ನಿನ್ನ ಶ್ರೇಷ್ಠವಾದ ಆಜ್ಞೆಯನ್ನನುಗ್ರಹಿಸು, ಎಂದು ವಿಜ್ಞಾಪಿಸಿ ಕೊಳ್ಳಬೇಕು.

ಏವಂ ವಿಜ್ಞಾಪ್ಯ ಶಿಷ್ಯೇಣ ಸಹ ಭೂಯಃ ಪ್ರಣಮ್ಯ ಚ ।
ಶಿವಂ ಶಿವಾಗಮಂ ದಿವ್ಯಂ ಪೂಜಯೇಚ್ಛಿವವದ್ಗುರುಃ ॥ ೧೩ ॥

ಪುನಃ ಶಿವಮನುಜ್ಞಾಪ್ಯ ಶಿವಜ್ಞಾನಸ್ಯ ಪುಸ್ತಕಂ ।
ಉಭಾಭ್ಯಾಮಪಿ ಪಾಣಿಭ್ಯಾಂ ದದ್ಯಾಚ್ಛಿಷ್ಯಾಯ ದೇಶಿಕಃ ॥ ೧೪ ॥

ಸ ತಾಂ ಮೂರ್ಧ್ನಿ ಸಮಾಧಾಯ ವಿದ್ಯಾಂ ವಿದ್ಯಾಸನೋಪರಿ ।
ಅಧಿರೋಪ್ಯ ಯಥಾನ್ಯಾಯಮಭಿವಂದ್ಯ ಸಮರ್ಚಯೇತ್ ॥ ೧೫ ॥

ಅಥ ತಸ್ಮೈ ಗುರುರ್ದದ್ಯಾ ದ್ರಾಜೋಪಕರಣಾನ್ಯಪಿ ।
ಆಚಾರ್ಯಪದವೀಂ ಪ್ರಾಪ್ತೋ ರಾಜ್ಯಂ ಚಾಪಿ ಯತೋಽರ್ಹತಿ ॥ ೧೬ ॥

ಅಥಾನುಶಾಸನಂ ಕುರ್ಯಾತ್ಪೂರ್ವೈರಾಚರಿತಂ ಯಥಾ ।
ಯಥಾ ಚ ಶಿವಶಾಸ್ತ್ರೋಕ್ತಂ ಯಥಾ ಲೋಕೇಷು ಪೂಜ್ಯತೇ ॥ ೧೭ ॥

---

೧೩–೧೪. ಹೀಗೆ ವಿಜ್ಞಾಪಿಸಿಕೊಂಡು ಶಿಷ್ಯನೊಡನೆ ನಮಸ್ಕರಿಸಿ ಶಿವಾಗಮಶಾಸ್ತ್ರವನ್ನು ಶಿವನಂತೆ ಪೂಜಿಸಿ ಗುರುವು ಮತ್ತೆ ಶಿವನ ಅನುಜ್ಞೆಯನ್ನು ಪಡೆದು ಶಿವಜ್ಞಾನದ ಪುಸ್ತಕವನ್ನು ಎರಡು ಕೈಗಳಿಂದಲೂ ಎತ್ತಿ ಶಿಷ್ಯನಿಗೆ ಕೊಡಬೇಕು.

೧೫. ಆ ಶಿವಜ್ಞಾನದ ಪುಸ್ತಕವನ್ನು ಶಿಷ್ಯನು ತಲೆಯಮೇಲೆ ಇಟ್ಟುಕೊಂಡು ವಿದ್ಯಾಸ್ವರೂಪವಾದ ಅದನ್ನು ವಿದ್ಯಾಸನದಮೇಲಿಟ್ಟು ನಮಸ್ಕರಿಸಿ ಪೂಜಿಸಬೇಕು.

೧೬. ಆಚಾರ್ಯ ಪದವಿಯನ್ನು ಹೊಂದಿದವನು ರಾಜ್ಯಕ್ಕೂ ಅರ್ಹನಾದುದರಿಂದ ಗುರುವು ಆಚಾರ್ಯನಾದ ಶಿಷ್ಯನಿಗೆ ರಾಜೋಪಕರಣಗಳಾದ ಛತ್ರಿ, ಚಾಮರಾದಿಗಳನ್ನು ಕೊಡಬೇಕು.

೧೭. ಆಮೇಲೆ ಹಿಂದಿನವರು ಆಚರಿಸಿದಂತೆಯೂ, ಶಿವಾಗಮಶಾಸ್ತ್ರದಲ್ಲಿ ಹೇಳಿದಂತೆಯೂ, ಲೋಕದಲ್ಲಿ ಪೂಜ್ಯತೆಯುಂಟಾಗುವುದಕ್ಕಾಗಿ ಗುರುವು ಶಿಷ್ಯನಿಗೆ ಆಜ್ಞೆಯನ್ನು ವಾಕ್ಯರೂಪದಲ್ಲಿ ಹೇಳಬೇಕು.

ಶಿಷ್ಯಾನ್ಪರೀಕ್ಷ್ಯ ಯತ್ನೇನ ಶಿವಶಾಸ್ತ್ರೋಕ್ತಲಕ್ಷಣೈಃ ।
ಸಂಸ್ಕೃತ್ಯ ಚ ಶಿವಜ್ಞಾನಂ ತೇಭ್ಯೋ ದದ್ಯಾಚ್ಚ ದೇಶಿಕಃ ॥ ೧೮ ॥

ಏವಂ ಸರ್ವಮನಾಯಾಸಂ ಶೌಚಂ ಕ್ಷಾಂತಿಂ ದಯಾಂ ತಥಾ ।
ಅಸ್ಪೃಹಾಮಪ್ಯಸೂಯಾಂ ಚ ಯತ್ನೇನ ಚ ವಿಭಾವಯೇತ್ ॥ ೧೯ ॥

ಇತ್ಥಮಾದಿಶ್ಯ ತಂ ಶಿಷ್ಯಂ ಶಿವಮುದ್ವಾಸ್ಯ ಮಂಡಲಾತ್ ।
ಶಿವಕುಂಭಾನಲಾದೀಂಶ್ಚ ಸದಸ್ಯಾನಪಿ ಪೂಜಯೇತ್ ॥ ೨೦ ॥

ಯುಗಪದ್ವಾಽಥ ಸಂಸ್ಕಾರಾನ್ಕುರ್ವೀತ ಸಗಣೋ ಗುರುಃ ।
ತತ್ರ ಯತ್ರ ದ್ವಯಂ ವಾಪಿ ಪ್ರಯೋಗಸ್ಯೋಪದಿಶ್ಯತೇ ॥ ೨೧ ॥

ತದಾದಾವೇವ ಕಲಶಾನ್ಕಲ್ಪಯೇದಧ್ವಶುದ್ಧಿವತ್ ।
ಕೃತ್ವಾ ಸಮಯಸಂಸ್ಕಾರಮಭಿಷೇಕಂ ವಿನಾಖಿಲಂ ॥ ೨೨ ॥

---

೧೮-೧೯. ಶಿವಾಗಮಶಾಸ್ತ್ರದಲ್ಲಿ ಹೇಳಿದ ಲಕ್ಷಣಗಳಿಂದ ಶಿಷ್ಯನನ್ನು ಪರೀಕ್ಷಿಸಿ ಗುರುವು ಅವನಿಗೆ ಸಂಸ್ಕಾರರೂಪವಾದ ಕರ್ಮಗಳನ್ನು ಮಾಡಿ ಶಿವಜ್ಞಾನವನ್ನು ಉಪದೇಶಿಸಿ, ಬಳಿಕ ಶಿಷ್ಯನನ್ನು ಕುರಿತು, ಇನ್ನು ಮುಂದೆ ನೀನು ಶುಚಿತ್ವ, ಕ್ಷಮೆ, ದಯೆ, ನಿಸ್ಪೃಹತೆ, ಅಸೂಯೆಪಡದಿರುವುದು ಎಂಬ ಗುಣಗಳನ್ನು ಪ್ರಯತ್ನಪೂರ್ವಕವಾಗಿ ಮನಸ್ಸಿನಲ್ಲಿ ಭಾವನೆಮಾಡುತ್ತಿರಬೇಕು ಎಂದು ಹೇಳಬೇಕು.

೨೦. ಹೀಗೆಂದು ಶಿಷ್ಯನಿಗೆ ಅಪ್ಪಣೆಮಾಡಿ ಮಂಡಲದಿಂದ ಶಿವನನ್ನು ಉದ್ವಾಸನೆಮಾಡಿ ಶಿವಕಲಶವನ್ನೂ, ಅಗ್ನಿಯನ್ನೂ, ಸದಸ್ಯರನ್ನೂ ಪೂಜಿಸಬೇಕು.

೨೧-೨೨. ಈ ಸಂಸ್ಕಾರವನ್ನು ಮಾಡುವಾಗ ಸಂದರ್ಭಾನುಸಾರವಾಗಿ ಗುರುವು ಅನೇಕ ಋತ್ವಿಕ್ಕುಗಳೊಡನೆ ಕೂಡಿ ಇಬ್ಬರು, ಮೂವರು, ಅಥವಾ ಹೆಚ್ಚುಜನ ಶಿಷ್ಯರಿಗೆ ಏಕಕಾಲದಲ್ಲಿ ಪ್ರಯೋಗಾನುಸಾರವಾಗಿ ಸಂಸ್ಕಾರಗಳನ್ನು ಮಾಡಬಹುದು. ಆದರ ಆದಿಯಲ್ಲಿ ಷಡಧ್ವಶುದ್ಧಿಯಲ್ಲಿ ಹೇಳಿದಂತೆ ಕಲಶಗಳ

ಸಮಭ್ಯರ್ಚ್ಯ ಶಿವಂ ಭೂಯಃ ಕೃತ್ವಾ ಚಾಧ್ವವಿಶೋಧನಂ ।
ತಸ್ಮಿನ್ಪರಿಸಮಾಪ್ತೇ ತು ಪುನರ್ದೇವಂ ಪ್ರಪೂಜಯೇತ್ ॥ ೨೩ ॥

ಹುತ್ವಾ ಮಂತ್ರಂ ತು ಸಂತರ್ಪ್ಯ ಸಂದೀಪ್ಯಾಶಾಸ್ಯ ಚೇಶ್ವರಂ ।
ಸಮರ್ಪ್ಯ ಮಂತ್ರಂ ಶಿಷ್ಯಸ್ಯ ಪಾಣೌ ಶೇಷಂ ಸಮಾಪಯೇತ್ ॥ ೨೪ ॥

ಅಥವಾ ಮಂತ್ರಸಂಸ್ಕಾರಮನುಚಿಂತ್ಯಾಖಿಲಂ ಕ್ರಮಾತ್ ।
ಅಧ್ವಶುದ್ಧಿಂ ಗುರುಃ ಕುರ್ಯಾದಭಿಷೇಕಾವಸಾನಿಕಂ ॥ ೨೫ ॥

ತತ್ರ ಯಚ್ಛಾಂತ್ಯತೀತಾದಿ ಕಲಾಸು ವಿಹಿತೋ ವಿಧಿಃ ।
ಸ ಸರ್ವೋಽಪಿ ವಿಧಾತವ್ಯಸ್ತತ್ತ್ವತ್ರಯವಿಶೋಧನೇ ॥ ೨೬ ॥

ಶಿವವಿದ್ಯಾತ್ಮತತ್ತ್ವಾಖ್ಯಂ ತತ್ತ್ವತ್ರಯಮುದಾಹೃತಂ ।
ಶಕ್ತೌ ಶಿವಸ್ತತೋ ವಿದ್ಯಾತ್ತಸ್ಯಾಸ್ತ್ವಾತ್ಮಾ ಸಮುದ್ಬಭೌ ॥ ೨೭ ॥

---

ನ್ನಿಟ್ಟು ಪೂಜಿಸಿ ಅಭಿಷೇಕವನ್ನು ಬಿಟ್ಟು ಮಿಕ್ಕ ಸಂಸ್ಕಾರಗಳನ್ನೆಲ್ಲಾ ಮಾಡಿ ಮತ್ತೆ ಶಿವನನ್ನು ಪೂಜಿಸಿ ಷಡಧ್ವಶುದ್ಧಿಯನ್ನು ಮಾಡಿ ಅದು ಮುಗಿದಮೇಲೆ ಮತ್ತೆ ಶಿವನನ್ನು ಪೂಜಿಸಿಬೇಕು.

೨೪–೨೫. ಅಗ್ನಿಗನ್ನು ಪ್ರಜ್ವಲಿಸಿ ಮಂತ್ರೋಕ್ತವಾದ ಹೋಮವನ್ನು ಮಾಡಿ ಶಿವಾಜ್ಞೆಯನ್ನು ಪಡೆದು ಶಿಷ್ಯನಕೈಯ್ಯಲ್ಲಿ ಮಂತ್ರಸಮರ್ಪಣೆಯನ್ನು ಮಾಡಿ ಮಿಕ್ಕ ಕರ್ಮಗಳನ್ನು ಪೂರ್ಣಮಾಡಬೇಕು. ಅಥವಾ ಗುರುವು ಕ್ರಮವಾಗಿ ಮಂತ್ರಸಂಸ್ಕಾರಗಳನ್ನೆಲ್ಲಾ ಮನಸ್ಸಿನಲ್ಲಿಯೇ ಭಾವಿಸಿ ಅಭಿಷೇಕಾಂತವಾಗಿ ಷಡಧ್ವಶುದ್ಧಿಯನ್ನು ಮಾಡಬಹುದು.

೨೬. ಈ ವಿಷಯದಲ್ಲಿ, ಶಾಂತ್ಯತೀತಾದಿ ಕಲೆಗಳ ವಿಷಯದಲ್ಲಿ ಹೇಳಿದ ವಿಧಿಯೇ ತತ್ತ್ವತ್ರಯಶುದ್ಧಿ ವಿಷಯದಲ್ಲಿಯೂ, ಉಪಯೋಗಕ್ಕೆ ಬರುವುದು. (ಈ ವಿಧಿಯಂತೆಯೇ ಇದನ್ನೂ ನಡೆಸಬೇಕೆಂದು ತಾತ್ಪರ್ಯವು.)

೨೭–೨೮. ಶಿವತತ್ತ್ವ, ವಿದ್ಯಾತತ್ತ್ವ, ಆತ್ಮತತ್ತ್ವ ಎಂಬುವೇ ತತ್ತ್ವತ್ರಯಗಳು. ಶಕ್ತಿಸ್ವರೂಪವೇ ಶಿವತತ್ತ್ವವು. ಆಮೇಲೆ ವಿದ್ಯಾತತ್ತ್ವವೂ, ಬಳಿಕ ಆತ್ಮತತ್ತ್ವವೂ ಪ್ರಕಾಶಕ್ಕೆ ಬರುವುದು. ಶಿವತತ್ತ್ವದಿಂದ ಶಾಂತ್ಯತೀತ

**ಶಿವೇನ ಶಾಂತ್ಯತೀತಾಧ್ವಾ ವ್ಯಾಪ್ತಸ್ತದಪರಃ ಪರಃ ।**
**ವಿದ್ಯಯಾ ಪರಿಶಿಷ್ಟೋಽಧ್ವಾ ಹ್ಯಾತ್ಮನಾ ನಿಖಿಲಃ ಕ್ರಮಾತ್ ॥ ೨೮ ॥**

**ದುರ್ಲಭಂ ಶಾಂಭವಂ ಮತ್ವಾ ಮಂತ್ರಮೂಲಂ ಮನೀಷಿಣಃ ।**
**ಶಾಕ್ತಂ ಶಂಸೀತ ಸಂಸ್ಕಾರಂ ಶಿವಶಾಸ್ತ್ರಾರ್ಥಪಾರಗಾಃ ॥ ೨೯ ॥**

**ಇತಿ ತೇ ಸರ್ವಮಾಖ್ಯಾತಂ ಸಂಸ್ಕಾರಾಖ್ಯಸ್ಯ ಕರ್ಮಣಃ ।**
**ಚಾತುರ್ವಿಧ್ಯಮಿದಂ ಕೃಷ್ಣ ಕಿಂ ಭೂಯಃಶ್ರೋತುಮಿಚ್ಛಸಿ ॥ ೩೦ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-ಮುತ್ತರಭಾಗೇ ವಿಶೇಷಾದಿಸಂಸ್ಕೃತಿರ್ನಾಮ ವಿಂಶೋಽಧ್ಯಾಯಃ**

---

ಕಲಾರೂಪವಾದ ಅಧ್ವವು ವ್ಯಾಪಿಸಿಕೊಂಡಿರುವುದು. ಮಿಕ್ಕ ಕಲಾಧ್ವಗಳನ್ನು ವಿದ್ಯಾರೂಪವಾದ ತತ್ತ್ವವು ವ್ಯಾಪಿಸಿರುವುದು. ಆತ್ಮತತ್ತ್ವದಿಂದ ಕ್ರಮವಾಗಿ ಸಮಸ್ತಾಧ್ವಗಳೂ ವ್ಯಾಪಿಸಲ್ಪಟ್ಟಿರುವುದು.

೨೯. ಬುದ್ಧಿವಂತರಾದ ಜನರು ಶಿವಶಾಸ್ತ್ರಾರ್ಥವನ್ನು ಸಂಪೂರ್ಣವಾಗಿ ತಿಳಿದು ಶಿವಸಂಸ್ಕಾರವು ದುರ್ಲಭವಾದುದೆಂದೂ, ಮಂತ್ರಪ್ರಧಾನವಾದುದೆಂದೂ ಭಾವಿಸಿ ಶಾಕ್ತಸಂಸ್ಕಾರವು ಉತ್ತಮವಾದುದೆಂದು ಹೊಗಳಿರುವರು.

೩೦. ಎಲೈ ಕೃಷ್ಣನೇ, ನಾಲ್ಕುವಿಧವಾದ ಸಂಸ್ಕಾರರೂಪವಾದ ಕರ್ಮದ ಸಮಸ್ತ ವಿಧಿಗಳನ್ನೂ ನಿನಗೆ ಹೇಳಿದೆನು. ಮತ್ತೇನನ್ನು ನೀನು ಕೇಳಲು ಬಯಸುವೆ ? ಅದನ್ನು ಕೇಳು ಎಂದನು.

ಇಲ್ಲಿಗೆ ಶಿವಪುರಾಣದ ಏಳನೆಯ ವಾಯವೀಯಸಂಹಿತೆಯ ಉತ್ತರಭಾಗದಲ್ಲಿ ವಿಶೇಷಸಂಸ್ಕಾರಗಳ ವಿಧಿಕಥನವೆಂಬ ಇಪ್ಪತ್ತನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ವಾಯವೀಯಸಂಹಿತಾಯಾಮುತ್ತರ ಭಾಗೇ

## ಏಕವಿಂಶೋಽಧ್ಯಾಯಃ

---

॥ ಶ್ರೀ ಕೃಷ್ಣ ಉವಾಚ ॥

ಭಗವನ್ಶ್ರೋತುಮಿಚ್ಛಾಮಿ ಶಿವಾಶ್ರಮನಿಷೇವಿಣಾಂ ।
ಶಿವಶಾಸ್ತ್ರೋದಿತಂ ಕರ್ಮ ನಿತ್ಯನೈಮಿತ್ತಿಕಂ ತಥಾ ॥ ೧ ॥

॥ ಉಪಮನ್ಯುರುವಾಚ ॥

ಪ್ರಾತರುತ್ಥಾಯ ಶಯನಾದ್ಧ್ಯಾತ್ವಾ ದೇವಂ ಸಹಾಂಬಯಾ ।
ವಿಚಾರ್ಯ ಕಾರ್ಯಂ ನಿರ್ಗಚ್ಛೇದ್ಗೃಹಾದಭ್ಯುದಿತೇಽರುಣೇ ॥ ೨ ॥

---

### ಇಪ್ಪತ್ತೊಂದನೆಯ ಅಧ್ಯಾಯವು

೧. ಕೃಷ್ಣನು ಕೇಳಿದನು—ಮಹಾಮಹಿಮನಾದ ಎಲೈ ಉಪಮನ್ಯು ಮುನಿಯೇ, ಶಿವಾಶ್ರಮವಾದ ಬ್ರಹ್ಮಚರ್ಯಾದಿ ಆಶ್ರಮಗಳ ಧರ್ಮವನ್ನನುಸರಿಸುತ್ತಿರುವ ಜನರಿಗೆ ಶಿವಶಾಸ್ತ್ರೋಕ್ತವಾದ ನಿತ್ಯನೈಮಿತ್ತಿಕಕರ್ಮಗಳ ವಿಧಿಯನ್ನು ಕೇಳಬೇಕೆಂದಪೇಕ್ಷಿಸುವೆನು. ಅದನ್ನು ಹೇಳಬೇಕೆನಲು,

೨–೪. ಉಪಮನ್ಯುವಿಂತೆಂದನು—ಪ್ರಾತಃಕಾಲದಲ್ಲಿ ಹಾಸಿಗೆಯಿಂದೆದ್ದು ಅಂಬಾಸಹಿತನಾದ ಶಿವನನ್ನು ಧ್ಯಾನಮಾಡಿ ಮುಂದೆ ಮಾಡಬೇಕಾದ

ಅಬಾಧೇ ವಿಜನೇ ದೇಶೇ ಕುರ್ಯಾದಾವಶ್ಯಕಂ ತತಃ ।
ಕೃತ್ವಾ ಶೌಚಂ ವಿಧಾನೇನ ದಂತಧಾವನಮಾಚರೇತ್ ॥ ೩ ॥

ಅಲಾಭೇ ದಂತಕಾಷ್ಠಾನಾಮಷ್ಟಮ್ಯಾದಿ ದಿನೇಷು ಚ ।
ಅಪಾಂ ದ್ವಾದಶಗಂಡೂಷೈಃ ಕುರ್ಯಾದಾಸ್ಯವಿಶೋಧನಂ ॥ ೪ ॥

ಆಚಮ್ಯ ವಿಧಿವತ್ಪಶ್ಚಾದ್ವಾರುಣಂ ಸ್ನಾನಮಾಚರೇತ್ ।
ನದ್ಯಾಂ ವಾ ದೇವಖಾತೇ ವಾ ಹ್ರದೇವಾಽಥ ಗೃಹೇಽಪಿ ವಾ ॥ ೫ ॥

ಸ್ನಾನದ್ರವ್ಯಾಣಿ ತತ್ತೀರೇ ಸ್ಥಾಪಯಿತ್ವಾ ಬಹಿರ್ಮಲಂ ।
ವ್ಯಪೋಹ್ಯ ಮೃದಮಾಲಿಪ್ಯ ಸ್ನಾತ್ವಾ ಗೋಮಯಮಾಲಿಪೇತ್ ॥ ೬ ॥

ಸ್ನಾತ್ವಾ ಪುನಃ ಪುನರ್ವಸ್ತ್ರಂ ತ್ಯಕ್ತ್ವಾ ವಾಥ ವಿಶೋಧ್ಯ ಚ ।
ಸುಸ್ನಾತೋ ನೃಪವದ್ಭೂಯಃ ಶುದ್ಧಂ ವಾಸೋ ವಸೀತ ಚ ॥ ೭ ॥

---

ಶೌಚಾದಿಕಾರ್ಯಗಳಿಗಾಗಿ ಅರುಣೋದಯಕಾಲಕ್ಕೆ ಸರಿಯಾಗಿ ಮನೆಯಿಂದ ಹೊರಕ್ಕೆ ಹೊರಟು ಜನರಿಲ್ಲದ, ಯಾವ ಬಾಧೆಯೂ ಇಲ್ಲದ ಸ್ಥಳದಲ್ಲಿ ಶೌಚಾದಿಗಳನ್ನು ವಿಧಿವತ್ತಾಗಿ ಮಾಡಿ ಹಲ್ಲುಗಳನ್ನು ತೊಳೆದುಕೊಳ್ಳಬೇಕು. ಹಲ್ಲುಗಳನ್ನುಜ್ಜುವ ಕಡ್ಡಿಯಿಲ್ಲದಿದ್ದರೂ, ಅಷ್ಟಮಿ ಮುಂತಾದ ನಿಷಿದ್ಧದಿನಗಳಲ್ಲಿಯೂ ನೀರಿನಿಂದ ಹನ್ನೆರಡುಬಾರಿ ಬಾಯಿಮುಕ್ಕಳಿಸಬೇಕು ಇದರಿಂದ ಬಾಯಿಯು ಶುದ್ಧವಾಗುವುದು.

೫-೬. ವಿಧಿಯನ್ನನುಸರಿಸಿ ಆಚಮನವನ್ನು ಮಾಡಿ ನೀರಿನಲ್ಲಿ ಮುಳುಗಿ ಸ್ನಾನಮಾಡಬೇಕು. ಇದನ್ನೇ ವಾರುಣಸ್ನಾನವೆನ್ನುವರು. ಈ ಸ್ನಾನವನ್ನು ನದಿ, ಸರೋವರ, ಕೆರೆ, ಕೊಳ, ಮುಂತಾದುವುಗಳಲ್ಲಾಗಲಿ ಮಾಡಬಹುದು. ಸ್ನಾನಮಾಡುವವನು ಸ್ನಾನಕ್ಕೆ ಸಂಬಂಧಪಟ್ಟ ವಸ್ತ್ರಗಳನ್ನು ದಡದಲ್ಲಿಟ್ಟು ನೀರಿನ ಹೊರಗೆ ಕೊಳೆಯನ್ನೆಲ್ಲಾ ತೊಳೆದುಕೊಂಡು ಮಣ್ಣನ್ನು ಬಳಿದುಕೊಂಡು ಸ್ನಾನಮಾಡಿ ಬಳಿಕ ಗೋಮಯವನ್ನು ಬಳಿದುಕೊಂಡು ಸ್ನಾನಮಾಡಬೇಕು.

೭-೮. ಮತ್ತೆಮತ್ತೆ ಸ್ನಾನಮಾಡಿ ವಸ್ತ್ರವನ್ನು ವಿಸರ್ಜಿಸಬೇಕು. ಅಥವಾ ಅದನ್ನು ಚೆನ್ನಾಗಿ ಒಗೆಯಬೇಕು. ಚೆನ್ನಾಗಿ ಸ್ನಾನಮಾಡಿದಮೇಲೆ

ಮಲಸ್ನಾನಂ ಸುಗಂಧಾದ್ಯೈಃ ಸ್ನಾನಂ ದಂತವಿಶೋಧನಂ ।
ನ ಕುರ್ಯಾದ್ಬ್ರಹ್ಮಚಾರೀ ಚ ತಪಸ್ವೀ ವಿಧವಾ ತಥಾ ॥ ೮ ॥

ಸೋಪವೀತಶ್ಶಿಖಾಂ ಬಧ್ವಾ ಪ್ರವಿಶ್ಯ ಚ ಜಲಾಂತರಂ ।
ಅವಗಾಹ್ಯ ಸಮಾಚಾಂತೋ ಜಲೇ ನ್ಯಸ್ಯೇತ್ತ್ರಿಮಂಡಲಂ ॥ ೯ ॥

ಸೌಮ್ಯೇ ಮಗ್ನಃ ಪುನರ್ಮಂತ್ರಂ ಜಪೇಚ್ಛಕ್ತ್ಯಾ ಶಿವಂ ಸ್ಮರೇತ್ ।
ಉತ್ಥಾಯಾಚಮ್ಯ ತೇನೈವ ಸ್ವಾತ್ಮಾನಮಭಿಷೇಚಯೇತ್ ॥ ೧೦ ॥

ಗೋಶೃಂಗೇಣ ಸದರ್ಭೇಣ ಪಾಲಾಶೇನ ದಲೇನ ವಾ ।
ಪಾದ್ಮೇನ ವಾಥ ಪಾಣಿಭ್ಯಾಂ ಪಂಚಕೃತ್ವಸ್ತ್ರಿರೇವ ವಾ ॥ ೧೧ ॥

ಉದ್ಯಾನಾದೌ ಗೃಹೇ ಚೈವ ವರ್ಧನ್ಯಾ ಕಲಶೇನ ವಾ ।
ಅವಗಾಹನಕಾಲೇಽದ್ಭಿರ್ಮಂತ್ರಿತೈರಭಿಷೇಚಯೇತ್ ॥ ೧೨ ॥

---

ರಾಜನಂತೆ ಶುದ್ಧವಾದ ವಸ್ತ್ರವನ್ನುಟ್ಟುಕೊಳ್ಳಬೇಕು. ಬ್ರಹ್ಮಚಾರಿಗಳೂ ತಪಸ್ವಿಗಳೂ, ವಿಧವೆಯರೂ, ಮಲಸ್ನಾನ, ಸುಗಂಧಸ್ನಾನ, ದಂತಶೋಧನ ಇವುಗಳನ್ನು ಮಾಡಕೂಡದು.

೯-೧೦. ಯಜ್ಞೋಪವೀತನನ್ನು ಬಲಗಡೆಗೆ ಧರಿಸಿ, ಶಿಖೆಯನ್ನು ಕಟ್ಟಿ, ನೀರಿನಲ್ಲಿ ಪ್ರವೇಶಿಸಿ, ಸ್ನಾನಮಾಡಿ, ಆಚಮನವನ್ನುಮಾಡಿ, ನೀರಿನಲ್ಲಿ ಮೂರುಮಂಡಲಗಳನ್ನು ಬರದು ಸ್ನಾನಮಾಡಿ, ಮಂತ್ರಜಪನ್ನು ಶಕ್ತ್ಯನುಸಾರವಾಗಿ ಮಾಡಿ' ಶಿವನನ್ನು ಸ್ಮರಿಸಬೇಕು. ಬಳಿಕ ನೀರಿನಿಂದೆದ್ದುಬಂದು ಆಚಮನವನ್ನು ಮಾಡಿ ಅದೇ ನೀರಿನಿಂದ ತನ್ನ ತಲೆಯಮೇಲೆ ಪ್ರೋಕ್ಷಣೆಮಾಡಿಕೊಳ್ಳಬೇಕು.

೧೧-೧೨. ಉದ್ಯಾನದಲ್ಲಾಗಲಿ, ಮನೆಯಲ್ಲಾಗಲಿ, ಸ್ನಾನಮಾಡುವ ಕಾಲದಲ್ಲಿ ಹಸುವಿನ ಕೊಂಬಿನಲ್ಲಿ ದರ್ಭೆಯನ್ನು ಸೇರಿಸಿ ಅಥವಾ ಮುತ್ತುಗದೆಲೆಯಿಂದಾಗಲಿ ಕಮಲದ ಎಲೆಯಿಂದಾಗಲಿ ಬರಿಯ ಕೈಯಿಂದಾಗಲಿ ಕಲಶಗಳಿಂದಲಾಗಲಿ ನೀರನ್ನು ಅಭಿಮಂತ್ರಿಸಿ ಐದುಬಾರಿ ಅಥವಾ ಮೂರುಸಾರಿ ಅಭಿಷೇಕ ಮಾಡಿಕೊಳ್ಳಬೇಕು.

**ಅಥ ಚೇದ್ವಾರುಣಂ ಕರ್ತುಮಶಕ್ತಃ ಶುದ್ಧವಾಸಸಾ ।**
**ಆರ್ದ್ರೇಣ ಶೋಧಯೇದ್ದೇಹಮಾಪಾದತಲಮಸ್ತಕಂ ॥ ೧೩ ॥**

**ಆಗ್ನೇಯಂ ವಾಥವಾ ಮಾಂತ್ರಂ ಕುರ್ಯಾತ್ಸ್ನಾನಂ ಶಿವೇನ ವಾ ।**
**ಶಿವಚಿಂತಾಪರಂ ಸ್ನಾನಂ ಯುಕ್ತಸ್ಯಾತ್ಮೀಯಮುಚ್ಯತೇ ॥ ೧೪ ॥**

**ಸ್ವಸೂತ್ರೋಕ್ತವಿಧಾನೇನ ಮಂತ್ರಾಚಮನಪೂರ್ವಕಂ ।**
**ಆಚರೇದ್ಬ್ರಹ್ಮಯಜ್ಞಾಂತಂ ಕೃತ್ವಾ ದೇವಾದಿತರ್ಪಣಂ ॥ ೧೫ ॥**

**ಮಂಡಲಸ್ಥಂ ಮಹಾದೇವಂ ಧ್ಯಾತ್ವಾಭ್ಯರ್ಚ್ಯ ಯಥಾವಿಧಿ ।**
**ದದ್ಯಾದರ್ಘ್ಯಂ ತತಸ್ತಸ್ಮೈ ಶಿವಾಯಾದಿತ್ಯರೂಪಿಣೇ ॥ ೧೬ ॥**

**ಅಥವೈತತ್ಸ್ವಸೂತ್ರೋಕ್ತಂ ಕೃತ್ವಾ ಹಸ್ತೌ ವಿಶೋಧಯೇತ್ ।**
**ಕರನ್ಯಾಸಂ ತತಃ ಕೃತ್ವಾ ಸಕಲೀಕೃತವಿಗ್ರಹಃ ॥ ೧೭ ॥**

---

೧೩-೧೪. ವಾರುಣಸ್ನಾನವಮಾಡಲು ಶಕ್ತಿಯಿಲ್ಲದವರು ಒದ್ದೆಯಬಟ್ಟೆಯಿಂದ ಸರ್ವಾಂಗಗಳನ್ನೂ, ಒರಸಿಕೊಳ್ಳಬೇಕು. ಅಥವಾ ಆಗ್ನೇಯವೆಂಬ ಭಸ್ಮಸ್ನಾನವನ್ನಾಗಲಿ ಬ್ರಾಹ್ಮವೆಂಬ ಮಂತ್ರಸ್ನಾನವನ್ನಾಗಲಿ ಶಿವಪಂಚಾಕ್ಷರೀ ಮಂತ್ರದಿಂದಾಗಲಿ ಸ್ನಾನಮಾಡಬೇಕು. ಯೋಗಿಯಾದವನಿಗೆ ಶಿವಧ್ಯಾನರೂಪವಾದ ಸ್ನಾನವೇ ಮುಖ್ಯವಾದುದು.

೧೫. ತನ್ನ ಸೂತ್ರದಲ್ಲಿ ಹೇಳಿರುವಮೇರೆಗೆ ಮಂತ್ರಾಚಮನಗಳನ್ನು ಮಾಡಿ, ಬ್ರಹ್ಮಯಜ್ಞವನ್ನೂ ದೇವರ್ಷಿಪಿತೃತರ್ಪಣಗಳನ್ನೂ ಆಚರಿಸಬೇಕು.

೧೬. ಸೂರ್ಯಮಂಡಲದಲ್ಲಿರುವ ಶಿವನನ್ನು ಧ್ಯಾನವಮಾಡಿ ವಿಧಿಗನುಸಾರವಾಗಿ ಪೂಜಿಸಿ ಸೂರ್ಯರೂಪನಾದ ಶಿವನಿಗೆ ಅರ್ಘ್ಯವನ್ನು ಕೊಡಬೇಕು.

೧೭-೧೯. ಅಥವಾ ತನ್ನ ಸೂತ್ರವನ್ನನುಸರಿಸಿ ಅರ್ಘ್ಯವನ್ನು ಕೊಟ್ಟು ಕೈಗಳನ್ನು ತೊಳೆದುಕೊಂಡು ಅಂಗನ್ಯಾಸಕರನ್ಯಾಸಗಳನ್ನು ಮಾಡಿಕೊಂಡು

ವಾಮಹಸ್ತಗತಾಂಭೋಭಿರ್ಗಂಧಸಿದ್ಧಾರ್ಥಕಾನ್ವಿತೈಃ ।
ಕುಶಪುಂಜೇನ ವಾಭ್ಯುಕ್ಷ್ಯ ಮೂಲಮಂತ್ರಸಮನ್ವಿತೈಃ ॥ ೧೮ ॥

ಆಪೋಹಿಷ್ಠಾದಿಭಿರ್ಮಂತ್ರೈಃ ಶೇಷಮಾಘ್ರಾಯ ವೈ ಜಲಂ ।
ವಾಮನಾಸಾಪುಟೇನೈವ ದೇವಂ ಸಂಭಾವಯೇತ್ಸಿತಂ ॥ ೧೯ ॥

ಅಘಮಾದಾಯ ದೇಹಸ್ಥಂ ಸವ್ಯನಾಸಾಪುಟೇನ ಚ ।
ಕೃಷ್ಣವರ್ಣೇನ ಬಾಹ್ಯಸ್ಥಂ ಭಾವಯೇಚ್ಚ ಶಿಲಾಗತಂ ॥ ೨೦ ॥

ತರ್ಪಯೇದಥ ದೇವೇಭ್ಯ ಋಷಿಭ್ಯಶ್ಚ ವಿಶೇಷತಃ ।
ಭೂತೇಭ್ಯಶ್ಚ ಪಿತೃಭ್ಯಶ್ಚ ದದ್ಯಾದರ್ಘ್ಯಂ ಯಥಾವಿಧಿ ॥ ೨೧ ॥

ರಕ್ತಚಂದನತೋಯೇನ ಹಸ್ತಮಾತ್ರೇಣ ಮಂಡಲಂ ।
ಸುವೃತ್ತಂ ಕಲ್ಪಯೇದ್ಭೂಮೌ ರಕ್ತಚೂರ್ಣಾದ್ಯಲಂಕೃತಂ ॥ ೨೨ ॥

---

ಶರೀರದಲ್ಲಿ ಶಿವಕಲೆಯನ್ನು ಸೇರಿಸಿ ಎಡಗೈಯಲ್ಲಿ ನೀರು, ಗಂಧ, ಬಿಳಿಯ ಸಾಸವೆ, ಇವುಗಳನ್ನಿಟ್ಟುಕೊಂಡು ದರ್ಭೆಯಿಂದ ಆಪೋಹಿಷ್ಠಾದಿ ಮಂತ್ರೋಕ್ತವಾಗಿ ಪ್ರೋಕ್ಷಿಸಿಕೊಂಡು ಮಿಕ್ಕ ನೀರನ್ನು ಎಡದಮೂಗಿನಿಂದ ಮೂಸಿನೋಡಿ ಶುದ್ಧಸ್ಫಟಿಕಾಕಾರದಿಂದ ಭಾವಿಸಬೇಕು.

೨೦. ಬಲದಮೂಗಿನಿಂದ ಶರೀರದೊಳಗಿನ ಪಾಪವನ್ನು ಗ್ರಹಿಸಿ ಆ ಪಾಪವು ಕಪ್ಪುಬಣ್ಣದಿಂದ ಹೊರಗೆ ಬಂದು ಕಲ್ಲಿನಮೇಲೆ ಬಿದ್ದಂತೆ ಭಾವಿಸಬೇಕು.

೨೧. ಆಮೇಲೆ ದೇವತೆಗಳಿಗೂ, ಋಷಿಗಳಿಗೂ, ಭೂತಗಳಿಗೂ, ಪಿತೃಗಳಿಗೂ ತರ್ಪಣವನ್ನು ಮಾಡಿ ವಿಧಿಯನ್ನನುಸರಿಸಿ ಅರ್ಘ್ಯವನ್ನು ಕೊಡಬೇಕು.

೨೨-೨೩. ಕೆಂಪುಗಂಧದ ನೀರಿನಿಂದ ಒಂದುಮೊಳ ವಿಸ್ತಾರವಾದ ಗುಂಡಾದ ಮಂಡಲವನ್ನು ಭೂಮಿಯಲ್ಲಿಮಾಡಿ ಕೆಂಪುಮಂತ್ರಾಕ್ಷತೆ ಮುಂತಾ

ತತ್ರ ಸಂಪೂಜಯೇದ್ಭಾನುಂ ಸ್ವಕೀಯಾವರಣೈಸ್ಸಹ ।
ಸ್ವಖೋಲ್ಕಾಯೇತಿ ಮಂತ್ರೇಣ ಸಾಂಗತಃ ಸುಖಸಿದ್ಧಯೇ ॥ ೨೩ ॥

ಪುನಶ್ಚ ಮಂಡಲಂ ಕೃತ್ವಾ ತದಂಗೈಃ ಪರಿಪೂಜ್ಯ ಚ ।
ತತ್ರ ಸ್ಥಾಪ್ಯ ಹೇಮಪಾತ್ರಂ ಮಾಗಧಪ್ರಸ್ಥಸಂಮಿತಂ ॥ ೨೪ ॥

ಪೂರಯೇದ್ಗಂಧತೋಯೇನ ರಕ್ತಚಂದನಯೋಗಿನಾ ।
ರಕ್ತಪುಷ್ಪೈಸ್ತಿಲೈಶ್ಚೈವ ಕುಶಾಕ್ಷತಸಮನ್ವಿತಃ ॥ ೨೫ ॥

ದೂರ್ವಾಪಾಮಾರ್ಗದ್ರವ್ಯೈಶ್ಚ ಕೇವಲೇನ ಜಲೇನ ವಾ ।
ಜಾನುಭ್ಯಾಂ ಧರಣೀಂ ಗತ್ವಾ ನತ್ವಾ ದೇವಂ ಚ ಮಂಡಲೇ ॥ ೨೬ ॥

ಕೃತ್ವಾ ಶಿರಸಿ ತತ್ಪಾತ್ರಂ ದದ್ಯಾದರ್ಘ್ಯಂ ಶಿವಾಯ ತತ್ ।
ಅಥವಾಂಜಲಿನಾ ತೋಯಂ ಸದರ್ಭಂ ಮೂಲವಿದ್ಯಯಾ ॥ ೨೭ ॥

---

ಮುಪುಗಳಿಂದ ಅಲಂಕರಿಸಿ ಅಲ್ಲಿ ಆವರಣದೇವತಾಸಹಿತವಾಗಿ ಸೂರ್ಯನನ್ನು ಪೂಜಿಸಬೇಕು.

೨೪–೨೬. ಮತ್ತೆ ಮಂಡಲವನ್ನು ಮಾಡಿ ಅದನ್ನು ಪೂಜಿಸಿ ಆ ಮಂಡಲದಮೇಲೆ ಮಾಗಧದೇಶದ ಅಳತೆಯ ಒಂದು ಪ್ರಸ್ಥಪ್ರಮಾಣದ ಚಿನ್ನದ ಪಾತ್ರೆಯನ್ನಿಟ್ಟು ಕೆಂಪುಗಂಧ, ನೀರು, ಕೆಂಪು ಹೂ, ಎಳ್ಳು, ದರ್ಭೆ, ಅಕ್ಷತೆ, ಗರಿಕೆ, ಉತ್ತರಣೆ ಇವುಗಳನ್ನು ಆ ಪಾತ್ರೆಯಲ್ಲಿಟ್ಟು ಅಥವಾ ಬರಿಯನೀರನ್ನಿಟ್ಟು ಭೂಮಿಯಮೇಲೆ ಮಂಡಿಗಳನ್ನೂರಿಕೊಂಡು ಮಂಡಲಗತನಾದ ದೇವನಿಗೆ ನಮಸ್ಕರಿಸಿ ಆ ಪಾತ್ರೆಯನ್ನು ತಲೆಯಮೇಲಿಟ್ಟುಕೊಂಡು ಸೂರ್ಯರೂಪನಾದ ಶಿವನಿಗೆ ಅರ್ಘ್ಯವನ್ನು ಸಮರ್ಪಿಸಬೇಕು.

೨೭. ಅಥವಾ ಬೊಗಸೆಯಲ್ಲಿ ದರ್ಭೆಯೊಡನೆ ನೀರನ್ನು ತೆಗೆದುಕೊಂಡು ಮೂಲಮಂತ್ರದಿಂದ ಆಕಾಶದಲ್ಲಿರುವ ಸೂರ್ಯಮೂರ್ತಿಯಾದ ಶಿವನಿಗೆ ಅರ್ಘ್ಯವನ್ನು ಮೇಲಕ್ಕೆರಚಬೇಕು.

ಉತ್ಕ್ಷಿಪೇದಂಬರಸ್ಥಾಯ ಶಿವಾಯಾದಿತ್ಯಮೂರ್ತಯೇ ।
ಕೃತ್ವಾ ಪುನಃ ಕರನ್ಯಾಸಂ ಕರಶೋಧನಪೂರ್ವಕಂ ॥ ೨೮ ॥

ಬುಧ್ವೇಶಾನಾದಿಸದ್ಯಾಂತಂ ಪಂಚಬ್ರಹ್ಮಮಯಂ ಶಿವಂ ।
ಗೃಹೀತ್ವಾ ಭಸಿತಂ ಮಂತ್ರೈರ್ವಿಮೃಜ್ಯಾಂಗಾನಿ ಸಂಸ್ಪೃಶೇತ್ ॥ ೨೯ ॥

ಯಾ ದಿನಾಂತ್ಯೈಶ್ಶಿರೋವಕ್ತ್ರಹೃದ್ಗುಹ್ಯಚರಣಾನ್ಕ್ರಮಾತ್ ।
ತತೋ ಮೂಲೇನ ಸರ್ವಾಂಗಮಾಲಭ್ಯ ವಸನಾಂತರಂ ॥ ೩೦ ॥

ಪರಿಧಾಯ ದ್ವಿರಾಚಮ್ಯ ಪ್ರೋಕ್ಷ್ಯೈಕಾದಶಮಂತ್ರಿತೈಃ ।
ಜಲೈರಾಚ್ಛಾದ್ಯ ವಾಸೋಽನ್ಯದ್ದ್ವಿರಾಚಮ್ಯ ಶಿವಂ ಸ್ಮರೇತ್ ॥ ೩೧ ॥

ಪುನರ್ನ್ಯಸ್ತಕರೋ ಮಂತ್ರೀ ತ್ರಿಪುಂಡ್ರಂ ಭಸ್ಮನಾ ಲಿಖೇತ್ ।
ಅವಕ್ರಮಾಯತಂ ವ್ಯಕ್ತಂ ಲಲಾಟೇ ಗಂಧವಾರಿಣಾ ॥ ೩೨ ॥

---

೨೮-೨೯. ಪುನಃ ಕೈಗಳನ್ನು ತೊಳೆದುಕೊಂಡು ಅಂಗನ್ಯಾಸ ಕರನ್ಯಾಸಗಳನ್ನು ಮಾಡಿ ಸದ್ಯೋಜಾತಾದಿ ಪಂಚಬ್ರಹ್ಮಮಂತ್ರಗಳಿಂದ ಶಿವನನ್ನು ಧ್ಯಾನಿಸಿ ಭಸ್ಮವನ್ನು ತೆಗೆದುಕೊಂಡು ಮಂತ್ರಗಳಿಂದ ಭಸ್ಮವನ್ನು ನೀರಿನಲ್ಲಿ ಕಲಸಿ ಅವಯವಗಳಿಗೆ ಸ್ಪರ್ಶಿಸಬೇಕು.

೩೦-೩೧. ಪಂಚಾಕ್ಷರಮಂತ್ರದ ವಿಲೋಮಕ್ರಮದಲ್ಲಿ ಯಕಾರದಿಂದ ನಕಾರ ಪರ್ಯಂತವಾಗಿ ಒಂದೊಂದು ಅಕ್ಷರಗಳನ್ನುಚ್ಚರಿಸಿ ತಲೆ, ಹಣೆ, ಎದೆ, ಗುಹ್ಯ ಕಾಲುಗಳು ಇವುಗಳನ್ನು ಕ್ರಮವಾಗಿ ಸ್ಪರ್ಶಮಾಡಿ ಮೂಲಮಂತ್ರದಿಂದ ಸಮಸ್ತ ಅವಯವಗಳನ್ನೂ ಸ್ಪರ್ಶಿಸಿ, ಬೇರೆ ವಸ್ತ್ರವನ್ನು ಧರಿಸಿ ಎರಡಾವೃತ್ತಿ ಆಚಮನವನ್ನು ಮಾಡಿ ಹನ್ನೊಂದುಸಾರಿ ಪಂಚಾಕ್ಷರಮಂತ್ರದಿಂದ ನೀರನ್ನು ಪ್ರೋಕ್ಷಿಸಿ ಬೇರೊಂದು ವಸ್ತ್ರವನ್ನು ಹೊದೆದುಕೊಂಡು ಎರಡಾವೃತ್ತಿ ಆಚಮನವನ್ನು ಮಾಡಿ ಶಿವನನ್ನು ಸ್ಮರಿಸಬೇಕು.

೩೨-೩೩. ಪುನಃ ಮಂತ್ರಪೂರ್ವಕವಾಗಿ ಕರನ್ಯಾಸಮಾಡಿಕೊಂಡು ಭಸ್ಮದಿಂದ ವಕ್ರವಿಲ್ಲದ, ಉದ್ದವಾದ ಚೆನ್ನಾಗಿ ಕಾಣುತ್ತಿರುವ ತ್ರಿಪುಂಡ್ರವನ್ನು

ವೃತ್ತಂ ವಾ ಚತುರಸ್ರಂ ವಾ ಬಿಂದುಮರ್ಧೇಂದುಮೇವ ವಾ ।
ಲಲಾಟೇ ಯಾದೃಶಂ ಪುಂಡ್ರಂ ಲಿಖಿತಂ ಭಸ್ಮನಾ ಪುನಃ ॥ ೩೩ ॥

ತಾದೃಶಂ ಭುಜಯೋರ್ಮೂರ್ಧ್ನಿ ಸ್ತನಯೋರಂತರೇ ಲಿಖೇತ್ ।
ಸರ್ವಾಂಗೋದ್ಧೂಲನಂ ಚೈವ ನ ಸಮಾನಂ ತ್ರಿಪುಂಡ್ರಕೈಃ ॥ ೩೪

ತಸ್ಮಾತ್ತ್ರಿಪುಂಡ್ರಮೇವೈಕಂ ಲಿಖೇದುದ್ಧೂಲನಂ ವಿನಾ ।
ರುದ್ರಾಕ್ಷಾನ್ಧಾರಯೇನ್ಮೂರ್ಧ್ನಿ ಕಂಠೇ ಶ್ರೋತ್ರೇ ಕರೇ ತಥಾ ॥ ೩೫ ॥

ಸುವರ್ಣವರ್ಣಮುಚ್ಛಿನ್ನಂ ಶುಭಂ ನಾನ್ಯೈರ್ಧೃತಂ ಶುಭಂ ।
ವಿಪ್ರಾದೀನಾಂ ಕ್ರಮಾಚ್ಛ್ರೇಷ್ಠಂ ಪೀತಂ ರಕ್ತಮಥಾಸಿತಂ ॥ ೩೬ ॥

ತದಲಾಭೇ ಯಥಾಲಾಭಂ ಧಾರಣೀಯಮದೂಷಿತಂ ।
ತತ್ರಾಪಿ ನೋತ್ತರಂ ನೀಚೈರ್ಧಾರ್ಯಂ ನೀಚಮಥೋತ್ತರೈಃ । ॥ ೩೭ ॥

---

ಗಂಧದನೀರಿನಲ್ಲಿ ಕಲಸಿ ಗುಂಡಾಗಿಯಾಗಲಿ ಚೌಕವಾಗಿಯಾಗಲಿ, ಬಿಂದು ಅರ್ಧಚಂದ್ರಾಕೃತಿಯಿಂದಲಾಗಲಿ ಧರಿಸಬೇಕು. ಹಣೆಯಲ್ಲಿ ಹೇಗೆ ತ್ರಿಪುಂಡ್ರವನ್ನು ಧರಿಸಿದೆಯೋ ಹಾಗೆಯೇ ಭುಜಗಳು ತಲೆ, ಎದೆ ಇವುಗಳಲ್ಲಿ ಧರಿಸಬೇಕು

೩೪. ಸಮಸ್ತ ಅಂಗಗಳಿಂದಲೂ, ಹುಡಿಯಾದ ಭಸ್ಮವನ್ನು ಬಳಿದು ಕೊಳ್ಳುವುದು, ತ್ರಿಪುಂಡ್ರ ಧಾರಣೆಗೆ ಸಮವಾಗಲಾರದು. ಆದುದರಿಂದ ಉದ್ಧೂಲನಮಾಡಿಕೊಳ್ಳದೆ ತ್ರಿಪುಂಡ್ರವನ್ನು ಧರಿಸಬೇಕು.

೩೫-೩೭. ಕುತ್ತಿಗೆ, ಕಿವಿ, ಕೈಗಳಲ್ಲಿ ರುದ್ರಾಕ್ಷಿಗಳನ್ನು ಧರಿಸಬೇಕು. ಅವುಗಳು ಒಳ್ಳೆಯಬಣ್ಣಗಳಿಂದ ಕೂಡಿ ಮುರಿಯದೆ ಇತರರು ಧರಿಸದೆ, ಶುಭವಾದುದಾಗಿರಬೇಕು. ಹಳದಿ, ಕೆಂಪು, ಕಪ್ಪುಬಣ್ಣದ ರುದ್ರಾಕ್ಷಿಗಳು ಕ್ರಮವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೆ ಶ್ರೇಷ್ಠವಾದುವು. ಅವುಗಳು ದೊರೆಯದಿದ್ದರೆ ದೊರೆತವುಗಳನ್ನೇ ಧರಿಸಬಹುದು. ಕಡಿಮೆ ವರ್ಣದವರು ಉತ್ತಮವರ್ಣದ ರುದ್ರಾಕ್ಷಿಗಳನ್ನೂ, ಉತ್ತಮವರ್ಣದವರು ಕಡಿಮೆಯ ವರ್ಣದ ರುದ್ರಾಕ್ಷಗಳನ್ನೂ ಧರಿಸಕೂಡದು. ಅಶುಚಿಯಾಗಿರುವಾಗ ರುದ್ರಾಕ್ಷಿಧಾರಣೆಯು ಕೂಡದು. ಮಿಕ್ಕ ಎಲ್ಲ ಕಾಲಗಳಲ್ಲಿಯೂ, ರುದ್ರಾಕ್ಷಗಳನ್ನು ಧರಿಸಬೇಕು.

ನಾಶುಚಿರ್ಧಾರಯೇದಕ್ಷಂ ಸದಾ ಕಾಲೇಷು ಧಾರಯೇತ್ ।
ಇತ್ಥಂ ತ್ರಿಸಂಧ್ಯಮಥವಾ ದ್ವಿಸಂಧ್ಯಂ ಸಕೃದೇವ ವಾ ॥ ೩೮ ॥

ಕೃತ್ವಾ ಸ್ನಾನಾದಿಕಂ ಶಕ್ತ್ಯಾ ಪೂಜಯೇತ್ಪರಮೇಶ್ವರಂ ।
ಪೂಜಾಸ್ಥಾನಂ ಸಮಾಸಾದ್ಯ ಬಧ್ವಾ ರುಚಿರಮಾಸನಂ ॥ ೩೯ ॥

ಧ್ಯಾಯೇದ್ದೇವಂ ಚ ದೇವೀಂ ಚ ಪ್ರಾಙ್ಮುಖೋ ವಾಪ್ಯುದಙ್ಮುಖಃ ।
ಶ್ವೇತಾದೀನ್ನಕುಲೀಶಾಂತಾಂಸ್ತಚ್ಛಿಷ್ಯಾನ್ಪ್ರಣಮೇದ್ಗುರುಂ ॥ ೪೦ ॥

ಪುನರ್ದೇವಂ ಶಿವಂ ನತ್ವಾ ತತೋ ನಾಮಾಷ್ಟಕಂ ಜಪೇತ್ ।
ಶಿವೋ ಮಹೇಶ್ವರಶ್ಚೈವ ರುದ್ರೋ ವಿಷ್ಣುಃ ಪಿತಾಮಹಃ ॥ ೪೧ ॥

ಸಂಸಾರವೈದ್ಯಸ್ಸರ್ವಜ್ಞಃ ಪರಮಾತ್ಮೇತಿ ಚಾಷ್ಟಕಂ ।
ಅಥವಾ ಶಿವಮೇವೈಕಂ ಜಪಿತ್ವೈಕಾದಶಾಧಿಕಂ ॥ ೪೨ ॥

---

೩೮. ಈರೀತಿಯಲ್ಲಿ ಮೂರು ಸಂಧಿಕಾಲಗಳಲ್ಲಿ ಅಥವಾ ಎರಡು ಇಲ್ಲವೇ ಒಂದು ಸಂಧಿಕಾಲದಲ್ಲಾದರೂ, ಮನುಷ್ಯನು ತನ್ನ ಶಕ್ತಿಯನ್ನನುಸರಿಸಿ ಸ್ನಾನಾದಿಗಳನ್ನು ಮಾಡಿ ಪರಮೇಶ್ವರನನ್ನು ಪೂಜಿಸಬೇಕು.

೩೯. ಪೂಜಾಸ್ಥಾನವನ್ನು ಪ್ರವೇಶಿಸಿಮನೋಹರವಾದ ಪೀಠದಲ್ಲಿ ಪೂರ್ವ ಅಥವಾ ಉತ್ತರದಿಕ್ಕಿಗೆ ಅಭಿಮುಖವಾಗಿ ಕುಳಿತು, ದೇವೀಸಹಿತನಾದ ದೇವನನ್ನು ಧ್ಯಾನಮಾಡಬೇಕು.

೪೦. ಶ್ವೇತಮುನಿ ಮೊದಲುಗೊಂಡು ನಕುಲೀಶನವರೆಗೆ ಶಿವನ ಅವತಾರಗಳನ್ನೂ, ಅವರ ಶಿಷ್ಯರನ್ನೂ, ಗುರುಗಳನ್ನೂ ನಮಸ್ಕರಿಸಿ ಮತ್ತೆ ದೇವನಾದ ಶಿವನಿಗೆ ನಮಸ್ಕರಿಸಿ ಶಿವನ ಎಂಟು ನಾಮಗಳನ್ನು ಜಪಿಸಬೇಕು.

೪೧-೪೨. ಶಿವ, ಮಹೇಶ್ವರ, ರುದ್ರ, ವಿಷ್ಣು, ಪಿತಾಮಹ, ಸಂಸಾರ-ವೈದ್ಯ, ಸರ್ವಜ್ಞ, ಪರಮಾತ್ಮ ಎಂಬಿವೇ ಎಂಟು ನಾಮಗಳು ಅಥವಾ ಶಿವನಾಮ ಒಂದನ್ನೇ ಹನ್ನೊಂದುಬಾರಿ ಜಪಿಸಬೇಕು.

**ಜಿಹ್ವಾಗ್ರೇ ತೇಜಸೋ ರಾಶಿಂ ಧ್ಯಾತ್ವಾ ವ್ಯಾಧ್ಯಾದಿಶಾಂತಯೇ ।**
**ಪ್ರಕ್ಷಾಲ್ಯ ಚರಣೌ ಕೃತ್ವಾ ಕರೌ ಚಂದನಚರ್ಚಿತೌ ।**
**ಪ್ರಕುರ್ವೀತ ಕರನ್ಯಾಸಂ ಕರಶೋಧನಪೂರ್ವಕಂ ॥ ೪೩ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-**
**ಮುತ್ತರಭಾಗೇ ನಿತ್ಯನೈಮಿತ್ತಿಕವರ್ಣನಂ ನಾಮ**
**ಏಕವಿಂಶೋಽಧ್ಯಾಯಃ**

---

೪೩. ರೋಗಗಳ ಶಾಂತಿಗಾಗಿ ನಾಲಗೆಯ ತುದಿಯಲ್ಲಿ ತೇಜೋರಾಶಿ ಸ್ವರೂಪನಾದ ಶಿವನನ್ನು ಧ್ಯಾನಿಸಿ ಕಾಲುಗಳನ್ನು ತೊಳೆದುಕ್ಕೊಂಡು ಕೈಗಳಿಗೆ ಗಂಧವನ್ನು ಬಳಿದುಕೊಂಡು ಕರಶುದ್ಧಿಪೂರ್ವಕವಾಗಿ ಕರನ್ಯಾಸವನ್ನು ಮಾಡಬೇಕು.

ಇಲ್ಲಿಗೆ ಶಿವಮಹಾಪುರಾಣದ ವಾಯವೀಯಸಂಹಿತೆಯ ಉತ್ತರಭಾಗದಲ್ಲಿ
ನಿತ್ಯನೈಮಿತ್ತಿಕವರ್ಣನವೆಂಬ ಇಪ್ಪತ್ತೊಂದನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ. ನಮಃ ಶಿವಾಯ ॥

---

# ಅಥ ಶ್ರೀ ಶಿವಮಹಾಪುರಾಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ದ್ವಾವಿಂಶೋಽಧ್ಯಾಯಃ



॥ ಉಪಮನ್ಯುರುವಾಚ ॥

ನ್ಯಾಸಸ್ತು ತ್ರಿವಿಧಾ ಪ್ರೋಕ್ತಃ ಸ್ಥಿತ್ಯುತ್ಪತ್ತಿಲಯಕ್ರಮಾತ್ ।
ಸ್ಥಿತಿನ್ಯಾಸೋ ಗೃಹಸ್ಥಾನಾಮುತ್ಪತ್ತಿರ್ಬ್ರಹ್ಮಚಾರಿಣಾಂ ॥ ೧ ॥

ಯತೀನಾಂ ಸಂಹೃತಿನ್ಯಾಸೋ ವನಸ್ಥಾನಾಂ ತಥೈವ ಚ ।
ಸ ಏವ ಭರ್ತೃಹೀನಾಯಾಃ ಕುಟುಂಬಿನ್ಯಾಃ ಸ್ಥಿತಿರ್ಭವೇತ್ ॥ ೨ ॥

---

## ಇಪ್ಪತ್ತೆರಡನೆಯ ಅಧ್ಯಾಯವು

೧-೨. ಉಪಮನ್ಯುವಿಂತೆಂದನು—ಕರನ್ಯಾಸವು ಸ್ಥಿತಿ, ಉತ್ಪತ್ತಿ, ಲಯ ಎಂದು ಮೂರುಬಗೆಯಾಗಿರುವುದು. ಗೃಹಸ್ಥರು ಸ್ಥಿತಿನ್ಯಾಸವನ್ನೂ, ಬ್ರಹ್ಮಚಾರಿಗಳು ಉತ್ಪತ್ತಿನ್ಯಾಸವನ್ನೂ, ವಾನಪ್ರಸ್ಥರೂ, ಯತಿಗಳೂ, ಲಯ ನ್ಯಾಸವನ್ನೂ ಮಾಡಬೇಕು. ಗಂಡನಿಲ್ಲದ ಮಕ್ಕಳುಳ್ಳ ಸ್ತ್ರೀಯು ಸ್ಥಿತಿನ್ಯಾಸವನ್ನೇ ಮಾಡಬೇಕು.

**ಕನ್ಯಾಯೋಃ ಪುನರುತ್ಪತ್ತಿಂ ವಕ್ಷ್ಯೇ ನ್ಯಾಸಸ್ಯ ಲಕ್ಷಣಂ ।**
**ಅಂಗುಷ್ಠಾದಿಕನಿಷ್ಠಾಂತಂ ಸ್ಥಿತಿನ್ಯಾಸ ಉದಾಹೃತಃ ॥ ೩ ॥**

**ದಕ್ಷಿಣಾಂಗುಷ್ಠಮಾರಭ್ಯ ವಾಮಾಂಗುಷ್ಠಾಂತಮೇವ ಚ ।**
**ಉತ್ಪತ್ತಿನ್ಯಾಸ ಆಖ್ಯಾತೋ ವಿಪರೀತಸ್ತು ಸಂಹೃತಿಃ ॥ ೪ ॥**

**ಸಬಿಂದುಕಾನ್ನರಾದೀನ್ವರ್ಣಾನ್ನ್ಯಸ್ಯೇದನುಕ್ರಮಾತ್**
**ಅಂಗುಲೀಷು ಶಿವಂ ನ್ಯಸ್ಯೇತ್ತಲಯೋರಪ್ಯನಾಮಯೋಃ ॥ ೫ ॥**

**ಅಸ್ತ್ರನ್ಯಾಸಂ ತತಃ ಕೃತ್ವಾ ದಶದಿಕ್ಷ್ವಸ್ತ್ರಮಂತ್ರತಃ ।**
**ನಿವೃತ್ತ್ಯಾದಿಕಲಾಃ ಪಂಚ ಪಂಚಭೂತಸ್ವರೂಪಿಣೀಃ ॥ ೬ ॥**

**ಪಂಚಭೂತಾಧಿಪೈಃ ಸಾರ್ಧಂ ತತ್ತಚ್ಚಿಹ್ನಸಮನ್ವಿತಾಃ ।**
**ಹೃತ್ಕಂಠತಾಲುಭ್ರೂಮಧ್ಯಬ್ರಹ್ಮರಂಧ್ರಸಮಾಶ್ರಯಾಃ ॥ ೭ ॥**

---

೩-೪. ಕನ್ಯೆಯು ಉತ್ಪತ್ತಿನ್ಯಾಸವನ್ನೇ ಮಾಡಬೇಕು. ಇಲ್ಲಿಂದ ಮುಂದೆ ನ್ಯಾಸದ ಲಕ್ಷಣವನ್ನು ಹೇಳುವೆನು. ಹೆಬ್ಬೆರಳು ಮೊದಲುಮಾಡಿಕೊಂಡು ಕಿರುಬೆರಳುವರೆಗೆ ಮಾಡುವ ನ್ಯಾಸವು ಸ್ಥಿತಿನ್ಯಾಸವೆನಿಸುವುದು. ಬಲದ ಹೆಬ್ಬೆರಳಿನಿಂದ ಎಡದ ಹೆಬ್ಬೆರಳಿನ ಪರ್ಯಂತವಾಗಿ ಮಾಡುವ ನ್ಯಾಸವು ಉತ್ಪತ್ತಿನ್ಯಾಸವು. ವಿಲೋಮ ಕ್ರಮದಲ್ಲಿ ಮಾಡುವ ನ್ಯಾಸವು ಸಂಹಾರನ್ಯಾಸವೆನಿಸುವುದು.

೫. ಶಿವಪಂಚಾಕ್ಷರದಲ್ಲಿ ನಕಾರಾದಿ ಅಕ್ಷರಗಳಿಗೆ ಸೊನ್ನೆಯನ್ನು ಸೇರಿಸಿ ಒಂದೊಂದಕ್ಷರವನ್ನು ಒಂದೊಂದು ಬೆರಳಿನಲ್ಲಿ ನ್ಯಾಸವನ್ನು ಮಾಡಬೇಕು. ಕರತಲನ್ಯಾಸಕ್ಕೆ ನಾಮಮಂತ್ರವಿಲ್ಲ.

೬-೭. ಆಮೇಲೆ ಅಸ್ತ್ರಮಂತ್ರವಾದ ಫಟ್ ಎಂಬುದನ್ನು ಉಚ್ಚರಿಸಿ ಹತ್ತುದಿಕ್ಕುಗಳಲ್ಲಿಯೂ, ಅಸ್ತ್ರನ್ಯಾಸವನ್ನು ಮಾಡಿ ಪಂಚಭೂತಸ್ವರೂಪವಾದ ನಿವೃತ್ತ್ಯಾದಿ ಐದು ಕಲೆಗಳನ್ನು ಪೃಥಿವ್ಯಾಧಿಭೂತಗಳೊಡನೆಯೂ, ಅವುಗಳ ಚಿನ್ಹೆಗಳೊಡನೆಯೂ ಸೇರಿಸಿ ಹೃದಯ, ಕಂಠ, ದವಡೆ, ಹುಬ್ಬುಗಳ ನಡುವೆ

ತತ್ತದ್ಬೀಜೇನ ಸಂಗ್ರಂಥೀಸ್ತತ್ತದ್ಬೀಜೇಷು ಭಾವಯೇತ್ ।
ತಾಸಾಂ ವಿಶೋಧನಾರ್ಥಾಯ ವಿದ್ಯಾಂ ಪಂಚಾಕ್ಷರೀಂ ಜಪೇತ್ ॥ ೮ ॥

ನಿರುದ್ಧ್ವಾ ಪ್ರಾಣವಾಯುಂ ಚ ಗುಣಸಂಖ್ಯಾನುಸಾರತಃ ।
ಭೂತಗ್ರಂಥಿಂ ತತಶ್ಛಿಂದ್ಯಾದಸ್ತ್ರೇಣೈವಾಸ್ತ್ರಮುದ್ರಯಾ ॥ ೯ ॥

ನಾಡ್ಯಾಃ ಸುಷುಮ್ನಯಾತ್ಮಾನಂ ಪ್ರೇರಿತಂ ಪ್ರಾಣವಾಯುನಾ ।
ನಿರ್ಗತಂ ಬ್ರಹ್ಮರಂಧ್ರೇಣ ಯೋಜಯೇಚ್ಛಿವತೇಜಸಾ ॥ ೧೦ ॥

ವಿಶೋಷ್ಯ ವಾಯುನಾ ಪಶ್ಚಾದ್ದೇಹಂ ಕಾಲಾಗ್ನಿನಾ ದಹೇತ್ ।
ತತಶ್ಚೋಪರಿಭಾವೇನ ಕಲಾಃ ಸಂಹೃತ್ಯ ವಾಯುನಾ ॥ ೧೧ ॥

ದೇಹಂ ಸಂಹೃತ್ಯ ವೈ ದಗ್ಧಂ ಕಲಾಃ ಸ್ಪೃಷ್ಟ್ವಾ ಸಹಾಬ್ಧಿನಾ ।
ಪ್ಲಾವಯಿತ್ವಾಮೃತೈರ್ದೇಹಂ ಯಥಾಸ್ಥಾನಂ ನಿವೇಶಯೇತ್ ॥ ೧೨ ॥

---

ಬ್ರಹ್ಮರಂಧ್ರ ಪ್ರದೇಶಗಳಲ್ಲಿ ಆಯಾ ಬೀಜಾಕ್ಷರಗಳೊಡನೆ ಸೇರಿಸಿ ಪಂಚಾಕ್ಷರ ಮಂತ್ರದ ಬೀಜಾಕ್ಷರಗಳಲ್ಲಿ ಭಾವನೆ ಮಾಡಬೇಕು.

೮-೯. ನಿವೃತ್ತ್ಯಾದಿಪಂಚಕಲಾಶೋಧನೆಗಾಗಿ ಪಂಚಾಕ್ಷರೀಮಂತ್ರವನ್ನು ಜಪಿಸಬೇಕು. ಅಮೇಲೆ ಪ್ರಾಣಾಯಾಮದ ಗುಣ ಮತ್ತು ಸಂಖ್ಯೆ ಮಾತ್ರಾತಾಲುಗಳಿಗೆ ಅನುಸಾರವಾಗಿ ಅಸ್ತ್ರಮಂತ್ರದಿಂದಲೇ ಅಸ್ತ್ರಮುದ್ರಾಪ್ರದರ್ಶನಪೂರ್ವಕವಾಗಿ ಭೂತಗ್ರಂಥಿಯನ್ನು ಛೇದಿಸಬೇಕು.

೧೦. ಪ್ರಾಣವಾಯುವಿನಿಂದ ಪ್ರೇರಿತವಾದ ಆತ್ಮನನ್ನು ಸುಷುಮ್ನಾ ನಾಡಿಯ ಮಾರ್ಗವಾಗಿ ಬ್ರಹ್ಮರಂಧ್ರದಿಂದ ಹೊರಕ್ಕೆ ಹೊರಡಿಸಿ ಶಿವತೇಜಸ್ಸಿನೊಡನೆ ಸೇರಿಸಬೇಕು.

೧೧-೧೨. ಆಮೇಲೆ ಪ್ರಾಣವಾಯುವಿನಿಂದ ದೇಹವನ್ನು ಶೋಷಿಸಿ ಕಾಲಾಗ್ನಿಯಿಂದ ಸುಟ್ಟುಬಿಡಬೇಕು. ತರುವಾಯ ದೇಹದಲ್ಲಿರುವ ನಿವೃತ್ತ್ಯಾದಿಕಲೆಗಳನ್ನು ವಾಯುವಿನೊಡನೆ ಕೂಡಿಸಿ ಸುಟ್ಟುಹೋದ ದೇಹವನ್ನು ಅಬ್ಧಿಕಲೆಯಿಂದ ಕೂಡಿಸಿ ಅಮೃತದಿಂದ ನೆನಸಿ ದೇಹವನ್ನು ಮೊದಲಿದ್ದ ಕಡೆಯಲ್ಲಿ ಇರಿಸಬೇಕು.

ಅಥ ಸಂಹೃತ್ಯ ವೈ ದಗ್ಧಃ ಕಲಾಸಂಗಂ ವಿನೈವ ತು ।
ಅಮೃತಪ್ಲಾವನಂ ಕುರ್ಯಾದ್ಭುಸ್ಮೀಭೂತಸ್ಯ ವೈ ತತಃ ॥ ೧೩ ॥

ತತೋ ವಿದ್ಯಾಮಯೇ ತಸ್ಮಿನ್ದೇಹೇ ದೀಪಶಿಖಾಕೃತಿಂ ।
ಶಿವಾನ್ನಿರ್ಗತಮಾತ್ಮಾನಂ ಬ್ರಹ್ಮರಂಧ್ರೇಣ ಯೋಜಯೇತ್ ॥ ೧೪ ॥

ದೇಹಸ್ಯಾಂತಃ ಪ್ರವಿಷ್ಟಂ ತಂ ಧ್ಯಾತ್ವಾ ಹೃದಯಪಂಕಜೇ ।
ಪುನಶ್ಚಾಮೃತವರ್ಷೇಣ ಸಿಂಚೇದ್ವಿದ್ಯಾಮಯಂ ವಪುಃ ॥ ೧೫ ॥

ತತಃ ಕುರ್ಯಾತ್ಕರನ್ಯಾಸಂ ಕರಶೋಧನಪೂರ್ವಕಂ ।
ದೇಹನ್ಯಾಸಂ ತತಃ ಪಶ್ಚಾನ್ಮಹತ್ಯಾ ಮುದ್ರಯಾ ಚರೇತ್ ॥ ೧೬ ॥

ಅಂಗನ್ಯಾಸಂ ತತಃ ಕೃತ್ವಾ ಶಿವೋಕ್ತೇನ ತು ವರ್ತ್ಮನಾ ।
ವರ್ಣನ್ಯಾಸಂ ತತಃ ಕುರ್ಯಾದ್ಧಸ್ತಪಾದಾದಿಸಂಧಿಷು ॥ ೧೭ ॥

---

೧೩. ಅಥವಾ ಸುಟ್ಟುಹೋದ ಶರೀರವನ್ನು ಕಲೆಯ ಸಂಬಂಧವಿಲ್ಲದೆಯೇ ಅಮೃತದಲ್ಲಿ ನೆನಸಬಹುದು. ಹೀಗೆ ಮಾಡಿದಮೇಲೆ ಶರೀರವು ಮಂತ್ರವಿದ್ಯಾಸ್ವರೂಪವಾಗುವುದು.

೧೪-೧೫. ಬಳಿಕ ಮಂತ್ರವಿದ್ಯಾಸ್ವರೂಪವಾದ ಶರೀರದಲ್ಲಿ ದೀಪದ ಶಿಖೆಯಂತೆ ಪ್ರಕಾಶಿಸುತ್ತಿರುವ ಶಿವನಿಂದಲೇ ಹೊರಟ ಆತ್ಮಸ್ವರೂಪವಾದ ತನ್ನನ್ನು ಬ್ರಹ್ಮರಂಧ್ರದಿಂದ ದೇಹದೊಳಕ್ಕೆ ಪ್ರವೇಶಿಸಿದಂತೆ ಭಾವಿಸಿ ಹೃದಯಕಮಲದಲ್ಲಿ ಧ್ಯಾನಮಾಡಿ ಮತ್ತೆ ಜ್ಞಾನಮಯವಾದ ಅಥವಾ ಮಂತ್ರವಿದ್ಯಾಸ್ವರೂಪವಾದ ಶರೀರವನ್ನು ಅಮೃತದಿಂದ ನೆನಸಬೇಕು.

೧೬. ಆಮೇಲೆ ಕೈಗಳನ್ನು ತೊಳೆದುಕೊಂಡು ಕರನ್ಯಾಸವನ್ನೂ, ಮಹಾಮುದ್ರೆಗಳಿಂದ ಕೂಡಿ ದೇಹನ್ಯಾಸಗಳನ್ನೂ ಮಾಡಬೇಕು.

೧೭-೧೮. ಶಿವಾಗಮಶಾಸ್ತ್ರದಲ್ಲಿ ಹೇಳಿದಂತೆ ಅಂಗನ್ಯಾಸವನ್ನು ಮಾಡಿ, ಹಸ್ತಪಾದಾದಿಗಳಲ್ಲಿ ವರ್ಣನ್ಯಾಸಗಳನ್ನು ಮಾಡಿಕೊಂಡು, ಸ್ವಾಭಾವಿಕವಾದ

ಷಡಂಗಾನಿ ತತೋ ನ್ಯಸ್ಯ ಜಾತಿಷಟ್ಕಯುತಾನಿ ಚ ।
ದಿಗ್ಬಂಧಮಾಚರೇತ್ಪಶ್ಚಾದಾಗ್ನೇಯಾದಿ ಯಥಾಕ್ರಮಂ ॥ ೧೮ ॥

ಯದ್ವಾ ಮೂರ್ಧಾದಿಪಂಚಾಂಗಂ ನ್ಯಾಸಮೇವ ಸಮಾಚರೇತ್ ।
ತಥಾ ಷಡಂಗನ್ಯಾಸಂ ಚ ಭೂತಶುದ್ಧ್ಯಾದಿಕಂ ವಿನಾ ॥ ೧೯ ॥

ಏವಂ ಸಮಾಸರೂಪೇಣ ಕೃತ್ವಾ ದೇಹಾತ್ಮಶೋಧನಂ ।
ಶಿವಭಾವಮುಪಾಗಮ್ಯ ಪೂಜಯೇತ್ಪರಮೇಶ್ವರಂ ॥ ೨೦ ॥

ಅಥ ಯಸ್ಯಾಸ್ತ್ಯವಸರೋ ನಾಸ್ತಿ ವಾ ಮತಿವಿಭ್ರಮಃ ।
ಸ ವಿಸ್ತೀರ್ಣೇನ ಕಲ್ಪೇನ ನ್ಯಾಸಕರ್ಮ ಸಮಾಚರೇತ್ ॥ ೨೧

ತತ್ರಾದ್ಯೋ ಮಾತೃಕಾನ್ಯಾಸೋ ಬ್ರಹ್ಮನ್ಯಾಸಸ್ತತಃ ಪರಃ ।
ತೃತೀಯಃ ಪ್ರಣವನ್ಯಾಸೋ ಹಂಸನ್ಯಾಸಸ್ತದುತ್ತರಃ ॥ ೨೨ ॥

---

ಷಡಂಗನ್ಯಾಸವನ್ನು ಮಾಡಿ, ಆಮೇಲೆ ಆಗ್ನೇಯಾದಿ ದಿಕ್ಕುಗಳಿಂದ ಕ್ರಮವಾಗಿ ದಿಗ್ಬಂಧನವನ್ನು ಮಾಡಬೇಕು.

೧೯. ಅಥವಾ ಶಿರಸ್ಸೇ ಮೊದಲಾಗಿ ಐದು ಅಂಗನ್ಯಾಸಗಳನ್ನು ಮಾಡಿದಮೇಲೆ ಭೂತಶುದ್ಧ್ಯಾದಿಗಳನ್ನು ಮಾಡದೆ ಷಡಂಗನ್ಯಾಸಗಳನ್ನು ಮಾಡಬಹುದು.

೨೦. ಈರೀತಿಯಲ್ಲಿ ಸಂಗ್ರಹರೂಪವಾಗಿ ಅಂಗನ್ಯಾಸಾದಿಗಳಿಂದ ದೇಹಾತ್ಮಶೋಧನೆಯನ್ನು ಮಾಡಿಕೊಂಡರೆ ಶಿವಭಾವವು ಶರೀರಕ್ಕೆ ಪ್ರಾಪ್ತವಾಗುವುದು. ಆಮೇಲೆ ಪರಮೇಶ್ವರನನ್ನು ಪೂಜಿಸಬೇಕು.

೨೧-೨೩. ಯಾರಿಗೆ ಅವಕಾಶವಿರುವುದೋ, ಬುದ್ಧಿಭ್ರಾಂತಿಯು ಯಾರಿಗೆ ಇರುವುದಿಲ್ಲವೋ ಅವರು ಕಲ್ಪದಲ್ಲಿ ಹೇಳಿರುವಂತೆ ವಿಸ್ತಾರವಾಗಿ ನ್ಯಾಸಕರ್ಮವನ್ನು ಆಚರಿಸಬೇಕು. ನ್ಯಾಸದಲ್ಲಿ, ಮಾತೃಕಾನ್ಯಾಸ, ಬ್ರಹ್ಮನ್ಯಾಸ, ಪ್ರಣವನ್ಯಾಸ, ಹಂಸನ್ಯಾಸ, ಪಂಚಾಕ್ಷರನ್ಯಾಸ ಎಂದು ಐದು ವಿಧವಿರು

**ಪಂಚಮಃ ಕಥ್ಯತೇ ಸದ್ಭಿರ್ನ್ಯಾಸಃ ಪಂಚಾಕ್ಷರಾತ್ಮಕಃ ।**
**ಏತೇಷ್ವೇಕಮನೇಕಂ ವಾ ಕುರ್ಯಾತ್ಪೂಜಾದಿಕರ್ಮಸು ॥ ೨೩ ॥**

**ಅಕಾರಂ ಮೂರ್ಧ್ನಿ ವಿನ್ಯಸ್ಯ ಆಕಾರಂ ಚ ಲಲಾಟಕೇ ।**
**ಇಂ ಈಂ ಚ ನೇತ್ರಯೋಸ್ತದ್ವದುಮೂಂ ಶ್ರವಣಯೋಸ್ತಥಾ ॥ ೨೪ ॥**

**ಋಂ ೠಂ ಕಪೋಲಯೋಶ್ಚೈವ ಲೃಂ ಲೄಂ ನಾಸಾಪುಟದ್ವಯೇ ।**
**ಏಮೈಮೋಷ್ಠದ್ವಯೋರೋಮೌಂ ದಂತಪಙ್ಕ್ತಿದ್ವಯೋಃ ಕ್ರಮಾತ್ ॥**

**ಅಂ ಜಿಹ್ವಾಯಾಮುಭೋ ತಾಲುನ್ಯಃ ಪ್ರಯೋಜ್ಯೋ ಯಥಾಕ್ರಮಂ ।**
**ಕವರ್ಗಂ ದಕ್ಷಿಣೇ ಹಸ್ತೇ ನ್ಯಸೇತ್ಪಂಚಸು ಸಂಧಿಷು ॥ ೨೬ ॥**

**ಚವರ್ಗಂ ಚ ತಥಾ ವಾಮಹಸ್ತಸಂಧಿಷು ವಿನ್ಯಸೇತ್ ।**
**ಟವರ್ಗಂ ಚ ತವರ್ಗಂ ಚ ಪಾದಯೋರುಭಯೋರಪಿ ॥ ೨೭ ॥**

---

ವುದು. ಇವುಗಳಲ್ಲಿ ಒಂದನ್ನಾಗಲಿ, ಎಲ್ಲವನ್ನೂ ಆಗಲಿ ಪೂಜಾದಿಕರ್ಮಗಳನ್ನು ಮಾಡುವಾಗ ಆವಶ್ಯಕವಾಗಿ ಮಾಡಬೇಕು.

೨೪-೨೫. ಅಂ ಮೂರ್ಧ್ನಿ [ನೆತ್ತಿ], ಆಂ ಲಲಾಟೆ [ಹಣೆ] ಈಂ ನೇತ್ರಯೋಃ [ಕಣ್ಣುಗಳು] ಉಂ ಊಂ ಕರ್ಣಯೋಃ [ಕಿವಿಗಳು] ಋಂ ೠಂ ಕಪೋಲಯೋಃ [ಕೆನ್ನೆಗಳು] ಇಂ ಈಂ ನಾಸಾಪುಟದ್ವಯೇ [ಮೂಗು] ಏಂ ಐಂ ಓಷ್ಠಯೋಃ [ತುಟಿಗಳು] ಓಂ ಔಂ ದಂತಪಙ್ಕ್ತಿದ್ವಯೇ [ಹಲ್ಲುಗಳ ಸಾಲುಗಳು] ಅಂ ಜಿಹ್ವಾಯಾಂ [ನಾಲಗೆ] ಅಃ ತಾಲೌ [ದವಡೆಗಳು]

೨೬-೨೯. ತವರ್ಗವನ್ನು ಬಲಗೈಬೆರಳುಗಳಸಂಧಿಗಳಲ್ಲಿಯೂ, ಚವರ್ಗವನ್ನು ಎಡಗೈಬೆರಳುಗಳಸಂಧಿಗಳಲ್ಲಿಯೂ, ಟವರ್ಗ, ತವರ್ಗಗಳನ್ನು ಪಾದದ ಬೆರಳುಗಳಸಂಧಿಗಳಲ್ಲಿಯೂ, ನ್ಯಾಸಮಾಡಿ ಪವರ್ಗಗಳನ್ನು ಪಾರ್ಶ್ವಗಳಲ್ಲಿಯೂ, ಬವರ್ಗಗಳನ್ನು ಪೃಷ್ಠ ನಾಭಿಗಳಲ್ಲಿಯೂ, ಮಕಾರವನ್ನು ಹೃದಯದಲ್ಲಿಯೂ, ಯಕಾರಾದಿಸಕಾರಾಂತವಾದ ಏಳು ವರ್ಣಗಳನ್ನು ಕ್ರಮವಾಗಿ ಚರ್ಮವೇ

ಪಘೌ ತು ಪಾರ್ಶ್ವಯೋಃ ಪೃಷ್ಠೇ ನಾಭೌ ಚಾಪಿ ಬಭೌ ತತಃ ।
ನ್ಯಸೇನ್ಮಕಾರಂ ಹೃದಯೇ ತ್ವಗಾದಿಷು ಯಥಾಕ್ರಮಂ ॥ ೨೮ ॥

ಯಕಾರಾದಿಸಕಾರಾಂತಾನ್ನ್ಯಸೇತ್ಸಪ್ತಸು ಧಾತುಷು ।
ಹಕಾರಂ ಹೃದಯಸ್ಯಾಂತಃ ಕ್ಷಕಾರಂ ಭ್ರೂಯುಗಾಂತರೇ ॥ ೨೯ ॥

ಏವಂ ವರ್ಣಾನ್ಪ್ರವಿನ್ಯಸ್ಯ ಪಂಚಾಶದ್ರುದ್ರವರ್ತ್ಮನಾ ।
ಅಂಗವಕ್ತ್ರಕಲಾಭೇದಾತ್ಪಂಚಬ್ರಹ್ಮಾಣಿ ವಿನ್ಯಸೇತ್ ॥ ೩೦ ॥

ಕರನ್ಯಾಸಾದ್ಯಮಪಿ ತೈಃ ಕೃತ್ವಾ ವಾಥ ನ ವಾ ಕ್ರಮಾತ್ ।
ಶಿರೋವದನಹೃದ್ಗುಹ್ಯಪಾದೇಷ್ವೇತಾನಿ ಕಲ್ಪಯೇತ್ ॥ ೩೧ ॥

ತತಶ್ಚೋರ್ಧ್ವಾದಿವಕ್ತ್ರಾಣಿ ಪಶ್ಚಿಮಾಂತಾನಿ ಕಲ್ಪಯೇತ್ ।
ಈಶಾನಸ್ಯ ಕಲಾಃ ಪಂಚ ಪಂಚಸ್ವೇತೇಷು ಚ ಕ್ರಮಾತ್ ॥ ೩೨ ॥

ತತಶ್ಚತುರ್ಷು ವಕ್ತ್ರೇಷು ಪುರುಷಸ್ಯ ಕಲಾ ಅಪಿ ।
ಚತಸ್ರಃ ಪ್ರಣಿಧಾತವ್ಯಾಃ ಪೂರ್ವಾದಿ ಕ್ರಮಯೋಗತಃ ॥ ೩೩ ॥

---

ಮೊದಲಾದ ಏಳು ಧಾತುಗಳಲ್ಲಿಯೂ, ಹಕಾರವನ್ನು ಹೃದಯಾಕಾಶದಲ್ಲಿಯೂ, ಕ್ಷಕಾರವನ್ನು ಹುಬ್ಬುಗಳನಡುವೆಯೂ, ಕ್ರಮವಾಗಿ ನ್ಯಾಸಮಾಡಬೇಕು.

೩೦. ಹೀಗೆ ಶಿವಾಗಮಶಾಸ್ತ್ರಮಾರ್ಗದಿಂದ ಐವತ್ತುವರ್ಣಗಳನ್ನು ನ್ಯಾಸಮಾಡಿದಮೇಲೆ ಅಂಗ, ಮುಖ, ಕಲಾ, ಭೇದಗಳಿಂದ ಪಂಚಬ್ರಹ್ಮಮಂತ್ರನ್ಯಾಸವನ್ನು ಮಾಡಬೇಕು.

೩೧. ಪಂಚಬ್ರಹ್ಮಮಂತ್ರಗಳಿಂದ ಕರನ್ಯಾಸಗಳನ್ನು ಮಾಡಿ ಕ್ರಮವಾಗಿ ಅನೇಕ ಮಂತ್ರಗಳಿಂದ ಶಿರಸ್ಸು, ಮುಖ, ಹೃದಯ, ಗುಹ್ಯ, ಪಾದ ಇವುಗಳಲ್ಲಿ ನ್ಯಾಸಮಾಡಬೇಕು.

೩೨-೩೩. ಆಮೇಲೆ ಊರ್ಧ್ವಾದಿಪಶ್ಚಿಮಾಂತವಾದ ಐದು ಮುಖಗಳಲ್ಲಿ ಈಶಾನಮಂತ್ರದಿಂದ ಐದು ಕಲಾನ್ಯಾಸವನ್ನೂ, ಪೂರ್ವಾದಿ ನಾಲ್ಕು ಮುಖಗಳಲ್ಲಿ ತತ್ಪುರುಷಮಂತ್ರದಿಂದ ನಾಲ್ಕು ಕಲಾನ್ಯಾಸವನ್ನೂ ಮಾಡಬೇಕು.

ಹೃತ್ಕಂಠಾಂಸೇಷು ನಾಭೌ ಚ ಕುಕ್ಷೌ ಪೃಷ್ಠೇ ಚ ವಕ್ಷಸಿ ।
ಅಘೋರಸ್ಯ ಕಲಾಶ್ಚಾಷ್ಟೌ ಪಾದಯೋರಪಿ ಹಸ್ತಯೋಃ ॥ ೩೪ ॥

ಪಶ್ಚಾತ್ತ್ರಯೋದಶ ಕಲಾಃ ಪಾಯುಮೇಢ್ರೋರುಜಾನುಷು ।
ಜಂಘಾಸ್ಫಿಕ್ಕಟಿಪಾರ್ಶ್ವೇಷು ವಾಮದೇವಸ್ಯ ಭಾವಯೇತ್ ॥ ೩೫ ॥

ಘ್ರಾಣೇ ಶಿರಸಿ ಬಾಹ್ವೋಶ್ಚ ಕಲ್ಪಯೇತ್ಕಲ್ಪವಿತ್ತಮಃ ।
ಅಷ್ಟತ್ರಿಂಶತ್ಕಲಾನ್ಯಾಸಮೇವಂ ಕೃತ್ವಾನುಪೂರ್ವಶಃ ॥ ೩೬ ॥

ಪಶ್ಚಾತ್ಪ್ರಣವವಿದ್ಧೀಮಾನ್ಪ್ರಣವನ್ಯಾಸಮಾಚರೇತ್ ।
ಬಾಹುದ್ವಯೇ ಕೂರ್ಪರಯೋಸ್ತಥಾ ಚ ಮಣಿಬಂಧಯೋಃ ॥ ೩೭ ॥

ಪಾರ್ಶ್ವೋದರೋರುಜಂಘೇಷು ಪಾದಯೋಃ ಪೃಷ್ಠತಸ್ತಥಾ ।
ಇತ್ಥಂ ಪ್ರಣವವಿನ್ಯಾಸಂ ಕೃತ್ವಾ ನ್ಯಾಸವಿಚಕ್ಷಣಃ ॥ ೩೮ ॥

---

೩೪-೩೫. ಹೃದಯ, ಕಂಠ, ಭುಜಗಳು, ಹೊಕ್ಕಳು, ಪೃಷ್ಠಗಳು ಹೊಟ್ಟೆ, ಕೈಕಾಲುಗಳು ಈ ಎಂಟು ಪ್ರದೇಶಗಳಲ್ಲಿ ಅಘೋರಮಂತ್ರದಿಂದ ಕಲಾನ್ಯಾಸವನ್ನೂ, ವಾಯು, ಮೇಢ್ರ, ಊರು, ಜಾನು, ಜಂಘ, ಪೃಷ್ಠ, ಸೊಂಟ ಪಕ್ಕೆಗಳು ಈ ಹದಿಮೂರು ಸ್ಥಳಗಳಲ್ಲಿ ವಾಮದೇವ ಮಂತ್ರದಿಂದ ಕಲಾನ್ಯಾಸವನ್ನೂ ಮೂಗು, ತಲೆ, ತೋಳು, ಪಾದ, ಕೈಗಳು ಈ ಎಂಟು ಸ್ಥಳಗಳಲ್ಲಿ ಸದ್ಯೋಜಾತಮಂತ್ರದಿಂದ ಕಲಾನ್ಯಾಸಗಳನ್ನು ಮಾಡಬೇಕು.

೩೬. ಕ್ರಮವಾಗಿ ಈ ರೀತಿಯಲ್ಲಿ ಮೂವತ್ತೆಂಟು ಕಲಾನ್ಯಾಸಗಳನ್ನು ಮಾಡಿ ಪ್ರಣವಾರ್ಥವನ್ನು ತಿಳಿದ ಬುದ್ಧಿವಂತು ಪ್ರಣವನ್ಯಾಸವನ್ನು ಮಾಡಬೇಕು.

೩೭-೩೮. ಎರಡು ತೋಳುಗಳು, ಮೊಳಕೈಗಳು, ಮಣಿಕಟ್ಟುಗಳು, ಪಕ್ಕೆಗಳು ಹೊಟ್ಟೆ ತೊಡೆ, ಮೊಳಕಾಲುಗಳು, ಹೆಜ್ಜೆಗಳು, ಪೃಷ್ಠಗಳು ಈ ಪ್ರದೇಶಗಳಲ್ಲಿ ಪ್ರಣವನ್ಯಾಸವನ್ನು ಮಾಡಿಕೊಂಡು ಆಮೇಲೆ ಶಿವಶಾಸ್ತ್ರೋಕ್ತವಾಗಿ ಹಂಸನ್ಯಾಸವನ್ನು ಮಾಡಬೇಕು.

**ಹಂಸನ್ಯಾಸಂ ಪ್ರಕುರ್ವೀತ ಶಿವಶಾಸ್ತ್ರೇ ಯಥೋದಿತಂ ।**
**ಬೀಜಂ ವಿಭಜ್ಯ ಹಂಸಸ್ಯ ನೇತ್ರಯೋರ್ಘ್ರಾಣಯೋರಪಿ ॥ ೩೯ ॥**

**ವಿಭಜ್ಯ ಬಾಹುನೇತ್ರಾಸ್ಯಲಲಾಟೇ ಘ್ರಾಣಯೋರಪಿ ।**
**ಕಕ್ಷಯೋಃ ಸ್ಕಂಧಯೋಶ್ಚೈವ ಪಾರ್ಶ್ವಯೋಸ್ತನಯೋಸ್ತಥಾ ॥ ೪೦ ॥**

**ಕಟ್ಯೋಃ ಪಾಣ್ಯೋರ್ಗುಲ್ಫಯೋಶ್ಚ ಯದ್ವಾ ಪಂಚಾಗವರ್ತ್ಮನಾ ।**
**ಹಂಸನ್ಯಾಸಮಿಮಂ ಕೃತ್ವಾ ನ್ಯಸೇತ್ಪಂಚಾಕ್ಷರೀಂ ತತಃ ॥ ೪೧ ॥**

**ಯಥಾ ಪೂರ್ವೋಕ್ತಮಾರ್ಗೇಣ ಶಿವತ್ವಂ ಯೇನ ಜಾಯತೇ ।**
**ನಾಶಿವಃ ಶಿವಮಭ್ಯಸ್ಯೇನ್ನಾಶಿವಃ ಶಿವಮರ್ಚಯೇತ್ ॥ ೪೨ ॥**

**ನಾಶಿವಸ್ತು ಶಿವಂ ಧ್ಯಾಯೇನ್ನಾಶಿವಃ ಪ್ರಾಪ್ನುಯಾಚ್ಛಿವಂ ।**
**ತಸ್ಮಾಚ್ಛೈವೀಂ ತನುಂ ಕೃತ್ವಾ ತ್ಯಕ್ತ್ವಾ ಚ ಪಶುಭಾವನಾಂ ॥ ೪೩ ॥**

---

೩೯-೪೦. ಹಂಸಮಂತ್ರದ ಬೀಜಾಕ್ಷರಗಳನ್ನು ವಿಭಾಗಮಾಡಿ ಕಣ್ಣು ಗಳು, ಮೂಗುಗಳು, ತೋಳುಗಳು, ಬಾಯಿ, ಹಣೆ, ಕಂಕುಳು, ಹೆಗಲು, ಪಕ್ಕೆ ಗಳು, ಸ್ತನಗಳು, ಸೊಂಟ, ಕೈಗಳು, ಹಿಮ್ಮಡಿ ಇವುಗಳಲ್ಲಿ ನ್ಯಾಸಮಾಡಬೇಕು. ಅಥವಾ ಪಂಚಾಂಗನ್ಯಾಸಮಾರ್ಗದಿಂದಲಾದರೂ ಹಂಸನ್ಯಾಸವನ್ನು ಮಾಡಿ ಪಂಚಾಕ್ಷರಮಂತ್ರನ್ಯಾಸವನ್ನು ಮಾಡಬೇಕು.

೪೧-೪೩. ಹಿಂದೆ ಹೇಳಿದ ಮಾರ್ಗದಿಂದ ಮಂತ್ರನ್ಯಾಸಗಳನ್ನು ಮಾಡಿದ ಮನುಷ್ಯನಿಗೆ ಶಿವತ್ವವು ಪ್ರಾಪ್ತವಾಗುವುದು. ಮನುಷ್ಯನು ತನ್ನ ಶರೀರಕ್ಕೆ ಶಿವತ್ವವನ್ನುಂಟುಮಾಡಿಕೊಳ್ಳದೆ ಶಿವಮಂತ್ರಜಪವನ್ನೂ, ಶಿವಪೂಜೆ ಯನ್ನೂ ಶಿವಧ್ಯಾನವನ್ನೂ, ಶಿವಸಾನ್ನಿಧ್ಯವನ್ನೂ ಮಾಡಬಾರದು. ಆದುದ ರಿಂದ ನ್ಯಾಸಗಳಿಂದ ಶರೀರವನ್ನು ಶಿವಸ್ವರೂಪವಾಗಿ ಮಾಡಿಕೊಂಡು ಪಶು ಭಾವನೆಯನ್ನು ಬಿಟ್ಟು ನಾನೇ ಶಿವನೆಂದು ಮನಸ್ಸಿನಲ್ಲಿ ಯೋಚಿಸುತ್ತ ಶಿವಶಾಸ್ತ್ರೋಕ್ತವಾದ ಸಮಸ್ತ ಕರ್ಮಗಳನ್ನೂ ಚೆನ್ನಾಗಿ ಅನುಷ್ಠಾನಮಾಡ ಬೇಕು.

ಶಿವೋಽಹಮಿತಿ ಸಂಚಿಂತ್ಯ ಶೈವಂ ಕರ್ಮ ಸಮಾಚರೇತ್ ।
ಕರ್ಮಯಜ್ಞಸ್ತಪೋಯಜ್ಞೋ ಜಪಯಜ್ಞಸ್ತದುತ್ತರಃ ।
ಧ್ಯಾನಯಜ್ಞೋ ಜ್ಞಾನಯಜ್ಞಃ ಪಂಚ ಯಜ್ಞಾಃ ಪ್ರಕೀರ್ತಿತಾಃ ॥ ೪೪ ॥

ಕರ್ಮಯಜ್ಞರತಾಃ ಕೇಚಿತ್ತಪೋಯಜ್ಞರತಾಃ ಪರೇ ।
ಜಪಯಜ್ಞರತಾಶ್ಚಾನ್ಯೇ ಧ್ಯಾನಯಜ್ಞರತಾಸ್ತಥಾ ॥ ೪೫ ॥

ಜ್ಞಾನಯಜ್ಞರತಾಶ್ಚಾನ್ಯೇ ವಿಶಿಷ್ಟಾಶ್ಚೋತ್ತರೋತ್ತರಂ ।
ಕರ್ಮಯಜ್ಞೋ ದ್ವಿಧಾ ಪ್ರೋಕ್ತಃ ಕಾಮಾಕಾಮವಿಭೇದತಃ ॥ ೪೬ ॥

ಕಾಮಾನ್ಕಾಮೀ ತತೋ ಭುಕ್ತ್ವಾ ಕಾಮಾಸಕ್ತಃ ಪುನರ್ಭವೇತ್ ।
ಅಕಾಮೋ ರುದ್ರಭವನೇ ಭೋಗಾನ್ಭುಕ್ತ್ವಾ ತತಶ್ಚ್ಯುತಃ ॥ ೪೭ ॥

ತಪೋಯಜ್ಞರತೋ ಭೂತ್ವಾ ಜಾಯತೇ ನಾತ್ರ ಸಂಶಯಃ ।
ತಪಸ್ವೀ ಚ ಪುನಸ್ತಸ್ಮಿನ್ಭೋಗಾನ್ಭುಕ್ತ್ವಾ ತತಶ್ಚ್ಯುತಃ ॥ ೪೮ ॥

---

೪೪. ಕರ್ಮಯಜ್ಞ, ತಪೋಯಜ್ಞ, ಜಪಯಜ್ಞ, ಧ್ಯಾನಯಜ್ಞ, ಜ್ಞಾನಯಜ್ಞ ಎಂದು ಐದು ಯಜ್ಞಗಳು ಪ್ರಸಿದ್ಧವಾಗಿರುವುವು.

೪೫. ಕೆಲವರು ಕರ್ಮಯಜ್ಞವನ್ನೂ ಮತ್ತೆ ಕೆಲವರು ತಪೋಯಜ್ಞವನ್ನೂ ಹಲವರು ಜಪಯಜ್ಞವನ್ನೂ, ಇನ್ನು ಕೆಲವರು ಧ್ಯಾನಯಜ್ಞವನ್ನೂ ಬೇರೆ ಕೆಲವರು ಜ್ಞಾನಯಜ್ಞವನ್ನೂ ಆಚರಿಸುವರು. ಈ ಯಜ್ಞಗಳಲ್ಲಿ ಕ್ರಮವಾಗಿ ಒಂದಕ್ಕಿಂತ ಮತ್ತೊಂದು ಶ್ರೇಷ್ಠವಾದವುಗಳು.

೪೬-೪೭. ಕರ್ಮಯಜ್ಞವು ಅಕಾಮಯಜ್ಞ, ಸಕಾಮಯಜ್ಞವೆಂದು ಎರಡು ವಿಧವು. ಸಕಾಮಯಜ್ಞವನ್ನು ಮಾಡಿದವನು ತನ್ನ ಇಷ್ಟಾರ್ಥಗಳನ್ನು ಅನುಭವಿಸಿ ಮತ್ತೆ ಕಾಮಾಸಕ್ತನಾಗಿಯೇ ಹುಟ್ಟುವನು. ಅಕಾಮಕರ್ಮವನ್ನು ಮಾಡಿದವನು ರುದ್ರಲೋಕದಲ್ಲಿ ಸುಖಗಳನ್ನನುಭವಿಸಿ ಆ ಲೋಕದಿಂದ ಮತ್ತೆ ಭೂಮಿಯಲ್ಲಿ ಹುಟ್ಟಿ ತಪೋಯಜ್ಞದಲ್ಲಿ ಆಸಕ್ತನಾಗುವನು.

೪೮-೪೯. ತಪಸ್ವಿಯಾಗಿ ಹುಟ್ಟಿದವನು ಮತ್ತೆ ಶಿವಲೋಕದಲ್ಲಿ ಸುಖಗಳನ್ನನುಭವಿಸಿ ಪುನಃ ಜಪಧ್ಯಾನಾಸಕ್ತನಾಗಿ ಭೂಮಿಯಲ್ಲಿ ಹುಟ್ಟುವನು.

ಜಪಧ್ಯಾನರತೋ ಭೂತ್ವಾ ಜಾಯತೇ ಭುವಿ ಮಾನವಃ ।
ಜಪಧ್ಯಾನರತೋ ಮರ್ತ್ಯಸ್ತದ್ವೈಶಿಷ್ಟ್ಯವಶಾದಿಹ ॥ ೪೯ ॥

ಜ್ಞಾನಂ ಲಬ್ಧ್ವಾಽಚಿರಾದೇವ ಶಿವಸಾಯುಜ್ಯಮಾಪ್ನುಯಾತ್ ।
ತಸ್ಮಾನ್ಮುಕ್ತೇಃ ಶಿವಾಜ್ಞಪ್ತೇಃ ಕರ್ಮಯಜ್ಞೋಽಪಿ ದೇಹಿನಾಂ ॥ ೫೦ ॥

ಅಕಾಮಃ ಕಾಮಸಂಯುಕ್ತೋ ಬಂಧಾಯೈವ ಭವಿಷ್ಯತಿ ।
ತಸ್ಮಾತ್ಪಂಚಸು ಯಜ್ಞೇಷು ಧ್ಯಾನಜ್ಞಾನಪರೋ ಭವೇತ್ ॥ ೫೧ ॥

ಧ್ಯಾನಂ ಜ್ಞಾನಂ ಚ ಯಸ್ಯಾಸ್ತಿ ತೀರ್ಣಸ್ತೇನ ಭವಾರ್ಣವಃ ।
ಹಿಂಸಾದಿದೋಷನಿರ್ಮುಕ್ತೋ ವಿಶುದ್ಧಶ್ಚಿತಸಾಧನಃ ॥ ೫೨ ॥

ಧ್ಯಾನಯಜ್ಞಃ ಪರಸ್ತಸ್ಮಾದಪವರ್ಗಫಲಪ್ರದಃ ।
ಬಹಿಃಕರ್ಮಕರಾ ಯದ್ವನ್ನಾತೀವ ಫಲಭಾಗಿನಃ ॥ ೫೩ ॥

---

ಜಪ ಧ್ಯಾನಗಳ ಫಲದಿಂದ ಬೇಗನೆ ಜ್ಞಾನವನ್ನು ಹೊಂದಿ ಶಿವಸಾಯುಜ್ಯರೂಪವಾದ ಮೋಕ್ಷವನ್ನು ಪಡೆಯುವನು.

೫೦-೫೧. ಆದುದರಿಂದ ನಿಷ್ಕಾಮವಾದ ಕರ್ಮಯಜ್ಞವೂ ಕೂಡ ಶಿವನ ಆಜ್ಞೆಯಿಂದ ಮುಕ್ತಿಫಲವನ್ನು ಕೊಡತಕ್ಕುದಾಗುವುದು. ಸಕಾಮವಾದ ಕರ್ಮಯಜ್ಞವು ಬಂಧಕಾರಣವಾಗುವುದು. ಆ ಕಾರಣದಿಂದ ಪಂಚಯಜ್ಞಗಳಲ್ಲಿ ಧ್ಯಾನಜ್ಞಾನಪೂರ್ವಕವಾಗಿ ಮನುಜರು ಆಸಕ್ತರಾಗಬೇಕು.

೫೨. ಯಾವ ಮನುಷ್ಯನಿಗೆ ಧ್ಯಾನವೂ, ಜ್ಞಾನವೂ ವಶವಾಗಿರುವುದೋ ಅವನು ಸಂಸಾರಸಮುದ್ರವನ್ನು ದಾಟಿದವನಾಗುವನು. ಈ ಎರಡು ಯಜ್ಞಗಳೂ ಹಿಂಸಾದಿ ದೋಷಗಳಿಲ್ಲದ ಪರಿಶುದ್ಧವಾದ ಮನಸ್ಸೇ ಸಾಧನವುಳ್ಳುದಾಗಿರುವುದು.

೫೩. ಆ ಕಾರಣದಿಂದ ಧ್ಯಾನಯಜ್ಞವೇ ಮೋಕ್ಷಫಲವನ್ನು ಕೊಡುವ ಅತ್ಯಂತ ಶ್ರೇಷ್ಠವಾದ ಯಜ್ಞವಾಗಿರುವುದು. ರಾಜನ ಮನೆಯ ಹೊರಗಡೆ ಕೆಲಸಮಾಡತಕ್ಕವರು ಸಾಕ್ಷಾತ್ತಾಗಿ ರಾಜನು ಕೊಡುವ ಬಹುಮಾನಗಳಿಗೆ ಹೇಗೆ ಪಾತ್ರರಲ್ಲವೋ ಹಾಗೇ ಕರ್ಮಯಜ್ಞಮಾಡತಕ್ಕವರು ಸಾಕ್ಷಾತ್ತಾಗಿ ಮೋಕ್ಷಫಲಭಾಗಿಗಳಲ್ಲ.

ದೃಷ್ಟ್ವಾ ನರೇಂದ್ರಭವನೇ ತದ್ವದತ್ರಾಪಿ ಕರ್ಮಿಣಃ ।
ಧ್ಯಾನಿನಾಂ ಹಿ ವಪುಃ ಸೂಕ್ಷ್ಮಂ ಭವೇತ್ಪ್ರತ್ಯಕ್ಷಮೀಶ್ವರಂ ॥ ೫೪ ॥

ಯಥೇಹ ಕರ್ಮಣಾಂ ಸ್ಥೂಲಂ ಮೃತ್ಕಾಷ್ಠಾದ್ಯೈಃ ಪ್ರಕಲ್ಪಿತಂ ।
ಧ್ಯಾನಯಜ್ಞರತಾಸ್ತಸ್ಮಾದ್ದೇವಾನ್ಪಾಷಾಣಮೃಣ್ಮಯಾನ್ ॥ ೫೫ ॥

ನಾತ್ಯಂತಂ ಪ್ರತಿಪದ್ಯಂತೇ ಶಿವಯಾಥಾತ್ಮ್ಯವೇದನಾತ್ ।
ಆತ್ಮಸ್ಥಂ ಯಃ ಶಿವಂ ತ್ಯಕ್ತ್ವಾ ಬಹಿರಭ್ಯರ್ಚಯೇನ್ನರಃ ॥ ೫೬ ॥

ಹಸ್ತಸ್ಥಂ ಫಲಮುತ್ಸೃಜ್ಯ ಲಿಹೇತ್ಕೂರ್ಪರಮಾತ್ಮನಃ ।
ಜ್ಞಾನಾದ್ಧ್ಯಾನಂ ಭವೇದ್ಧ್ಯಾನಾಜ್ಜ್ಞಾನಂ ಭೂಯಃ ಪ್ರವರ್ತತೇ ॥ ೫೭ ॥

ತದುಭಾಭ್ಯಾಂ ಭವೇನ್ಮುಕ್ತಿಸ್ತಸ್ಮಾದ್ಧ್ಯಾನರತೋ ಭವೇತ್ ।
ದ್ವಾದಶಾಂತೇ ತಥಾ ಮೂರ್ಧ್ನಿ ಲಲಾಟೇ ಭ್ರೂಯುಗಾಂತರೇ ॥ ೫೮ ॥

೫೪–೫೫. ಧ್ಯಾನಮಾಡತಕ್ಕ ಮನುಷ್ಯನ ಸೂಕ್ಷ್ಮಶರೀರವು ಸಾಕ್ಷಾತ್ಪ್ರತ್ಯಕ್ಷನಾದ ಶಿವನ ಶರೀರವೇ ಆಗಿರುವುದು. ಕರ್ಮಿಗಳಿಗೆ ಮಣ್ಣು, ಮರ ಮುಂತಾದವುಗಳಿಂದ ಮಾಡಿದ ಮೂರ್ತಿಯು ಶಿವಸ್ವರೂಪವಾದುದಾಗಿರುವುದು. ಆದುದರಿಂದ ಧ್ಯಾನಯಜ್ಞದಲ್ಲಿ ಆಸಕ್ತರಾದವರು ಕಲ್ಲು ಮಣ್ಣುಗಳಿಂದ ಮಾಡಿದ ದೇವತೆಗಳನ್ನು ವಿಶೇಷವಾಗಿ ಉಪಯೋಗಿಸುವುದಿಲ್ಲ. ಅವರು ಸೂಕ್ಷ್ಮಶರೀರಿಯಾದ ಶಿವನ ತತ್ತ್ವವನ್ನು ಚೆನ್ನಾಗಿ ಬಲ್ಲವರು. ಆದುದರಿಂದ ಸ್ಥೂಲಮೂರ್ತಿರೂಪವು ಅವರಿಗೆ ಅಷ್ಟು ಮುಖ್ಯವಲ್ಲ.

೫೬. ತನ್ನ ಮನಸ್ಸಿನಲ್ಲಿಯೇ ಇರುವ ಶಿವನನ್ನು ಬಿಟ್ಟು ಹೊರಗಿನ ಲಿಂಗಮೂರ್ತಿಗಳನ್ನು ಯಾವ ಮನುಜನು ಪೂಜಿಸುವನೋ ಅವನು ಕೈಯಲ್ಲಿರುವ ಹಣ್ಣನ್ನು ಬಿಟ್ಟು ಬರೀಮೊಳಕೈಯನ್ನು ನೆಕ್ಕುವ ಮನುಷ್ಯನಿಗೆ ಸಮವಾಗುವನು.

೫೭. ಜ್ಞಾನದಿಂದ ಧ್ಯಾನವೂ, ಧ್ಯಾನದಿಂದ ಜ್ಞಾನವೂ ಉಂಟಾಗುವುದರಿಂದ ಈ ಎರಡರಿಂದಲೂ ಸಂಸಾರದುಃಖದ ಬಿಡುಗಡೆಯಾಗುವುದು. ಆ ಕಾರಣದಿಂದ ಮನುಜನು ಧ್ಯಾನಾಸಕ್ತನಾಗಬೇಕು.

೫೮–೫೯. ಧ್ಯಾನಾಸಕ್ತನಾದ ಮನುಷ್ಯನು ಅಂತರ್ಯಾಗಪರನು. ಅವನು ತನ್ನ ಶರೀರದೊಳಗೆ ಹನ್ನೆರಡು ದಳಗಳುಳ್ಳ ಕಮಲವಲ್ಲಾಗಲಿ, ನೆತ್ತಿ

ನಾಸಾಗ್ರೇ ವಾ ತಥಾಸ್ಯೇ ವಾ ಕಂಧರೇ ಹೃದಯೇ ತಥಾ ।
ನಾಭೌ ವಾ ಶಾಶ್ವತಸ್ಥಾನೇ ಶ್ರದ್ಧಾವಿದ್ಧೇನ ಚೇತಸಾ ॥ ೫೯ ॥

ಬಹಿರ್ಯಾಗೋಪಚಾರೇಣ ದೇವಂ ದೇವೀಂ ಚ ಪೂಜಯೇತ್ ।
ಅಥವಾ ಪೂಜಯೇನ್ನಿತ್ಯಲಿಂಗೇ ವಾ ಕೃತಕೇಽಪಿ ವಾ ॥ ೬೦ ॥

ವಹ್ನೌ ವಾ ಸ್ಥಂಡಿಲೇ ವಾಥ ಭಕ್ತ್ಯಾ ವಿತ್ತಾನುಸಾರತಃ ।
ಅಥವಾಂತರ್ಬಹಿಶ್ಚೈವ ಪೂಜಯೇತ್ಪರಮೇಶ್ವರಂ ।
ಅಂತರ್ಯಾಗರತಃ ಪೂಜಾಂ ಬಹಿಃ ಕುರ್ವೀತ ವಾ ನವಾ ॥ ೬೧ ॥

ಇತಿ ಶ್ರೀಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-
ಮುತ್ತರಭಾಗೇ ಶಿವಶಾಸ್ತ್ರೋಕ್ತನಿತ್ಯನೈಮಿತ್ತಿಕಕರ್ಮವರ್ಣನಂ
ನಾಮ ದ್ವಾವಿಂಶೋಽಧ್ಯಾಯಃ

---

ಹಣೆ, ಹುಬ್ಬಿನನಡುವೆ, ಮೂಗಿನ ತುದಿ, ಬಾಯಿ, ಕುತ್ತಿಗೆ, ಹೃದಯ, ಹೊಕ್ಕಳು, ಈ ಪ್ರದೇಶಗಳಲ್ಲಿ ಒಂದು ಗೊತ್ತಾದ ಸ್ಥಳದಲ್ಲಿಯಾಗಲಿ ದೃಷ್ಟಿಯನ್ನಿರಿಸಿ ನಂಬಿಕೆಯಾದ ಮನಸ್ಸಿನಿಂದ ಧ್ಯಾನಮಾಡಬೇಕು. ಸಾಮಾನ್ಯನು ಬಹಿರ್ಯಾಗಾಸಕ್ತನಾಗಿ ಹೊರಗಿನ ಪದಾರ್ಥಗಳ ರೂಪವಾದ ಉಪಚಾರಗಳಿಂದ ಶಿವನನ್ನೂ, ಶಿವೆಯನ್ನೂ ಸಹ ಪೂಜಿಸಬೇಕು.

೬೦-೬೧. ಹಾಗೆ ಪೂಜಿಸುವವನು ಪ್ರತಿಷ್ಠೆಮಾಡಿದ ಲಿಂಗದಲ್ಲಿಯಾಗಲಿ ಕೃತಕಲಿಂಗದಲ್ಲಿಯಾಗಲಿ, ಅಗ್ನಿ ಸ್ಥಂಡಿಲ ಇವುಗಳಲ್ಲಾಗಲಿ ತನ್ನ ಶಕ್ತಿಯೂ, ಭಕ್ತಿಯೂ ಇದ್ದಂತೆ ಪೂಜಿಸಬಹುದು. ಅಥವಾ ಪರಮೇಶ್ವರನನ್ನು ಮನಸ್ಸಿನಲ್ಲಿಯೂ, ಹೊರಗೂ ಪೂಜಿಸಬಹುದು. ಅಂತರ್ಯಾಗಾಸಕ್ತನು ಬಹಿರ್ಲಿಂಗ ಮೂರ್ತಿಗಳನ್ನೂ ಪೂಜಿಸಬಹುದು. ಅಥವಾ ಬಿಟ್ಟರೂ ಬಿಡಬಹುದು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯವೀಯಸಂಹಿತೆಯ ಉತ್ತರ
ಭಾಗದಲ್ಲಿ ಶಿವಶಾಸ್ತ್ರದಲ್ಲಿ ಹೇಳಿರುವ ನಿತ್ಯನೈಮಿತ್ತಿಕ ವರ್ಣನವೆಂಬ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ತ್ರಯೋವಿಂಶೋಽಧ್ಯಾಯಃ

---

॥ ಉಪಮನ್ಯುರುವಾಚ ॥

ವ್ಯಾಖ್ಯಾಂ ಪೂಜಾವಿಧಾನಸ್ಯ ಪ್ರವದಾಮಿ ಸಮಾಸತಃ ।
ಶಿವಶಾಸ್ತ್ರೇ ಶಿವೇನೈವ ಶಿವಾಯೈ ಕಥಿತಸ್ಯ ತು ॥ ೧ ॥

ಅಂಗಮಭ್ಯಂತರಂ ಯಾಗಮಗ್ನಿಕಾರ್ಯಾವಸಾನಕಂ ।
ವಿಧಾಯ ವಾ ನ ವಾ ಪಶ್ಚಾದ್ಬಹಿರ್ಯಾಗಂ ಸಮಾಚರೇತ್ ॥ ೨ ॥

---

### ಇಪ್ಪತ್ತಮೂರನೆಯ ಅಧ್ಯಾಯವು

೧. ಉಪಮನ್ಯುವಿಂತೆಂದನು—ಶಿವಾಗಮಶಾಸ್ತ್ರದಲ್ಲಿ, ಶಿವನೇ ದೇವಿಗೆ ಹೇಳಿದ ಪೂಜಾಗಮವಿಧಾನದ ವಿವರಣೆಯನ್ನು ಸಂಗ್ರಹಿಸಿ ಹೇಳುವೆನು.

೨. ಮನಸ್ಸಿನಲ್ಲಿಯೇ ಪೂಜಾರೂಪವಾದ ಯಾಗವನ್ನು ಅಗ್ನಿ ಕಾರ್ಯಾಂಕವಾಗಿ ಮಾಡಿ ಅಥವಾ ಬಹಿರ್ಯಾಗರೂಪವಾದ ಪೂಜೆಯನ್ನು ಮಾಡಬೇಕು.

ತತ್ರ ದ್ರವ್ಯಾಣಿ ಮನಸಾ ಕಲ್ಪಯಿತ್ವಾ ವಿಶೋಧ್ಯ ಚ ।
ಧ್ಯಾತ್ವಾ ವಿನಾಯಕಂ ದೇವಂ ಪೂಜಯಿತ್ವಾ ವಿಧಾನತಃ ॥ ೩ ॥

ದಕ್ಷಿಣೇ ಚೋತ್ತರೇ ಚೈವ ನಂದೀಶಂ ಸುಯಶಂ ತಥಾ ।
ಆರಾಧ್ಯ ಮನಸಾ ಸಮ್ಯಗಾಸನಂ ಕಲ್ಪಯೇದ್ಬುಧಃ ॥ ೪ ॥

ಆರಾಧನಾದಿಕೈರ್ಯುಕ್ತಸ್ಸಿಂಹಯೋಗಾಸನಾದಿಕಂ ।
ಪದ್ಮಾಸನಂ ವಾ ವಿಮಲಂ ತತ್ತ್ವತ್ರಯಸಮನ್ವಿತಂ ॥ ೫ ॥

ತಸ್ಯೋಪರಿ ಶಿವಂ ಧ್ಯಾಯೇತ್ಸಾಂಬಂ ಸರ್ವಮನೋಹರಂ ।
ಸರ್ವಲಕ್ಷಣಸಂಪನ್ನಂ ಸರ್ವಾವಯವಶೋಭನಂ ॥ ೬ ॥

ಸರ್ವಾತಿಶಯಸಂಯುಕ್ತಂ ಸರ್ವಾಭರಣಭೂಷಿತಂ ।
ರಕ್ತಾಸ್ಯಪಾಣಿಚರಣಂ ಕುಂದಚಂದ್ರಸ್ಮಿತಾನನಂ ॥ ೭ ॥

---

೩-೪. ಅಭ್ಯಂತರ ಪೂಜೆಯ ವಿಷಯದಲ್ಲಿ ಬೇಕಾದ ಪದಾರ್ಥಗಳನ್ನು ಮನಸ್ಸಿನಲ್ಲಿಯೇ ಕಲ್ಪಿಸಿ ಅವುಗಳನ್ನು ಪರಿಶುದ್ಧಿಮಾಡಿ ಗಣಪತಿಯನ್ನು ಮಾಡಿ ಶಿವನ ದಕ್ಷಿಣದಿಕ್ಕಿನಲ್ಲಿ ವಿಧಿಗನುಸಾರವಾಗಿ ಪೂಜಿಸಿ ಉತ್ತರದಿಕ್ಕಿನಲ್ಲಿ ಮಹಾ ಯಶಸ್ಸನ್ನು ಪಡೆದ ನಂದೀಶ್ವರನನ್ನು ಪೂಜಿಸಿ ಬಳಿಕ ಮನಸ್ಸಿನಲ್ಲಿಯೇ ಉತ್ತ ಮವಾದ ಪೀಠವನ್ನು ಶಿವನಿಗಾಗಿ ಕಲ್ಪಿಸಬೇಕು.

೫. ಆ ಪೀಠವು ಪೂಜಾಯೋಗ್ಯವಾದ ಸಿಂಹಾಸನವಾಗಲಿ ಯೋಗಾಸನವಾಗಲಿ, ನಿರ್ಮಲವಾದ ಪದ್ಮಾಸನವಾಗಲಿ, ಆಗಬಹುದು. ಅದು ಪೃಥಿವೀ ಅಪ್ಪು ತೇಜಸ್ಸು ಈ ಮೂರು ತತ್ತ್ವಗಳಿಂದ ಕೂಡಿಮದಾಗಿರಬೇಕು. ಹೀಗೆ ಮನಸ್ಸಿನಲ್ಲಿಯೇ ಕಲ್ಪಿಸಿದ ಆಸನದಲ್ಲಿ ದೇವೀಸಹಿತನಾದ ಶಿವನನ್ನು ಮನೋಹರವಾದ ಮುಂದೆ ವರ್ಣಿಸಿರುವ ಮೂರ್ತಿಯುಳ್ಳವನಂತೆ ಮನಸ್ಸಿನಲ್ಲಿ ಭಾವಿಸಬೇಕು.

೬-೮. ಆ ಮನಸ್ಸಿನಲ್ಲಿ ಕಲ್ಪಿಸಿದ ಶಿವಮೂರ್ತಿಯು ಸಮಸ್ತ ಶುಭ ಲಕ್ಷಣಗಳಿಂದ ಕೂಡಿದುದಾಗಿ ಸಕಲಾವಯವಸೌಂದರ್ಯದಿಂದ ಇತರ ಎಲ್ಲಾ ಮೂರ್ತಿಗಳಿಗಿಂತ ಶ್ರೇಷ್ಠವಾದುದೂ, ಸಕಲಾಭರಣಗಳನ್ನೂ ಧರಿಸಿದುದೂ, ಆಗಿ

**ಶುದ್ಧಸ್ಫಟಿಕಸಂಕಾಶಂ ಫುಲ್ಲಪದ್ಮತ್ರಿಲೋಚನಂ ।**
**ಚತುರ್ಭುಜಮುದಾರಾಂಗಂ ಚಾರುಚಂದ್ರಕಲಾಧರಂ ॥ ೮ ॥**

**ವರದಾಭಯಹಸ್ತಂ ಚ ಮೃಗಟಂಕಧರಂ ಹರಂ ।**
**ಭುಜಂಗಹಾರವಲಯಂ ಚಾರುನೀಲಗಲಾಂತರಂ ॥ ೯ ॥**

**ಸರ್ವೋಪಮಾನರಹಿತಂ ಸಾನುಗಂ ಸಪರಿಚ್ಛದಂ ।**
**ತತಃ ಸಂಚಿಂತಯೇತ್ತಸ್ಯ ವಾಮಭಾಗೇ ಮಹೇಶ್ವರೀಂ ॥ ೧೦ ॥**

**ಪ್ರಫುಲ್ಲೋತ್ಪಲಪತ್ರಾಭಾಂ ವಿಸ್ತೀರ್ಣಾಯತಲೋಚನಾಂ ।**
**ಪೂರ್ಣಚಂದ್ರಾಭವದನಾಂ ನೀಲಕುಂಚಿತಮೂರ್ಧಜಾಂ ॥ ೧೧ ॥**

---

ರಬೇಕು. ಕೈಗಳು, ಬಾಯಿ, ಕಾಲುಗಳು, ಕೆಂಪುಬಣ್ಣದಿಂದಿರಬೇಕು. ಮೊಲ್ಲೆಯಮೊಗ್ಗಿನಂತೆಯೂ, ಚಂದ್ರನಂತೆಯೂ, ಹೊಳೆಯುವ ನಗುಮುಖದಿಂದ ಕೂಡಿರಬೇಕು. ಶರೀರವೆಲ್ಲವೂ ಶುದ್ಧವಾದ ಸ್ಫಟಿಕವಂತೆ ಪ್ರಕಾಶಿಸುತ್ತಿರಬೇಕು. ಕಮಲವಳದಂತೆ ವಿಕಸಿತವಾದ ಮೂರು ಕಣ್ಣುಗಳೂ, ನಾಲ್ಕುತೋಳುಗಳೂ, ಸರಳವಾದ ಅವಯುವಗಳೂ, ಇರಬೇಕು. ಮನೋಹರವಾದ ಚಂದ್ರಕಲೆಯನ್ನು ತಲೆಯಲ್ಲಿ ಧರಿಸಬೇಕು.

೯. ಆ ಮೂರ್ತಿಯು ನಾಲ್ಕು ಕೈಗಳಲ್ಲಿ ವರದ ಅಭಯಮುದ್ರೆಗಳೂ, ಮೃಗಟಂಕಾಯುಧಗಳೂ ಇರಬೇಕು. ಕುತ್ತಿಗೆಯು ನೀಲಿ ಬಣ್ಣವಾಗಿ ಸರ್ಪದ ಹಾರವನ್ನು ಧರಿಸುದುದಾಗಿರಬೇಕು. ಈ ಮೂರ್ತಿಗೆ ಸಮಾನವಾದ ಮತ್ತೊಂದು ಮೂರ್ತಿಯು ಇರಬಾರದು. ಶಿವನ ಸುತ್ತಲೂ ಅನುಯಾಯಿಗಳೂ ಪರಿವಾರವೂ ಇರಬೇಕು. ಈರೀತಿ ಶಿವನ ಮೂರ್ತಿಯನ್ನು ಧ್ಯಾನಿಸಿ,

೧೦-೧೨. ಆಮೇಲೆ ಆ ಶಿವನ ಎಡಭಾಗದಲ್ಲಿ ಅರಳಿದ ನೈದಿಲೆಯ ಬಣ್ಣದಂತೆ ಕಾಂತಿಯುಕ್ತವಾದ ವಿಸ್ತಾರವೂ, ಉದ್ದವೂ ಆದ ಕಣ್ಣುಗಳುಳ್ಳ ಪೂರ್ಣಚಂದ್ರನಂತಿರುವ ಮುಖವೂ, ನೀಲಿಯ ಬಣ್ಣದ ಗುಂಗುರುಕೂದಲುಗಳೂ ಉಳ್ಳ ಅರ್ಧಚಂದ್ರನನ್ನು ತಲೆಯಲ್ಲಿ ಧರಿಸಿರುವ ಗುಂಡಾಗಿಯೂ, ದಪ್ಪವಾಗಿ ಎತ್ತರವಾಗಿಯೂ, ನಯವಾಗಿಯೂ ಇರುವ ಸ್ತನಗಳಿಂದ ಕೂಡಿದ ಸಣ್ಣ

**ನೀಲೋತ್ಪಲದಳಪ್ರಖ್ಯಾಂ ಚಂದ್ರಾರ್ಧಕೃತಶೇಖರಾಂ ।**
**ಅತಿವೃತ್ತಘನೋತ್ತುಂಗಸ್ನಿಗ್ಧಪೀನಪಯೋಧರಾಂ ॥ ೧೨ ॥**

**ತನುಮಧ್ಯಾಂ ಪೃಥುಶ್ರೋಣೀಂ ಪೀತಸೂಕ್ಷ್ಮವರಾಂಬರಾಂ ।**
**ಸರ್ವಾಭರಣಸಂಪನ್ನಾಂ ಲಲಾಟತಿಲಕೋಜ್ಜ್ವಲಾಂ ॥ ೧೩ ॥**

**ವಿಚಿತ್ರಪುಷ್ಪಸಂಕೀರ್ಣಕೇಶಪಾಶೋಪಶೋಭಿತಾಂ ।**
**ಸರ್ವತೋನುಗುಣಾಕಾರಾಂ ಕಿಂಚಿಲ್ಲಜ್ಜಾನತಾನನಾಂ ॥ ೧೪ ॥**

**ಹೇಮಾರವಿಂದಂ ವಿಲಸದ್ದಧಾನಾಂ ದಕ್ಷಿಣೇ ಕರೇ ।**
**ದಂಡವಚ್ಚಾಪರಂ ಹಸ್ತೇ ನ್ಯಸ್ಯಾಸೀನಾಂ ಮಹಾಸನೇ ॥ ೧೫ ॥**

**ಪಾಶವಿಚ್ಛೇದಿಕಾಂ ಸಾಕ್ಷಾತ್ಸಚ್ಚಿದಾನಂದರೂಪಿಣೀಂ ।**
**ಏವಂ ದೇವಂ ಚ ದೇವೀಂ ಚ ಧ್ಯಾತ್ವಾಸನವರೇ ಶುಭೇ ॥ ೧೬ ॥**

---

ಸೊಂಟವುಳ್ಳ, ದಪ್ಪವಾದ ಪೃಷ್ಠಪ್ರದೇಶಗಳುಳ್ಳ, ತೆಳ್ಳಗಿರುವ ಪೀತಾಂಬರವನ್ನು ಧರಿಸಿದ ದೇವಿಯನ್ನು ಧ್ಯಾನಿಸಬೇಕು.

೧೩-೧೫. ಈ ದೇವಿಯು ಸಕಲಾಭರಣಗಳನ್ನೂ ಧರಿಸಿ ಹಣೆಯಲ್ಲಿ ಪ್ರಕಾಶಿಸುವ ತಿಲಕವನ್ನಿಟ್ಟು ತಲೆಯಲ್ಲಿ ಬಗೆಬಗೆಯ ಹೂಗಳನ್ನು ಮುಡಿದುಕೊಂಡು ಶಿವನಿಗೆ ತಕ್ಕ ಆಕಾರದಿಂದ ಕೂಡಿ ಸ್ವಲ್ಪ ನಾಚಿಕೆಯಿಂದ ಬಗ್ಗಿದ ಮುಖವುಳ್ಳವಳಾಗಿ, ಬಲಗೈಯಲ್ಲಿ ಮನೋಹರವಾದ ಚಿನ್ನದ ಕಮಲವನ್ನು ಧರಿಸಿ ಎಡಗೈಯನ್ನು ದಂಡಾಕಾರವಾಗಿ ಬಿಟ್ಟು ಪೀಠದಲ್ಲಿ ಕುಳಿತಿರುವಂತೆಯೂ, ಮನುಜರ ಸಂಸಾರಪಾಶವನ್ನು ನಾಶಮಾಡುವ ನಿತ್ಯವಾಗಿರುವ ಜ್ಞಾನಾನಂದ ಸ್ವರೂಪವಾಗಿರುವಂತೆಯೂ, ಭಾವಿಸಬೇಕು.

೧೬. ಹೀಗೆ ಶ್ರೇಷ್ಠವೂ, ಮಂಗಳಕರವೂ ಆದ ಪೀಠದಲ್ಲಿ ಶಿವನನ್ನೂ ದೇವಿಯನ್ನೂ ಧ್ಯಾನಮಾಡಿ ಭಕ್ತಿಯಿಂದ ಸಕಲೋಪಚಾರಗಳನ್ನೂ ಕಲ್ಪಿಸಿ ಮನೋಭಾವವೆಂಬ ಹೂಗಳಿಂದಲೇ ಚೆನ್ನಾಗಿ ಪೂಜಿಸಬೇಕು.

೧೭-೧೮. ಅಥವಾ ಬಹಿರ್ಯಾಗಕ್ಕಾಗಿ ಯಾವದಾದರೊಂದು ಮೂರ್ತಿಯನ್ನು ಅಂದರೆ ಶಿವಸಂಬಂಧವಾದ ಸದಾಶಿವಮೂರ್ತಿ, ಮಾಹೇಶ್ವರಮೂರ್ತಿ

**ಸರ್ವೋಪಚಾರವದ್ಭಕ್ತ್ಯಾ ಭಾವಪುಷ್ಪೈಃ ಸಮರ್ಚಯೇತ್ ।**
**ಅಥವಾ ಪರಿಕಲ್ಪೈ್ಯವಂ ಮೂರ್ತಿಮನ್ಯತಮಾಂ ವಿಭೋಃ ॥ ೧೭ ॥**

**ಶೈವೀಂ ಸದಾಶಿವಾಖ್ಯಾಂ ವಾ ತಥಾ ಮಾಹೇಶ್ವರೀಂ ಪರಾಂ ।**
**ಷಡ್ವಿಂಶಕಾಭಿಧಾನಾಂ ವಾ ಶ್ರೀಕಂಠಾಖ್ಯಾಮಥಾಪಿ ವಾ ॥ ೧೮ ॥**

**ಮಂತ್ರನ್ಯಾಸಾದಿಕಾಂ ಚಾऽಪಿ ಕೃತ್ವಾ ಸ್ವಸ್ಯಾಂ ತನೌ ಯಥಾ ।**
**ಅಸ್ಯಾಂ ಮೂರ್ತೌ ಮೂರ್ತಿಮಂತಂ ಶಿವಂ ಸದಸತಃ ಪರಂ ॥ ೧೯ ॥**

**ಧ್ಯಾತ್ವಾ ಬಾಹ್ಯಕ್ರಮೇಣೈವ ಪೂಜಾಂ ನಿರ್ವರ್ತಯೇದ್ಧಿಯಾ ।**
**ಸಮಿದಾಜ್ಯಾದಿಭಿಃ ಪಶ್ಚಾನ್ನಾಭೌ ಹೋಮಂ ಚ ಭಾವಯೇತ್ ॥ ೨೦ ॥**

**ಭ್ರೂಮಧ್ಯೇ ಚ ಶಿವಂ ಧ್ಯಾಯೇಚ್ಛುದ್ಧದೀಪಶಿಖಾಕೃತಿಂ ।**
**ಇತ್ಥಮಂಗೇ ಸ್ವತಂತ್ರೇ ವಾ ಯೋಗೇ ಧ್ಯಾನಮಯೇ ಶುಭೇ ॥ ೨೧ ॥**

---

ಶ್ರೀಕಂಠಮೂರ್ತಿ ಮುಂತಾದ ಇಪ್ಪತ್ತಾರು ಹೆಸರುಗಳಿಂದ ಕೂಡಿದ ಮೂರ್ತಿಗಳಲ್ಲಿ ಒಂದನ್ನು ಸ್ಥೂಲವಾದ ಶಿವಾದಿಗಳಲ್ಲಿ ಕಲ್ಪಿಸಿಕೊಂಡು ಪೂಜಿಸಬೇಕು.

೧೯. ತನ್ನ ಶರೀರದಲ್ಲಿ ಹೇಗೋ ಹಾಗೆಯೇ, ಈ ಮೂರ್ತಿಗಳಲ್ಲಿಯೂ, ಮಂತ್ರನ್ಯಾಸಾದಿಗಳನ್ನು ಮಾಡಿ ಸತ್ ಮತ್ತು ಅಸತ್ಪದಾರ್ಥಗಳಿಗೆ ಭಿನ್ನನಾದ ಪರಶಿವನನ್ನು ಈ ಮೂರ್ತಿಯಲ್ಲಿ ಧ್ಯಾನಮಾಡಿ ಮನಃಪೂರ್ವಕವಾಗಿ ಬಾಹ್ಯಪೂಜೆಯನ್ನು ಕ್ರಮವಾಗಿ ಮಾಡಬೇಕು.

೨೦-೨೨. ಆಮೇಲೆ ಸಮಿತ್ತು ತುಪ್ಪ ಮುಂತಾದ ವಸ್ತುಗಳಿಂದ ತನ್ನ ಹೊಕ್ಕಳಿನ ಪ್ರದೇಶದಲ್ಲಿ ಹೋಮಮಾಡಿದಂತೆ ಭಾವಿಸಬೇಕು. ಹುಬ್ಬುಗಳ ನಡುವೆ ಇರುವ ಪ್ರದೇಶದಲ್ಲಿ ಪರಿಶುದ್ಧವಾದ ದೀಪದಶಿಖೆಯಂತೆ ಪ್ರಕಾಶಿಸುತ್ತಿರುವ ಶಿವನನ್ನು ಧ್ಯಾನಮಾಡಬೇಕು. ಈರೀತಿಯಲ್ಲಿ ತನ್ನ ಮನಸ್ಸಿನಲ್ಲಿ ಶುಭವಾದ ಧ್ಯಾನರೂಪವಾದ ಯೋಗದಿಂದಲೂ ಅಥವಾ ಬಾಹ್ಯಪೂಜೆ

**ಅಗ್ನಿಕಾರ್ಯಾವಸಾನಂ ಚ ಸರ್ವತ್ರೈವ ಸಮೋ ವಿಧಿಃ ।**
**ಅಥ ಚಿಂತಾಮಯಂ ಸರ್ವಂ ಸಮಾಪ್ಯಾರಾಧನಕ್ರಮಂ ॥ ೨೨ ॥**

**ಲಿಂಗೇ ಚ ಪೂಜಯೇದ್ದೇವಂ ಸ್ಥಂಡಿಲೇವಾನಲೇऽಪಿ ವಾ ॥ ೨೩ ॥**

**ಇತಿ ಶ್ರೀಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-**
**ಮುತ್ತರಭಾಗೇ ಪೂಜಾವಿಧಾನವ್ಯಾಖ್ಯಾನವರ್ಣನಂ ನಾಮ**
**ತ್ರಯೋವಿಂಶೋऽಧ್ಯಾಯಃ**

---

ಯಿಂದಲೂ, ಅಗ್ನಿಕಾರ್ಯಪರ್ಯಂತವಾಗಿ ಮಾಡುವ ಈ ಪೂಜಾವಿಧಿಯು ಸರ್ವತ್ರ ಸಮಾನವಾದುದಾಗಿರುವುದು.

೨೩. ಹೀಗೆ ಮನಸ್ಸಿನಲ್ಲಿ ಚಿಂತಿಸುವುದರಿಂದ ಸಮಸ್ತ ಪೂಜಾಕ್ರಮವನ್ನೂ ಪೂರ್ಣಮಾಡಿ ಲಿಂಗದಲ್ಲಿಯಾಗಲಿ, ಸ್ಥಂಡಿಲದಲ್ಲಿಯಾಗಲಿ, ಅಗ್ನಿಯಲ್ಲಾಗಲಿ ಬಾಹ್ಯಪೂಜಾಕ್ರಮದಿಂದ ಶಿವನನ್ನು ಪೂಜಿಸಬಹುದು.

ಇಲ್ಲಿಗೆ ಶಿವಮಹಾಪುರಾಣದ ವಾಯವೀಯಸಂಹಿತೆಯ ಉತ್ತರಭಾಗದಲ್ಲಿ
ಪೂಜಾವಿಧಾನವನ್ನು ವಿವರಿಸುವ ಇಪ್ಪತ್ತಮೂರನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮಹಾ ಪುರಾಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ಚತುರ್ವಿಂಶೋಽಧ್ಯಾಯಃ

---

॥ ಉಪಮನ್ಯುರುವಾಚ ॥

ಪ್ರೋಕ್ಷಯೇನ್ಮೂಲಮಂತ್ರೇಣ ಪೂಜಾಸ್ಥಾನಂ ವಿಶುದ್ಧಯೇ ।
ಗಂಧಚಂದನತೋಯೇನ ಪುಷ್ಪಂ ತತ್ರ ವಿನಿಕ್ಷಿಪೇತ್ ॥ ೧ ॥

ಅಸ್ತ್ರೇಣೋತ್ಸಾರ್ಯ ವೈ ವಿಘ್ನಾನವಗುಂಠ್ಯ ಚ ವರ್ಮಣಾ ।
ಅಸ್ತ್ರಂ ದಿಕ್ಷು ಪ್ರವಿನ್ಯಸ್ಯ ಕಲ್ಪಯೇದರ್ಚನಾಭುವಂ ॥ ೨ ॥

---

## ಇಪ್ಪತ್ತನಾಲ್ಕನೆಯ ಅಧ್ಯಾಯವು

೧. ಉಪಮನ್ಯುವು ಹೇಳಿದನು—ಬಾಹ್ಯಪೂಜಾಕ್ರಮದಲ್ಲಿ ಮೊದಲು ಪೂಜಾಸ್ಥಾನವು ಶುದ್ಧಿಯಾಗುವುದಕ್ಕಾಗಿ ಮೂಲಮಂತ್ರವಾದ ಶಿವಪಂಚಾಕ್ಷರೀ ಮಂತ್ರವನ್ನುಚ್ಚರಿಸಿ ಮಿಶ್ರಿತವಾದ ಶ್ರೀಗಂಧ ನೀರಿನಿಂದ ಪೂಜಾಸ್ಥಾನವನ್ನು ಪ್ರೋಕ್ಷಿಸಿ ಅಲ್ಲಿ ಹೂಗಳನ್ನು ಚೆಲ್ಲಬೇಕು.

೨. ಅಸ್ತ್ರಮಂತ್ರ ಮತ್ತು ನ್ಯಾಸಗಳಿಂದ ವಿಘ್ನಗಳನ್ನು ನಿವಾರಣೆಮಾಡಿ, ಕವಚಮಂತ್ರನ್ಯಾಸಗಳಿಂದ ಮುಚ್ಚಿ ದಿಕ್ಕುಗಳಲ್ಲಿ ಅಸ್ತ್ರನ್ಯಾಸಗಳನ್ನು ಮಾಡಿ ಪೂಜಾಭೂಮಿಯನ್ನು ಸಿದ್ಧಪಡಿಸಿಕೊಳ್ಳಬೇಕು.

ತತ್ರ ದರ್ಭಾನ್ಪರಿಸ್ತೀರ್ಯ ಕ್ಷಾಲಯೇತ್ಪ್ರೋಕ್ಷಣಾದಿಭಿಃ ।
ಸಂಶೋಧ್ಯ ಸರ್ವಪಾತ್ರಾಣಿ ದ್ರವ್ಯಶುದ್ಧಿಂ ಸಮಾಚರೇತ್ ॥ ೩ ॥

ಪ್ರೋಕ್ಷಣೀಮರ್ಘ್ಯಪಾತ್ರಂ ಚ ಪಾದ್ಯಪಾತ್ರಮತಃಪರಂ ।
ತಥೈವಾಚಮನೀಯಸ್ಯ ಪಾತ್ರಂ ಚೇತಿ ಚತುಷ್ಟಯಂ ॥ ೪ ॥

ಪ್ರಕ್ಷಾಳ್ಯ ಪ್ರೋಕ್ಷ್ಯ ವೀಕ್ಷ್ಯಾಥ ಕ್ಷಿಪೇತ್ತೇಷು ಜಲಂ ಶಿವಂ ।
ಪುಣ್ಯದ್ರವ್ಯಾಣಿ ಸರ್ವಾಣಿ ಯಥಾಲಾಭಂ ವಿನಿಕ್ಷಿಪೇತ್ ॥ ೫ ॥

ರತ್ನಾನಿ ರಜತಂ ಹೇಮಗಂಧಪುಷ್ಪಾಕ್ಷತಾದಯಃ ।
ಫಲಪಲ್ಲವದರ್ಭಾಂಶ್ಚ ಪುಣ್ಯದ್ರವ್ಯಾಣ್ಯನೇಕಧಾ ॥ ೬ ॥

ಸ್ನಾನೋದಕೇ ಸುಗಂಧಾದಿ ಪಾನೀಯೇ ಚ ವಿಶೇಷತಃ ।
ಶೀತಲಾನಿ ಮನೋಜ್ಞಾನಿ ಕುಸುಮಾದೀನಿ ನಿಕ್ಷಿಪೇತ್ ॥ ೭ ॥

---

೩. ಪೂಜಾಭೂಮಿಯಲ್ಲಿ ದರ್ಭೆಗಳನ್ನು ಹಾಸಿ ನೀರನ್ನು ಪ್ರೋಕ್ಷಿಸುವುದೇ ಮುಂತಾದುವುಗಳಿಂದ ಆ ಸ್ಥಳಗಳನ್ನು ಶುದ್ಧಿಮಾಡಿ ಸಮಸ್ತಪೂಜಾಪಾತ್ರೆಗಳನ್ನೂ ತೊಳೆದು ಪೂಜಾದ್ರವ್ಯಗಳನ್ನು ಮಂತ್ರಪೂರ್ವಕವಾಗಿ ಪ್ರೋಕ್ಷಿಸಿ ಶುದ್ಧಮಾಡಬೇಕು.

೪–೫. ಪ್ರೋಕ್ಷಣಪಾತ್ರೆ, ಅರ್ಘ್ಯಪಾತ್ರೆ, ಪಾದ್ಯಪಾತ್ರೆ, ಆಚಮನಪಾತ್ರೆ ಎಂದು ನಾಲ್ಕು ಪಾತ್ರೆಗಳನ್ನು ತೊಳೆದು ಮಂತ್ರದಿಂದ ಪ್ರೋಕ್ಷಿಸಿ ಶುದ್ಧ್ಯರ್ಥವಾಗಿ ನೋಡಿ ಅದರಲ್ಲಿ ಶುದ್ಧವಾದ ನೀರನ್ನು ತುಂಬಬೇಕು ಮತ್ತು ಅದರೊಳಗೆ ದೊರೆತಷ್ಟು ಪುಣ್ಯಕರವಾದ ಶುದ್ಧವಸ್ತುಗಳನ್ನು ಹಾಕಬೇಕು.

೬. ರತ್ನಗಳು, ಬೆಳ್ಳಿ, ಚಿನ್ನ, ಗಂಧ, ಹೂ, ಅಕ್ಷತೆ, ಫಲ, ಚಿಗುರು, ದರ್ಭೆ ಇವೇ ಮೊದಲಾದುವು ಪುಣ್ಯದ್ರವ್ಯಗಳು. ಇವುಗಳನ್ನು ಹಾಕಬೇಕು.

೭. ಸ್ನಾನಾರ್ಥವಾದ ನೀರಿನಲ್ಲಿಯೂ, ಕುಡಿಯುವುದಕ್ಕೆ ಉಪಯೋಗಿಸುವ ನೀರಿನಲ್ಲಿಯೂ, ಸುಗಂಧವೂ, ತಂಪಾದುದೂ ಆದ ಮನೋಹರವಾದ ಹೂಗಳನ್ನೂ, ಇತರ ವಸ್ತುಗಳನ್ನೂ ಹಾಕಬೇಕು.

**ಉಶೀರಂ ಚಂದನಂ ಚೈವ ಪಾದ್ಯೇ ತು ಪರಿಕಲ್ಪಯೇತ್ ।**
**ಜಾತಿಕಂಕೋಲಕರ್ಪೂರಬಹುಮೂಲತಮಾಲಕಾನ್ ॥ ೮ ॥**

**ಕ್ಷಿಪೇದಾಚಮನೀಯೇ ಚ ಚೂರ್ಣಯಿತ್ವಾ ವಿಶೇಷತಃ ।**
**ಏಲಾಂ ಪಾತ್ರೇಷು ಸರ್ವೇಷು ಕರ್ಪೂರಂ ಚಂದನಂ ತಥಾ ॥ ೯ ॥**

**ಕುಶಾಗ್ರಾಣ್ಯಕ್ಷತಾಂಶ್ಚೈವ ಯವವ್ರೀಹಿತಿಲಾನಪಿ ।**
**ಆಜ್ಯಸಿದ್ಧಾರ್ಥಪುಷ್ಪಾಣಿ ಭಸಿತಂ ಚಾರ್ಘ್ಯಪಾತ್ರಕೇ ॥ ೧೦ ॥**

**ಕುಶಪುಷ್ಪಯವವ್ರೀಹಿಬಹುಮೂಲತಮಾಲಕಾನ್ ।**
**ಪ್ರಕ್ಷಿಪೇತ್ಪ್ರೋಕ್ಷಣೇಪಾತ್ರೇ ಭಸಿತಂ ಚ ಯಥಾಕ್ರಮಂ ॥ ೧೧ ॥**

**ಸರ್ವತ್ರ ಮಂತ್ರಂ ವಿನ್ಯಸ್ಯ ಕರ್ವಣಾವೇಷ್ಟ್ಯ ಬಾಹ್ಯತಃ ।**
**ಪಶ್ಚಾದಸ್ತ್ರೇಣ ಸಂರಕ್ಷ್ಯ ಧೇನುಮುದ್ರಾಂ ಪ್ರದರ್ಶಯೇತ್ ॥ ೧೨ ॥**

---

೮. ಪಾದ್ಯಪಾತ್ರೆಯಲ್ಲಿ ಲಾಮಂಚ, ಶ್ರೀಗಂಧ ಇವುಗಳನ್ನು ಹಾಕಬೇಕು. ಆಚಮನೀಯಪಾತ್ರೆಯಲ್ಲಿ ಜಾಯಿಕಾಯಿ, ಕಂಕೋಲ, ಪಚ್ಚಕರ್ಪೂರ, ಚಿತ್ರಮೂಲ ಹೊಂಗೆ ಇವುಗಳನ್ನು ಚೂರ್ಣಮಾಡಿ ಆ ಚೂರ್ಣವನ್ನು ಹಾಕಬೇಕು.

೯-೧೦. ಎಲ್ಲ ಪಾತ್ರೆಗಳಲ್ಲಿಯೂ, ಏಲಕ್ಕಿ ಹಾಕಬೇಕು. ಅರ್ಘ್ಯಪಾತ್ರೆಯಲ್ಲಿ ಪಚ್ಚಕರ್ಪೂರ, ಶ್ರೀಗಂಧ, ದರ್ಭೆ. ಅಕ್ಷತೆ, ಯವೆ, ಭತ್ತ, ಎಳ್ಳು, ಬಿಳೀಸಾಸುವೆ, ಹೂ, ಭಸ್ಮ ಇವುಗಳನ್ನು ಹಾಕಬೇಕು.

೧೧. ಪ್ರೋಕ್ಷಣಪಾತ್ರೆಯಲ್ಲಿ ದರ್ಭೆ, ಹೂ, ಯವೆ, ಭತ್ತ, ಚಿತ್ರಮೂಲ, ಹೊಂಗೆಭಸ್ಮ ಇವುಗಳನ್ನು ಕ್ರಮವರಿತು ಹಾಕಬೇಕು.

೧೨. ಸಮಸ್ತ ಪೂಜಾಪಾತ್ರೆಗಳಿಗೂ ಮಂತ್ರನ್ಯಾಸವನ್ನು ಮಾಡಿ ಕವಚಮಂತ್ರದಿಂದ (ಆಚ್ಛಾದಿಸಿ) ಮೇಲುಭಾಗವನ್ನು ಮುಚ್ಚಿ ಆಮೇಲೆ ಅಸ್ತ್ರಮಂತ್ರಮುದ್ರೆಗಳಿಂದ ರಕ್ಷಿಸಿ ಧೇನುಮುದ್ರೆಯನ್ನು ತೋರಿಸಬೇಕು.

ಪೂಜಾದ್ರವ್ಯಾಣಿ ಸರ್ವಾಣಿ ಪ್ರೋಕ್ಷಣೀಪಾತ್ರವಾರಿಣಾ ।
ಸಂಪ್ರೋಕ್ಷ್ಯ ಮೂಲಮಂತ್ರೇಣ ಶೋಧಯೇದ್ವಿಧಿವತ್ತತಃ ॥ ೧೩ ॥

ಪಾತ್ರಾಣಾಂ ಪ್ರೋಕ್ಷಣೀಮೇಕಾಮಲಾಭೇ ಸರ್ವಕರ್ಮಸು ।
ಸಾಧಯೇದರ್ಘ್ಯಮದ್ಭಿಸ್ತತ್ಸಾಮಾನ್ಯಂ ಸಾಧಕೋತ್ತಮಃ ॥ ೧೪ ॥

ತತೋ ವಿನಾಯಕಂ ದೇವಂ ಭಕ್ಷ್ಯಭೋಜ್ಯಾದಿಭಿಃ ಕ್ರಮಾತ್ ।
ಪೂಜಯಿತ್ವಾ ವಿಧಾನೇನ ದ್ವಾರಪಾರ್ಶ್ವೇಽಥ ದಕ್ಷಿಣೇ ॥ ೧೫ ॥

ಅಂತಃಪುರಾಧಿಪಂ ಸಾಕ್ಷಾನ್ನಂದಿನಂ ಸಮ್ಯಗರ್ಚಯೇತ್ ।
ಚಾಮೀಕರಾಚಲಪ್ರಖ್ಯಂ ಸರ್ವಾಭರಣಭೂಷಿತಂ ॥ ೧೬ ॥

ಬಾಲೇಂದುಮುಕುಟಂ ಸೌಮ್ಯಂ ತ್ರಿನೇತ್ರಂ ಚ ಚತುರ್ಭುಜಂ ।
ದೀಪ್ತಶೂಲಮೃಗೀಟಂಕತಿಗ್ಮವೇತ್ರಧರಂ ಪ್ರಭುಂ ॥ ೧೭ ॥

---

೧೩. ಸಮಸ್ತ ಪೂಜಾದ್ರವ್ಯಗಳನ್ನೂ, ಪ್ರೋಕ್ಷಿಣೀಪಾತ್ರೆಯ ನೀರಿನಿಂದ ಪ್ರೋಕ್ಷಿಸಿ ಮೂಲಮಂತ್ರದಿಂದ ವಿಧಿಗನುಸಾರವಾಗಿ ಅವುಗಳನ್ನು ಶುದ್ಧಿಮಾಡಬೇಕು.

೧೪. ಅನೇಕ ಪಾತ್ರೆಗಳು ಸಿಕ್ಕದಿರುವ ಸಂದರ್ಭದಲ್ಲಿ, ಪೂಜಾಕರ್ಮದಲ್ಲಿ ನಿಪುಣನಾದ ಮನುಷ್ಯನು ಪ್ರೋಕ್ಷಣಪಾತ್ರೆಯೊಂದರಿಂದಲೇ ಎಲ್ಲಾಕಾರ್ಯಗಳನ್ನೂ ಸಾಧಿಸಬಹುದು. ಸಾಮಾನ್ಯವಾಗಿ ಅರ್ಘ್ಯವನ್ನು ನೀರಿನಿಂದಲೇ ಕೊಡಬಹುದು.

೧೫. ಆಮೇಲೆ ಶಿವಮಂದಿರದ ಬಾಗಿಲಿನ ದಕ್ಷಿಣದಿಕ್ಕಿನಲ್ಲಿ ವಿನಾಯಕನನ್ನು ವಿಧಿವತ್ತಾಗಿ ಪೂಜಿಸಿ ಭಕ್ಷ್ಯಭೋಜ್ಯಾದಿಗಳನ್ನು ಸಮರ್ಪಿಸಬೇಕು.

೧೬-೧೮. ಬಳಿಕ ಬಾಗಿಲಿನ ಉತ್ತರಭಾಗದಲ್ಲಿರುವ ಶಿವನ ಅಂತಃಪುರಕ್ಕೆ ಅಧಿಪತಿಯಾದ ನಂದಿಯನ್ನೂ ಪೂಜಿಸಬೇಕು. ಆ ನಂದಿಗೆ ಚಿನ್ನದಂತೆ ಮೈಬಣ್ಣವೂ, ಮೇರುಪರ್ವತಕ್ಕೆ ಸಮಾನವಾದ ಶರೀರವೂ ಇದ್ದು ಸಮಸ್ತ ಆಭರಣಗಳನ್ನೂ ಧರಿಸಿರುವನು. ಇವನಿಗೆ ಸೌಮ್ಯಾಕಾರವೂ, ಮೂರುಕಣ್ಣುಗಳೂ, ನಾಲ್ಕುತೋಳುಗಳೂ ಇರುವುವು ಕಿರೀಟದಲ್ಲಿ ಚಂದ್ರನನ್ನು ಅಲಂಕರಿಸಿ

**ಚಂದ್ರಬಿಂಬಾಭವದನಂ ಹರಿವಕ್ತ್ರಮಥಾಪಿ ವಾ ।**
**ಉತ್ತರೇ ದ್ವಾರಪಾರ್ಶ್ವಸ್ಯ ಭಾರ್ಯಾಂ ಚ ಮರುತಾಂ ಸುತಾಂ ॥ ೧೮ ॥**

**ಸುಯಶಾಂ ಸುವ್ರತಾಮಂಬಾಂ ಪಾದಮಂಡನತತ್ಪರಾಂ ।**
**ಪೂಜಯಿತ್ವಾ ಪ್ರವಿಶ್ಯಾಂತರ್ಭವನಂ ಪರಮೇಷ್ಠಿನಃ ॥ ೧೯ ॥**

**ಸಂಪೂಜ್ಯ ಲಿಂಗಂ ತದ್ದ್ರವ್ಯೈರ್ನಿರ್ಮಾಲ್ಯಮಪನೋದಯೇತ್ ।**
**ಪ್ರಕ್ಷಾಳ್ಯ ಪುಷ್ಪಂ ಶಿರಸಿ ನ್ಯಸೇತ್ತಸ್ಯ ವಿಶುದ್ಧಯೇ ॥ ೨೦ ॥**

**ಪುಷ್ಪಹಸ್ತೋ ಜಪೇಚ್ಛಕ್ತ್ಯಾ ಮಂತ್ರಂ ಮಂತ್ರವಿಶುದ್ಧಯೇ ।**
**ಐಶಾನ್ಯಾಂ ಚಂಡಮಾರಾಧ್ಯ ನಿರ್ಮಾಲ್ಯಂ ತಸ್ಯ ದಾಪಯೇತ್ ॥ ೨೧ ॥**

**ಕಲ್ಪಯೇದಾಸನಂ ಪಶ್ಚಾದಾಧಾರಾದಿ ಯಥಾಕ್ರಮಂ ।**
**ಆಧಾರಶಕ್ತಿಂ ಕಲ್ಯಾಣೀಂ ಶ್ಯಾಮಾಂ ಧ್ಯಾಯೇದಥೋ ಭುವಿ ॥ ೨೨ ॥**

---

ಕೊಂಡು ಪ್ರಕಾಶವಾದ, ಶೂಲ, ಮೃಗ, ಟಂಕ, ಕ್ರೂರವಾದ ಬೆತ್ತ ಇವುಗಳನ್ನು ಧರಿಸಿರುವಂತೆಯೂ ಚಂದ್ರನಂತೆ ಮುಖವುಳ್ಳ ಅಥವಾ ಕಪಿಯ ಮುಖದಿಂದ ಕೂಡಿದ ತನ್ನ ಪತ್ನಿಯಾದ ಸುಯಶಾದೇವಿಯು ದೇವಿಯ ಪಾದಕ್ಕೆ ಅಲಂಕಾರ ವನ್ನು ಮಾಡುತ್ತಿರುವಂತೆಯೂ ಭಾವಿಸಿ ನಂದಿಯನ್ನು ಚೆನ್ನಾಗಿ ಪೂಜಿಸಬೇಕು.

೧೯-೨೦. ನಂದಿಯನ್ನು ಪೂಜಿಸಿದಮೇಲೆ ಶಿವನ ಗೃಹದೊಳಕ್ಕೆ ಪ್ರವೇಶಿಸಿ ಲಿಂಗವನ್ನು ಪೂಜಿಸಿ ನಿರ್ಮಾಲ್ಯಪುಷ್ಪಾದಿಗಳನ್ನು ತೆಗೆದು ಲಿಂಗವನ್ನು ತೊಳೆದು ಅದರ ಶುದ್ಧಿಗಾಗಿ ಆ ಲಿಂಗದ ಶಿರಸ್ಸಿನಮೇಲೆ ಪುಷ್ಪವನ್ನಿರಿಸಬೇಕು.

೨೧. ಹೂವನ್ನು ಕೈಯ್ಯಲ್ಲಿ ಹಿಡಿದುಕೊಂಡು ಮಂತ್ರಶುದ್ಧಿಗಾಗಿ ಯಥಾಶಕ್ತಿ ಪಂಚಾಕ್ಷರಮಂತ್ರವನ್ನು ಜಪಿಸಬೇಕು. ಬಳಿಕ ಈಶಾನ್ಯದಿಕ್ಕಿನಲ್ಲಿ ಚಂಡೀಶ್ವರನನ್ನು ಪೂಜಿಸಿ ಶಿವನಿರ್ಮಾಲ್ಯವನ್ನು ಚಂಡೀಶ್ವರನಿಗೆ ಕೊಡಬೇಕು.

೨೨-೨೪. ಆಮೇಲೆ ಶಿವನಿಗೆ ಭೂಮಿಯಮೇಲೆ ಪೀಠವನ್ನು ಕಲ್ಪಿಸಬೇಕು. ಆ ಪೀಠದಲ್ಲಿ ಆಧಾರಶಕ್ತಿಯನ್ನೂ, ಕಲ್ಯಾಣಿಯನ್ನೂ, ಶಾಮಾದೇವಿ

ತಸ್ಯಾಃ ಪುರಸ್ತಾದುತ್ಕಂಠಮನಂತಂ ಕುಂಡಲಾಕೃತಿಂ ।
ಧವಲಂ ಪಂಚಫಣಿನಂ ಲೇಲಿಹಾನಮಿವಾಂಬರಂ ॥ ೨೩ ॥

ತಸ್ಯೋಪರ್ಯಾಸನಂ ಭದ್ರಂ ಕಂಠೀರವಚತುಷ್ಪದಂ ।
ಧರ್ಮೋ ಜ್ಞಾನಂ ಚ ವೈರಾಗ್ಯಮೈಶ್ವರ್ಯಂ ಚ ಪದಾನಿ ವೈ ॥ ೨೪ ॥

ಆಗ್ನೇಯಾದಿಶ್ವೇತರಕ್ತಪೀತಶ್ಯಾಮಾನಿ ವರ್ಣತಃ ।
ಅಧರ್ಮಾದೀನಿ ಪೂರ್ವಾದೀನ್ಯುತ್ತರಾಂತಾನ್ಯನುಕ್ರಮಾತ್ ॥ ೨೫ ॥

ರಾಜಾವರ್ತಮಣಿಪ್ರಖ್ಯಾನ್ಯಸ್ಯ ಗಾತ್ರಾಣಿ ಭಾವಯೇತ್ ।
ಅಸ್ಯೋರ್ಧ್ವಚ್ಛಾದನಂ ಪದ್ಮಮಾಸನಂ ವಿಮಲಂ ಸಿತಂ ॥ ೨೬ ॥

ಅಷ್ಟಪತ್ರಾಣಿ ತಸ್ಯಾಹುರಣಿಮಾದಿಗುಣಾಷ್ಟಕಂ ।
ಕೇಸರಾಣಿ ಚ ವಾಮಾದ್ಯಾ ರುದ್ರಾ ವಾಮಾದಿಶಕ್ತಿಭಿಃ ॥ ೨೭ ॥

---

ಯನ್ನೂ ಧ್ಯಾನಮಾಡಬೇಕು. ಆ ಪೀಠದ ಮುಂಭಾಗದಲ್ಲಿ ಬೆಳ್ಳಗಿರುವ ತನ್ನ ಶರೀರವನ್ನು ಸುತ್ತಿಕೊಂಡು ಐದು ಹೆಡೆಗಳುಳ್ಳ ತಲೆಯನ್ನು ಹರಡಿ ಕುತ್ತಿಗೆಯನ್ನು ಮೇಲಕ್ಕೆ ಎತ್ತಿ ನಾಲಿಗೆಯಿಂದ ಆಕಾಶವನ್ನು ನೆಕ್ಕುವಂತಿರುವ ಆದಿಶೇಷನನ್ನು ಧ್ಯಾನಮಾಡಬೇಕು. ಆ ಅನಂತಾಸನದಮೇಲೆ ಸಿಂಹದ ಆಕಾರದ ನಾಲ್ಕು ಕಾಲುಗಳುಳ್ಳ ಭದ್ರಾಸನವನ್ನು ಧ್ಯಾನಮಾಡಬೇಕು ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ ಎಂಬಿವೇ ಆ ಭದ್ರಾಸನದ ನಾಲ್ಕು ಕಾಲುಗಳು.

೨೫. ಆಪೀಠದ ಆಗ್ನೇಯ, ನೈರುತ್ಯ, ವಾಯವ್ಯ, ಈಶಾನ್ಯ ಕೋಣಗಳಲ್ಲಿ ಕ್ರಮವಾಗಿ ಬಿಳುಪು, ಕೆಂಪು, ಹಳದಿ, ಕಪ್ಪು ಬಣ್ಣಗಳನ್ನೂ, ಪೂರ್ವಾದ್ಯುತ್ತರದಿಗಂತವಾದ ನಾಲ್ಕು ದಿಕ್ಕುಗಳಲ್ಲಿ ಕ್ರಮವಾಗಿ ಅಧರ್ಮ, ಅಜ್ಞಾನ, ಅವೈರಾಗ್ಯ, ಅಷ್ಟೈಶ್ವರ್ಯಗಳನ್ನು ಭಾವಿಸಬೇಕು.

೨೬-೨೭. ಆ ಪೀಠವನ್ನು ರಾಜಾವರ್ತವೇ ಮುಂತಾದ ಉತ್ತಮವಾದ ರತ್ನಗಳಿಂದ ಮಾಡಿದುದಾಗಿ ಭಾವಿಸಬೇಕು. ಅದರಮೇಲೆ ನಿರ್ಮಲವಾದ ಬಿಳಿಯ ಕಮಲಾಸನವು ಇರುವುದು. ಅದಕ್ಕೆ ಎಂಟು ದಳಗಳು ಅಣಿಮಾದಿ ಎಂಟು ಸಿದ್ಧಿಗಳೇ ಆ ದಳಗಳ ಗುಣಗಳು. ಆ ಕಮಲದ ಕೇಸರಗಳು ತಮ್ಮತಮ್ಮ ಶಕ್ತಿಗಳಿಂದ ಕೂಡಿದ ವಾಮದೇವನೇ ಮುಂತಾದ ರುದ್ರರ ಸ್ಥಾನಗಳು.

**ಬೀಜಾನ್ಯಪಿ ಚ ತಾಏವ ಶಕ್ತಯೋಂತರ್ಮನೋನ್ಮನೀಃ ।**
**ಕರ್ಣಿಕಾ ಪರವೈರಾಗ್ಯಂ ನಾಳಂ ಜ್ಞಾನಂ ಶಿವಾತ್ಮಕಂ ॥ ೨೮ ॥**

**ಕಂದಶ್ಚ ಶಿವಧರ್ಮಾತ್ಮಾ ಕರ್ಣಿಕಾಂತೇ ತ್ರಿಮಂಡಲೇ ।**
**ತ್ರಿಮಂಡಲೋಪರ್ಯಾತ್ಮಾದಿತತ್ತ್ವತ್ರಿತಯಮಾಸನಂ ॥ ೨೯ ॥**

**ಸರ್ವಾಸನೋಪರಿ ಸುಖಂ ವಿಚಿತ್ರಾಸ್ತರಣಾಸ್ತೃತಂ ।**
**ಆಸನಂ ಕಲ್ಪಯೇದ್ದಿವ್ಯಂ ಶುದ್ಧವಿದ್ಯಾಸಮುಜ್ಜ್ವಲಂ ॥ ೩೦ ॥**

**ಆವಾಹನಂ ಸ್ಥಾಪನಂ ಚ ಸನ್ನಿರೋಧಂ ನಿರೀಕ್ಷಣಂ ।**
**ನಮಸ್ಕಾರಂ ಚ ಕುರ್ವೀತ ಬಧ್ವಾ ಮುದ್ರಾಃ ಪೃಥಕ್ಪೃಥಕ್ ॥ ೩೧ ॥**

**ಪಾದ್ಯಮಾಚಮನಂ ಚಾರ್ಘ್ಯಂ ಗಂಧಂ ಪುಷ್ಪಂ ತತಃ ಪರಂ ।**
**ಧೂಪಂ ದೀಪಂ ಚ ತಾಂಬೂಲಂ ದತ್ವಾಥ ಸ್ನಾಪಯೇಚ್ಛಿವೌ ॥ ೩೨ ॥**

---

೨೮-೨೯. ಆ ವಾಮದೇವಾದಿ ಶಕ್ತಿಗಳೇ ಕಮಲಬೀಜಗಳು. ಆ ಕಮಲದೊಳಗೆ ಮನೋನ್ಮನೀ ಮುಂತಾದ ಶಕ್ತಿದೇವತೆಗಳಿರುವರು. ಅದರ ಕರ್ಣಿಕೆಯೇ ಪರವೈರಾಗ್ಯವು. ಶಿವಸ್ವರೂಪಜ್ಞಾನವೇ ಅದರ ನಾಳವು. ಶಿವ ಧರ್ಮವೇ ಆ ಕಮಲದ ಗೆಡ್ಡೆಯು. ಕಮಲದ ಕರ್ಣಿಕೆಯ ತುದಿಯಲ್ಲಿ ಸೂರ್ಯಚಂದ್ರಾದಿರೂಪವಾದ ಮೂರು ಮಂಡಲಗಳು. ಆ ಮೂರು ಮಂಡಲದ ಮೇಲೆ ಆತ್ಮ, ಅಂತರಾತ್ಮ ಪರಮಾತ್ಮ ಎಂಬ ಮೂರು ತತ್ತ್ವಗಳಿಂದ ಕೂಡಿದ ಪೀಠವಿರುವುದು.

೩೦. ಈ ಸಮಸ್ತ ಆಸನಗಳ ಮೇಲುಭಾಗದಲ್ಲಿ ಸುಖವಾಗಿಯೂ, ವಿಚಿತ್ರವಾದ ವಸ್ತ್ರಗಳನ್ನು ಹಾಸಿಮದಾಗಿಯೂ, ಇರುವ ಶ್ರೇಷ್ಠವಾದ ವಿದ್ಯಾ ರೂಪತತ್ತ್ವದಿಂದ ಪ್ರಕಾಶಿಸುವ ಆಸನವನ್ನು ಕಲ್ಪಿಸಬೇಕು.

೩೧. ಬಳಿಕ ಆವಾಹನ, ಸ್ಥಾಪನ, ಸನ್ನಿರೋಧ, ನಿರೀಕ್ಷಣ, ನಮಸ್ಕಾರ ಇವುಗಳಿಗೆ ಬೇರೆಬೇರೆಯಾಗಿ ಮುದ್ರೆಗಳನ್ನು ಪ್ರದರ್ಶಿಸಿ ಆ ಕಾರ್ಯಗಳನ್ನು ಮಾಡಬೇಕು.

೩೨. ಆಮೇಲೆ ಪಾದ್ಯ, ಆಚಮನ, ಅರ್ಘ್ಯ, ಗಂಧ. ಪುಷ್ಪ, ಧೂಪ, ದೀಪ, ತಾಂಬೂಲ ಎಂಬ ಪೂಜೋಪಚಾರಗಳನ್ನು ಮಾಡಿ ದಂಪತಿಗಳನ್ನು ಸ್ನಾನಮಾಡಿಸಬೇಕು.

**ಅಥವಾ ಪರಿಕಲ್ಪೈವಮಾಸನಂ ಮೂರ್ತಿಮೇವ ಚ ।**
**ಸಕಲೀಕೃತ್ಯ ಮೂಲೇನ ಬ್ರಹ್ಮಭಿಶ್ಚಾಪರೈಸ್ತಥಾ ॥ ೩೩ ॥**

**ಆವಾಹಯೇತ್ತತೋ ದೇವ್ಯಾ ಶಿವಂ ಪರಮಕಾರಣಂ ।**
**ಶುದ್ಧಸ್ಫಟಿಕಸಂಕಾಶಂ ದೇವಂ ನಿಷ್ಕಲಮಕ್ಷರಂ ॥ ೩೪ ॥**

**ಕಾರಣಂ ಸರ್ವಲೋಕಾನಾಂ ಸರ್ವಲೋಕಮಯಂ ಪರಂ ।**
**ಅಂತರ್ಬಹಿಃ ಸ್ಥಿತಂ ವ್ಯಾಪ್ಯ ಹ್ಯಣೋರಣು ಮಹತ್ತರಂ ॥ ೩೫ ॥**

**ಭಕ್ತಾನಾಮಪ್ರಯತ್ನೇನ ದೃಶ್ಯಮೀಶ್ವರಮವ್ಯಯಂ ।**
**ಬ್ರಹ್ಮೇಂದ್ರವಿಷ್ಣುರುದ್ರಾದ್ಯೈರಪಿ ದೇವೈರಗೋಚರಂ ॥ ೩೬ ॥**

**ವೇದಸಾರಂ ಚ ವಿದ್ವದ್ಭಿರಗೋಚರಮಿತಿ ಶ್ರುತಂ ।**
**ಆದಿಮಧ್ಯಾಂತರಹಿತಂ ಭೇಷಜಂ ಭವರೋಗಿಣಾಂ ॥ ೩೭ ॥**

---

೩೩. ಅಥವಾ ಮೇಲೆ ಹೇಳಿದಂತೆ ಪೀಠವನ್ನೂ, ಮೂರ್ತಿಯನ್ನೂ, ಮನಸ್ಸಿನಲ್ಲಿಯೇ ಕಲ್ಪಿಸಿ ಪಂಚಾಕ್ಷರ ಮೂಲಮಂತ್ರದಿಂದ ಸಕಲೀಕರಣ ಮುದ್ರೆಯನ್ನು ಪ್ರದರ್ಶಿಸಿ ಪಂಚಬ್ರಹ್ಮಮಂತ್ರಗಳಿಂದಲೂ, ಇತರ ಮಂತ್ರಗಳಿಂದಲೂ, ಸಮಸ್ತ ಪ್ರಪಂಚಕ್ಕೂ ಕಾರಣನಾದ ಶಿವನನ್ನು ದೇವಿಯೊಡನೆ ಆವಾಹನೆಯನ್ನು ಮಾಡಬೇಕು. ಈ ಆವಾಹನೆಯು ಧ್ಯಾನರೂಪವಾದುದು. ಹೇಗೆಂದರೆ,

೩೪-೩೭. ಆ ದೇವನು ಸ್ಫಟಿಕಮಣಿಯಂತೆ ಬೆಳ್ಳಗೆ ಹೊಳೆಯುತ್ತಿರುವನು. ನಾಶರಹಿತನಾಗಿಯೂ, ನಿಷ್ಕಲನಾಗಿಯೂ, ಸಮಸ್ತ ಲೋಕಕ್ಕೂ ಕಾರಣನಾಗಿಯೂ, ಸಕಲಲೋಕಸ್ವರೂಪನಾಗಿಯೂ, ಆ ಲೋಕದ ಒಳಗೂ, ಹೊರಗೂ ವ್ಯಾಪಿಸಿಕೊಂಡು ಅತ್ಯಂತ ಸೂಕ್ಷ್ಮನೂ ಮಹಾಮಹಿಮನೂ ಆಗಿರುವನು. ಭಕ್ತರಿಗೆ ಪ್ರಯತ್ನವಿಲ್ಲದೆ ದರ್ಶನವನ್ನು ಕೊಡುವನು. ಸಮಸ್ತಲೋಕಕ್ಕೂ ಒಡೆಯನು. ಬ್ರಹ್ಮ, ದೇವೇಂದ್ರ, ವಿಷ್ಣು, ರುದ್ರ ಈ ದೇವತೆಗಳಿಗೂ ಅಗೋಚರನು. ವಿದ್ವಾಂಸರು ಅಗೋಚರನೆಂದು ಹೇಳುವ ಆದಿಯೂ, ಮಧ್ಯವೂ, ಅಂತ್ಯವೂ ಇಲ್ಲದ ವೇದಾರ್ಥಸ್ವರೂಪನು. ಸಮಸ್ತರೋಗಗಳಿಗೂ ಔಷಧಸ್ವರೂಪನಾದವನು. ಪ್ರಪಂಚದಲ್ಲಿ ಮಂಗಳಾರ್ಥವಾಗಿ ನೆಲೆಸಿರುವ ಶಿವತತ್ತ್ವವೆಂದು ಪ್ರಸಿದ್ಧನಾದ ಇಂತಹ ಶಿವನನ್ನು ಧ್ಯಾನಮಾಡಬೇಕು.

**ಶಿವತತ್ತ್ವಮಿತಿ ಖ್ಯಾತಂ ಶಿವಾರ್ಥಂ ಜಗತಿ ಸ್ಥಿರಂ ।**
**ಪಂಚೋಪಚಾರವದ್ಭಕ್ತ್ಯಾ ಪೂಜಯೇಲ್ಲಿಂಗಮುತ್ತಮಂ　　　॥ ೩೮ ॥**

**ಲಿಂಗಮೂರ್ತಿರ್ಮಹೇಶಸ್ಯ ಶಿವಸ್ಯ ಪರಮಾತ್ಮನಃ ।**
**ಸ್ನಾನಕಾಲೇ ಪ್ರಕುರ್ವೀತ ಜಯಶಬ್ದಾದಿಮಂಗಲಂ　　　॥ ೩೯ ॥**

**ಪಂಚಗವ್ಯಘೃತಕ್ಷೀರದಧಿಮಧ್ವಾದಿಪೂರ್ವಕೈಃ ।**
**ಮೂಲೈಃ ಫಲಾನಾಂ ಸಾರೈಶ್ಚ ತಿಲಸರ್ಷಪಸಕ್ತುಭಿಃ　　　॥ ೪೦ ॥**

**ಬೀಜೈರ್ಯವಾದಿಭಿಃ ಶಸ್ತೈಶ್ಚೂರ್ಣೈರ್ಮಾಷಾದಿಸಂಭವೈಃ ।**
**ಸಂಸ್ನಾಪ್ಯಾಲಿಪ್ಯ ಪಿಷ್ಟಾದ್ಯೈಃ ಸ್ನಾಪಯೇದುಷ್ಣವಾರಿಭಿಃ　　　॥ ೪೧ ॥**

**ಘರ್ಷಯೇದ್ಬಿಲ್ವಪತ್ರಾದ್ಯೈರ್ಲೇಪಗಂಧಾಪನುತ್ತಯೇ ।**
**ಪುನಃ ಸಂಸ್ನಾಪ್ಯ ಸಲಿಲೈಶ್ಚಕ್ರವರ್ತ್ಯುಪಚಾರತಃ　　　॥ ೪೨ ॥**

**ಸುಗಂಧಾಮಲಕಂ ದದ್ಯಾದ್ಧರಿದ್ರಾಂ ಚ ಯಥಾಕ್ರಮಂ ।**
**ತತಃ ಸಂಶೋಧ್ಯ ಸಲಿಲೈರ್ಲಿಂಗಂ ಬೇರಮಥಾಪಿ ವಾ　　　॥ ೪೩ ॥**

---

೩೮–೪೧. ಆವಾಹನ, ಆಸನ, ಪಾದ್ಯ, ಅರ್ಘ್ಯ, ಆಚಮನೀಯ ಎಂಬ ಐದು ಉಪಚಾರಗಳಿಂದ ಕೂಡಿ ಭಕ್ತಿಯಿಂದ ಶ್ರೇಷ್ಠವಾದ ಲಿಂಗವನ್ನು ಪೂಜಿಸಬೇಕು. ಪರಮಾತ್ಮನಾದ ಶಿವನ ಸಂಬಂಧವಾದ ಲಿಂಗಮೂರ್ತಿಗಳ ಸ್ನಾನಕಾಲದಲ್ಲಿ ಮಂಗಳಕರವಾದ ಜಯಶಬ್ದಗಳನ್ನು ಮಾಡುತ್ತಿರಬೇಕು. ಪಂಚಗವ್ಯಗಳು, ಹಾಲು, ತುಪ್ಪ, ಮೊಸರು, ಜೇನು, ಕಂದಮೂಲಫಲಗಳ ಸಾರ, ಎಳ್ಳು, ಸಾಸವೆ ಇವುಗಳಿಂದ ಮಾಡಿದ ಹಿಟ್ಟು ಯವೆಯೇ ಮುಂತಾದ ಉತ್ತಮವಾದ ಧಾನ್ಯಗಳು, ಉದ್ದು ಮುಂತಾದುವುಗಳಿಂದ ಮಾಡಿದ ಹಿಟ್ಟು, ಇವುಗಳನ್ನು ಬಳಿದು ಬಿಸಿನೀರಿನಿಂದ ಸ್ನಾನಮಾಡಿಸಬೇಕು.

೪೨–೪೪. ಲಿಂಗಕ್ಕೆ ಬಳಿದ ವಸ್ತುಗಳ ವಾಸನೆಯನ್ನು ಹೋಗಲಾಡಿಸುವುದಕ್ಕಾಗಿ ಬಿಲ್ವಪತ್ರೆ ಮೊದಲಾದುವುಗಳಿಂದ ಉಜ್ಜಿ ಮತ್ತೆ ನೀರಿನಿಂದ ಸ್ನಾನ ಮಾಡಿಸಿ ಚಕ್ರವರ್ತಿಗೆ ಮಾಡುವ ಉಪಚಾರದಂತೆ ಉಪಚಾರಮಾಡುತ್ತ ಸುಗಂಧದ್ರವ್ಯಗಳಿಂದಲೂ, ನೆಲ್ಲಿಯಚಟ್ಟು, ಅರಶಿನ ಮುಂತಾದುವುಗಳಿಂದಲೂ, ಉಜ್ಜಿ ನೀರಿನಿಂದ ತೊಳೆದು ಲಿಂಗ ಅಥವಾ ಮೂರ್ತಿಯನ್ನು ಸುಗಂಧದ ನೀರಿ

ಸ್ನಾಪಯೇದ್ಗಂಧತೋಯೇನ ಕುಶಪುಷ್ಪೋದಕೇನ ಚ ।
ಹಿರಣ್ಯರತ್ನತೋಯೈಶ್ಚ ಮಂತ್ರಸಿದ್ಧ್ಯೈರ್ಯಥಾಕ್ರಮಂ ॥ ೪೪ ॥

ಅಸಂಭವೇ ತು ದ್ರವ್ಯಾಣಾಂ ಯಥಾಸಂಭವಸಂಭೃತೈಃ ।
ಕೇವಲೈರ್ಮಂತ್ರತೋಯೈರ್ವಾ ಸ್ನಾಪಯೇಚ್ಛ್ರದ್ಧಯಾ ಶಿವಂ ॥ ೪೫ ॥

ಕಲಶೇನಾಥ ಶಂಖೇನ ವರ್ಧನ್ಯಾ ಪಾಣಿನಾ ತಥಾ ।
ಸಕುಶೇನ ಸಪುಷ್ಪೇಣ ಸ್ನಾಪಯೇನ್ಮಂತ್ರಪೂರ್ವಕಂ ॥ ೪೬ ॥

ಪವಮಾನೇನ ರುದ್ರೇಣ ನೀಲೇನ ತ್ವರಿತೇನ ಚ ।
ಲಿಂಗಸೂಕ್ತಾದಿಸೂಕ್ತೈಶ್ಚ ಶಿರಸಾಥರ್ವಣೇನ ಚ ॥ ೪೭ ॥

ಋಗ್ಭಿಶ್ಚ ಸಾಮಭಿಃ ಶರ್ವೈರ್ಬ್ರಹ್ಮಭಿಶ್ಚಾಪಿ ಪಂಚಭಿಃ ।
ಸ್ನಾಪಯೇದ್ದೇವದೇವೇಶಂ ಶಿವೇನ ಪ್ರಣವೇನ ಚ ॥ ೪೮ ॥

---

ನಿಂದಲೂ, ದರ್ಭೆ, ಹೂ, ಮುಂತಾದುವು, ಚಿನ್ನ, ರತ್ನ ಇವುಗಳು ಕೂಡಿದ ನೀರಿನಿಂದಲೂ, ಮಂತ್ರಪೂರ್ವಕವಾಗಿ ಕ್ರಮವಾಗಿ ಅಭಿಷೇಕವನ್ನು ಮಾಡಬೇಕು.

೪೫-೪೬. ಸ್ನಾನಾರ್ಥವಾದ ಪದಾರ್ಥಗಳು ದೊರೆಯದಿದ್ದರ ದೊರೆ ತಷ್ಟು ಪದಾರ್ಥಗಳನ್ನು ಸ್ಮರಿಸಿಕೊಂಡು ಮಂತ್ರವನ್ನು ಹೇಳುತ್ತಾ ಬರಿಯ ನೀರಿನಿಂದಾಗಲೀ ಭಕ್ತಿಯಿಂದ ಶಿವನಿಗೆ ಕಲಶ, ಶಂಖ, ಧಾರಾಪಾತ್ರೆ ಇವುಗಳಿಂದಲಾದರೂ, ಬರಿಯ ಕೈಯಿಂದಲಾದರೂ, ದರ್ಭೆ ಹೂಗಳೊಡನೆ ಸೇರಿದ ನೀರಿನಿಂದ ಮಂತ್ರಪೂರ್ವಕವಾಗಿ ಅಭಿಷೇಕವನ್ನು ಮಾಡಬೇಕು.

೪೭-೪೮. ಪವಮಾನ, ರುದ್ರ, ನೀಲ, ತ್ವರಿತ, ಲಿಂಗ ಮೊದಲಾದ ಸೂಕ್ತಗಳಿಂದಲೂ ಅಥರ್ವಶಿಖೋಪನಿಷತ್ತಿನಿಂದಲೂ, ಶಿವಸಂಬಂಧವಾದ ಋಗ್ವೇದ ಸಾಮವೇದಮಂತ್ರಗಳಿಂದಲೂ, ಪಂಚಬ್ರಹ್ಮಮಂತ್ರಗಳಿಂದಲೂ, ಶಿವಪಂಚಾಕ್ಷರಮಂತ್ರದಿಂದಲೂ, ಪ್ರಣವಮಂತ್ರದಿಂದಲೂ, ದೇವದೇವನಾದ ಶಿವನಿಗೆ ಅಭಿಷೇಕವನ್ನು ಮಾಡಬೇಕು.

ಯಥಾ ದೇವಸ್ಯ ದೇವ್ಯಾಶ್ಚ ಕುರ್ಯಾತ್ಸ್ನಾನಾದಿಕಂ ತಥಾ ।
ನ ತು ಕಶ್ಚಿದ್ವಿಶೇಷೋಽಸ್ತಿ ತತ್ರ ತೌ ಸದೃಶೌ ಯತಃ　　॥ ೪೯ ॥

ಪ್ರಥಮಂ ದೇವಮುದ್ದಿಶ್ಯ ಕೃತ್ವಾ ಸ್ನಾನಾದಿಕಾಃ ಕ್ರಿಯಾಃ ।
ದೇವ್ಯೈ ಪಶ್ಚಾತ್ಪ್ರಕುರ್ವೀತ ದೇವದೇವಸ್ಯ ಶಾಸನಾತ್　　॥ ೫೦ ॥

ಅರ್ಧನಾರೀಶ್ವರೇ ಪೂಜ್ಯೇ ಪೌರ್ವಾಪರ್ಯಂ ನ ವಿದ್ಯತೇ ।
ತತ್ರ ತತ್ರೋಪಚಾರಾಣಾಂ ಲಿಂಗೇ ಚಾನ್ಯತ್ರ ವಾ ಕ್ವಚಿತ್　　॥ ೫೧ ॥

ಕೃತ್ವಾಭಿಷೇಕಂ ಲಿಂಗಸ್ಯ ಶುಚಿನಾ ಚ ಸುಗಂಧಿನಾ ।
ಸಂಮೃಜ್ಯ ವಾಸಸಾ ದದ್ಯಾದಂಬರಂ ಚೋಪವೀತಕಂ　　॥ ೫೨ ॥

ಪಾದ್ಯಮಾಚಮನಂ ಚಾರ್ಘ್ಯಂ ಗಂಧಂ ಪುಷ್ಪಂ ಚ ಭೂಷಣಂ ।
ಧೂಪಂ ದೀಪಂ ಚ ನೈವೇದ್ಯಂ ಪಾನೀಯಂ ಮುಖಶೋಧನಂ　　॥ ೫೩ ॥

ಪುನಶ್ಚಾಚಮನೀಯಂ ಚ ಮುಖವಾಸಂ ತತಃ ಪರಂ ।
ಮುಕುಟಂ ಚ ಶುಭಂ ಭದ್ರಂ ಸರ್ವರತ್ನೈರಲಂಕೃತಂ　　॥ ೫೪ ॥

---

೪೯-೫೧. ದೇವದೇವನಾದ ಶಿವನಿಗೆ ಸ್ನಾನಾದಿ ಪೂಜೋಪಚಾರಗಳನ್ನು ಮಾಡುವಂತೆಯೇ ದೇವಿಗೂ ಪೂಜೋಪಚಾರಗಳನ್ನು ಮಾಡಬೇಕು. ಅರ್ಧನಾರೀಶ್ವರನನ್ನು ಪೂಜಿಸುವಾಗ ಹಿಂದುಮುಂದೆಂಬ ಭೇದವಿರುವುದಿಲ್ಲ. ಲಿಂಗಪೂಜೆಯಲ್ಲಿಯೂ, ಶಿವದಂಪತಿಗಳ ಪೂಜೆಯಲ್ಲಿಯೂ ಹಿಂದುಮುಂದೆಂಬ ಭೇದವಿರುವುದಿಲ್ಲ.

೫೨-೫೫. ಶುದ್ಧವಾದ, ಸುಗಂಧವಾದ ನೀರಿನಿಂದ ಲಿಂಗಕ್ಕೆ ಅಭಿಷೇಕವನ್ನು ಮಾಡಿದಮೇಲೆ ವಸ್ತ್ರದಿಂದ ಒರಸಿ, ವಸ್ತ್ರ, ಉಪವೀತ, ಪಾದ್ಯ, ಆಚಮನ, ಅರ್ಘ್ಯ, ಗಂಧ, ಪುಷ್ಪ, ಭೂಷಣ, ಧೂಪ, ದೀಪ, ನೈವೇದ್ಯ ಪಾನೀಯ ಮುಖಶೋಧನ, ಪುನರಾಚಮನ, ತಾಂಬೂಲ, ರತ್ನಖಚಿತವಾದ ಕಿರೀಟ ಪರಿಶುದ್ಧವಾದ ಆಭರಣಗಳು ಬಗೆಬಗೆಯ ಹೂಗಳು, ಬೀಸಣಿಗೆ ಚಾಮರಗಳು,

ಭೂಷಣಾನಿ ಪವಿತ್ರಾಣಿ ಮಾಲ್ಯಾನಿ ವಿವಿಧಾನಿ ಚ ।
ವ್ಯಜನೇ ಚಾಮರೇ ಛತ್ರಂ ತಾಲವೃಂತಂ ಚ ದರ್ಪಣಂ ॥ ೫೫ ॥

ದತ್ವಾ ನೀರಾಜನಂ ಕುರ್ಯಾತ್ಸರ್ವಮಂಗಲನಿಸ್ಸ್ವನೈಃ ।
ಗೀತನೃತ್ಯಾದಿಭಿಶ್ಚೈವ ಜಯಶಬ್ದಸಮನ್ವಿತೈಃ ॥ ೫೬ ॥

ಹೈಮೇ ಚ ರಾಜತೇ ತಾಮ್ರೇ ಪಾತ್ರೇ ವಾ ಮೃಣ್ಮಯೇ ಶುಭೇ ।
ಪದ್ಮಕೈಃ ಶೋಭಿತೈಃ ಪುಷ್ಪೈರ್ಬೀಜೈರ್ದಧ್ಯಕ್ಷತಾದಿಭಿಃ ॥ ೫೭ ॥

ತ್ರಿಶೂಲಶಂಖಯುಗ್ಮಾಬ್ಜನಂದ್ಯಾವರ್ತೈಃ ಕರೀಷಜೈಃ ।
ಶ್ರೀವತ್ಸಸ್ವಸ್ತಿಕಾದರ್ಶವಜ್ರೈರ್ವನ್ಹ್ಯಾದಿಚಿಹ್ನಿತೈಃ ॥ ೫೮ ॥

ಅಷ್ಟೌ ಪ್ರದೀಪಾನ್ಪರಿತೋ ವಿಧಾಯೈಕಂ ತು ಮಧ್ಯಮೇ ।
ತೇಷು ವಾಮಾದಿಕಾಶ್ಚಿಂತ್ಯಾಃ ಪೂಜ್ಯಾಶ್ಚ ನವ ಶಕ್ತಯಃ ॥ ೫೯ ॥

ಕವಚೇನ ಸಮಾಚ್ಛಾದ್ಯ ಸಂರಕ್ಷ್ಯಾಸ್ತ್ರೇಣ ಸರ್ವತಃ ।
ಧೇನುಮುದ್ರಾಂ ಚ ಸಂದರ್ಶ್ಯ ಪಾಣಿಭ್ಯಾಂ ಪಾತ್ರಮುದ್ಧರೇತ್ ॥ ೬೦ ॥

---

ಛತ್ರಿ, ಕನ್ನಡಿ ಮುಂತಾದ ಉಪಚಾರಗಳನ್ನು ಮಾಡಿ ಮಂಗಳವಾದ್ಯಗಳಿಂದಲೂ ಸಂಗೀತ, ನೃತ್ಯ, ಜಯಶಬ್ದಗಳಿಂದಲೂ ಕೂಡಿ ನೀರಾಜನವನ್ನು ಮಾಡಬೇಕು.

೫೭-೫೯. ಚಿನ್ನ, ಬೆಳ್ಳಿ, ತಾಮ್ರ ಅಥವಾ ಮಣ್ಣು ಇವುಗಳಿಂದ ಶಕ್ತ್ಯನುಸಾರವಾಗಿ ಮಾಡಿದ ದೀಪದ ಪಾತ್ರೆಗಳಿಗೆ ಕಮಲ ಮುಂತಾದ ಹೂಗಳು, ಮೊಸರು, ಅಕ್ಷತೆ, ಬೀಜಗಳು ಇವುಗಳಿಂದ ಅಲಂಕರಿಸಿ ಗೋಮಯದಲ್ಲಿ ತ್ರಿಶೂಲ, ಶಂಖ, ಕಮಲಗಳು ನಂದ್ಯಾವರ್ತ, ಶ್ರೀವತ್ಸ, ಸ್ವಸ್ತಿಕ, ಕನ್ನಡಿ, ವಜ್ರ ಅಗ್ನಿ ಮುಂತಾದ ಚಿಹ್ನೆಗಳನ್ನು ಮಾಡಿ ಸುತ್ತಲೂ ಎಂಟು ದೀಪಗಳನ್ನೂ, ನಡುವೆ ಒಂದು ದೀಪವನ್ನೂ ಇಟ್ಟು ಇವುಗಳಲ್ಲಿ ವಾಮದೇವಾದಿಮಂತ್ರಗಳಿಂದ ಪಂಚಬ್ರಹ್ಮರನ್ನು ಧ್ಯಾನಮಾಡಿ ನವಶಕ್ತಿದೇವತೆಗಳನ್ನು ಆವಾಹನೆಮಾಡಿ ಪೂಜಿಸಬೇಕು.

೬೦-೬೨. ಆ ದೀಪದಪಾತ್ರೆಗಳನ್ನು ಕವಚಮಂತ್ರವಾದ ಹುಂ ಎಂಬ ಮಂತ್ರದಿಂದ ಆಚ್ಛಾದನೆಮಾಡಿ ಫಟ್ ಎಂಬ ಅಸ್ತ್ರಮಂತ್ರದಿಂದ ಎಲ್ಲ ದಿಕ್ಕು

**ಅಥವಾರೋಪಯೇತ್ಪಾತ್ರೇ ಪಂಚದೀಪಾನ್ಯಥಾಕ್ರಮಂ ।**
**ವಿದಿಕ್ಷ್ವಪಿ ಚ ಮಧ್ಯೇ ಚ ದೀಪಮೇಕಮಥಾಪಿ ವಾ ॥ ೬೧ ॥**

**ತತಸ್ತತ್ಪಾತ್ರಮುದ್ಧೃತ್ಯ ಲಿಂಗಾದೇರುಪರಿ ಕ್ರಮಾತ್ ।**
**ತ್ರಿಃ ಪ್ರದಕ್ಷಿಣಯೋಗೇನ ಭ್ರಾಮಯೇನ್ಮೂಲವಿದ್ಯಯಾ ॥ ೬೨ ॥**

**ದದ್ಯಾದರ್ಘ್ಯಂ ತತೋ ಮೂರ್ಧ್ನಿ ಭಸಿತಂ ಚ ಸುಗಂಧಿತಂ ।**
**ಕೃತ್ವಾ ಪುಷ್ಪಾಂಜಲಿಂ ಪಶ್ಚಾದುಪಹಾರಾನ್ನಿವೇದಯೇತ್ ॥ ೬೩ ॥**

**ಪಾನೀಯಂ ಚ ತತೋ ದದ್ಯಾದ್ದತ್ವಾ ವಾಚಮನಂ ಪುನಃ ।**
**ಪಂಚಸೌಗಂಧಿಕೋಪೇತಂ ತಾಂಬೂಲಂ ಚ ನಿವೇದಯೇತ್ ॥ ೬೪ ॥**

**ಪ್ರೋಕ್ಷಯೇತ್ಪ್ರೋಕ್ಷಣೀಯಾನಿ ಗಾನನಾಟ್ಯಾನಿ ಕಾರಯೇತ್ ।**
**ಲಿಂಗಾದೌ ಶಿವಯೋಶ್ಚಿಂತಾಂ ಕೃತ್ವಾ ಶಕ್ತ್ಯಾ ಜಪೇಚ್ಛಿವಂ ॥ ೬೫ ॥**

---

ಗಳಲ್ಲಿಯೂ ರಕ್ಷಿಸಿ ಧೇನುಮುದ್ರೆಯನ್ನು ತೋರಿಸಿ ಕೈಗಳಿಂದ ಆ ದೀಪಪಾತ್ರೆಗಳನ್ನು ಎತ್ತಬೇಕು. ಅಥವಾ ಆ ಪಾತ್ರೆಗಳಲ್ಲಿ ಐದು ದೀಪಗಳನ್ನು ಕ್ರಮವಾಗಿ ಆಗ್ನೇಯ ನೈಋತ್ಯ ವಾಯವ್ಯ ಈಶಾನ್ಯ ಮಧ್ಯ ಈ ದಿಕ್ಕುಗಳ ದೀಪಪಾತ್ರೆಗಳಲ್ಲಿ ಹಚ್ಚಿಸಿ, ಆಮೇಲೆ ಆ ದೀಪಗಳನ್ನು ಒಂದೊಂದಾಗಿ ತೆಗೆದುಕೊಂಡು ಲಿಂಗದ ಅಥವಾ ಮೂರ್ತಿಯ ಶಿರಸ್ಸಿನಲ್ಲಿ ಮೂರಾವೃತ್ತಿ ಪ್ರದಕ್ಷಿಣಾಕಾರವಾಗಿ ಮೂಲಮಂತ್ರವಾದ ಪಂಚಾಕ್ಷರಮಂತ್ರದಿಂದ ಸುತ್ತಿಸಬೇಕು.

೬೩. ಆಮೇಲೆ ಲಿಂಗಮೂರ್ತಿಗಳ ಶಿರಸ್ಸಿನಲ್ಲಿ ಅರ್ಘ್ಯವನ್ನು ಕೊಟ್ಟು ಸುಗಂಧವಾದ ಭಸ್ಮವನ್ನು ಪೂಜಿಸಿ ಪುಷ್ಪಾಂಜಲಿಯನ್ನು ಕೊಟ್ಟು ಬಳಿಕ ಉಪಹಾರಗಳನ್ನು ನಿವೇದನಮಾಡಭೇಕು.

೬೪. ಆಮೇಲೆ ಪಾನೀಯ ಆಚಮನಗಳೆಂಬ ಉಪಚಾರವನ್ನು ಮಾಡಿ ಐದು ಸುಗಂಧದ್ರವ್ಯಗಳಿಂದ ಕೂಡಿದ ತಾಂಬೂಲವನ್ನು ನಿವೇದನ ಮಾಡಬೇಕು.

೬೫. ಶುದ್ಧಿಗಾಗಿ ನೀರಿನಿಂದ ಪ್ರೋಕ್ಷಿಸಬೇಕಾದ ಪದಾರ್ಥಗಳನ್ನೆಲ್ಲ ಪ್ರೋಕ್ಷಿಸಭೇಕು. ಕೊನೆಯಲ್ಲಿ ಸಂಗೀತ ನಾಟ್ಯ ಮುಂತಾದ ಉಪಚಾರಗಳನ್ನು ಮಾಡಿಸಬೇಕು. ಲಿಂಗಮೂರ್ತಿಗಳಲ್ಲಿ ಶಿವದಂಪತಿಗಳನ್ನು ಧ್ಯಾನಿಸಿ ಶಕ್ತ್ಯನುಸಾರವಾಗಿ ಶಿವಪಂಚಾಕ್ಷರಮಂತ್ರವನ್ನು ಜಪಿಸಬೇಕು.

ಪ್ರದಕ್ಷಿಣಂ ಪ್ರಣಾಮಂ ಚ ಸ್ತವಂ ಚಾತ್ಮಸಮರ್ಪಣಂ ।
ವಿಜ್ಞಾಪನಂ ಚ ಕಾರ್ಯಾಣಾಂ ಕುರ್ಯಾದ್ವಿನಯಪೂರ್ವಕಂ ॥ ೬೬ ॥

ಅರ್ಘ್ಯಂ ಪುಷ್ಪಾಂಜಲಿಂ ದತ್ವಾ ಬಧ್ವಾ ಮುದ್ರಾಂ ಯಥಾವಿಧಿ ।
ಪಶ್ಚಾತ್ಕ್ಷಮಾಪಯೇದ್ದೇವಮುದ್ವಾಸ್ಯಾತ್ಮನಿ ಚಿಂತಯೇತ್ ॥ ೬೭ ॥

ಪಾದ್ಯಾದಿಮುಖವಾಸಾಂತಮರ್ಘ್ಯಾದ್ಯಂ ಚಾತಿಸಂಕಟೇ ।
ಪುಷ್ಪವಿಕ್ಷೇಪಮಾತ್ರಂ ವಾ ಕುರ್ಯಾದ್ಭಾವಪುರಸ್ಸರಂ ॥ ೬೮ ॥

ತಾವತ್ಯೈವ ಪರೋ ಧರ್ಮೋ ಭಾವೇನ ಸುಕೃತೋ ಭವೇತ್ ।
ಅಸಂಪೂಜ್ಯ ನ ಭುಂಜೀತ ಶಿವಮಾಪ್ರಾಣಸಂಚರಾತ್ ॥ ೬೯ ॥

---

೬೬. ತರುವಾಯ ಪ್ರದಕ್ಷಿಣೆ ನಮಸ್ಕಾರಗಳನ್ನೂ ಆತ್ಮಸಮರ್ಪಣೆಯನ್ನೂ ಮಾಡಿ ನಮ್ರತೆಯಿಂದ ಆದಿವಸ ಮಾಡಬೇಕೆಂದಿರುವ ಕಾರ್ಯಗಳನ್ನು ವಿಜ್ಞಾಪನೆ ಮಾಡಬೇಕು.

೬೭. ಪುನಃ ಅರ್ಘ್ಯವನ್ನೂ ಪುಷ್ಪಾಂಜಲಿಯನ್ನೂ ಕೊಟ್ಟು ಪೂಜಾವಿಧಿಗನುಸಾರವಾಗಿ ಮುದ್ರೆಗಳನ್ನು ತೋರಿಸಿ, ದೇವನನ್ನು ಕ್ಷಮಾಪಣೆಯನ್ನು ಕೇಳಿಕೊಂಡು ದೇವತೋದ್ವಾಸನೆಯನ್ನು ಮಾಡಿ ಆ ದೇವನೇ ತನ್ನ ಆತ್ಮವೆಂಬುದಾಗಿ ಮನಸ್ಸಿನಲ್ಲಿ ಭಾವಿಸಬೇಕು.

೬೮. ಮನುಷ್ಯನು ತನ್ನ ಶರೀರಕ್ಕೆ ರೋಗಾದಿಬಾಧಾರೂಪವಾದ ವಿಶೇಷ ಕಷ್ಟಗಳು ಪ್ರಾಪ್ತವಾದಕಾಲದಲ್ಲಿ ಪಾದ್ಯಾದಿಮುಖವಾಸಾಂತವಾಗಲಿ, ಅರ್ಘ್ಯಾದಿಗಳಲ್ಲಿ ಒಂದನ್ನಾಗಲಿ, ಪುಷ್ಪಾಂಜಲಿ ಮಂತ್ರವನ್ನಾಗಲಿ ಭಕ್ತಿಯಿಂದ ಪೂಜಾಕಾರ್ಯವನ್ನು ಮಾಡಬೇಕು.

೬೯. ಇಲ್ಲಿ ಹೇಳಿದ ಪೂಜಾಧರ್ಮಗಳೆಲ್ಲವೂ ಭಕ್ತಿಯಿಂದ ಮಾಡಿದರೆ ಪೂರ್ಣವಾಗಿ ಮಾಡಿದಂತಾಗುವುದು. ಮನುಷ್ಯನು ತನ್ನ ಪ್ರಾಣವಿರುವವರೆಗೂ ಪ್ರತಿದಿನವೂ ಶಿವಪೂಜೆಯನ್ನು ಮಾಡದೆ ಭೋಜನವನ್ನು ಮಾಡಕೂಡದು.

**ಯದಿ ಪಾಪಸ್ತು ಭುಂಜೀತ ಸ್ವೈರಂ ತಸ್ಯ ನ ನಿಷ್ಕೃತಿಃ ।**
**ಪ್ರಮಾದೇನ ತು ಭುಂಕ್ತೇ ಚೇತ್ತದುದ್ಗೀರ್ಯ ಪ್ರಯತ್ನತಃ ॥ ೭೦ ॥**

**ಸ್ನಾತ್ವಾ ದ್ವಿಗುಣಮಭ್ಯರ್ಚ್ಯ ದೇವಂ ದೇವೀಮುಪೋಷ್ಯ ಚ ।**
**ಶಿವಸ್ಯಾಯುತಮಭ್ಯಸ್ಯೇದ್ಬ್ರಹ್ಮಚರ್ಯಪುರಸ್ಸರಂ ॥ ೭೧ ॥**

**ಪರೇದ್ಯುಶ್ಶಕ್ತಿತೋ ದತ್ವಾ ಸುವರ್ಣಾದ್ಯಂ ಶಿವಾಯ ಚ ।**
**ಶಿವಭಕ್ತಾಯ ವಾ ಕೃತ್ವಾ ಮಹಾಪೂಜಾಂ ಶುಚಿರ್ಭವೇತ್ ॥ ೭೨ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-**
**ಮುತ್ತರಭಾಗೇ ಶಾಸ್ತ್ರೋಕ್ತಶಿವಪೂಜಾವರ್ಣನಂ ನಾಮ**
**ಚತುರ್ವಿಂಶೋಽಧ್ಯಾಯಃ**

---

೭೦-೭೧. ಪಾಪಿಯಾದ ಮನುಜನು ಶಿವಪೂಜೆಯನ್ನು ಮಾಡದೆ ತನ್ನ ಮನಬಂದಂತೆ ಭೋಜನವನ್ನು ಮಾಡಿದರೆ ಅವನಿಗೆ ಪ್ರಾಯಶ್ಚಿತ್ತವೇ ಇಲ್ಲವು. ಪ್ರಮಾದದಿಂದ ಶಿವಪೂಜೆಗೆ ಮುಂಚಿತವಾಗಿಯೇ ಭೋಜನವನ್ನು ಮಾಡಿದರೆ ಪ್ರಯತ್ನಪೂರ್ವಕವಾಗಿ ಅದನ್ನು ದಮನಮಾಡಿ ಬಳಿಕ ಸ್ನಾನ ಮಾಡಿ ದೇವೀಸಹಿತನಾದ ಶಿವನನ್ನು ದ್ವಿಗುಣವಾಗಿ ಪೂಜಿಸಿ ಆದಿನ ಉಪವಾಸ ವಿದ್ದು ಬ್ರಹ್ಮಚರ್ಯವ್ರತದಿಂದ ಹತ್ತುಸಾವಿರ ಶಿವಪಂಚಾಕ್ಷರಮಂತ್ರವನ್ನು ಜಪಿಸ ಬೇಕು.

೭೨. ಮಾರನೆಯದಿನ ತನ್ನ ಶಕ್ತ್ಯನುಸಾರವಾಗಿ ಶಿವಪ್ರೀತಿಗಾಗಿ ಶಿವಭಕ್ತನಿಗೆ ಸುವರ್ಣನಾಣ್ಯಗಳನ್ನು ದಾನಮಾಡಿ ಮಹಾಪೂಜೆಯನ್ನು ಮಾಡಿ ದರೆ ಪರಿಶುದ್ಧನಾಗುವನು.

ಇಲ್ಲಿಗೆ ಶ್ರೀಶಿವಮಹಾಪುರಾಣದ ಏಳನೆಯ ವಾಯವೀಯಸಂಹಿತೆಯ
ಉತ್ತರಭಾಗದಲ್ಲಿ ಶಿವಪೂಜಾವರ್ಣನವೆಂಬ ಇಪ್ಪತ್ತನಾಲ್ಕನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮಹಾ ಪುರಾಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ಪಂಚವಿಂಶೋಽಧ್ಯಾಯಃ

॥ ಉಪಮನ್ಯುರುವಾಚ ॥

**ಅನುಕ್ತಂ ಚಾತ್ರ ಪೂಜಾಯಾಃ ಕ್ರಮಲೋಪಭಯಾದಿವ ।**
**ಯತ್ತದನ್ಯತ್ಪ್ರವಕ್ಷ್ಯಾಮಿ ಸಮಾಸಾನ್ನ ತು ವಿಸ್ತರಾತ್ ॥ ೧ ॥**

**ಹವಿರ್ನಿವೇದನಾತ್ಪೂರ್ವಂ ದೀಪದಾನಾದನಂತರಂ ।**
**ಕುರ್ಯಾದಾವರಣಾಭ್ಯರ್ಚಾಂ ಪ್ರಾಪ್ತೇ ನೀರಾಜನೇಽಥವಾ ॥ ೨ ॥**

---

### ಇಪ್ಪತ್ತೈದನೆಯ ಅಧ್ಯಾಯವು.

೧. ಉಪಮನ್ಯುವು ಹೇಳಿದನು:—ಶಿವಪೂಜೆಯಲ್ಲಿ ಕ್ರಮವು ಲೋಪವಾದೀತೆಂಬ ಭಯದಿಂದ ಹಿಂದಿನ ಅಧ್ಯಾಯದಲ್ಲಿ ಹೇಳದಿಸುವ ವಿಷಯಗಳನ್ನು ಈ ಅಧ್ಯಾಯದಲ್ಲಿ ವಿಸ್ತಾರವಾಡದೆ ಸಂಗ್ರಹವಾಗಿ ಹೇಳುವೆನು.

೨. ಹವಿಸ್ಸನ್ನು ನಿವೇದನ ಮಾಡುವುದಕ್ಕಿಂತ ಮುಂಚೆ ದೀಪದಾನವನ್ನು ಮಾಡಿದಮೇಲೆಯೂ, ಅಥವಾ ನೀರಾಜನವನ್ನು ಮಾಡುವುದಕ್ಕಿಂತ ಮುಂಚೆಯೂ ಆವರಣಪೂಜೆಯನ್ನು ಮಾಡಬೇಕು.

ತತ್ರೇಶಾನಾದಿ ಸದ್ಯಾಂತಂ ರುದ್ರಾದ್ಯಸ್ತ್ರಾಂತಮೇವ ಚ ।
ಶಿವಸ್ಯ ವಾ ಶಿವಾಯಾಶ್ಚ ಪ್ರಥಮಾವರಣೇ ಜಪೇತ್ ॥ ೩ ॥

ಐಶಾನ್ಯಾಂ ಪೂರ್ವಭಾಗೇ ಚ ದಕ್ಷಿಣೇ ಚೋತ್ತರೇ ತಥಾ ।
ಪಶ್ಚಿಮೇ ಚ ತಥಾಗ್ನೇಯ್ಯಾಮೈಶಾನ್ಯಾಂ ನೈರ್ಋತೇ ತಥಾ ॥ ೪ ॥

ವಾಯವ್ಯಾಂ ಪುನರೈಶಾನ್ಯಾಂ ಚತುರ್ದಿಕ್ಷು ತತಃ ಪರಂ ।
ಗರ್ಭಾವರಣಮಾಖ್ಯಾತಂ ಮಂತ್ರಸಂಘಾತಮೇವ ವಾ ॥ ೫ ॥

ಹೃದಯಾದ್ಯಸ್ತ್ರಪರ್ಯಂತಮಥವಾಪಿ ಸಮರ್ಚಯೇತ್ ।
ತದ್ಬಹಿಃ ಪೂರ್ವತಃ ಶಕ್ರಂ ಯಮಂ ದಕ್ಷಿಣತೋ ಯಜೇತ್ ॥ ೬ ॥

ವರುಣಂ ವಾರುಣೇ ಭಾಗೇ ಧನದಂ ಚೋತ್ತರೇ ಬುಧಃ ।
ಈಶಮೈಶೇಽನಲಂ ಸ್ವೀಯೇ ನೈರ್ಋತೇ ನಿರ್ಋತಿಂ ಯಜೇತ್ ॥ ೭ ॥

ಮಾರುತೇ ಮಾರುತಂ ವಿಷ್ಣುಂ ನೈರ್ಋತೇ ವಿಧಿಮೈಶ್ವರೇ ।
ಬಹಿಃ ಪದ್ಮಸ್ಯ ವಜ್ರಾದ್ಯಾನ್ಯಬ್ಜಾಂತಾನ್ಯಾಯುಧಾನ್ಯಪಿ ॥ ೮ ॥

---

೩. ಶಿವನ ಅಥವಾ ದೇವಿಯ ಪೂಜಾವಿಷಯದಲ್ಲಿ ಪ್ರಥಮಾವರಣದಲ್ಲಿ ಈಶಾನಾದಿ ಸದ್ಯೋಜಾತಾಂತವಾದ ಪಂಚಬ್ರಹ್ಮರನ್ನು, ಮಂತ್ರಪೂರ್ವಕವಾಗಿ ಹೃದಯಾಧಿ ಅಸ್ತ್ರಾಂತವಾದ ಆರುಅಂಗನ್ಯಾಸಗಳನ್ನು ಮಾಡಿ ಜಪಮಾಡಬೇಕು.

೪–೫. ಈಶಾನ, ಪೂರ್ವ, ದಕ್ಷಿಣ, ಉತ್ತರ, ಪಶ್ಚಿಮ, ಆಗ್ನೇಯ, ಈಶಾನ್ಯ, ನೈಋತ್ಯ, ವಾಯವ್ಯ, ಮತ್ತೆ ಈಶಾನ್ಯ, ಮತ್ತೆ ಪೂರ್ವಾದಿ ನಾಲ್ಕು ದಿಕ್ಕುಗಳು ಇವುಗಳಲ್ಲಿ ಕ್ರಮವಾಗಿ ಮಂತ್ರಪೂರ್ವಕವಾಗಿ ಪೂಜೆಯನ್ನು ಮಾಡಬೇಕು. ಇದಕ್ಕೆ ಗರ್ಭಾವರಣವೆಂದು ಹೆಸರು.

೬–೮. ಹೃದಯಾದಿ ಅಸ್ತ್ರಾಂತವಾಗಿ ಷಡಂಗನ್ಯಾಸವನ್ನು ಮಾಡಿ ಪೂಜಿಸಬೇಕು. ಪೂರ್ವದಲ್ಲಿ ದೇವೇಂದ್ರ, ದಕ್ಷಿಣದಲ್ಲಿ ಯಮ, ಪಶ್ಚಿಮದಲ್ಲಿ ವರುಣ, ಉತ್ತರದಲ್ಲಿ ಕುಬೇರ, ಈಶಾನ್ಯದಲ್ಲಿ ಈಶ್ವರ, ಆಗ್ನೇಯದಲ್ಲಿ ಅಗ್ನಿ, ನೈಋತ್ಯದಲ್ಲಿ ನಿರ್ಋತಿ, ವಾಯವ್ಯದಲ್ಲಿ ವಾಯು, ನೈಋತ್ಯದಲ್ಲಿ ವಿಷ್ಣು, ಈಶಾನ್ಯದಲ್ಲಿ ಬ್ರಹ್ಮ, ಪದ್ಮದಹೊರಗೆ ವಜ್ರಾದಿಪದ್ಮಾಂತವಾದ ಹತ್ತು ಆಯುಧಗಳು ಇವುಗಳನ್ನು ಕ್ರಮವಾಗಿ ಪೂಜಿಸಬೇಕು.

ಪ್ರಸಿದ್ಧರೂಪಾಣ್ಯಾಕಾಶಾಸು ಲೋಕೇಶಾನಾಂ ಕ್ರಮಾದ್ಯಜೇತ್ ।
ದೇವಂ ದೇವೀಂ ಚ ಸಂಪ್ರೋಕ್ಷ್ಯ ಸರ್ವಾವರಣದೇವತಾಃ ॥ ೯ ॥

ಬದ್ಧಾಂಜಲಿಪುಟಾ ಧ್ಯೇಯಾಃ ಸಮಾಸೀನಾ ಯಥಾಸುಖಂ ।
ಸರ್ವಾವರಣದೇವಾನಾಂ ಸ್ವಾಭಿಧಾನೈರ್ನಮೋಯುತೈಃ ॥ ೧೦ ॥

ಪುಷ್ಪೈಃ ಸಂಪೂಜನಂ ಕುರ್ಯಾನ್ನತ್ವಾ ಸರ್ವಾನ್ಯಥಾಕ್ರಮಂ ।
ಗರ್ಭಾವರಣಮೇವಾಪಿ ಯಜೇತ್ಸ್ವಾವರಣೇನ ವಾ ॥ ೧೧ ॥

ಯೋಗೇ ಧ್ಯಾನೇ ಜಪೇ ಹೋಮೇ ಬಾಹ್ಯೇವಾಭ್ಯಂತರೇಽಪಿ ವಾ ।
ಹವಿಶ್ಚ ಷಡ್ವಿಧಂ ದೇಯಂ ಶುದ್ಧಂ ಮುದ್ಗಾನ್ನಮೇವ ಚ ॥ ೧೨ ॥

ಪಾಯಸಂ ದಧಿಸಂಮಿಶ್ರಂ ಗೌಡಂ ಚ ಮಧುನಾಪ್ಲುತಂ ।
ಏತೇಷ್ವೇಕಮನೇಕಂ ವಾ ನಾನಾವ್ಯಂಜನಸಂಯುತಂ ॥ ೧೩ ॥

ಗುಡಖಂಡಾನ್ವಿತಂ ದದ್ಯಾನ್ಮಥಿತಂ ದಧಿ ಚೋತ್ತಮಂ ।
ಭಕ್ಷ್ಯಾಣ್ಯಪೂಪಮುಖ್ಯಾನಿ ಸ್ವಾದುಮಂತಿ ಫಲಾನಿ ಚ ॥ ೧೪ ॥

---

೯. ಸಮಸ್ತ ಆವರಣ ದೇವತೆಗಳೂ, ಶಿವದಂಪತಿಗಳನ್ನು ನೋಡುತ್ತ ಕೈಮುಗಿದುಕೊಂಡು ಕುಳಿತಿರುವಂತೆ ಧ್ಯಾನಮಾಡಬೇಕು.

೧೦–೧೧. ಸಮಸ್ತ ಆವರಣದೇವತೆಗಳನ್ನೂ ಅವರವರ ಹೆಸರಿನಿಂದ ನಮೋಂತವಾಗಿ ಹೂಗಳಿಂದ ಪೂಜಿಸಿ ಗರ್ಭಾವರಣದೇವತೆಗಳನ್ನು ಆ ಆವರಣದಲ್ಲಿಯೇ ಪೂಜಿಸಬೇಕು.

೧೨-೧೩. ಯೋಗಾಭ್ಯಾಸದಲ್ಲಿಯಾಗಲಿ, ಧ್ಯಾನದಲ್ಲಿಯಾಗಲಿ, ಜಪ ಹೋಮಗಳಲ್ಲಿಯಾಗಲಿ, ಬಾಹ್ಯಪೂಜೆಯಲ್ಲಿಯಾಗಲಿ, ಮಾನಸಪೂಜೆಯಲ್ಲಾಗಲಿ ಆರುವಿಧವಾದ ಹವಿಸ್ಸು, ಹುಗ್ಗಿ, ಪಾಯಸ, ಮೊಸರು, ಬೆಲ್ಲ, ಜೇನು ಇವುಗಳಲ್ಲಿ ಒಂದನ್ನಾಗಲಿ, ಅನೇಕ ವಸ್ತುಗಳನ್ನಾಗಲಿ, ಬಗೆಬಗೆಯ ವ್ಯಂಜನಗಳಿಂದ ಕೂಡಿದ ನಿವೇದನವನ್ನು ಮಾಡಬೇಕು.

೧೪-೧೭. ಬೆಲ್ಲದ ಪಾನಕ, ನೀರುಬೆರಸಿಲ್ಲದ ಉತ್ತಮವಾದ ಮೊಸರು ಅಪೂಪವೇ ಮುಂತಾದ ಭಕ್ಷ್ಯಗಳು, ರಸವತ್ತಾದ ಹಣ್ಣುಗಳು, ರಕ್ತಚಂದನ,

ರಕ್ತಚಂದನಪುಷ್ಪಾಢ್ಯಂ ಪಾನೀಯಂ ಚಾತಿಶೀತಲಂ ।
ಮೃದು ಏಲಾರಸಾಕ್ತಂ ಚ ಖಂಡಂ ಪೂಗಫಲಸ್ಯ ಚ ॥ ೧೫ ॥

ದಲಾನಿ ನಾಗವಲ್ಲ್ಯಾಶ್ಚ ಯುಕ್ತಾನಿ ಖದಿರಾದಿಭಿಃ ।
ಗೌರಾಣಿ ಸ್ವರ್ಣವರ್ಣಾನಿ ವಿಹಿತಾನಿ ಪಿವಾನಿ ಚ ॥ ೧೬ ॥

ಶೈಲಮೇವ ಸಿತಂ ಚೂರ್ಣಂ ನಾತಿರೂಕ್ಷಂ ನ ದೂಷಿತಂ ।
ಕರ್ಪೂರಂ ಚಾಥ ಕಂಕೋಲಂ ಜಾತ್ಯಾದಿ ಚ ನವಂ ಶುಭಂ ।
ಆಲೇಪನಂ ಚಂದನಂ ಸ್ಯಾನ್ಮೂಲಕಾಷ್ಠಂ ರಜೋಮಯಂ ॥ ೧೭ ॥

ಕಸ್ತೂರಿಕಾ ಕುಂಕುಮಂ ಚ ರಸೋ ಮೃಗಮದಾತ್ಮಕಃ ।
ಪುಷ್ಪಾಣಿ ಸರಭೀಣ್ಯೇವ ಪವಿತ್ರಾಣಿ ಶುಭಾನಿ ಚ ॥ ೧೮ ॥

ನಿರ್ಗಂಧಾನ್ಯುಗ್ರಗಂಧಾನಿ ದೂಷಿತಾನ್ಯುಷಿತಾನಿ ಚ ।
ಸ್ವಯಮೇವ ವಿಶೀರ್ಣಾನಿ ನ ದೇಯಾನಿ ಶಿವಾರ್ಚನೇ ॥ ೧೯ ॥

---

ಹೂಗಳಿಂದ ಕೂಡಿದ ತಣ್ಣನೆಯ ನೀರು, ಯಾಲಕ್ಕಿ, ಅಡಿಕೆ, ಸುಣ್ಣ ಇವುಗಳಿಂದ ಕೂಡಿದ ಮೃದುವಾದ ವೀಳೆಯದೆಲೆ, ಪಚ್ಚಕರ್ಪೂರ, ಜಾಯಿಕಾಯಿ, ಇವುಗಳಿಂದ ಕೂಡಿದ ತಾಂಬೂಲ ಇವುಗಳನ್ನು ನಿವೇದನಮಾಡಬೇಕು. ಸುಗಂಧವಾದ ಶ್ರೀಗಂಧವನ್ನು, ಕಸ್ತೂರಿ ಕುಂಕುಮಕೇಸರಿ ಗೋರೋಜನಗಳಿಂದ ಕೂಡಿಸಿ ಪೂಜಿಸಬೇಕು.

೧೮-೧೯. ಸುಗಂಧವೂ, ಪರಿಶುದ್ಧವೂ, ಮಂಗಳಕರವೂ ಆದ ಹೂವುಗಳನ್ನೇ ಪೂಜಿಸಬೇಕು. ಶಿವಪೂಜೆಗೆ ವಾಸನೆಯಿಲ್ಲದ, ದುರ್ಗಂಧವೂ, ಕ್ರೂರವಾದ ವಾಸನೆಯೂ ಉಳ್ಳ, ಹುಳುಹತ್ತಿದ, ಹಳೆಯದಾದ, ತಾನಾಗಿಯೇ ಗಿಡದಿಂದದುದುರಿದ ಹೂಗಳನ್ನು ಉಪಯೋಗಿಸಕೂಡದು.

ವಾಸಾಂಸಿ ಚ ಮೃದೂನ್ಯೇವ ತಪನೀಯಮಯಾನಿ ಚ ।
ವಿದ್ಯುದ್ವಲಯಕಲ್ಪಾನಿ ಭೂಷಣಾನಿ ವಿಶೇಷತಃ ॥ ೨೦ ॥

ಸರ್ವಾಣ್ಯೇತಾನಿ ಕರ್ಪೂರನಿರ್ಯಾಸಾಗರುಚಂದನೈಃ ।
ಆಧೂಪಿತಾನಿ ಪುಷ್ಪೈಶ್ಚ ವಾಸಿತಾನಿ ಸಮಂತತಃ ॥ ೨೧ ॥

ಚಂದನಾಗುರುಕರ್ಪೂರಕಾಷ್ಠಗುಗ್ಗುಲುಚೂರ್ಣಕೈಃ ।
ಘೃತೇನ ಮಧುನಾ ಚೈವ ಸಿದ್ಧೋ ಧೂಪಃ ಪ್ರಶಸ್ಯತೇ ॥ ೨೨ ॥

ಕಪಿಲಾಸಂಭವೇನೈವ ಘೃತೇನಾತಿಸುಗಂಧಿನಾ ।
ನಿತ್ಯಂ ಪ್ರದೀಪಿತಾ ದೀಪಾಃ ಶಸ್ತಾಃ ಕರ್ಪೂರಸಂಯುತಾಃ ॥ ೨೩ ॥

ಪಂಚಗವ್ಯಂ ಚ ಮಧುರಂ ಪಯೋ ದಧಿ ಘೃತಂ ತಥಾ ।
ಕಪಿಲಾಸಂಭವಂ ಶಂಭೋರಿಷ್ಟಂ ಸ್ನಾನೇ ಚ ಪಾನಕೇ ॥ ೨೪ ॥

ಆಸನಾನಿ ಚ ಭದ್ರಾಣಿ ಗಜದಂತಮಯಾನಿ ಚ ।
ಸುವರ್ಣರತ್ನಯುಕ್ತಾನಿ ಚಿತ್ರಾಣ್ಯಾಸ್ತರಣಾನಿ ಚ ॥ ೨೫ ॥

---

೨೦-೨೧. ಮೃದುವಾದ, ಸುವರ್ಣಮಯವಾದ ವಸ್ತ್ರಗಳನ್ನೂ, ಮಿಂಚಿನಂತೆ ಹೊಳೆಯುವ ಆಭರಣಗಳನ್ನೂ, ಕರ್ಪೂರ, ಅಗರು, ಧೂಪ, ಇವುಗಳಿಂದಲೂ ಹೂವುಗಳಿಂದಲೂ ವಾಸನೆಯನ್ನು ಕಟ್ಟಿ ಪೂಜಿಸಬೇಕು.

೨೨-೨೩. ಚಂದನ, (ಶ್ರೀಗಂಧ) ಅಗುರು, ಕರ್ಪೂರದಕಡ್ಡಿ, ಗುಗ್ಗುಲದ ಹುಡಿ, ತುಪ್ಪ, ಜೇನು ಇವುಗಳನ್ನು ಕೂಡಿಸಿ ಮಾಡಿದ ಧೂಪವು ಉತ್ತಮವಾದುದು. ಕಪಿಲೆಯ ಹಸುವಿನಿಂದ ಹುಟ್ಟಿದ ತುಪ್ಪದಿಂದ ಪ್ರತಿದಿನವೂ ಕರ್ಪೂರದೊಡನೆ ಸೇರಿಸಿ ಹತ್ತಿಸಿದ ದೀಪವು ಶಿವಪೂಜೆಗೆ ಅತ್ಯಂತ ಪ್ರಶಸ್ತವಾದುದು.

೨೪. ಹಾಲು, ಮೊಸರು, ತುಪ್ಪ ಮುಂತಾದುವು ಕಪಿಲೆಯ ಹಸುವಿನಿಂದಾದುದೇ ಶಿವನಿಗೆ ಸ್ನಾನಕ್ಕೂ, ಪಾನಕ್ಕೂ ಇಷ್ಟವಾದುದು.

೨೫-೨೬. ಪೀಠಗಳಲ್ಲಿ, ಮಂಗಳಕರವಾಗಿ ಆನೆಯಕೊಂಬಿನಿಂದ ಚಿತ್ರಕೆಲಸಗಳನ್ನು ಮಾಡಿದುದಾಗಿಯೂ, ಚಿನ್ನ, ರತ್ನಗಳ ಅಲಂಕಾರಗಳನ್ನು ಮಾಡಿ

ಮೃಧೂಪಧಾನಯುಕ್ತಾನಿ ಸೂಕ್ಷ್ಮತೂಲಮಯಾನಿ ಚ ।
ಉಚ್ಚಾವಚಾನಿ ರಮ್ಯಾಣಿ ಶಯನಾನಿ ಸುಖಾನಿ ಚ ॥ ೨೬ ॥

ನದ್ಯಾಸ್ಸಮುದ್ರಗಾಮಿನ್ಯಾ ನದಾದ್ವಾಪ್ಯಃ ಸಮಾಹೃತಂ ।
ಶೀತಂ ಚ ವಸ್ತ್ರಪೂತಂ ತದ್ವಿಶಿಷ್ಟಂ ಸ್ನಾನಪಾನಯೋಃ ॥ ೨೭ ॥

ಛತ್ರಂ ಶಶಿನಿಭಂ ಚಾರು ಮುಕ್ತಾದಾಮವಿರಾಜಿತಂ ।
ನವರತ್ನ ಚಿತಂ ದಿವ್ಯಂ ಹೇಮದಂಡಮನೋಹರಂ ॥ ೨೮ ॥

ಚಾಮರೇ ಚ ಸಿತೇ ಸೂಕ್ಷ್ಮೇ ಚಾಮೀಕರಪರಿಷ್ಕೃತೇ ।
ರಾಜಹಂಸದ್ವಯಾಕಾರೇ ರತ್ನದಂಡೋಪಶೋಭಿತೇ ॥ ೨೯ ॥

ದರ್ಪಣಂ ಚಾಪಿ ಸುಸ್ನಿಗ್ಧಂ ದಿವ್ಯಗಂಧಾನುಲೇಪನಂ ।
ಸಮಂತಾದ್ರತ್ನಸಂಛನ್ನಂ ಸ್ರಗ್ವರೈಶ್ಚಾಪಿ ಭೂಷಿತಂ ॥ ೩೦ ॥

---

ವಿಚಿತ್ರವಾದ ಹಾಸುಗೆಗಳನ್ನು ಹಾಸಿ ಮೃದುವಾದ ದಿಂಬುಗಳನ್ನು ಇಟ್ಟು ಸೂಕ್ಷ್ಮವಾದ ಹತ್ತಿಗಳಿಂದ ಮಾಡಿದ ಮನೋಹರವಾದ ಸುಖಕರವಾದ ಹಾಸಿಗೆಗಳನ್ನು ಇಟ್ಟಿರಬೇಕು.

೨೭. ಸಮುದ್ರಕ್ಕೆ ಹೋಗಿ ಸೇರುವ ನದ ನದಿಗಳ ನೀರನ್ನು ತಂದು ವಸ್ತ್ರದಿಂದ ಶೋಧಿಸಿ ತಣ್ಣಗೆಮಾಡಿಮದನ್ನು ಶಿವನ ಸ್ನಾನಪಾನಾರ್ಥವಾಗಿ ಉಪಯೋಗಿಸುವುದು ಶ್ರೇಷ್ಠವಾದುದು.

೨೮-೩೦. ಚಿನ್ನದ ದಂಡವನ್ನು ಹಾಕಿ ನವರತ್ನಗಳನ್ನು ಕೆತ್ತಿ ಮುತ್ತಿನ ಸರಗಳಿಂದ ಅಲಂಕಾರಮಾಡಿದ, ಚಂದ್ರನಂತೆ ಹೊಳೆಯುವ ಶ್ವೇತಛತ್ರಿಯನ್ನೂ, ರತ್ನಗಳನ್ನು ಕೆತ್ತಿದ ಚಿನ್ನದ ಹುಡಿಯನ್ನು ಹಾಕಿ ರಾಜಹಂಸಪಕ್ಷಿಯಂತೆ ಶೋಭಿಸುವ ಸೂಕ್ಷ್ಮವಾದ ಬಿಳಿಯ ಚಾಮರಗಳನ್ನೂ, ನಯವಾಗಿ ಸುಗಂಧಗಳನ್ನು ಬಳಿದು ಸುತ್ತಲೂ ರತ್ನಗಳ ಅಲಂಕಾರಮಾಡಿ ಹೂವಿನ ಸರಗಳಿಂದ ಅಲಂಕರಿಸಿದ ಕನ್ನಡಿಯನ್ನೂ ಶಿವನ ಪೂಜೋಪಚಾರಗಳಿಗೆ ಉಪಯೋಗಿಸಬೇಕು.

ಗಂಭೀರನಿನದಃ ಶಂಖೋ ಹಂಸಕುಂದೇಂದುಸನ್ನಿಭಃ ।
ಆಸ್ಯಪೃಷ್ಠಾದಿದೇಶೇಷು ರತ್ನಚಾಮೀಕರಾಚಿತಃ ॥ ೩೧ ॥

ಕಾಹಲಾನಿ ಚ ರಮ್ಯಾಣಿ ನಾನಾನಾದಕರಾಣಿ ಚ ।
ಸುವರ್ಣನಿರ್ಮಿತಾನ್ಯೇವ ಮೌಕ್ತಿಕಾಲಂಕೃತಾನಿ ಚ ॥ ೩೨ ॥

ಭೇರಿಮೃದಂಗಮುರಜತಿಮಿಚ್ಛಪಟಹಾದಯಃ ।
ಸಮುದ್ರಕಲ್ಪಸನ್ನಾದಾಃ ಕಲ್ಪನೀಯಾಃ ಪ್ರಯತ್ನತಃ ॥ ೩೩ ॥

ಭಾಂಡಾನ್ಯಪಿ ಚ ರಮ್ಯಾಣಿ ಪಾತ್ರಾಣ್ಯಪಿ ಚ ಕೃತ್ಸ್ನಶಃ ।
ತದಾಧಾರಾಣಿ ಸರ್ವಾಣಿ ಸೌವರ್ಣಾನ್ಯೇವ ಸಾಧಯೇತ್ ॥ ೩೪ ॥

ಆಲಯಂ ಚ ಮಹೇಶಸ್ಯ ಶಿವಸ್ಯ ಪರಮಾತ್ಮನಃ ।
ರಾಜಾವಸಥವತ್ಕಲ್ಪ್ಯಂ ಶಿಲ್ಪಶಾಸ್ತ್ರೋಕ್ತಲಕ್ಷಣಂ ॥ ೩೫ ॥

---

೩೧-೩೩. ರತ್ನದಿಂದಲೂ, ಚಿನ್ನದಿಂದಲೂ ಅಲಂಕಾರಮಾಡಿ ಹಂಸದಂತೆಯೂ, ಚಂದ್ರನಂತೆಯೂ, ಬೆಳ್ಳಗೆ ಹೊಳೆಯುವ ಗಂಭೀರವಾದ ಧ್ವನಿ ಮಾಡುವ ಶಂಖವನ್ನೂ, ಚಿನ್ನದಿಂದ ಮಾಡಿ ಮುತ್ತುಗಳನ್ನಲಂಕರಿಸಿದ ಬಗೆ ಬಗೆಯ ಧ್ವನಿಮಾಡುವ ಕಹಳೆ ಮುಂತಾದ ವಾದ್ಯಗಳನ್ನೂ, ನಗಾರಿ ಮೃದಂಗ ಮುರಜ, ತಿಮಿಚ್ಛ, ತಮಟೆ ಮುಂತಾದ ಸಮುದ್ರಕ್ಕೆ ಸಮವಾದ ಧ್ವನಿಯನ್ನು ಮಾಡುವ ವಾದ್ಯಗಳನ್ನು ಪೂಜಾಕಾಲದಲ್ಲಿ ಪ್ರಯತ್ನಪೂರ್ವಕವಾಗಿ ಉಪಯೋಗಿಸಬೇಕು.

೩೪-೩೮. ಶಿವಪೂಜೆಗೆ ಉಪಯೋಗಿಸುವ ಸಮಸ್ತ ಪಾತ್ರೆಗಳೂ ಚಿನ್ನದಿಂದಲೇ ಮಾಡಿದವುಗಳಾಗಿರಬೇಕು. ಪರಮಾತ್ಮನಾದ ಶಿವನಿಗೆ ಆಲಯವನ್ನು ಅರಮನೆಯಂತೆ ಶಿಲ್ಪಶಾಸ್ತ್ರದಲ್ಲಿ ಹೇಳಿದ ಲಕ್ಷಣಗಳಿಗೆ ಅನುಸಾರವಾಗಿ ಕಲ್ಪಿಸಬೇಕು. ಆ ಆಲಯದಲ್ಲಿ ಎತ್ತರವಾದ ಪ್ರಾಕಾರಗೋಡೆಗಳೂ, ಚಿನ್ನದಿಂದ ಮಾಡಿ ರತ್ನಖಚಿತವಾದ ನೂರಾರು ಕುಂಭಗಳೂ ಮುತ್ತಿನಸರದ ಮೇಲುಕಟ್ಟು

ಉಚ್ಚಪ್ರಾಕಾರಸಂಭಿನ್ನಂ ಭೂಧರಾಕಾರಗೋಪುರಂ ।
ಅನೇಕರತ್ನಸಂಛನ್ನಂ ಹೇಮದ್ವಾರಕಪಾಟಕಂ ॥ ೩೬ ॥

ತಪ್ತಜಾಂಬೂನದಮಯಂ ರತ್ನಸ್ತಂಭಶತಾವೃತಂ ।
ಮುಕ್ತಾದಾಮವಿತಾನಾಢ್ಯಂ ವಿದ್ರುಮದ್ವಾರತೋರಣಂ ॥ ೩೭ ॥

ಚಾಮೀಕರಮಯೈರ್ದಿವ್ಯೈರ್ಮುಕುಟೈಃ ಕುಂಭಲಕ್ಷಣೈಃ ।
ಅಲಂಕೃತಶಿರೋಭಾಗಮಸ್ತ್ರರಾಜೇನ ಚಿಹ್ನಿತಂ ॥ ೩೮ ॥

ರಾಜನ್ಯಾರ್ಹನಿವಾಸೈಶ್ಚ ರಾಜವೀಥ್ಯಾದಿಶೋಭಿತೈಃ ।
ಪ್ರೋಚ್ಛ್ರಿತಪ್ರಾಂಶುಶಿಖರೈಃ ಪ್ರಾಸಾದೈಶ್ಚ ಸಮಂತತಃ ॥ ೩೯ ॥

ಆಸ್ಥಾನಸ್ಥಾನವರ್ಯೈಶ್ಚ ಸ್ಥಿತೈರ್ದಿಕ್ಷು ವಿದಿಕ್ಷು ಚ ।
ಅತ್ಯಂತಾಲಂಕೃತಪ್ರಾಂತಮಂತರಾವರಣೈರಿವ ॥ ೪೦ ॥

ಉತ್ತಮಸ್ತ್ರೀಸಹಸ್ರೈಶ್ಚ ನೃತ್ಯಗೇಯವಿಶಾರದೈಃ ।
ವೇಣುವೀಣಾವಿದಗ್ಧೈಶ್ಚ ಪುರುಷೈರ್ಬಹುಭಿರ್ಯುತಂ ॥ ೪೧ ॥

---

ಗಳೂ, ಹವಳದ ಬಾಗಿಲುವಾಡಗಳೂ, ಇರಬೇಕು. ಆ ಆಲಯದ ತಲೆಯಮೇಲೆ ಗಡಿಗೆಯ ಆಕಾರದ ಚಿನ್ನದ ಕಲಶಗಳೂ ಇರಬೇಕು. ಆ ಕಲಶದ ಸಮೀಪದಲ್ಲಿ ತ್ರಿಶೂಲವೆಂಬ ಶ್ರೇಷ್ಠವಾದ ಅಸ್ತ್ರದಿಂದ ಗುರುತಿಗಾಗಿ ಅಲಂಕರಿಸಬೇಕು.

೩೯-೪೧. ಆ ಶಿವಾಲಯದ ಸುತ್ತಲೂ ರಾಜಪುತ್ರರು ವಾಸಮಾಡಲು ಯೋಗ್ಯವಾದ ಉಪ್ಪರಿಗೆ ಮನೆಗಳೂ, ರಾಜಬೀದಿಗಳೂ ಇರಬೇಕು. ಅವುಗಳು ಎಂಟುದಿಕ್ಕುಗಳಲ್ಲಿಯೂ ಅಲಂಕಾರವಾಗಿ ಒಳಗಿನ ಮತ್ತೊಂದು ಆವರಣದಂತೆ ಪ್ರಕಾಶಿಸುತ್ತಿರಬೇಕು. ಆ ಮನೆಗಳಲ್ಲಿ ನೃತ್ಯವನ್ನೂ, ಗಾನವನ್ನೂ ಚೆನ್ನಾಗಿ ಕಲಿತ ಉತ್ತಮರಾದ ಅನೇಕ ಸ್ತ್ರೀಯರೂ ವೀಣೆ, ಕೊಳಲು ಈ ವಾದ್ಯಗಳಲ್ಲಿ ಪಂಡಿತರಾದ ಅನೇಕ ಪುರುಷರೂ ಇರಬೇಕು.

ರಕ್ಷಿತಂ ರಕ್ಷಿಭಿರ್ವೀರೈರ್ಗಜವಾಜಿರಥಾನ್ವಿತೈಃ ।
ಅನೇಕಪುಷ್ಪವಾಟೀಭಿರನೇಕೈಶ್ಚ ಸರೋವರೈಃ ॥ ೪೨ ॥

ದೀರ್ಘಿಕಾಭಿರನೇಕಾಭಿರ್ದಿಗ್ವಿದಿಕ್ಷು ವಿರಾಜಿತಂ ।
ವೇದವೇದಾಂತತತ್ತ್ವಜ್ಞೈಶ್ಶಿವಶಾಸ್ತ್ರಪರಾಯಣೈಃ ॥ ೪೩ ॥

ಶಿವಾಶ್ರಮರತೈರ್ಭಕ್ತೈಃ ಶಿವಶಾಸ್ತ್ರೋಕ್ತಲಕ್ಷಣೈಃ ।
ಶಾಂತೈಃ ಸ್ಮಿತಮುಖೈಃ ಸ್ಫೀತೈಃ ಸದಾಚಾರಪರಾಯಣೈಃ ॥ ೪೨ ॥

ಶೈವೈರ್ಮಾಹೇಶ್ವರೈಶ್ಚೈವ ಶ್ರೀಮದ್ಭಿಃ ಸೇವಿತದ್ವಿಜೈಃ ।
ಏವಮಂತರ್ಬಹಿರ್ವಾಥ ಯಥಾಶಕ್ತಿ ವಿನಿರ್ಮಿತೈಃ ॥ ೪೫ ॥

ಸ್ಥಾನೇ ಶಿಲಾಮಯೇ ದಾಂತೇ ದಾರವೇ ಚೇಷ್ಟಕಾಮಯೇ ।
ಕೇವಲಂ ಮೃಣ್ಮಯೇ ವಾಽಪಿ ಪುಣ್ಯಾರಣ್ಯೇಽಥ ವಾ ಗಿರೌ ॥ ೪೬ ॥

---

೪೨. ಆನೆ, ಕುದುರೆ, ರಥ, ಕಾಲಾಳುಗಳು ಎಂಬ ಚತರಂಗಸೇನೆಯು ಆ ಶಿವಾಲಯವನ್ನು ರಕ್ಷಿಸಬೇಕು. ಆ ಆಲಯದ ಸುತ್ತಲೂ ಅನೇಕ ಹೂತೋಟಗಳೂ, ಸರೋವರಗಳೂ, ಇಳಿಯುವ ಭಾವಿಗಳೂ ಇರಬೇಕು.

೪೩–೪೫. ವೇದವನ್ನೂ ಉಪನಿಷತ್ತುಗಳ ತತ್ತ್ವವನ್ನೂ ತಿಳಿದು ಶೈವಾಗಮಶಾಸ್ತ್ರವನ್ನು ಸಂಪೂರ್ಣವಾಗಿ ಅಭ್ಯಾಸಮಾಡಿ ಆ ಶಾಸ್ತ್ರದಲ್ಲಿ ಹೇಳುವ ಲಕ್ಷಣಗಳಿಂದ ಕೂಡಿದ ವರ್ಣಾಶ್ರಮಧರ್ಮವನ್ನನುಸರಿಸಿರುವ ಪುಣ್ಯವಂತರಾದ ಶೈವರು ಮಾಹೇಶ್ವರರು ಇವರುಗಳಿಂದ ಒಳಗೂ, ಹೊರಗೂ ಆಲಯವು ತುಂಬಿರಬೇಕು.

೪೬–೪೭. ಹೀಗೆ ಒಳಗೂ ಹೊರಗೂ ಶಕ್ತ್ಯನುಸಾರವಾಗಿ ಕಟ್ಟಿಸಿದ ಕಲ್ಲಿನ, ಮರದ, ಇಟ್ಟಿಗೆಯ ಅಥವಾ ಮಣ್ಣಿನ ದೇವಾಲಯದಲ್ಲಿಯಾಗಲಿ ಪುಣ್ಯಕರವಾದ ಅರಣ್ಯ, ಪರ್ವತ, ನದಿ ಮುಂತಾದ ಪ್ರದೇಶದಲ್ಲಿಯಾಗಲಿ, ಮನೆಯಲ್ಲಿಯೇ ಪರಿಶುದ್ಧವಾದ ಪ್ರದೇಶದಲ್ಲಿಯಾಗಲಿ, ಧನವಂತನಾಗಲಿ, ದರಿದ್ರನಾಗಲಿ

ನದ್ಯಾಂ ದೇವಾಲಯೇಽನ್ಯತ್ರ ದೇಶೇ ವಾಥ ಗೃಹೇ ಶುಭೇ ।
ಆಢ್ಯೋ ವಾಽಥ ದರಿದ್ರೋ ವಾ ಸ್ವಕಾಂ ಶಕ್ತಿಮವಂಚಯನ್ ॥ ೪೭ ॥

ದ್ರವ್ಯೈರ್ನ್ಯಾಯಾರ್ಜಿತೈರೇವ ಭಕ್ತ್ಯಾ ದೇವಂ ಸಮರ್ಚಯೇತ್ ।
ಅಥಾನ್ಯಾಯಾರ್ಜಿತೈಶ್ಚಾಪಿ ಭಕ್ತ್ಯಾ ಚೇಚ್ಛಿವಮರ್ಚಯೇತ್ ।
ನ ತಸ್ಯ ಪ್ರತ್ಯವಾಯೋಽಸ್ತಿ ಭಾವವಶ್ಯೋ ಯತಃ ಪ್ರಭುಃ ॥ ೪೮ ॥

ನ್ಯಾಯಾರ್ಜಿತೈರಪಿ ದ್ರವ್ಯೈರಭಕ್ತ್ಯಾ ಪೂಜಯೇದ್ಯದಿ ।
ನ ತತ್ಫಲಮವಾಪ್ನೋತಿ ಭಕ್ತಿರೇವಾತ್ರ ಕಾರಣಂ ॥ ೪೯ ॥

ಭಕ್ತ್ಯಾ ವಿತ್ತಾನುಸಾರೇಣ ಶಿವಮುದ್ದಿಶ್ಯ ಯತ್ಕೃತಂ ।
ಅಲ್ಪೇ ಮಹತಿ ವಾ ತುಲ್ಯಂ ಫಲಮಾಢ್ಯದರಿದ್ರಯೋಃ ॥ ೫೦ ॥

ಭಕ್ತ್ಯಾ ಪ್ರಚೋದಿತಃ ಕುರ್ಯಾದಲ್ಪವಿತ್ತೋಽಪಿ ಮಾನವಃ ।
ಮಹಾವಿಭವಸಾರೋಽಪಿ ನ ಕುರ್ಯಾದ್ಭಕ್ತಿವರ್ಜಿತಃ ॥ ೫೧ ॥

ಸರ್ವಸ್ವಮಪಿ ಯೋ ದದ್ಯಾಚ್ಛಿವೇ ಭಕ್ತಿವಿವರ್ಜಿತಃ ।
ನ ತೇನ ಫಲಭಾಕ್ಸ ಸ್ಯಾದ್ಭಕ್ತಿರೇವಾತ್ರ ಕಾರಣಂ ॥ ೫೨ ॥

---

ತನ್ನ ಶಕ್ತ್ಯನುಸಾರವಾಗಿ ವಂಚನೆಯನ್ನು ಮಾಡದೆ ನ್ಯಾಯಮಾರ್ಗದಿಂದ ಸಂಪಾದಿಸಿದ ದ್ರವ್ಯದಿಂದ ಶಿವನನ್ನು ಭಕ್ತಿಯಿಂದ ಪೂಜಿಸಬೇಕು.

೪೮-೫೦. ಶಿವನು ಭಕ್ತಿಗೆ ಅಧೀನನಾದುದರಿಂದ ಅನ್ಯಾಯದಿಂದ ಸಂಪಾದಿಸಿದ ವಸ್ತುಗಳಿಂದ ಪೂಜೆಮಾಡಿದರೂ, ಭಕ್ತಿಯಿಂದ ಪೂಜಿಸಿದರೆ ದೋಷವಾಗುವುದಿಲ್ಲ. ನ್ಯಾಯದಿಂದ ಸಂಪಾದಿಸಿದ ದ್ರವ್ಯದಿಂದಲಾದರೂ, ಭಕ್ತಿ ಇಲ್ಲದೆ ಪೂಜಿಸಿದರೆ ಆ ಪೂಜೆಗೆ ಫಲವಿರುವುದಿಲ್ಲ. ಭಕ್ತಿಯಿಂದ ಶಿವನಿಗೆ ಮಾಡಿದ ಪೂಜೆಯು, ಅಲ್ಪವಾಗಲಿ, ದೊಡ್ಡದಾಗಲಿ ಶ್ರೀಮಂತನಿಗೂ, ದರಿದ್ರನಿಗೂ ಸಮವಾದ ಫಲವನ್ನು ಕೊಡುವುದು.

೫೧-೫೨. ಮನುಷ್ಯನು ದರಿದ್ರನಾದರೂ, ಭಕ್ತಿಯಿಂದ ಪೂಜಿಸಬೇಕು. ಸಕಲಸಂಪತ್ತುಳ್ಳವನಾದರೂ ಭಕ್ತಿಯಿಲ್ಲದೆ ಪೂಜಿಸಬಾರದು. ಭಕ್ತಿಯಿಲ್ಲದೆ ತನ್ನ ಸರ್ವಸ್ವವನ್ನೂ ಶಿವನಿಗೆ ಕೊಟ್ಟರೂ ಅದಕ್ಕೆ ಫಲವು ಬರುವುದಿಲ್ಲ. ಹೀಗಾಗುವುದಕ್ಕೆ ಭಕ್ತಿಯೇ ಮುಖ್ಯಕಾರಣವು.

ನ ತತ್ತಪೋಭಿರತ್ಯುಗ್ರೈರ್ನ ಚ ಸರ್ವೈರ್ಮಹಾಮುಖೈಃ ।
ಗಚ್ಛೇಚ್ಛಿವಪುರಂ ದಿವ್ಯಂ ಮುಕ್ತ್ವಾ ಭಕ್ತಿಂ ಶಿವಾತ್ಮಿಕಾಂ ॥ ೫೩ ॥

ಗುಹ್ಯಾದ್ಗುಹ್ಯತರಂ ಕೃಷ್ಣ ಸರ್ವತ್ರ ಪರಮೇಶ್ವರೇ ।
ಶಿವೇ ಭಕ್ತಿರ್ನ ಸಂದೇಹಸ್ತಯಾ ಭಕ್ತೋ ವಿಮುಚ್ಯತೇ ॥ ೫೪ ॥

ಶಿವಮಂತ್ರಜಪೋ ಧ್ಯಾನಂ ಹೋಮೋ ಯಜ್ಞಸ್ತಪಃ ಶ್ರುತಂ ।
ದಾನಮಧ್ಯಯನಂ ಸರ್ವೇ ಭಾವಾರ್ಥಂ ನಾತ್ರ ಸಂಶಯಃ ॥ ೫೫ ॥

ಭಾವಹೀನೋ ನರಸ್ಸರ್ವಂ ಕೃತ್ವಾಽಪಿ ನ ವಿಮುಚ್ಯತೇ ।
ಭಾವಯುಕ್ತಃ ಪುನಸ್ಸರ್ವಮಕೃತ್ವಾಪಿ ವಿಮುಚ್ಯತೇ ॥ ೫೬ ॥

ಚಾಂದ್ರಾಯಣಸಹಸ್ರೈಶ್ಚ ಪ್ರಾಜಾಪತ್ಯಶತೈಸ್ತಥಾ ।
ಮಾಸೋಪವಾಸೈಶ್ಚಾನ್ಯೈಶ್ಚ ಶಿವಭಕ್ತಸ್ಯ ಕಿಂ ಪುನಃ ॥ ೫೭ ॥

---

೫೩-೫೪. ಶಿವಸ್ವರೂಪವಾದ ಭಕ್ತಿಯಿಲ್ಲದ ಕ್ರೂರವಾದ ತಪಸ್ಸಿನಿಂದಲೂ, ಸಮಸ್ತ ಮಹಾಯಜ್ಞಗಳಿಂದಲೂ, ಶಿವಪುರಕ್ಕೆ ಮನುಜನು ಹೋಗಲಾರನು. ಎಲೈ ಕೃಷ್ಣನೇ! ಶಿವನಲ್ಲಿ ಭಕ್ತಿಯು ಅತ್ಯಂತ ಗೋಪ್ಯವಾದ ವಿಷಯವಾಗಿರುವುದು. ಇಂತಹ ಭಕ್ತಿಯಿಂದ ಭಕ್ತನು ಮೋಕ್ಷವನ್ನು ಪಡೆಯುವುದರಲ್ಲಿ ಸಂದೇಹವಿರುವುದಿಲ್ಲ.

೫೫-೫೬. ಶಿವಮಂತ್ರ, ಜಪ, ಧ್ಯಾನ, ಹೋಮ, ಯಜ್ಞ, ತಪಸ್ಸು, ವೇದಾಧ್ಯಯನ ದಾನ, ಶಾಸ್ತ್ರಜ್ಞಾನ ಇವೆಲ್ಲವೂ ಭಕ್ತಿಯನ್ನೇ ಕೊಡತಕ್ಕವು. ಭಕ್ತಿಯಿಲ್ಲದ ಮನುಜನು ಇವೆಲ್ಲವನ್ನೂ ಮಾಡಿದರೂ, ಅವನಿಗೆ ಮೋಕ್ಷವಾಗುವುದಿಲ್ಲ. ಭಕ್ತಿಯಿಂದ ಕೂಡಿದವನು ಇವೆಲ್ಲವನ್ನೂ ಮಾಡದಿದ್ದರೂ ಅವನಿಗೆ ಮೋಕ್ಷವುಂಟಾಗುವುದು.

೫೭. ಸಾವಿರ ಚಾಂದ್ರಾಯಣವ್ರತಗಳನ್ನು ಮಾಡಲಿ, ನೂರು ಪ್ರಾಜಾಪತ್ಯಕೃಚ್ಛ್ರವನ್ನು ಮಾಡಲಿ, ಮಾಸೋಪವಾಸ ಮುಂತಾದ ಯಾವವ್ರತಗಳಿಂದಲೂ, ಶಿವಭಕ್ತನಿಗೆ ಉಪಯೋಗವಿಲ್ಲ.

ಅಭಕ್ತಾ ಮಾನವಾಶ್ಚಾಸ್ಮಿನ್ಲೋಕೇ ಗಿರಿಗುಹಾಸು ಚ ।
ತಪಂತಿ ಚಾಲ್ಪಭೋಗಾರ್ಥಂ ಭಕ್ತ್ಯೋ ಭಾವೇನ ಮುಚ್ಯತೇ ॥ ೫೮ ॥

ಸಾತ್ತ್ವಿಕಂ ಮುಕ್ತಿದಂ ಕರ್ಮ ಸರ್ವೇ ವೈ ಯೋಗಿನಃ ಸ್ಥಿತಾಃ ।
ರಾಜಸಂ ಸಿದ್ಧಿದಂ ಕುರ್ಯುಃ ಕರ್ಮಿಣೋ ರಜಸಾವೃತಾಃ ॥ ೫೯ ॥

ಅಸುರಾ ರಾಕ್ಷಸಾಶ್ಚೈವ ತಮೋಗುಣಸಮನ್ವಿತಾಃ ।
ಐಹಿಕಾರ್ಥಂ ಯಜಂತೀಶಂ ನರಾಶ್ಚಾನ್ಯೇಽಪಿ ತಾದೃಶಾಃ ॥ ೬೦ ॥

ತಾಮಸಂ ರಾಜಸಂ ವಾಪಿ ಸಾತ್ತ್ವಿಕಂ ಭಾವಮೇವ ಚ ।
ಆಶ್ರಿತ್ಯ ಭಕ್ತ್ಯಾ ಪೂಜಾದ್ಯಂ ಕುರ್ವನ್ಭದ್ರಂ ಸಮಶ್ನುತೇ ॥ ೬೧ ॥

ಯತಃ ಪಾಪಾರ್ಣವಾತ್ತ್ರಾತುಂ ಭಕ್ತಿರ್ನೌರಿವ ನಿರ್ಮಿತಾ ।
ತಸ್ಮಾದ್ಭಕ್ತ್ಯುಪಪನ್ನಸ್ಯ ರಜಸಾ ತಮಸಾ ಚ ಕಿಂ ॥ ೬೨ ॥

---

೫೮. ಭಕ್ತಿಯಿಲ್ಲದ ಮನುಜರು ಈ ಲೋಕದಲ್ಲಿ, ಪರ್ವತಗಳ ಗುಹೆಗಳಲ್ಲಿ ಅಲ್ಪವಾದ ಸುಖಪ್ರಾಪ್ತಿಗಾಗಿ ತಪಸ್ಸುಮಾಡುತ್ತಿರುವರು. ಭಕ್ತನಾದರೋ ತನ್ನ ಮನಸ್ಸಿನ ಭಕ್ತಿಯಿಂದಲೇ ಮೋಕ್ಷವನ್ನು ಪಡೆಯುವನು.

೫೯-೬೦. ಸಾತ್ವಿಕಗುಣದಿಂದ ಕೂಡಿದ ಕರ್ಮಗಳು ಮುಕ್ತಿಯನ್ನು ಕೊಡುವುವು. ಯೋಗಿಗಳು ಸಾತ್ವಿಕಮಾರ್ಗವನ್ನೇ ಅನುಸರಿಸುವರು. ರಜೋಗುಣದಿಂದ ಕೂಡಿದ ಕರ್ಮಮಾರ್ಗಾಸಕ್ತರು ಸಿದ್ಧಿಯನ್ನುಂಟುಮಾಡುವ ರಾಜಸಸ್ವರೂಪವಾದ ಕರ್ಮಗಳನ್ನು ಮಾಡುವರು. ಅಸುರರೂ, ರಾಕ್ಷಸರೂ, ತಮೋಗುಣದಿಂದ ಕೂಡಿದವರು. ಇವರು ಇಹಲೋಕದ ಸುಖಾನುಭವಕ್ಕಾಗಿ ಈಶ್ವರನನ್ನು ಪೂಜಿಸುವರು. ಬೇರೆ ಮನುಜರೂ ಇಂತಹ ಸುಖಾಸಕ್ತರಾದವರಾಗಿಯೇ ಇರುವರು.

೬೧, ಸಾತ್ವಿಕ, ರಾಜಸ, ತಾಮಸಗುಣಗಳನ್ನಾಶ್ರಯಿಸಿ ಭಕ್ತಿಯಿಂದ ಪೂಜೆಮಾಡಿದವರು ಮಂಗಳವನ್ನನುಭವಿಸುವರು.

೬೨. ಪಾಪವೆಂಬ ಸಮುದ್ರವನ್ನು ದಾಟಲು ಭಕ್ತಿಯು ಹಡಗಿನಂತಿರುವುದು. ಆ ಕಾರಣದಿಂದ ಭಕ್ತಿಯಿಂದ ಕೂಡಿದವನಿಗೆ ರಜಸ್ತಮೋಗುಣಗಳಿಂದ ಯಾವ ವಿಧವಾದ ಪ್ರಯೋಜನವೂ, ನಷ್ಟವೂ ಆಗುವುದಿಲ್ಲ.

ಅಂತ್ಯಜೋ ವಾಧಮೋ ವಾಪಿ ಮೂರ್ಖೋ ವಾ ಪತಿತೋಽಪಿ ವಾ ।
ಶಿವಂ ಪ್ರಪನ್ನಶ್ಚೇತ್ಕೃಷ್ಣ ಪೂಜ್ಯಃ ಸರ್ವಸುರಾಸುರೈಃ ॥ ೬೩ ॥

ತಸ್ಮಾತ್ಸರ್ವಪ್ರಯತ್ನೇನ ಭಕ್ತ್ಯೈವ ಶಿವಮರ್ಚಯೇತ್ ।
ಅಭಕ್ತಾನಾಂ ಕ್ವಚಿದಪಿ ಫಲಂ ನಾಸ್ತಿ ಯತಸ್ತತಃ ॥ ೬೪ ॥

ವಕ್ಷ್ಯಾಮ್ಯತಿರಹಸ್ಯಂ ತೇ ಶೃಣು ಕೃಷ್ಣ ವಚೋ ಮಮ ।
ವೇದೈಶ್ಶಾಸ್ತ್ರೈರ್ವೇದವಿದ್ಭಿರ್ವಿಚಾರ್ಯ ಸುವಿನಿಶ್ಚಿತಂ ॥ ೬೫ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-
ಮುತ್ತರಭಾಗೇ ಶಿವಶಾಸ್ತ್ರೋಕ್ತಪೂಜನವರ್ಣನಂ ನಾಮ
ಪಂಚವಿಂಶೋಽಧ್ಯಾಯಃ



೬೩. ಎಲೈ ಕೃಷ್ಣನೇ, ಚಂಡಾಲನಾಗಲಿ, ನೀಚನಾಗಲಿ, ಮೂಢನಾಗಲಿ ಪಾಪಿಯಾಗಲಿ ಶಿವನನ್ನು ಶರಣುಹೊಂದಿದವನಾದರೆ ಸುರಾಸುರರೂ, ಅವನನ್ನು ಪೂಜಿಸುವರು.

೬೪. ಭಕ್ತರಲ್ಲದವರಿಗೆ ಸ್ವಲ್ಪವಾದರೂ ಫಲವು ಬರುವುದಿಲ್ಲವಾದುದರಿಂದ ಸರ್ವಪ್ರಯತ್ನದಿಂದಲೂ ಭಕ್ತಿಯಿಂದಲೇ ಶಿವನನ್ನು ಪೂಜಿಸಬೇಕು.

೬೫. ಎಲೈ ಕೃಷ್ಣನೇ, ವೇದಗಳಿಂದಲೂ, ಶಾಸ್ತ್ರಗಳಿಂದಲೂ, ವೇದಗಳನ್ನು ತಿಳಿದವರಿಂದಲೂ, ವಿಚಾರಮಾಡಿ ನಿಶ್ಚಯಿಸಿದ ಅತ್ಯಂತ ಗೋಪ್ಯವಾದ ವಿಷಯವನ್ನು ಹೇಳುತ್ತೇನೆ ಕೇಳು.

ಇಲ್ಲಿಗೆ ಶಿವಪುರಾಣದ ಏಳನೆಯ ವಾಯವೀಯಸಂಹಿತೆಯ ಉತ್ತರಭಾಗದಲ್ಲಿ
ಶಿವಪೂಜಾವರ್ಣನವೆಂಬ ಇಪ್ಪತ್ತೈದನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವಮಹಾಪುರಾಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ಷಷ್ಠವಿಂಶೋಽಧ್ಯಾಯಃ



॥ ಉಪಮನ್ಯುರುವಾಚ ॥

ಬ್ರಹ್ಮಘ್ನೋ ವಾ ಸುರಾಪೋ ವಾ ಸ್ತೇಯೀ ವಾ ಗುರುತಲ್ಪಗಃ ।
ಮಾತೃಹಾ ಪಿತೃಹಾ ವಾಽಪಿ ವೀರಹಾ ಭ್ರೂಣಹಾಽಪಿ ವಾ ॥ ೧ ॥

ಸಂಪೂಜ್ಯಾಮಂತ್ರಕಂ ಭಕ್ತ್ಯಾ ಶಿವಂ ಪರಮಕಾರಣಂ ।
ತೈಸ್ತೈಃ ಪಾಪೈಃ ಪ್ರಮುಚ್ಯೇತ ವರ್ಷೈರ್ದ್ವಾದಶಭಿಃ ಕ್ರಮಾತ್ ॥ ೨ ॥

---

### ಇಪ್ಪತ್ತಾರನೆಯ ಅಧ್ಯಾಯವು

೧–೨. ಉಪಮನ್ಯುವು ಹೇಳಿದನು — ಬ್ರಹ್ಮಹತ್ಯೆ, ಸುರಾಪಾನ, ಕಳ್ಳತನ ಗುರುಪತ್ನೀಗಮನ ಈ ಮಹಾಪಾಪಗಳನ್ನು ಮಾಡಿದವನೂ, ತಂದೆತಾಯಿಗಳನ್ನು ಕೊಂದವನೂ, ವೀರನನ್ನು ಕೊಂದವನೂ, ಗರ್ಭನಾಶಮಾಡಿದವನೂ, ಇವರಲ್ಲಿ ಯಾರಾದರೂ ಮಂತ್ರವಿಲ್ಲದಿದ್ದರೂ ಭಕ್ತಿಯಿಂದ ಸರ್ವಕಾರಣನಾದ ಶಿವನನ್ನು ಪೂಜಿಸಿದರೆ ಕ್ರಮವಾಗಿ ಹನ್ನೆರಡು ವರ್ಷದಮೇಲೆ ಆ ಪಾಪಗಳ ಬಿಡುಗಡೆಯನ್ನು ಹೊಂದುವರು.

ತಸ್ಮಾತ್ಸರ್ವಪ್ರಯತ್ನೇನ ಪತಿತೋಽಪಿ ಯಜೇಚ್ಛಿವಂ ।
ಭಕ್ತಶ್ಚೇನ್ನಾಪರಃ ಕಶ್ಚಿದ್ಭಿಕ್ಷಾಹಾರೋ ಜಿತೇಂದ್ರಿಯಃ ॥ ೩ ॥

ಕೃತ್ವಾಪಿ ಸುಮಹತ್ಪಾಪಂ ಭಕ್ತ್ಯಾ ಪಂಚಾಕ್ಷರೇಣ ತು ।
ಪೂಜಯೇದ್ಯದಿ ದೇವೇಶಂ ತಸ್ಮಾತ್ಪಾಪಾತ್ಪ್ರಮುಚ್ಯತೇ ॥ ೪ ॥

ಅಬ್ಭಕ್ಷಾ ವಾಯುಭಕ್ಷಾಶ್ಚ ಯೇ ಚಾನ್ಯೇ ವ್ರತಕರ್ಶಿತಾಃ ।
ತೇಷಾಮೇತೈರ್ವ್ರತೈರ್ನಾಸ್ತಿ ಶಿವಲೋಕಸಮಾಗಮಃ ॥ ೫ ॥

ಭಕ್ತ್ಯಾ ಪಂಚಾಕ್ಷರೇಣೈವ ಯಃ ಶಿವಂ ಸಕೃದರ್ಚಯೇತ್ ।
ಸೋಽಪಿ ಗಚ್ಛೇಚ್ಛಿವಸ್ಥಾನಂ ಶಿವಮಂತ್ರಸ್ಯ ಗೌರವಾತ್ ॥ ೬ ॥

ತಸ್ಮಾತ್ತಪಾಂಸಿ ಯಜ್ಞಾಶ್ಚ ಸರ್ವೇ ಸರ್ವಸ್ವದಕ್ಷಿಣಾಃ ।
ಶಿವಮೂರ್ತ್ಯರ್ಚನಸ್ಯೈತೇ ಕೋಟ್ಯಂಶೇನಾಪಿ ನೋ ಸಮಾಃ ॥ ೭ ॥

---

೩–೪. ಆದುದರಿಂದ ಪಾಪಕಾರ್ಯಗಳನ್ನು ಮಾಡಿದವನಾದರೂ, ಭಕ್ತನಾದರೆ ಸರ್ವಪ್ರಯತ್ನಗಳಿಂದಲೂ ಶಿವಪೂಜೆಯನ್ನು ಮಾಡಬೇಕು. ಭಿಕ್ಷಾನ್ನವನ್ನು ಆಹಾರಮಾಡುತ್ತ ಜಿತೇಂದ್ರಿಯನಲ್ಲದಿದ್ದರೂ ಭಕ್ತನಾಗುವುದೊಂದೇ ಮುಖ್ಯವಾದುದು. ಮಹಾಪಾಪಗಳನ್ನು ಮಾಡಿದವನಾದರೂ, ಭಕ್ತಿಯಿಂದ ಪಂಚಾಕ್ಷರಮಂತ್ರದಿಂದ ಪೂಜೆಮಾಡಿದರೆ ಆ ಪಾಪಗಳ ಬಿಡುಗಡೆಯನ್ನು ಹೊಂದುವರು.

೫–೬. ನೀರನ್ನೂ, ಗಾಳಿಯನ್ನೂ, ಆಹಾರಮಾಡಿಕೊಂಡು ವ್ರತಾದಿಗಳಿಂದ ಕೃಶರಾದವರಿಗೂ, ಆ ವ್ರತಫಲದಿಂದ ಶಿವಲೋಕಪ್ರಾಪ್ತಿಯಾಗುವುದಿಲ್ಲ. ಮನುಜನು ಭಕ್ತಿಯಿಂದ ಪಂಚಾಕ್ಷರ ಮಂತ್ರಪೂರ್ವಕವಾಗಿ ಒಂದಾವೃತ್ತಿ ಪೂಜೆಮಾಡಿದವನಾದರೂ, ಆ ಶಿವಮಂತ್ರಮಹಿಮೆಯಿಂದ ಶಿವಲೋಕಕ್ಕೆ ಹೋಗುವನು.

೭. ಆದುದರಿಂದ ಸರ್ವಸ್ವದಕ್ಷಿಣೆಯಿಂದ ಮಾಡಿದ ಸಮಸ್ತಯಜ್ಞಗಳೂ ತಪಸ್ಸುಗಳೂ, ಶಿವಮೂರ್ತಿಯನ್ನು ಪೂಜೆಮಾಡಿದುದರ ಕೋಟಿಯಲ್ಲಿ ಒಂದಂಶಕ್ಕೆ ಸಮಾನವಾಗಲಾರವು.

ಬದ್ಧೋ ವಾऽಪ್ಯಥ ಮುಕ್ತೋ ವಾ ಪಶ್ಚಾತ್ಪಂಚಾಕ್ಷರೇಣ ಚೇತ್ ।
ಪೂಜಯನ್ಮುಚ್ಯತೇ ಭಕ್ತೋ ನಾತ್ರ ಕಾರ್ಯಾ ವಿಚಾರಣಾ ॥ ೮ ॥

ಅರುದ್ರೋ ವಾ ಸರುದ್ರೋ ವಾ ಸೂಕ್ತೇನ ಶಿವಮರ್ಚಯೇತ್ ।
ಯಃ ಸಕೃತ್ಪತಿತೋ ವಾऽಪಿ ಮೂಢೋ ವಾ ಮುಚ್ಯತೇ ನರಃ ॥ ೯ ॥

ಷಡಕ್ಷರೇಣ ವಾ ದೇವಂ ಸೂಕ್ತಮಂತ್ರೇಣ ಪೂಜಯೇತ್ ।
ಶಿವಭಕ್ತೋ ಜಿತಕ್ರೋಧೋ ಹ್ಯಲಬ್ಧೋ ಲಬ್ಧ ಏವ ಚ ॥ ೧೦ ॥

ಅಲಬ್ಧಾಲ್ಲಬ್ಧ ಏವಾತ್ರ ವಿಶಿಷ್ಟೋ ನಾತ್ರ ಸಂಶಯಃ ।
ಸಬ್ರಹ್ಮಾಂಗೇನ ವಾ ತೇನ ಸಹಂಸೇನ ವಿಮುಚ್ಯತೇ ॥ ೧೧ ॥

ತಸ್ಮಾನ್ನಿತ್ಯಂ ಶಿವಂ ಭಕ್ತ್ಯಾ ಸೂಕ್ತಮಂತ್ರೇಣ ಪೂಜಯೇತ್ ।
ಏಕಕಾಲಂ ದ್ವಿಕಾಲಂ ವಾ ತ್ರಿಕಾಲಂ ನಿತ್ಯಮೇವ ವಾ ॥ ೧೨ ॥

---

೮-೯. ಸಂಸಾರದುಃಖದಲ್ಲಿ ಸಿಕ್ಕಿದವನಾಗಲಿ ಅಥವಾ ಅದರ ಬಿಡುಗಡೆಯನ್ನು ಹೊಂದಿದವನಾಗಲಿ, ಭಕ್ತನಾಗಿ ಪಂಚಾಕ್ಷರಮಂತ್ರದಿಂದ ಶಿವನಪೂಜೆಯನ್ನು ಮಾಡಿದಮೇಲೆ ಮುಕ್ತಿಯನ್ನು ಹೊಂದುವನು. ಪಾಪಿಯಾಗಲಿ, ಮೂಢನಾಗಲಿ ಒಂದಾವೃತ್ತಿ ರುದ್ರಸೂಕ್ತಗಳನ್ನು ಹೇಳಿಯಾದರೂ, ಹೇಳದೆಯಾದರೂ, ಶಿವನನ್ನು ಪೂಜಿಸಿದರೆ ಸಂಸಾರದುಃಖದ ಬಿಡುಗಡೆಯನ್ನು ಹೊಂದುವನು.

೧೦. ಕೋಪವನ್ನು ಜಯಿಸಿದ ಶಿವಭಕ್ತನು ಗುರುವಿನಿಂದ ಉಪದೇಶವನ್ನು ಪಡೆದು ಷಡಕ್ಷರಮಂತ್ರದಿಂದಲಾಗಲಿ ರುದ್ರಸೂಕ್ತಮಂತ್ರಗಳಿಂದಲಾಗಲಿ, ಶಿವನನ್ನು ಪೂಜಿಸಬೇಕು. ಮಂತ್ರೋಪದೇಶವನ್ನು ಪಡೆಯದಿದ್ದವನೂ, ಪೂಜಿಸಬಹುದು. ಆದರೆ ಉಪದೇಶವನ್ನು ಪಡೆಯದವನಿಗಿಂತ ಪಡೆದವನು ಶ್ರೇಷ್ಠನು.

೧೧-೧೨. ಷಡಕ್ಷರಮಂತ್ರದೊಡನೆ ಕೂಡಿದ ಪಂಚಬ್ರಹ್ಮಮಂತ್ರಗಳಿಂದಲೂ ಅಥವಾ ಹಂಸಮಂತ್ರದಿಂದಲೂ ಪೂಜಿಸಿದರೆ ಮುಕ್ತಿಯು ಪ್ರಾಪ್ತವಾಗುವುದು. ಆಕಾರಣದಿಂದ ಶಿವನನ್ನು ಪ್ರತಿದಿನವೂ ಭಕ್ತಿಯಿಂದ ರುದ್ರಸೂಕ್ತಮಂತ್ರಪೂರ್ವಕವಾಗಿ ಒಂದು ಎರಡು ಅಥವಾ ಮೂರು ಕಾಲಗಳಲ್ಲಿಯೂ ಯಾರು ಮಹಾದೇವನನ್ನು ಪೂಜಿಸುವರೋ ಅವರನ್ನು ಮಹೇಶ್ವರರೆಂದೇ ತಿಳಿಯಬೇಕು.

ಯೇಽರ್ಚಯಂತಿ ಮಹಾದೇವಂ ವಿಜ್ಞೇಯಾಸ್ತೇ ಮಹೇಶ್ವರಾಃ ।
ಜ್ಞಾನೇನಾತ್ಮಸಹಾಯೇನ ನಾರ್ಚಿತೋ ಭಗವಾಞ್ಛಿವಃ ॥ ೧೩ ॥

ಸ ಚಿರಂ ಸಂಸರತ್ಯಸ್ಮಿನ್ಸಂಸಾರೇ ದುಃಖಸಾಗರೇ ।
ದುರ್ಲಭಂ ಪ್ರಾಪ್ಯ ಮಾನುಷ್ಯಂ ಮೂಢೋ ನಾರ್ಚಯತೇ ಶಿವಂ ॥ ೧೪ ॥

ನಿಷ್ಫಲಂ ತಸ್ಯ ತಜ್ಜನ್ಮ ಮೋಕ್ಷಾಯ ನ ಭವೇದ್ಯತಃ ।
ದುರ್ಲಭಂ ಪ್ರಾಪ್ಯ ಮಾನುಷ್ಯಂ ಯೇಽರ್ಚಯಂತಿ ಪಿನಾಕಿನಂ ॥ ೧೫ ॥

ತೇಷಾಂ ಹಿ ಸಫಲಂ ಜನ್ಮ ಕೃತಾರ್ಥಾಸ್ತೇ ನರೋತ್ತಮಾಃ ।
ಭವಭಕ್ತಿಪರಾ ಯೇ ಚ ಭವಪ್ರಣತಚೇತಸಃ ॥ ೧೬ ॥

ಭವಸಂಸ್ಮರಣೋದ್ಯುಕ್ತಾ ನ ತೇ ದುಃಖಸ್ಯ ಭಾಗಿನಃ ।
ಭವನಾನಿ ಮನೋಜ್ಞಾನಿ ವಿಭ್ರಮಾಭರಣಾಃ ಸ್ತ್ರಿಯಃ ॥ ೧೭ ॥

---

೧೩. ಶಿವಸ್ವರೂಪವಾದ ಆತ್ಮಜ್ಞಾನದಿಂದ ಕೂಡಿ ಶಿವನನ್ನು ಪೂಜಿಸದಿದ್ದರೆ ಆ ಮನುಷ್ಯನು ದುಃಖವೆಂಬ ಸಮುದ್ರರೂಪವಾದ ಸಂಸಾರವಲ್ಲಿ ಬಹಳ ಕಾಲ ಪುನರ್ಜನ್ಮವನ್ನು ಪಡೆಯುತ್ತಿರುವನು.

೧೪-೧೫. ದುರ್ಲಭವಾದ ಮನುಷ್ಯಜನ್ಮವು ಹೊಂದಿದಮೇಲೆ ಯಾವ ಮೂಢನು ಶಿವನನ್ನು ಪೂಜಿಸುವುದಿಲ್ಲವೋ ಅವನು ಹುಟ್ಟಿದುದು ವ್ಯರ್ಥವಾಗುವುದು. ಅವನಿಗೆ ಮೋಕ್ಷಪ್ರಾಪ್ತಿಯಿಲ್ಲ. ಯಾರು ಪಿನಾಕಪಾಣಿಯಾದ ಶಿವನನ್ನು ಪೂಜಿಸುವರೋ ಅವರು ಕೃತಾರ್ಥರಾದುದರಿಂದ ಅವರ ಜನ್ಮ ಸಫಲವಾಗುವುದು. ಅವರು ಮನುಜರಲ್ಲಿ ಶ್ರೇಷ್ಠರೆನಿಸುವರು.

೧೬-೧೭. ಶಿವನಲ್ಲಿ ಭಕ್ತಿಯುಳ್ಳವರೂ, ಅವನನ್ನೇ ಶರಣುಹೊಂದಿದವರೂ, ಅವನನ್ನು ಧ್ಯಾನಮಾಡುವುದರಲ್ಲಿ ಆಸಕ್ತರೂ ದುಃಖವನ್ನು ಹೊಂದುವುದಿಲ್ಲ. ಮನೋಹರವಾದ ಮನೆ ವಿಲಾಸಗಳಿಂದ ಕೂಡಿ, ಆಭರಣಗಳನ್ನು ಧರಿಸಿದ ಸ್ತ್ರೀಯರು, ತನ್ನ ಮನಸ್ಸು ತೃಪ್ತಿಯಾಗುವಷ್ಟು ಧನ, ಇವೆಲ್ಲವೂ ವಿಧಿಗನುಸಾರವಾಗಿ ಶಿವಪೂಜೆಯನ್ನು ಮಾಡಿದುದರ ಫಲವಾಗಿರುವುದು.

ಧನಂ ಚಾತೃಪ್ತಿಪರ್ಯಂತಂ ಶಿವಪೂಜಾವಿಧೇಃ ಫಲಂ ।
ಯೇ ವಾಂಛಂತಿ ಮಹಾಭೋಗಾನ್ರಾಜ್ಯಂ ಚ ತ್ರಿದಶಾಲಯೇ ॥ ೧೮ ॥

ತೇ ವಾಂಛಂತಿ ಸದಾಕಾಲಂ ಹರಸ್ಯ ಚರಣಾಂಬುಜಂ ।
ಸೌಭಾಗ್ಯಂ ಕಾಂತಿಮದ್ರೂಪಂ ಸತ್ತ್ವಂ ತ್ಯಾಗಾರ್ದ್ರಭಾವತಾ ॥ ೧೯ ॥

ಶೌಚಂ ಚ ಜಗತಿ ಖ್ಯಾತಿಃ ಶಿವಮರ್ಚಯತೋ ಭವೇತ್ ।
ತಸ್ಮಾತ್ಸರ್ವಂ ಪರಿತ್ಯಜ್ಯ ಶಿವೈಕಾಹಿತಮಾನಸಃ ॥ ೨೦ ॥

ಶಿವಪೂಜಾವಿಧಿಂ ಕುರ್ಯಾದ್ಯದೀಚ್ಛೇಚ್ಛಿವಮಾತ್ಮನಃ ।
ತ್ವರಿತಂ ಜೀವಿತಂ ಯಾತಿ ತ್ವರಿತಂ ಯಾತಿ ಯೌವನಂ ॥ ೨೧ ॥

ತ್ವರಿತಂ ವ್ಯಾಧಿರಭ್ಯೇತಿ ತಸ್ಮಾತ್ಪೂಜ್ಯಃ ಪಿನಾಕಧೃಕ್ ।
ಯಾವನ್ನಾಯಾತಿ ಮರಣಂ ಯಾವನ್ನಾಕ್ರಮತೇ ಜರಾ ॥ ೨೨ ॥

---

೧೮. ಯಾರು ದೇವತೆಗಳ ರಾಜ್ಯವನ್ನೂ, ಮಹಾಸುಖಾನುಭವಗಳನ್ನೂ, ಬಯಸುವರೋ ಅವರು ಯಾವಾಗಲೂ ಶಿವನ ಪಾದಕಮಲವನ್ನು ಧ್ಯಾನಮಾಡುತ್ತಿರಬೇಕು.

೧೯. ಒಳ್ಳೆಯ ಪುಣ್ಯಫಲವೂ, ಕಾಂತಿಯಿಂದ ಕೂಡಿದ ಸೌಂದರ್ಯವೂ, ಸತ್ವಗುಣವೂ, ದಾನವೂ, ಕರುಣೆಯೂ, ಶುಚಿತ್ತ್ವವೂ ಪ್ರಪಂಚದಲ್ಲಿ ಯಶಸ್ಸೂ ಇವೆಲ್ಲವೂ ಶಿವನನ್ನು ಪೂಜಿಸಿದವರಿಗೆ ಬರುವುವು.

೨೦. ಆದುದರಿಂದ ಎಲ್ಲ ಕೆಲಸಗಳನ್ನೂ ಬಿಟ್ಟು ಶಿವನೊಬ್ಬನಲ್ಲಿಯೇ ಮನಸ್ಸನ್ನು ನೆಲೆಗೊಳಿಸಿ ವಿಧಿಗನುಸಾರವಾಗಿ ಶಿವಪೂಜೆಯನ್ನು ಮಾಡಬೇಕು. ಇದರಿಂದ ತನಗೆ ಒಳ್ಳೆಯದಾಗುವುದು.

೨೧-೨೨. ಪ್ರಾಣವೂ, ಪ್ರಾಯವೂ ಬೇಗನೆ ಕಳೆದುಹೋಗುವುದು. ರೋಗವು ಬೇಗನೆ ಬರುವುದು. ಆದುದರಿಂದ ಮರಣವು ಬರುವುದಕ್ಕಿಂತ ಮುಂಚಿತವಾಗಿ, ಮುಪ್ಪು ಬರುವುದರೊಳಗೆ ಇಂದ್ರಿಯಗಳ ಶಕ್ತಿಯು ಕುಂದುವುದಕ್ಕಿಂತ ಮುಂಚೆ ಪಿನಾಕಪಾಣಿಯಾದ ಶಂಕರನನ್ನು ಪೂಜಿಸಬೇಕು.

ಯಾವನ್ನೇಂದ್ರಿಯವೈಕಲ್ಯಂ ತಾವತ್ಪೂಜಯ ಶಂಕರಂ ।
ನ ಶಿವಾರ್ಚನತುಲ್ಯೋಽಸ್ತಿ ಧರ್ಮೋಽನ್ಯೋ ಭುವನತ್ರಯೇ ॥ ೨೩ ॥

ಇತಿ ವಿಜ್ಞಾಯ ಯತ್ನೇನ ಪೂಜನೀಯಸ್ಸದಾಶಿವಃ ।
ದ್ವಾರಯಾಗಂ ಜವನಿಕಾಂ ಪರಿವಾರಬಲಿಕ್ರಿಯಾಂ ॥ ೨೪ ॥

ನಿತ್ಯೋತ್ಸವಂ ಚ ಕುರ್ವೀತ ಪ್ರಾಸಾದೇ ಯದಿ ಪೂಜಯೇತ್ ।
ಹವಿರ್ನಿವೇದನಾದೂರ್ಧ್ವಂ ಸ್ವಯಂ ಚಾನುಚರೋಽಪಿ ವಾ ॥ ೨೫ ॥

ಪ್ರಾಸಾದಪರಿವಾರೇಭ್ಯೋ ಬಲಿಂ ದದ್ಯಾದ್ಯಥಾಕ್ರಮಂ ।
ನಿರ್ಗಮ್ಯ ಸಹ ವಾದಿತ್ರೈಸ್ತದಾಶಾಭಿಮುಖಃ ಸ್ಥಿತಃ ॥ ೨೬ ॥

ಪುಷ್ಪಂ ಧೂಪಂ ಚ ದೀಪಂ ಚ ದದ್ಯಾದನ್ನಂ ಜಲೈಸ್ಸಹ ।
ತತೋ ದದ್ಯಾನ್ಮಹಾಪೀಠೇ ತಿಷ್ಠನ್ಬಲಿಮುದಙ್ಮುಖಃ ॥ ೨೭ ॥

---

೨೩. ಮೂರು ಲೋಕದಲ್ಲಿಯೂ, ಶಿವಪೂಜೆಗೆ ಸಮಾನವಾದ ಧರ್ಮವಿಲ್ಲ ಎಂದು ತಿಳಿದು ಪ್ರಯತ್ನಪೂರ್ವಕವಾಗಿ ಯಾವಾಗಲೂ ಮಂಗಳಸ್ವರೂಪನಾದ ಶಿವನನ್ನು ಪೂಜಿಸಬೇಕು.

೨೪-೨೫. ದ್ವಾರಯಾಗ, ತೆರೆ, ಪರಿವಾರ, ದೇವತೆಗಳಿಗೆ ಬಲಿ, ನಿತ್ಯೋತ್ಸವ ಇವುಗಳನ್ನು ದೇವಾಲಯದಲ್ಲಿ ಶಿವಪೂಜೆಯನ್ನು ಮಾಡುವವರು ಮಾಡಬೇಕು. ಹವಿಸ್ಸನ್ನು ನಿವೇದನಮಾಡಿದಮೇಲೆ ತಾನಾಗಲಿ ಪರಿಚಾರಕನಾಗಲಿ ದೇವಾಲಯದಲ್ಲಿರುವ ಪರಿವಾರದೇವತೆಗಳಿಗೆ ಕ್ರಮವಾಗಿ ಬಲಿಯನ್ನು ಕೊಡಬೇಕು.

೨೬-೨೭. ಅದಕ್ಕಾಗಿ ವಾದ್ಯಗಳೊಡನೆ ಹೊರಟು ಆ ಪರಿವಾರದೇವತೆಗಳಿರುವ ದಿಕ್ಕಿಗೆ ಎದುರಾಗಿ ನಿಂತು ಪುಷ್ಪ, ಧೂಪ ದೀಪ ಇವುಗಳನ್ನು ಸಮರ್ಪಿಸಿ ನೀರಿನೊಡನೆ ಅನ್ನವನ್ನು ಬಲಿಯಾಗಿ ನಿವೇದನಮಾಡಿ ತರುವಾಯ ಮಹಾಪೀಠದ ಸಮೀಪದಲ್ಲಿ ಉತ್ತರಾಭಿಮುಖವಾಗಿ ನಿಂತು ಬಲಿಯನ್ನು ಕೊಡಬೇಕು.

ತತೋ ನಿವೇದಿತಂ ದೇವೇ ಯತ್ತದನ್ನಾದಿಕಂ ಪುರಾ ।
ತತ್ಸರ್ವಂ ಸಾವಶೇಷಂ ವಾ ಚಂಡಾಯ ವಿನಿವೇದಯೇತ್ ॥ ೨೮ ॥

ಹುತ್ವಾ ಚ ವಿಧಿವತ್ಪಶ್ಚಾತ್ಪೂಜಾಶೇಷಂ ಸಮಾಪಯೇತ್ ।
ಕೃತ್ವಾ ಪ್ರಯೋಗಂ ವಿಧಿವದ್ಯಾವನ್ಮಂತ್ರಂ ಜಪಂ ತತಃ ॥ ೨೯ ॥

ನಿತ್ಯೋತ್ಸವಂ ಪ್ರಕುರ್ವೀತ ಯಥೋಕ್ತಂ ಶಿವಶಾಸನೇ ।
ವಿಪುಲೇ ತೈಜಸೇ ಪಾತ್ರೇ ರಕ್ತಪದ್ಮೋಪಶೋಭಿತೇ ॥ ೩೦ ॥

ಅಸ್ತ್ರಂ ಪಾಶುಪತಂ ದಿವ್ಯಂ ತತ್ರಾವಾಹ್ಯ ಸಮರ್ಚಯೇತ್ ।
ಶಿರಸ್ಯಾರೋಪ್ಯ ತತ್ಪಾತ್ರಂ ದ್ವಿಜಸ್ಯಾಲಂಕೃತಸ್ಯ ಚ ॥ ೩೧ ॥

ನ್ಯಸ್ತಾಸ್ತ್ರವಪುಷಾ ತೇನ ದೀಪ್ತಯಷ್ಟಿಧರಸ್ಯ ಚ ।
ಪ್ರಾಸಾದಪರಿವಾರೇಭ್ಯೋ ಬಹಿರ್ಮಂಗಲನಿಸ್ಸ್ವನೈಃ ॥ ೩೨ ॥

ನೃತ್ಯಗೇಯಾದಿಭಿಶ್ಚೈವ ಸಹದೀಪಧ್ವಜಾದಿಭಿಃ ।
ಪ್ರದಕ್ಷಿಣತ್ರಯಂ ಕೃತ್ವಾ ನ ದ್ರುತಂ ಚಾವಿಲಂಬಿತಂ ॥ ೩೩ ॥

---

೨೮. ಆಬಳಿಕ ಹಿಂದೆ ದೇವತೆಗಳಿಗೆ ನಿವೇದನಮಾಡಿದ ಅನ್ನಾದಿಗಳನ್ನೆಲ್ಲವನ್ನೂ ಚಂಡಿಕೇಶ್ವರನಿಗೆ ಒಪ್ಪಿಸಬೇಕು.

೨೯. ಆಮೇಲೆ ವಿಧಿಗನುಸಾರವಾಗಿ ಹೋಮವನ್ನು ಮಾಡಿ ಉಳಿದ ಪೂಜೆಗಳನ್ನು ಪೂರ್ತಿಮಾಡಿ, ವಿಧಿಗನುಸಾರವಾಗಿ ಮಾಡಬೇಕಾದ ಕರ್ಮಗಳನ್ನೆಲ್ಲ ನೆರವೇರಿಸಿ ಬಳಿಕ ಮಂತ್ರಜಪವು ಪೂರ್ಣವಾಗುವವರೆಗೆ ಶಿವಾಗಮದಲ್ಲಿ ಹೇಳಿದಮೇರೆಗೆ ನಿತ್ಯೋತ್ಸವವನ್ನು ಮಾಡಬೇಕು.

೩೦-೩೩. ವಿಸ್ತಾರವಾದ ಕಂಚಿನಪಾತ್ರೆಯಲ್ಲಿ ಕೆಂಪುಕಮಲದಿಂದಲಂಕರಿಸಿದ ಪಾಶುಪತಾಸ್ತ್ರವಾದ ತ್ರಿಶೂಲವನ್ನು ಇಟ್ಟು ಪೂಜಿಸಬೇಕು. ಆಮೇಲೆ ಆ ಪಾತ್ರೆಯನ್ನು ಅಲಂಕಾರಮಾಡಿದ ಒಬ್ಬ ಬ್ರಾಹ್ಮಣನ ತಲೆಯಮೇಲಿಟ್ಟು ಪರಿವಾರದೇವತೆಗಳಿಗಿಂತ ಹೊರಗಡೆ ಮಂಗಳವಾದ್ಯದೊಡನೆ ನೃತ್ಯ ಗಾನ ಧ್ವಜ ದೀಪಾದಿಗಳಿಂದ ಕೂಡಿ ಮೂರು ಪ್ರದಕ್ಷಿಣೆಯನ್ನು ಮಾಡಿ,

ಯಾವನ್ನೇಂದ್ರಿಯವೈಕಲ್ಯಂ ತಾವತ್ಪೂಜಯ ಶಂಕರಂ ।
ನ ಶಿವಾರ್ಚನತುಲ್ಯೋಽಸ್ತಿ ಧರ್ಮೋಽನ್ಯೋ ಭುವನತ್ರಯೇ ॥ ೨೩ ॥

ಇತಿ ವಿಜ್ಞಾಯ ಯತ್ನೇನ ಪೂಜನೀಯಸ್ಸದಾಶಿವಃ ।
ದ್ವಾರಯಾಗಂ ಜವನಿಕಾಂ ಪರಿವಾರಬಲಿಕ್ರಿಯಾಂ ॥ ೨೪ ॥

ನಿತ್ಯೋತ್ಸವಂ ಚ ಕುರ್ವೀತ ಪ್ರಾಸಾದೇ ಯದಿ ಪೂಜಯೇತ್ ।
ಹವಿರ್ನಿವೇದನಾದೂರ್ಧ್ವಂ ಸ್ವಯಂ ಚಾನುಚರೋಽಪಿ ವಾ ॥ ೨೫ ॥

ಪ್ರಾಸಾದಪರಿವಾರೇಭ್ಯೋ ಬಲಿಂ ದದ್ಯಾದ್ಯಥಾಕ್ರಮಂ ।
ನಿರ್ಗಮ್ಯ ಸಹ ವಾದಿತ್ರೈಸ್ತದಾಶಾಭಿಮುಖಃ ಸ್ಥಿತಃ ॥ ೨೬ ॥

ಪುಷ್ಪಂ ಧೂಪಂ ಚ ದೀಪಂ ಚ ದದ್ಯಾದನ್ನಂ ಜಲೈಸ್ಸಹ ।
ತತೋ ದದ್ಯಾನ್ಮಹಾಪೀಠೇ ತಿಷ್ಠನ್ಬಲಿಮುದಙ್ಮುಖಃ ॥ ೨೭ ॥

---

೨೩. ಮೂರು ಲೋಕದಲ್ಲಿಯೂ, ಶಿವಪೂಜೆಗೆ ಸಮಾನವಾದ ಧರ್ಮವಿಲ್ಲ ಎಂದು ತಿಳಿದು ಪ್ರಯತ್ನಪೂರ್ವಕವಾಗಿ ಯಾವಾಗಲೂ ಮಂಗಳಸ್ವರೂಪನಾದ ಶಿವನನ್ನು ಪೂಜಿಸಬೇಕು.

೨೪-೨೫. ದ್ವಾರಯಾಗ, ತೆರೆ, ಪರಿವಾರ, ದೇವತೆಗಳಿಗೆ ಬಲಿ, ನಿತ್ಯೋತ್ಸವ ಇವುಗಳನ್ನು ದೇವಾಲಯದಲ್ಲಿ ಶಿವಪೂಜೆಯನ್ನು ಮಾಡುವವರು ಮಾಡಬೇಕು. ಹವಿಸ್ಸನ್ನು ನಿವೇದನಮಾಡಿದಮೇಲೆ ತಾನಾಗಲಿ ಪರಿಚಾರಕನಾಗಲಿ ದೇವಾಲಯದಲ್ಲಿರುವ ಪರಿವಾರದೇವತೆಗಳಿಗೆ ಕ್ರಮವಾಗಿ ಬಲಿಯನ್ನು ಕೊಡಬೇಕು.

೨೬-೨೭. ಅದಕ್ಕಾಗಿ ವಾದ್ಯಗಳೊಡನೆ ಹೊರಟು ಆ ಪರಿವಾರದೇವತೆಗಳಿರುವ ದಿಕ್ಕಿಗೆ ಎದುರಾಗಿ ನಿಂತು ಪುಷ್ಪ, ಧೂಪ ದೀಪ ಇವುಗಳನ್ನು ಸಮರ್ಪಿಸಿ ನೀರಿನೊಡನೆ ಅನ್ನವನ್ನು ಬಲಿಯಾಗಿ ನಿವೇದನಮಾಡಿ ತರುವಾಯ ಮಹಾಪೀಠದ ಸಮೀಪದಲ್ಲಿ ಉತ್ತರಾಭಿಮುಖವಾಗಿ ನಿಂತು ಬಲಿಯನ್ನು ಕೊಡಬೇಕು.

ತತೋ ನಿವೇದಿತಂ ದೇವೇ ಯತ್ತದನ್ನಾದಿಕಂ ಪುರಾ ।
ತತ್ಸರ್ವಂ ಸಾವಶೇಷಂ ವಾ ಚಂಡಾಯ ವಿನಿವೇದಯೇತ್ ॥ ೨೮ ॥

ಹುತ್ವಾ ಚ ವಿಧಿವತ್ಪಶ್ಚಾತ್ಪೂಜಾಶೇಷಂ ಸಮಾಪಯೇತ್ ।
ಕೃತ್ವಾ ಪ್ರಯೋಗಂ ವಿಧಿವದ್ಯಾವನ್ಮಂತ್ರಂ ಜಪಂ ತತಃ ॥ ೨೯ ॥

ನಿತ್ಯೋತ್ಸವಂ ಪ್ರಕುರ್ವೀತ ಯಥೋಕ್ತಂ ಶಿವಶಾಸನೇ ।
ವಿಪುಲೇ ತೈಜಸೇ ಪಾತ್ರೇ ರಕ್ತಪದ್ಮೋಪಶೋಭಿತೇ ॥ ೩೦ ॥

ಅಸ್ತ್ರಂ ಪಾಶುಪತಂ ದಿವ್ಯಂ ತತ್ರಾವಾಹ್ಯ ಸಮರ್ಚಯೇತ್ ।
ಶಿರಸ್ಯಾರೋಪ್ಯ ತತ್ಪಾತ್ರಂ ದ್ವಿಜಸ್ಯಾಲಂಕೃತಸ್ಯ ಚ ॥ ೩೧ ॥

ನ್ಯಸ್ತಾಸ್ತ್ರವಪುಷಾ ತೇನ ದೀಪ್ತಯಷ್ಟಿಧರಸ್ಯ ಚ ।
ಪ್ರಾಸಾದಪರಿವಾರೇಭ್ಯೋ ಬಹಿರ್ಮಂಗಲನಿಸ್ಸ್ವನೈಃ ॥ ೩೨ ॥

ನೃತ್ಯಗೇಯಾದಿಭಿಶ್ಚೈವ ಸಹದೀಪಧ್ವಜಾದಿಭಿಃ ।
ಪ್ರದಕ್ಷಿಣತ್ರಯಂ ಕೃತ್ವಾ ನ ದ್ರುತಂ ಚಾವಿಲಂಬಿತಂ ॥ ೩೩ ॥

---

೨೮. ಆಬಳಿಕ ಹಿಂದೆ ದೇವತೆಗಳಿಗೆ ನಿವೇದನಮಾಡಿದ ಅನ್ನಾದಿಗಳ ನ್ನೆಲ್ಲವನ್ನೂ ಚಂಡಿಕೇಶ್ವರನಿಗೆ ಒಪ್ಪಿಸಬೇಕು.

೨೯. ಆಮೇಲೆ ವಿಧಿಗನುಸಾರವಾಗಿ ಹೋಮವನ್ನು ಮಾಡಿ ಉಳಿದ ಪೂಜೆಗಳನ್ನು ಪೂರ್ತಿಮಾಡಿ, ವಿಧಿಗನುಸಾರವಾಗಿ ಮಾಡಬೇಕಾದ ಕರ್ಮಗಳ ನ್ನೆಲ್ಲ ನೆರವೇರಿಸಿ ಬಳಿಕ ಮಂತ್ರಜಪವು ಪೂರ್ಣವಾಗುವವರೆಗೆ ಶಿವಾಗಮದಲ್ಲಿ ಹೇಳಿದಮೇರೆಗೆ ನಿತ್ಯೋತ್ಸವವನ್ನು ಮಾಡಬೇಕು.

೩೦-೩೩. ವಿಸ್ತಾರವಾದ ಕಂಚಿನಪಾತ್ರೆಯಲ್ಲಿ ಕೆಂಪುಕಮಲದಿಂದಲಂ ಕರಿಸಿದ ಪಾಶುಪತಾಸ್ತ್ರವಾದ ತ್ರಿಶೂಲವನ್ನು ಇಟ್ಟು ಪೂಜಿಸಬೇಕು. ಆಮೇಲೆ ಆ ಪಾತ್ರೆಯನ್ನು ಅಲಂಕಾರಮಾಡಿದ ಒಬ್ಬ ಬ್ರಾಹ್ಮಣನ ತಲೆಯಮೇಲಿಟ್ಟು ಪರಿವಾರದೇವತೆಗಳಿಗಿಂತ ಹೊರಗಡೆ ಮಂಗಳವಾದ್ಯದೊಡನೆ ನೃತ್ಯ ಗಾನ ಧ್ವಜ ದೀಪಾದಿಗಳಿಂದ ಕೂಡಿ ಮೂರು ಪ್ರದಕ್ಷಿಣೆಯನ್ನು ಮಾಡಿ,

ಮಹಾಪೀಠಂ ಸಮಾವೃತ್ತ್ಯ ತ್ರಿಃಪ್ರದಕ್ಷಿಣಯೋಗತಃ ।
ಪುನಃ ಪ್ರವಿಷ್ಟೋ ದ್ವಾರಸ್ಥೋ ಯಜಮಾನಃ ಕೃತಾಂಜಲಿಃ ।
ಆದಾಯಾಭ್ಯಂತರಂ ನೀತ್ವಾ ಹ್ಯಸ್ತ್ರಮುದ್ವಾಸಯೇತ್ತತಃ ॥ ೩೪ ॥

ಪ್ರದಕ್ಷಿಣಾದಿಕಂ ಕೃತ್ವಾ ಯಥಾ ಪೂರ್ವೋದಿತಂ ಕ್ರಮಾತ್ ।
ಆದಾಯ ಚಾಷ್ಟಪುಷ್ಪಾಣಿ ಪೂಜಾಮಥ ಸಮಾಪಯೇತ್ ॥ ೩೫ ॥

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯಸಂಹಿತಾಯಾ-ಮುತ್ತರಭಾಗೇ ಸಾಂಗೋಪಾಂಗಪೂಜಾವಿಧಾನವರ್ಣನಂ ನಾಮ ಷಡ್ವಿಂಶೋಽಧ್ಯಾಯಃ**



೩೪. ಮಹಾಪೀಠವನ್ನೂ, ಮೂರಾವೃತ್ತಿ ಪ್ರದಕ್ಷಿಣೆಯನ್ನು ಮಾಡಿ ಮತ್ತೆ ಬಾಗಿಲಿಗೆ ಬಂದು ಪೂಜೆಯನ್ನು ಮಾಡಿ, ಯಜಮಾನನು ಕೈಮುಗಿದು ಅಸ್ತ್ರವನ್ನು ತೆಗೆದುಕೊಂಡು ಒಳಗೆಹೋಗಿ ಆಮೇಲೆ ಆ ಅಸ್ತ್ರವನ್ನು [ತ್ರಿಶೂಲ] ಉದ್ವಾಸನೆಮಾಡಬೇಕು-

೩೫. ಬಳಿಕ ಪ್ರದಕ್ಷಿಣೆ ಮುಂತಾದುವುಗಳನ್ನು ಕ್ರಮವಾಗಿ ಮೊದಲಿನಂತೆ ಮಾಡಿ ಎಂಟು ಹೂಗಳನ್ನು ತೆಗೆದುಕೊಂಡು ಪೂಜೆಯನ್ನು ಮಾಡಿ ಪೂಜಾಕಾರ್ಯವನ್ನು ಸಂಪೂರ್ಣಮಾಡಬೇಕು.

ಇಲ್ಲಿಗೆ ಶಿವಪುರಾಣದ ಏಳನೆಯ ವಾಯುವೀಯಸಂಹಿತೆಯ ಉತ್ತರಭಾಗದಲ್ಲಿ ಸಾಂಗೋಪಾಂಗಪೂಜಾವಿಧಾನವರ್ಣನವೆಂಬ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ವಾಯುವೀಯಸಂಹಿತಾಯಾಮುತ್ತರಭಾಗೇ

## ಸಪ್ತವಿಂಶೋಽಧ್ಯಾಯಃ

॥ ಉಪಮನ್ಯುರುವಾಚ ॥

ಅಥಾಗ್ನಿಕಾರ್ಯಂ ವಕ್ಷ್ಯಾಮಿ ಕುಂಡೇ ವಾ ಸ್ಥಂಡಿಲೇಽಪಿ ವಾ ।
ವೇದ್ಯಾಂ ವಾ ಹ್ಯಾಯಸೇ ಪಾತ್ರೇ ಮೃಣ್ಮಯೇ ವಾ ನವೇ ಶುಭೇ ॥ ೧ ॥

ಆಧಾಯಾಗ್ನಿಂ ವಿಧಾನೇನ ಸಂಸ್ಕೃತ್ಯ ಚ ತತಃ ಪರಂ ।
ತತ್ರಾರಾಧ್ಯ ಮಹಾದೇವಂ ಹೋಮಕರ್ಮ ಸಮಾಚರೇತ್ ॥ ೨ ॥

---

### ಇಪ್ಪತ್ತೇಳನೆಯ ಅಧ್ಯಾಯವು.

೧-೨. ಉಪಮನ್ಯುವು ಹೇಳಿದನು-ಇನ್ನು-ಮುಂದೆ ಅಗ್ನಿಕಾರ್ಯವನ್ನು ಮಾಡುವ ಕ್ರಮವನ್ನು ಹೇಳುವೆನು. ಅಗ್ನಿಕುಂಡದಲ್ಲಾಗಲಿ, ನೆಲದಮೇಲಾಗಲಿ, ಜಗುಲಿಯಮೇಲಾಗಲಿ, ಕಬ್ಬಿಣದಪಾತ್ರೆ, ಹೊಸದಾದ ಮಣ್ಣಿನಪಾತ್ರೆಯಲ್ಲಾಗಲಿ ಅಗ್ನಿಯನ್ನು ವಿಧಿಗನುಸಾರವಾಗಿ ಸ್ಥಾಪಿಸಿ, ಮಂತ್ರದಿಂದ ಸಂಸ್ಕಾರರೂಪವಾದ ಶುದ್ಧಿಯನ್ನು ಮಾಡಿ, ಆ ಅಗ್ನಿಯಲ್ಲಿ ಶಿವನನ್ನು ಪೂಜಿಸಿ ಹೋಮಕರ್ಮವನ್ನು ಪ್ರಾರಂಭಿಸಬೇಕು.

ಕುಂಡಂ ದ್ವಿಹಸ್ತಮಾನಂ ವಾ ಹಸ್ತಮಾತ್ರಮಥಾಽಪಿ ವಾ ।
ವೃತ್ತಂ ವಾ ಚತುರಸ್ರಂ ವಾ ಕುರ್ಯಾದ್ವೇದಿಂ ಚ ಮಂಡಲಂ ॥ ೩ ॥

ಕುಂಡವಿಸ್ತಾರವನ್ನಿಮ್ನಂ ತನ್ಮಧ್ಯೇಽಷ್ಟದಳಾಂಬುಜಂ ।
ಚತುರಂಗುಲಮುತ್ಸೇಧಂ ತಸ್ಯ ದ್ವ್ಯಂಗುಲಮೇವ ವಾ ॥ ೪ ॥

ವಿತಸ್ತಿದ್ವಿಗುಣೋನ್ನತ್ಯಾ ನಾಭಿಮಂತಃ ಪ್ರಚಕ್ಷ್ಯತೇ ।
ಮಧ್ಯೇ ಚ ಮಧ್ಯಮಾಂಗುಲ್ಯಾ ಮಧ್ಯಮೋತ್ತಮಪರ್ವಣೋಃ ॥ ೫ ॥

ಅಂಗುಲೈಃ ಕಥ್ಯತೇ ಸದ್ಭಿಶ್ಚತುರ್ವಿಂಶತಿಭಿಃ ಕರಃ ।
ಮೇಖಲಾನಾಂ ತ್ರಯಂ ವಾಪಿ ದ್ವಯಮೇಕಮಥಾಪಿ ವಾ ॥ ೬ ॥

ಯಥಾಶೋಭಂ ಪ್ರಕುರ್ವೀತ ಶ್ಲಕ್ಷ್ಣಮಿಷ್ಟಂ ಮೃದಾ ಸ್ಥಿರಂ ।
ಅಶ್ವತ್ಥಪತ್ರವದ್ಯೋನಿಂ ಗಜಾಧಾರವದೇವ ವಾ ॥ ೭ ॥

---

೩-೪. ಕುಂಡದಳತೆಯು ಎರಡುಮೊಳ ಅಥವಾ ಒಂದುಮೊಳ ವಿಸ್ತಾರವಾಗಿರುವಂತೆ ಗುಂಡಾಗಿಯಾಗಲಿ, ಚೌಕವಾಗಿಯಾಗಲಿ ಮಾಡಿ ಜಗುಲಿಯನ್ನೂ ಮಂಡಲವನ್ನೂ, ಮಾಡಬೇಕು. ಕುಂಡವು ವಿಸ್ತಾರಕ್ಕೆ ತಕ್ಕಷ್ಟು ಆಳವಾಗಿರಬೇಕು. ನಡುವೆ ಎಂಟುದಳಗಳ ಕಮಲಾಕಾರವಿರಬೇಕು. ಆ ಕಮಲದಳಗಳು ನಾಲ್ಕಂಗುಲವಾಗಲಿ ಎರಡಂಗುಲವಾಗಲಿ ಎತ್ತರವಾಗಿರಬೇಕು.

೫-೬. ಕುಂಡದ-ಮಧ್ಯಪ್ರದೇಶವು ಎರಡುಗೇಣು ಎತ್ತರವಾಗಿರಬೇಕು ನಡುಬೆಟ್ಟಿನನಡುವೆ ಇರುವ ನೆರೆಯಿಂದ ತುದಿಯವರೆಗೆ ಇರುವ ಅಳತೆಗೆ ಒಂದಂಗುಲವೆಂದು ಹೆಸರು. ಇಂತಹ ಅಂಗುಲಗಳು ಇಪ್ಪತ್ತುನಾಲ್ಕಾದರೆ ಅದಕ್ಕೆ ಕರವೆಂದು ಹೆಸರು. ಆ ಕುಂಡಕ್ಕೆ ಮೂರು, ಎರಡು, ಅಥವಾ ಒಂದು ಜುಗುಲಿಯನ್ನು ಮಣ್ಣಿನಿಂದ ನಯವಾಗಿ ಸುಂದರವಾಗಿರುವಂತೆ ಸುತ್ತಲೂ ಮಾಡಬೇಕು.

೭. ಆ ಜಗುಲಿಯ ನಡುವೆ ಅರಳಿಯ ಎಲೆಯಂತೆ ಆಕೃತಿಯನ್ನು ಪಶ್ಚಿಮದಿಕ್ಕಿನಲ್ಲಿಯೂ, ದಕ್ಷಿಣದಿಕ್ಕಿನಲ್ಲಿಯಾದರೂ ಮಾಡಬೇಕು.

ಮೇಖಲಾಮಧ್ಯತಃ ಕುರ್ಯಾತ್ಪಶ್ಚಿಮೇ ದಕ್ಷಿಣೇಽಪಿ ವಾ ।
ಶೋಭನಾಮಗ್ನಿತಃ ಕಿಂಚಿನ್ನಿಮ್ನಾಮುನ್ಮೀಲಿಕಾಂ ಶನೈಃ ॥ ೮ ॥

ಅಗ್ರೇಣ ಕುಂಡಾಭಿಮುಖೀಂ ಕಿಂಚಿದುತ್ಸೃಜ್ಯ ಮೇಖಲಾಂ ।
ನೋತ್ಸೇಧನಿಯಮೋ ವೇದ್ಯಾಃ ಸಾ ಮಾರ್ದೀ ವಾಽಥ ಸೈಕತೀ ॥ ೯ ॥

ಮಂಡಲಂ ಗೋಶಕೃತ್ತೋಯೈರ್ಮಾನಂ ಪಾತ್ರಸ್ಯ ನೋದಿತಂ ।
ಕುಂಡಂ ಚ ಮೃಣ್ಮಯಂ ವೇದಿಮಾಲಿಂಪೇದ್ಗೋಮಯಾಂಬುನಾ ॥ ೧೦ ॥

ಪ್ರಕ್ಷಾಳ್ಯ ತಾಪಯೇತ್ಪಾತ್ರಂ ಪ್ರೋಕ್ಷಯೇದನ್ಯದಂಭಸಾ ।
ಸ್ವಸೂತ್ರೋಕ್ತಪ್ರಕಾರೇಣ ಕುಂಡಾದೌ ವಿಲಿಖೇತ್ತತಃ ॥ ೧೧ ॥

ಸಂಪ್ರೋಕ್ಷ್ಯ ಕಲ್ಪಯೇದ್ದರ್ಭೈಃ ಪುಷ್ಪೈರ್ವಾ ವಹ್ನಿವಿಷ್ಟರಂ ।
ಅರ್ಚನಾರ್ಥಂ ಚ ಹೋಮಾರ್ಥಂ ಸರ್ವದ್ರವ್ಯಾಣಿ ಸಾಧಯೇತ್ ॥೧೨॥

---

೮-೯. ಆ ಜಗುಲಿಯು ಮಂಗಳಕರವಾಗಿ ಅಗ್ನಿಯಕಡೆಯಿಂದ ಇಳಿಜಾರಾಗಿರಬೇಕು. ಕೊನೆಯ ಜಗುಲಿಯು ಕುಂಡಕ್ಕೆ ಅಭಿಮುಖವಾಗಿರಬೇಕು. ಜಗಲಿಗೆ ಎತ್ತರವು ಇಷ್ಟೇ ಇರಬೇಕೆಂಬ ನಿಯಮವಿಲ್ಲ. ಅದು ಮಣ್ಣಿನಿಂದ ಅಥವಾ ಮರಳಿನಿಂದ ಮಾಡಿದುದಾಗಿರಬಹುದು.

೧೦- ಹಸುವಿನ ಸಗಣಿ ಮತ್ತು ನೀರಿನಿಂದ ಮಂಡಲಗಳನ್ನು ಮಾಡಬೇಕು. ಅದರ ಅಳತೆಯನ್ನು ಹೇಳಿಲ್ಲ. ಮಣ್ಣಿನಿಂದ ಮಾಡಿದ ಅಗ್ನಿಕುಂಡವನ್ನೂ, ಜಗಲಿಯನ್ನೂ ಸಗಣಿ ಮತ್ತು ನೀರಿನಿಂದು ಬಳಿಯಬೇಕು.

೧೧-೧೨. ಹೋಮಕ್ಕೆ ಉಪಯೋಗಿಸುವ ಪಾತ್ರೆಗಳನ್ನು ನೀರಿನಿಂದ ತೊಳೆದು ಬೆಂಕಿಯಲ್ಲಿ ಕಾಯಿಸಿ ನೀರಿನಿಂದ ಪ್ರೋಕ್ಷಿಸಿ ತಂತಮ್ಮ ಗೃಹ್ಯಸೂತ್ರದಲ್ಲಿ ಹೇಳಿದಂತೆ ಕುಂಡಾದಿಗಳಲ್ಲಿ ರೇಖೆಗಳನ್ನು ಬರೆದು ನೀರಿನಿಂದ ಪ್ರೋಕ್ಷಿಸಿ ದರ್ಭೆಗಳಿಂದಾಗಲಿ, ಹೂಗಳಿಂದಲಾಗಲಿ ಅಗ್ನಿಗೆ ಆಸನವನ್ನು ಕಲ್ಪಿಸಬೇಕು. ಬಳಿಕ ಪೂಜೆಗಾಗಿಯೂ, ಹೋಮಕ್ಕಾಗಿಯೂ ಸಕಲ ಪದಾರ್ಥಗಳನ್ನೂ ಸಿದ್ಧಪಡಿಸಬೇಕು.

ಪ್ರಕ್ಷಾಲ್ಯ ಕ್ಷಾಲನೀಯಾನಿ ಪ್ರೋಕ್ಷಣ್ಯಾ ಪ್ರೋಕ್ಷ್ಯ ಶೋಧಯೇತ್ ।
ಮಣಿಜಂ ಕಾಷ್ಠಜಂ ವಾಥ ಶ್ರೋತ್ರಿಯಾಗಾರಸಂಭವಂ ॥ ೧೩ ॥

ಅನ್ಯಂ ವಾಭ್ಯರ್ಹಿತಂ ವಹ್ನಿಂ ತತಃ ಸಾಧಾರಮಾನಯೇತ್ ।
ತ್ರಿಃ ಪ್ರದಕ್ಷಿಣಮಾವೃತ್ಯ ಕುಂಡಾದೇರುಪರಿ ಕ್ರಮಾತ್ ॥ ೧೪ ॥

ವಹ್ನಿಬೀಜಂ ಸಮುಚ್ಚಾರ್ಯ ತ್ವಾದಧೀತಾಗ್ನಿಮಾನಸೇ ।
ಯೋನಿಮಾರ್ಗೇಣ ವಾ ತದ್ವದಾತ್ಮನಃ ಸಂಮುಖೇನ ವಾ ॥ ೧೫ ॥

ಯೋನಿಪ್ರದೇಶಗಃ ಸರ್ವಂ ಕುಂಡಂ ಕುರ್ಯಾದ್ವಿಚಕ್ಷಣಃ ।
ಸ್ವನಾಭ್ಯಂತಃ ಸ್ಥಿತಂ ವಹ್ನಿಂ ತದ್ರಂಧ್ರಾದ್ವಿಸ್ಫುಲಿಂಗವತ್ ॥ ೧೬ ॥

ನಿರ್ಗಮ್ಯ ಪಾವಕೇ ಬಾಹ್ಯೇ ಲೀನಂ ಬಿಂಬಾಕೃತಿಂ ಸ್ಮರೇತ್ ।
ಆಜ್ಯಸಂಸ್ಕಾರಪರ್ಯಂತಮನ್ವಾಧಾನಪುರಸ್ಸರಂ ॥ ೧೭ ॥

---

೧೩. ಪ್ರೋಕ್ಷಣಿಯ ಪಾತ್ರೆಯಲ್ಲಿರುವ ನೀರಿನಿಂದ ತೊಳೆಯಬೇಕಾದ ಕಲ್ಲಿನ ಮತ್ತು ಮರದ ಪಾತ್ರೆಗಳನ್ನೆಲ್ಲ ತೊಳೆದು ಶುದ್ಧಮಾಡಬೇಕು. ಅಗ್ನಿಯನ್ನು ಯಾವುದಾದರೂ ಪಾತ್ರೆಯಲ್ಲಿ ತರಬೇಕು.

೧೪–೧೫. ಅಗ್ನಿಕುಂಡದಮೇಲೆ ಆ ಅಗ್ನಿಯನ್ನು ಮೂರಾವರ್ತಿ ಪ್ರದಕ್ಷಣಾಕಾರವಾಗಿ ತಿರುಗಿಸಿ ಅಗ್ನಿಬೀಜ (ರಂ) ಮಂತ್ರವನ್ನುಚ್ಚರಿಸಿ ಆ ಅಗ್ನಿಯನ್ನು ಆಗ್ನೇಯದಿಕ್ಕಿನಿಂದಲಾಗಲಿ ತನಗೆ ಅಭಿಮುಖವಾಗಿಯಾಗಲಿ ಅಗ್ನಿಗೋಸ್ಕರವಾಗಿ ಮಾಡಿದ ಪೀಠದಲ್ಲಿ ಪ್ರತಿಷ್ಠೆಮಾಡಬೇಕು.

೧೬-೧೭. ಆ ಅಗ್ನಿಕುಂಡದ ಆಗ್ನೇಯದಿಕ್ಕಿನಲ್ಲಿದ್ದು ಕುಂಡದಲ್ಲಿ ಅಗ್ನಿಪ್ರತಿಷ್ಠೆಯಾಗುವಪರ್ಯಂತವಾದ ಕೆಲಸಗಳನ್ನೆಲ್ಲಾ ಮಾಡಿ ತನ್ನ ಶರೀರದ ನಾಭಿಪ್ರದೇಶದಲ್ಲಿದ್ದ ಅಗ್ನಿಯನ್ನು ನಾಭಿರಂಧ್ರದಿಂದ ಕಿಡಿಗಳ ರೂಪವಾಗಿ ಹೊರಟು ಹೊರಗಿನ ಅಗ್ನಿಯಲ್ಲಿ ಲೀನವಾದಂತೆ ಅಗ್ನಿಯ ಆಕೃತಿಯನ್ನು ಸ್ಮರಿಸಿ, ಅನ್ವಾಧಾನ ಮೊದಲುಗೊಂಡು ಆಜ್ಯಸಂಸ್ಕಾರಪರ್ಯಂತವಾಗಿ ತನ್ನ ಸೂತ್ರೋಕ್ತರೀತಿಯಿಂದ ಮೂಲಮಂತ್ರದಿಂದ ಎಲ್ಲಾ ಕಾರ್ಯಗಳನ್ನೂ ಮಾಡಬೇಕು.

ಸ್ವಸೂತ್ರೋಕ್ತಕ್ರಮಾತ್ಕುರ್ಯಾನ್ಮೂಲಮಂತ್ರೇಣ ಮಂತ್ರವಿತ್ ।
ಶಿವಮೂರ್ತಿಂ ಸಮಭ್ಯರ್ಚ್ಯ ತತೋ ದಕ್ಷಿಣಪಾರ್ಶ್ವತಃ ॥ ೧೮ ॥

ನ್ಯಸ್ಯ ಮಂತ್ರಘೃತೇ ಮುದ್ರಾಂ ದರ್ಶಯೇದ್ಧೇನುಸಂಜ್ಞಿತಾಂ ।
ಸೃಕ್ಸ್ರುವೌ ತೈಜಸೌ ಗ್ರಾಹ್ಯೌ ನ ಕಾಂಸ್ಯಾಯಸಸೈಸಕೌ ॥ ೧೯ ॥

ಯಜ್ಞದಾರುಮಯೌ ವಾಪಿ ಸ್ಮಾರ್ತೌ ವಾ ಶಿಲ್ಪಸಂಮತೌ ।
ಪರ್ಣೇ ವಾ ಬ್ರಹ್ಮವೃಕ್ಷಾದೇರಚ್ಛಿದ್ರೇ ಮಧ್ಯ ಉತ್ಥಿತೇ ॥ ೨೦ ॥

ಸಂಮೃಜ್ಯ ದರ್ಭೈಸ್ತೌ ವಹ್ನೌ ಸಂತಪ್ಯ ಪ್ರೋಕ್ಷಯೇತ್ಪುನಃ ।
ಪರಿಷಿಚ್ಯ ಸ್ವಸೂತ್ರೋಕ್ತಕ್ರಮೇಣ ಶಿವಪೂರ್ವಕೈಃ ॥ ೨೧ ॥

ಜುಹುಯಾದಷ್ಟಭಿರ್ಬೀಜೈರಗ್ನಿಸಂಸ್ಕಾರಸಿದ್ಧಯೇ ।
ಭ್ರುಂ ಸ್ತುಂ ಬ್ರುಂ ಶ್ರುಂ ಕ್ರಮೇಣೈವ ಪುಂಡ್ರುಂ ದ್ರುಮಿತ್ಯತಃ ಪರಂ ॥ ೨೨ ॥

---

೧೮-೧೯. ಶಿವಮೂರ್ತಿಯನ್ನು ಪೂಜಿಸಿ ಅಗ್ನಿಕುಂಡದ ದಕ್ಷಿಣದಿಕ್ಕಿನಲ್ಲಿ ರಿಸಬೇಕು. ಬಳಿಕ ಮಂತ್ರಪೂತವಾದ ತುಪ್ಪದಲ್ಲಿ ಧೇನುಮುದ್ರೆಯನ್ನು ಪ್ರದರ್ಶಿಸಿ ಚಿನ್ನ ಅಥವಾ ಬೆಳ್ಳಿಯ ಸ್ರುಕ್, ಸ್ರುವ ಪಾತ್ರೆಗಳನ್ನು ತೆಗೆದುಕೊಳ್ಳ ಬೇಕು. ಕಂಚು, ಕಬ್ಬಿಣ, ಸೀಸ ಈ ಲೋಹದ ಪಾತ್ರೆಯನ್ನು ಗ್ರಹಿಸಬಾರದು.

೨೦. ಸ್ರುಕ್ಸ್ರುವಗಳು ಯಜ್ಞಕ್ಕೆ ಉಪಯೋಗಿಸುವ ಮರದಿಂದ ಮಾಡಿದುವಾಗಲಿ, ಸ್ಮೃತಿಯಲ್ಲಿ ಹೇಳಿದಂತೆ ಶಿಲ್ಪಶಾಸ್ತ್ರಸಂಮತವಾಗಿರುವಂತೆ ಮಾಡಿದುವಾಗಲಿ ಆಗಬಹುದು. ರಂಧ್ರಗಳಿಲ್ಲದ, ನಡುವೆ ಎತ್ತರವಾದ ಅಶ್ವತ್ಥ ವೃಕ್ಷವೇ ಮೊದಲಾದ ಎಲೆಗಳಿಂದ ಮಾಡಿದುವಾಗಲಿ ಆಗಿರಬಹುದು. ಅವುಗಳನ್ನು ದರ್ಭೆಯಿಂದ ಸ್ಪರ್ಶಮಾಡಿ ಅಗ್ನಿಯಲ್ಲಿ ಕಾಯಿಸಿ ಮತ್ತೆ ನೀರಿನಿಂದ ಪ್ರೋಕ್ಷಿಸ ಬೇಕು.

೨೧-೨೨. ತಮ್ಮ ಸೂತ್ರದಲ್ಲಿ ಹೇಳಿರುವಮೇರೆಗೆ ಶಿವಮಂತ್ರದಿಂದ ಅಗ್ನಿಗೆ ಪರೀಷೇಚನೆಯನ್ನು ಮಾಡಿ ಅಗ್ನಿಸಂಸ್ಕಾರಸಿದ್ಧಿಗಾಗಿ ಎಂಟು ಬೀಜ ಮಂತ್ರಗಳಿಂದ ಹೋಮವನ್ನು ಮಾಡಬೇಕು. ಭ್ರುಂ, ಸ್ತುಂ, ಬ್ರುಂ, ಶ್ರುಂ, ಪುಂ, ಡ್ರುಂ, ದ್ರುಂ ಎಂದು ಏಳು ಬೀಜಮಂತ್ರಗಳು ಅಗ್ನಿಯ ಏಳು ನಾಲಿಗೆಗಳಿಗೆ ಸಂಬಂಧಪಟ್ಟವುಗಳು.

ಬೀಜಾನಿ ಸಪ್ತ ಸಪ್ತಾನಾಂ ಜಿಹ್ವಾನಾಮನುಪೂರ್ವಶಃ ।
ತ್ರಿಶಿಖಾ ಮಧ್ಯಮಾ ಜಿಹ್ವಾ ಕನಕಾ ಪೂರ್ವತಸ್ಸ್ಥಿತಾ ॥ ೨೩ ॥

ರಕ್ತಾಗ್ನೇಯಿಯಾ ನೈರ್ಋತೀ ಚ ಕೃಷ್ಣಾನ್ಯಾ ಸುಪ್ರಭಾ ಮತಾ ।
ಅತಿರಿಕ್ತಾ ಮರುಜ್ಜಿಹ್ವಾ ಸ್ವನಾಮಾನುಗುಣಪ್ರಭಾ ॥ ೨೪ ॥

ಸ್ವಬೀಜಾನಂತರಂ ನಾಮ್ನಾ ಸ್ವಾಹಾಂತಂ ಚ ಯಥಾಕ್ರಮಂ ।
ಜಿಹ್ವಾಮಂತ್ರೈಸ್ತು ತೈರ್ಹುತ್ವಾಽಽಜ್ಯಂ ಜಿಹ್ವಾಸ್ವೇಕೈಕಶಃ ಕ್ರಮಾತ್ ॥ ೨೫ ॥

ರಂ ವನ್ಹಯೇತಿ ಸ್ವಾಹೇತಿ ಮಧ್ಯೇ ಹುತ್ವಾಽಽಹುತಿತ್ರಯಂ ।
ಸರ್ಪಿಷಾ ವಾ ಸಮಿದ್ಭಿರ್ವಾ ಪರಿಷೇಚನಮಾಚರೇತ್ ॥ ೨೬ ॥

ಏವಂ ಕೃತೇ ಶಿವಾಗ್ನಿಸ್ಸ್ಯಾತ್ಸ್ಮರೇತ್ತತ್ರ ಶಿವಾಸನಂ ।
ತತ್ರಾವಾಹ್ಯ ಯಜೇದ್ದೇವಮರ್ಧನಾರೀಶ್ವರಂ ಶಿವಂ ।
ದೀಪಾಂತಂ ಪರಿಷಿಚ್ಯಾಥ ಸಮಿದ್ಧೋಮಂ ಸಮಾಚರೇತ್ । ॥ ೨೭ ॥

---

೨೩-೨೪. ಮಧ್ಯನಾಲಗೆಯು ತ್ರಿಶಿಖೆ ಎಂಬುದು. ಪೂರ್ವದಿಕ್ಕಿನದು ಕನಕಾ, ಆಗ್ನೇಯದಿಕ್ಕಿನದು ರಕ್ತಾ, ನೈರುತ್ಯದಿಕ್ಕಿನದು ಕೃಷ್ಣ. ಸುಪ್ರಭಾ, ಅತಿರಿಕ್ತಾ, ಮರುಜ್ಜಿಹ್ವಾ ಎಂಬಿವು ಬೇರೆ ನಾಲಿಗೆಗಳು.

೨೫. ಸ್ವಾಹಾಂತವಾಗಿ ಬೀಜಾಕ್ಷರಗಳನ್ನು ಉಚ್ಚರಿಸಿ ಜಿಹ್ವಾಮಂತ್ರಗಳನ್ನು ಹೇಳಿ ತುಪ್ಪವನ್ನು ಒಂದೊಂದಾಗಿ ಕ್ರಮಪ್ರಕಾರವಾಗಿ ಹೋಮವನ್ನು ಮಾಡಬೇಕು.

೨೬. ರಂ ವನ್ಹಯೇ ಸ್ವಾಹಾ ಎಂದು ನಡುವೆ ಮೂರು ಹೋಮಗಳನ್ನು ತುಪ್ಪದಿಂದಲಾಗಲಿ, ಸಮಿತ್ತುಗಳಿಂದಲಾಗಲಿ ಮಾಡಿದಮೇಲೆ ಅಗ್ನಿಗೆ ಪರಿಷೇಚನೆಯನ್ನು ಮಾಡಬೇಕು.

೨೭. ಹೀಗೆ ಮಾಡಿದಮೇಲೆ ಅದು ಶಿವಾಗ್ನಿಯೆನಿಸುವುದು. ಆ ಸಂದರ್ಭದಲ್ಲಿ ಆ ಅಗ್ನಿಯಲ್ಲಿ ಶಿವನ ಪೀಠವನ್ನು ಆವಾಹನೆಮಾಡಿ ಆ ಪೀಠದಲ್ಲಿ ಅರ್ಧನಾರೀಶ್ವರನನ್ನು ದೀಪೋಪಚಾರಾಂತವಾಗಿ ಪೂಜಿಸಬೇಕು. ಆಮೇಲೆ ಅಗ್ನಿಗೆ ಪರಿಷೇಚನೆಯನ್ನು ಮಾಡಿ ಸಮಿತ್ತುಗಳ ಹೋಮವನ್ನು ಮಾಡಬೇಕು.

ತಾಃ ಪಾಲಾಶ್ಯಃ ಪರಾ ವಾಪಿ ಯಜ್ಞಿಯಾ ದ್ವಾದಶಾಂಗುಲಾಃ ।
ಅವಕ್ರಾ ನ ಸ್ವಯಂ ಶುಷ್ಕಾಃ ಸತ್ವಚೋ ನಿರ್ವ್ರಣಾಃ ಸಮಾಃ ॥ ೨೮ ॥

ದಶಾಂಗುಲಾ ವಾ ವಿಹಿತಾಃ ಕನಿಷ್ಠಾಂಗುಲಿಸಂಮಿತಾಃ ।
ಪ್ರಾದೇಶಮಾತ್ರಾ ವಾಲಾಭೇ ಹೋತವ್ಯಾಃ ಸಕಲಾ ಅಪಿ ॥ ೨೯ ॥

ದೂರ್ವಾಪತ್ರಸಮಾಕಾರಾಂ ಚತುರಂಗುಲಮಾಯತಾಂ ।
ದದ್ಯಾದಾಜ್ಯಾಹುತಿಂ ಪಶ್ಚಾದನ್ನಮಕ್ಷಪ್ರಮಾಣತಃ ॥ ೩೦ ॥

ಲಾಜಾಂಸ್ತಥಾ ಸರ್ಷಪಾಂಶ್ಚ ಯವಾಂಶ್ಚೈವ ತಿಲಾಂಸ್ತಥಾ ।
ಸರ್ಪಿಷಾಕ್ತಾನಿ ಭಕ್ಷ್ಯಾಣಿ ಲೇಹ್ಯಚೋಷ್ಯಾಣಿ ಸಂಭವೇ ॥ ೩೧ ॥

ದಶೈವಾಹುತಯಸ್ತತ್ರ ಪಂಚ ವಾ ತ್ರಿತಯಂ ಚ ವಾ ।
ಹೋತವ್ಯಾಃ ಶಕ್ತಿತೋ ದದ್ಯಾದೇಕಮೇವಾಥವಾಹುತಿಂ ॥ ೩೨ ॥

---

೨೮-೨೯. ಆ ಸಮಿತ್ತುಗಳು ಮುತ್ತುಗವೇ ಮೊದಲಾದ ಯಜ್ಞವೃಕ್ಷಗಳದಾಗಿರಬೇಕು. ಅವು ಡೊಂಕಾಗಿರದೆ ತಾವಾಗಿ ಒಣಗಿದುವಲ್ಲವಾಗಿರಬೇಕು. ಮೇಲಿನ ತೊಗಟೆಯಿಂದ ಕೂಡಿ ಸರಳವಾಗಿ ಕಿರುಬೆರಳ ದಪ್ಪವಾದುದಾಗಿ ಗಾಯವಾಗದುದಾಗಿರಬೇಕು. ಹತ್ತಂಗುಲ ಉದ್ದವಾಗಿರಬೇಕು. ಇಂಥವು ಸಿಕ್ಕದಿದ್ದರೆ ಎಲ್ಲಾ ಸಮಿತ್ತುಗಳೂ ಒಂದು ಚೋಟು ಉದ್ದದವುಗಳನ್ನು ಹೋಮ ಮಾಡಬೇಕು.

೩೦-೩೧. ಗರಿಕೆಯ ಹುಲ್ಲಿನ ಎಲೆಯಷ್ಟುಗಾತ್ರವೂ, ನಾಲ್ಕಂಗುಲ ಉದ್ದವೂ ಉಳ್ಳ ತುಪ್ಪವನ್ನೂ, ರುದ್ರಾಕ್ಷಿಯ ಗಾತ್ರದಷ್ಟು ಅನ್ನವನ್ನೂ ಹೋಮಮಾಡಬೇಕು. ಅರಳು, ಸಾಸವೆ, ಗೋಧಿ ಎಳ್ಳು ಇವುಗಳನ್ನು ತುಪ್ಪದಲ್ಲಿ ನೆನಸಿ ಹೋಮಮಾಡಬೇಕು. ಭಕ್ಷ್ಯಗಳು, ಲೇಹ್ಯಗಳು, ಪಾಯಸ ಮುಂತಾದ ಚೋಷ್ಯಗಳು ಇವುಗಳು ಇದ್ದರೂ ಹೋಮಮಾಡುವಾಗ ತುಪ್ಪದಲ್ಲಿ ನೆನಸಿ ಹೋಮಮಾಡಬೇಕು.

೩೨. ಹೋಮಮಾಡತಕ್ಕವನು ತನ್ನ ಶಕ್ತ್ಯನುಸಾರವಾಗಿ ಹತ್ತು, ಐದು, ಮೂರು ಅಥವಾ ಒಂದಾದರೂ ಆಹುತಿಯನ್ನು ಹೋಮಮಾಡಬೇಕು.

ಸ್ರುವೇಣಾಜ್ಯಂ ಸಮಿತ್ಯಾದ್ಯಾ ಸ್ರುಚಾ ಶೇಷಾನ್ಕರೇಣ ವಾ ।
ತತ್ರ ದಿವ್ಯೇನ ಹೋತವ್ಯಂ ತೀರ್ಥೇನಾರ್ಷೇಣ ವಾ ತಥಾ ॥ ೩೩ ॥

ದ್ರವ್ಯೇಣೈಕೇನ ಚಾಲಾಭೇ ಜುಹುಯಾಚ್ಛ್ರದ್ಧಯಾ ಪುನಃ ।
ಪ್ರಾಯಶ್ಚಿತ್ತಾಯ ಜುಹುಯಾನ್ಮಂತ್ರಯಿತ್ವಾಹುತಿತ್ರಯಂ ॥ ೩೪ ॥

ತತೋ ಹೋಮಾವಶಿಷ್ಟೇನ ಘೃತೇನಾಪೂರ್ಯ ವೈ ಸ್ರುಚಂ ।
ನಿಧಾಯ ಪುಷ್ಪಂ ತಸ್ಯಾಗ್ರೇ ಸ್ರುವೇಣಾಧೋಮುಖೇನ ತಾಂ ॥ ೩೫ ॥

ಸದರ್ಭೇಣ ಸಮಾಚ್ಛಾದ್ಯ ಮೂಲೇನಾಂಜಲಿನೋತ್ಥಿತಃ ।
ವೌಷಡಂತೇನ ಜುಹುಯಾದ್ಧಾರಾಂ ತು ಯವಸಂಮಿತಾಂ ॥ ೩೬ ॥

ಇತ್ಥಂ ಪೂರ್ಣಾಹುತಿಂ ಕೃತ್ವಾ ಪರಿಷಿಂಚೇಚ್ಚ ಪೂರ್ವವತ್ ।
ತತ ಉದ್ವಾಸ್ಯ ದೇವೇಶಂ ಗೋಪಯೇತ್ತು ಹುತಾಶನಂ ॥ ೩೭ ॥

---

೩೩-೩೪. ತುಪ್ಪವನ್ನು ಸ್ರುವದಿಂದಲೂ, ಸಮಿತ್ತು, ಅನ್ನ ಮುಂತಾದುವನ್ನು ಸ್ರುಕ್ಕಿನಿಂದಲೂ, ಮಿಕ್ಕವುಗಳನ್ನು ಕೈಯಿಂದಲೂ, ಹೋಮಮಾಡಬೇಕು. ಹೋಮಮಾಡುವಾಗ ದೇವತೀರ್ಥದಿಂದಲಾಗಲಿ, ಋಷಿತೀರ್ಥದಿಂದಲಾಗಲಿ, ಹೋಮಮಾಡಬೇಕು. ಇತರ ದ್ರವ್ಯಗಳು ದೊರೆಯದಿದ್ದರೆ ಒಂದೇ ದ್ರವ್ಯದಿಂದಲೇ ಭಕ್ತಿಯಿಂದ ಹೋಮಮಾಡಿ ಪ್ರಾಯಶ್ಚಿತ್ತಕ್ಕಾಗಿ ಮಂತ್ರಪೂರ್ವಕವಾಗಿ ಮೂರು ಆಹುತಿಗಳನ್ನು ಹೋಮಮಾಡಬೇಕು.

೩೫-೩೬. ಆಮೇಲೆ ಹೋಮಮಾಡಿ ಮಿಕ್ಕ ತುಪ್ಪವನ್ನು ಸ್ರುಕ್ಕಿನಲ್ಲಿ ತುಂಬಿ ಅದರ ತುದಿಯಲ್ಲಿ ಹೂವನ್ನಿಟ್ಟು ದರ್ಭೆಯಿಂದ ಕೂಡಿ ಕೆಳಗಡೆಯ ಮುಖವಾದ ಸ್ರುವದಿಂದ ಅದನ್ನು ಮುಚ್ಚಿ ಬೊಗಸೆಯಲ್ಲಿ ಹಿಡಿದುಕೊಂಡು ಎದ್ದುನಿಂತು ಮೂಲಮಂತ್ರದಿಂದ ಗೋಧಿಯಕಾಳಿನ ದಪ್ಪದ ಧಾರೆಯಿಂದ ವೌಷಟ್ ಎಂಬ ಮಂತ್ರವನ್ನು ಕೊನೆಯಲ್ಲಿ ಉಚ್ಚರಿಸಿ ಪೂರ್ಣಾಹುತಿಹೋಮವನ್ನು ಮಾಡಬೇಕು. ಪೂರ್ಣಾಹುತಿಹೋಮವಾದಮೇಲೆ ಅಗ್ನಿಗೆ ಪರಿಷೇಚನೆಯನ್ನು ಮಾಡಬೇಕು.

೩೭-೩೮. ಆಮೇಲೆ ಶಿವನನ್ನು ಉದ್ವಾಸನೆಮಾಡಿ ಅಗ್ನಿಯನ್ನು ರಕ್ಷಣೆಮಾಡಬೇಕು. ಅಥವಾ ಅಗ್ನಿಯನ್ನೂ ಉದ್ವಾಸನೆಮಾಡಿ ನಾಭಿಯಲ್ಲಿ ಅಗ್ನಿ

ತಮುಪ್ಯುದ್ವಾಸ್ಯ ವಾ ನಾಭೌ ಯಜೇತ್ಸಂಧಾಯ ನಿತ್ಯಶಃ ।
ಅಥವಾ ವಹ್ನಿಮಾನೀಯ ಶಿವಶಾಸ್ತ್ರೋಕ್ತವರ್ತ್ಮನಾ ॥ ೩೮ ॥

ವಾಗೀಶೀಗರ್ಭಸಂಭೂತಂ ಸಂಸ್ಕೃತ್ಯ ವಿಧಿವದ್ಯಜೇತ್ ।
ಅನ್ವಾಧಾನಂ ಪುನಃ ಕೃತ್ವಾ ಪರಿಧೀನ್ಪರಿಧಾಯ ಚ ॥ ೩೯ ॥

ಪಾತ್ರಾಣಿ ದ್ವಂದ್ವರೂಪೇಣ ನಿಕ್ಷಿಪ್ಯೇಷ್ಟ್ವಾ ಶಿವಂ ತತಃ ।
ಸಂಶೋಧ್ಯ ಪ್ರೋಕ್ಷಣೀಪಾತ್ರಂ ಪ್ರೋಕ್ಷ್ಯ ತಾನಿ ತದಂಭಸಾ ॥ ೪೦ ॥

ಪ್ರಣೀತಾಪಾತ್ರಮೈಶಾನ್ಯಾಂ ವಿನ್ಯಸ್ಯಾಪೂರಿತಂ ಜಲೈಃ ।
ಆಜ್ಯಸಂಸ್ಕಾರಪರ್ಯಂತಂ ಕೃತ್ವಾ ಸಂಶೋಧ್ಯ ಸ್ರುಕ್ಸ್ರುವೌ ॥ ೪೧ ॥

ಗರ್ಭಾಧಾನಂ ಪುಂಸವನಂ ಸೀಮಂತೋನ್ನಯನಂ ತತಃ ।
ಕೃತ್ವಾ ಪೃಥಕ್ಪೃಥಗ್ಘುತ್ವಾ ಜಾತಮಗ್ನಿಂ ವಿಚಿಂತಯೇತ್ ॥ ೪೨ ॥

---

ಯನ್ನು ಸೇರಿಸಿ ಪ್ರತಿದಿವಸವೂ ಆ ಅಗ್ನಿಯಲ್ಲಿಯೇ ಶಿವನನ್ನು ಪೂಜಿಸಬೇಕು. ಹಾಗಲ್ಲದಿದ್ದರೆ ಶಿವಾಗಮಶಾಸ್ತ್ರದಲ್ಲಿ ಹೇಳಿರುವಂತೆ ಅಗ್ನಿಯನ್ನು ತರಿಸಿ ವಾಗ್ದೇವತೆಯ ಗರ್ಭದಲ್ಲಿ ಹುಟ್ಟಿದ ಅವನಿಗೆ ವಿಧಿಗನುಸಾರವಾಗಿ ಸಂಸ್ಕಾರಗಳನ್ನು ಮಾಡಿ ಪೂಜಿಸಬೇಕು.

೩೯-೪೨. ಅದಕ್ಕಾಗಿ ಮತ್ತೆ ಅನ್ವಾಧಾನವನ್ನು ಮಾಡಿ ಅಗ್ನಿಗೆ ಪರಿಸ್ತರಣಗಳನ್ನು ಹಾಕಿ ಎರಡೆರಡಾಗಿ ಪಾತ್ರಾಸಾದನೆಗಳನ್ನು ಮಾಡಿ ಬಳಿಕ ಶಿವನನ್ನು ಪೂಜಿಸಿ ಪ್ರೋಕ್ಷಣೆಪಾತ್ರೆಯನ್ನು ಶುದ್ಧಿಮಾಡಿ ಅದರಲ್ಲಿರುವ ನೀರಿನಿಂದ ಮಿಕ್ಕಪಾತ್ರೆಗಳನ್ನೆಲ್ಲ ಪ್ರೋಕ್ಷಿಸಿ ಪ್ರಣೀತಾಪಾತ್ರೆಯಲ್ಲಿ ನೀರನ್ನು ತುಂಬಿ ಈಶಾನ್ಯದಿಕ್ಕಿನಲ್ಲಿರಿಸಿ ಆಜ್ಯಸಂಸ್ಕಾರಪರ್ಯಂತವಾಗಿ ತಂತ್ರಗಳನ್ನು ನಡೆಸಿ ಸೃಕ್ಸ್ರುವಗಳನ್ನು ಶುದ್ಧಿಮಾಡಿ ಗರ್ಭಾಧಾನ, ಪುಂಸವನ, ಸೀಮಂತೋನ್ನಯನ ಕರ್ಮಗಳನ್ನು ಮಾಡಿ ಬೇರೆಬೇರೆಯಾಗಿ ಹೋಮಗಳನ್ನು ಮಾಡಿದಮೇಲೆ ಅಗ್ನಿಯು ಹುಟ್ಟಿದಂತೆ ಭಾವಿಸಬೇಕು.

ತ್ರಿಪಾದಂ ಸಪ್ತಹಸ್ತಂ ಚ ಚತುಃ ಶೃಂಗಂ ದ್ವಿಶೀರ್ಷಕಂ ।
ಮಧುಪಿಂಗಂ ತ್ರಿನಯನಂ ಸ ಕಪರ್ದೇಂದುಶೇಖರಂ ॥ ೪೩ ॥

ರಕ್ತಂ ರಕ್ತಾಂಬರಾಲೇಪಂ ಮಾಲ್ಯಭೂಷಣಭೂಷಿತಂ ।
ಸರ್ವಲಕ್ಷಣಸಂಪನ್ನಂ ಸೋಪವೀತಂ ತ್ರಿಮೇಖಲಂ ॥ ೪೪ ॥

ಶಕ್ತಿಮಂತಂ ಸೃಕ್ಸ್ರುವೌ ಚ ದಧಾನಂ ದಕ್ಷಿಣೇ ಕರೇ ।
ತೋಮರಂ ತಾಲವೃಂತಂ ಚ ಘೃತಪಾತ್ರಂ ತಥೇತರೈಃ ॥ ೪೫ ॥

ಜಾತಂ ಧ್ಯಾತ್ವೈವಮಾಕಾರಂ ಜಾತಕರ್ಮ ಸಮಾಚರೇತ್ ।
ನಾಲಾಪನಯನಂ ಕೃತ್ವಾ ತತಃ ಸಂಶೋಧ್ಯ ಸೂತಕಂ ॥ ೪೬ ॥

ಶಿವಾಗ್ನಿರುಚಿನಾಮಾಸ್ಯ ಕೃತ್ವಾಹುತಿಪುರಸ್ಸರಂ ।
ಪಿತ್ರೋರ್ವಿಸರ್ಜನಂ ಕೃತ್ವಾ ಚೌಲೋಪನಯನಾದಿಕಂ ॥ ೪೭ ॥

---

೪೩-೪೫. ಆ ಅಗ್ನಿಗೆ ಮೂರು ಕಾಲುಗಳು, ಏಳು ಕೈಗಳು, ನಾಲ್ಕು ಕೊಂಬುಗಳು, ಎರಡು ತಲೆಗಳು ಜೇನುತುಪ್ಪದ ಬಣ್ಣದ ಮೂರುಕಣ್ಣುಗಳು ಇದ್ದು ಜಟೆಯಲ್ಲಿ ಚಂದ್ರನನ್ನು ಧರಿಸಿರುವನು. ಶರೀರವು ಕೆಂಪುಬಣ್ಣವಾಗಿರುವುದು. ಕೆಂಪು ವಸ್ತ್ರ, ಕೆಂಪುಗಂಧ, ಹೂ, ಆಭರಣಗಳನ್ನು ಅಲಂಕರಿಸಿರುವನು. ಸಮಸ್ತ ಶುಭಲಕ್ಷಣಗಳಿಂದ ಕೂಡಿ ಯಜ್ಞೋಪವೀತವನ್ನು ಧರಿಸಿ ದರ್ಭೆಯಿಂದ ಮಾಡಿದ ಮೂರು ಮೇಖಲೆ (ಉಡಿದಾರ) ವನ್ನು ಧರಿಸಿರುವನು. ಕೈಗಳಲ್ಲಿ ತೋಮರವೆಂಬ ಆಯುಧ ತಾಳೇಗರಿಯ ಬೀಸಣಿಗೆ ತುಪ್ಪದ ಪಾತ್ರೆ ಇವುಗಳನ್ನು ಧರಿಸಿರುವನು. ಹುಟ್ಟಿದ ಅಗ್ನಿಯನ್ನು ಈ ಆಕಾರದಿಂದ ಧ್ಯಾನಿಸಿ ಬಳಿಕ ಜಾತಕರ್ಮವನ್ನು ಮಾಡಬೇಕು.

೪೬-೪೭. ಬಳಿಕ ಅಗ್ನಿಗೆ ನಾಭಿನಾಳಛೇದನೆಯನ್ನು ಮಾಡಿ ಜಾತಾಶೌಚವನ್ನು ಕಳೆದು ಶಿವಾಗ್ನಿಯೆಂದು ನಾಮಕರಣವನ್ನು ಮಾಡಿ ಆಹುತಿಗಳನ್ನು ಕೊಟ್ಟು ಮಾತಾಪಿತೃಗಳನ್ನು ವಿಸರ್ಜಿಸಿ ಚೌಲೋಪನಯನವೇ ಮುಂತಾಗಿ ಆಪ್ತೋರ್ಯಾಮಾಂತವಾಗಿ ಸಂಸ್ಕಾರವನ್ನು ಮಾಡಬೇಕು.

ಆಪ್ರೋೀರ್ಯೋವಮಾವಸಾನಾಂತಂ ಕೃತ್ವಾ ಸಂಸ್ಕಾರಮಸ್ಯ ತು ।
ಆಜ್ಯಧಾರಾದಿಹೋಮಂ ಚ ಕೃತ್ವಾ ಸ್ವಿಷ್ಟಕೃತಂ ತತಃ ॥ ೪೮ ॥
ರಮಿತ್ಯನೇನ ಬೀಜೇನ ಪರಿಷಿಂಚೇತ್ತತಃ ಪರಂ ।
ಬ್ರಹ್ಮವಿಷ್ಣುಶಿವೇಶಾನಾಂ ಲೋಕೇಶಾನಾಂ ತಥೈವ ಚ ॥ ೪೯ ॥
ತದಸ್ತ್ರಾಣಾಂ ಚ ಪರಿತಃ ಕೃತ್ವಾ ಪೂಜಾಂ ಯಥಾಕ್ರಮಂ ।
ಧೂಪದೀಪಾದಿಸಿದ್ಧ್ಯರ್ಥಂ ವಹ್ನಿಮುದ್ಧೃತ್ಯ ಕೃತ್ಯವಿತ್ ॥ ೫೦ ॥
ಸಾಧಯಿತ್ವಾಜ್ಯಪೂರ್ವಾಣಿ ದ್ರವ್ಯಾಣಿ ಪುನರೇವ ಚ ।
ಕಲ್ಪಯಿತ್ವಾಸನಂ ವಸ್ನೌ ತತ್ರಾವಾಹ್ಯ ಯಥಾಪುರಾ ॥ ೫೧ ॥
ಸಂಪೂಜ್ಯ ದೇವಂ ದೇವೀಂ ಚ ತತಃ ಪೂರ್ಣಾಂತಮಾಚರೇತ್ ।
ಅಥವಾ ಸ್ವಾಶ್ರಮೋಕ್ತಂ ತು ವಹ್ನಿಕರ್ಮ ಶಿವಾರ್ಪಣಂ ॥ ೫೨ ॥
ಬುಧ್ವಾ ಶಿವಾಶ್ರಮೀ ಕುರ್ಯಾನ್ನ ಚ ತತ್ರಾಪರೋ ವಿಧಿಃ ।
ಶಿವಾಗ್ನೇರ್ಭಸ್ಮ ಸಂಗ್ರಾಹ್ಯಮಗ್ನಿಹೋತ್ರೋದ್ಭವಂ ತು ವಾ ॥ ೫೩ ॥

---

೪೮. ಪೂರ್ಣಾಹುತಿರೂಪವಾದ ಆಜ್ಯಧಾರಾಹೋಮವನ್ನೂ, ಸ್ವಿಷ್ಟಕೃದ್ಧೋಮವನ್ನೂ ಮಾಡಿದಮೇಲೆ ರಂ ಎಂಬ ಬೀಜಾಕ್ಷರಮಂತ್ರದಿಂದ ಅಗ್ನಿಗೆ ಪರಿಷೇಚನೆಯನ್ನು ಮಾಡಬೇಕು.

೪೯-೫೧. ಆ ಅಗ್ನಿಯಸುತ್ತಲೂ ಬ್ರಹ್ಮ, ವಿಷ್ಣು, ಮಹೇಶ್ವರರನ್ನೂ, ಅಷ್ಟದಿಕ್ಪಾಲಕರನ್ನೂ, ಅವರವರ ಆಯುಧಗಳನ್ನೂ ಪೂಜಿಸಿ, ಧೂಪದೀಪಾದಿಗಳಿಗಾಗಿ ಅಗ್ನಿಯನ್ನೇ ತೋರಿಸಿ, ತುಪ್ಪವೇ ಮೊದಲಾದ ಹೋಮದ್ರವ್ಯಗಳನ್ನು ಮತ್ತೆ ಸಿದ್ಧಪಡಿಸಿ ಮೊದಲಿನಂತೆಯೇ ಅಗ್ನಿಗೆ ಪೀಠವನ್ನು ಕಲ್ಪಿಸಿ ಪೂಜಿಸಿ ಆ ಅಗ್ನಿಯಲ್ಲಿಯೇ ಶಿವನನ್ನೂ, ದೇವಿಯನ್ನೂ ಪೂಜಿಸಿ, ಪೂರ್ಣಪಾತ್ರವಿಸರ್ಜನಾಂತವಾಗಿ ಕರ್ಮವನ್ನಾಚರಿಸಬೇಕು.

೫೨. ಅಥವಾ ತಮ್ಮತಮ್ಮ ಆಶ್ರಮದಂತೆ ಅಗ್ನಿಕಾರ್ಯವನ್ನು ಈಶ್ವರಾರ್ಪಣ ಬುದ್ಧಿಯಿಂದ ಮಾಡಬೇಕು. ಇದಕ್ಕೆ ಬೇರೆ ವಿಧಿಯು ಇರುವುದಿಲ್ಲ.

೫೩. ಚೆನ್ನಾಗಿ ಪಕ್ವವಾಗಿ ಪರಿಶುದ್ಧವೂ, ಸುಗಂಧವೂ ಆಗಿರುವ ಶಿವಾಗ್ನಿಯ ಅಥವಾ ಅಗ್ನಿಹೋತ್ರದ ಅಥವಾ ವಿವಾಹಾಗ್ನಿಸಂಬಂಧವಾದ ಭಸ್ಮವನ್ನು ಗ್ರಹಿಸಬೇಕು. (ಶೇಖರಿಸಬೇಕು).

ವೈವಾಹಾಗ್ನಿಭವಂ ವಾಽಪಿ ಪಕ್ವಂ ಶುಚಿ ಸುಗಂಧಿ ಚ ।
ಕಪಿಲಾಯಾಃ ಶಕೃಚ್ಛಸ್ತಂ ಗೃಹೀತಂ ಗಗನೇ ಪತತ್ ॥ ೫೪ ॥

ನ ಕ್ಲಿನ್ನಂ ನಾತಿಕಠಿನಂ ನ ದುರ್ಗಂಧಂ ನ ಶೋಷಿತಂ ।
ಉಪರ್ಯಧಃ ಪರಿತ್ಯಜ್ಯ ಗೃಹ್ಣೀಯಾತ್ಪತಿತಂ ಯದಿ ॥ ೫೫ ॥

ಪಿಂಡೀಕೃತ್ಯ ಶಿವಾಗ್ನ್ಯಾದೌ ತತ್ಕ್ಷಿಪೇನ್ಮೂಲಮಂತ್ರತಃ ।
ಅಪಕ್ವಮತಿಪಕ್ವಂ ಚ ಸಂತ್ಯಜ್ಯ ಭಸಿತಂ ಸಿತಂ ॥ ೫೬ ॥

ಆದಾಯ ವಾ ಸಮಾಲೋಡ್ಯ ಭಸ್ಮಾಧಾರೇ ವಿನಿಕ್ಷಿಪೇತ್ ।
ತೈಜಸಂ ದಾರವಂ ವಾಪಿ ಮೃಣ್ಮಯಂ ಶೈಲಮೇವ ಚ ॥ ೫೭ ॥

ಅನ್ಯದ್ವಾ ಶೋಭನಂ ಶುದ್ಧಂ ಭಸ್ಮಾಧಾರಂ ಪ್ರಕಲ್ಪಯೇತ್ ।
ಸಮೇ ದೇಶೇ ಶುಭೇ ಶುದ್ಧೇ ಧನವದ್ಭಸ್ಮ ನಿಃಕ್ಷಿಪೇತ್ ॥ ೫೮ ॥

---

೫೪-೫೫. ಭಸ್ಮವನ್ನು ಮಾಡುವುದಕ್ಕೆ ಕಪಿಲವರ್ಣದ ಹಸುವಿನ ಸಗಣಿಯು ಶ್ರೇಷ್ಠವು. ಆ ಸಗಣಿಯನ್ನು ನೆಲದಮೇಲೆ ಬೀಳುವುದಕ್ಕೆ ಮೊದಲೇ ಕೈಯಲ್ಲಿ ಹಿಡಿದುಕೊಂಡು ಅದರ ಮೇಲುಭಾಗವನ್ನೂ, ಕೆಳಭಾಗವನ್ನೂ ಬಿಟ್ಟು ಮಧ್ಯಭಾಗವನ್ನು ತೆಗೆದುಕೊಳ್ಳಬೇಕು. ಅದು ಅತಿ ನೀರಾಗಿಯೂ ಅತಿ ಗಟ್ಟಿಯಾಗಿಯೂ, ದುರ್ವಾಸನೆಯುಳ್ಳದ್ದೂ, ಒಣಗಿದ್ದೂ ಆಗಿರಕೂಡದು.

೫೬. ಇಂತಹ ಸಗಣಿಯನ್ನು ಉಂಡೆಮಾಡಿ ಶಿವಪಂಚಾಕ್ಷರಮಂತ್ರದಿಂದ ಶಿವಾಗ್ನಿಯಲ್ಲಿ ಹಾಕಿ ಪಕ್ವವಾಗದ ಮತ್ತು ಹೆಚ್ಚು ಪಕ್ವವಾದ ಭಾಗವನ್ನು ಬಿಟ್ಟು ಬೆಳ್ಳಗಿರುವ ಭಸ್ಮವನ್ನು ತೆಗೆದುಕೊಂಡು ಹುಡಿಮಾಡಿ ಭಸ್ಮದ ಪಾತ್ರೆಯೊಳಗೆ ಹಾಕಿ ಇರಿಸಬೇಕು.

೫೭-೫೮. ತಾಮ್ರ, ಮರ, ಮಣ್ಣು, ಕಲ್ಲು ಇವುಗಳಿಂದ ಮಾಡಿದ ಪಾತ್ರೆಯನ್ನೂ ಮತ್ತೆ ಯಾವುದಾದರೂ ಶುಭವೂ, ಪರಿಶುದ್ಧವೂ ಆದ ಪಾತ್ರೆಯನ್ನೂ ಭಸ್ಮವನ್ನಿಡುವುದಕ್ಕೆ ಗೊತ್ತುಮಾಡಿ ಆ ಪಾತ್ರೆಯನ್ನು ಒಳ್ಳೆಯ ಪರಿಶುದ್ಧವೂ ಮಂಗಳಕರವೂ ಆದ ಸ್ಥಳದಲ್ಲಿ ಧನದಂತೆ ಜೋಪಾನವಾಗಿ ಭಸ್ಮವನ್ನು ಕಾಪಾಡಿ ಇಡಬೇಕು.

ನ ಚಾಯುಕ್ತಕರೇ ದದ್ಯಾನ್ನೈವಾಶುಚಿತಲೇ ಕ್ಷಿಪೇತ್ ।
ನ ಸಂಸ್ಪೃಶೇಚ್ಚ ನೀಚಾಂಗೈರ್ನೋಪೇಕ್ಷೇತ ನ ಲಂಘಯೇತ್ ॥ ೫೯ ॥

ತಸ್ಮಾದ್ಧೃಸಿತಮಾದಾಯ ವಿನಿಯುಂಜೀತ ಮಂತ್ರತಃ ।
ಕಾಲೇಷೂಕ್ತೇಷು ನಾನ್ಯತ್ರ ನಾಯೋಗ್ಯೇಭ್ಯಃ ಪ್ರದಾಪಯೇತ್ ॥ ೬೦ ॥

ಭಸ್ಮಸಂಗ್ರಹಣಂ ಕುರ್ಯಾದ್ದೇವೇಽನುದ್ವಾಸಿತೇ ಸತಿ ।
ಉದ್ವಾಸನೇ ಕೃತೇ ಯಸ್ಮಾಚ್ಚಂಡಭಸ್ಮ ಪ್ರಜಾಯತೇ ॥ ೬೧ ॥

ಅಗ್ನಿಕಾರ್ಯೇ ಕೃತೇ ಪಶ್ಚಾಚ್ಛಿವಶಾಸ್ತ್ರೋಕ್ತಮಾರ್ಗತಃ ।
ಸ್ವಸೂತ್ರೋಕ್ತಪ್ರಕಾರಾದ್ವಾ ಬಲಿಕರ್ಮ ಸಮಾಚರೇತ್ ॥ ೬೨ ॥

ಅಥ ವಿದ್ಯಾಸನಂ ನ್ಯಸ್ಯ ಸುಪ್ರಲಿಪ್ತೇ ತು ಮಂಡಲೇ ।
ವಿದ್ಯಾಕೋಶಂ ಪ್ರತಿಷ್ಠಾಪ್ಯ ಯಜೇತ್ಪುಷ್ಪಾದಿಭಿಃ ಕ್ರಮಾತ್ ॥ ೬೩ ॥

೫೯-೬೦. ಭಸ್ಮವನ್ನು ಅಯೋಗ್ಯರ ಕೈಗೆ ಕೊಡಬಾರದು. ಅಶುಚಿಯಾದ ಸ್ಥಳದಲ್ಲಿ ಇಡಬಾರದು. ಕಾಲು ಮುಂತಾದ ನಿಕೃಷ್ಟವಾದ ಅವಯವಗಳಿಂದ ಅದನ್ನು ಮುಟ್ಟಬಾರದು. ಅದನ್ನು ಉಪೇಕ್ಷಿಸಬಾರದು ಆ ಭಸ್ಮವನ್ನು ತೆಗೆದುಕೊಂಡು ಶಾಸ್ತ್ರೋಕ್ತವಾದ ಕಾಲಗಳಲ್ಲಿ ಮಂತ್ರಪೂರ್ವಕವಾಗಿ ಧರಿಸಬೇಕು. ಅಯೋಗ್ಯರಿಗೆ ಭಸ್ಮವನ್ನು ಕೊಡಿಸಬಾರದು.

೬೧-೬೨. ಪೂಜೆಮಾಡಿದ ದೇವತೆಯನ್ನು ಉದ್ವಾಸನೆ ಮಾಡುವುದಕ್ಕಿಂತ ಮುಂಚಿತವಾಗಿಯೇ ಭಸ್ಮವನ್ನು ಸಂಗ್ರಹಿಸಬೇಕು. ಉದ್ವಾಸನೆ ಮಾಡಿದಮೇಲೆ ಸಂಗ್ರಹಿಸಿದ ಭಸ್ಮವು ಕ್ರೂರವಾದ ಭಸ್ಮವಾಗುವುದು. ಅಗ್ನಿಕಾರ್ಯವನ್ನು ಮಾಡಿದಮೇಲೆ ಶಿವಾಗಮದಲ್ಲಿ ಹೇಳಿರುವಂತೆ ಅಥವಾ ತಮ್ಮ ತಮ್ಮ ಸೂತ್ರವನ್ನನುಸರಿಸಿ ಬಲಿಹರಣಕರ್ಮವನ್ನಾಚರಿಸಬೇಕು.

೬೩-೬೪. ಆಮೇಲೆ ಚೆನ್ನಾಗಿ ಸಾರಿಸಿದ ಮಂಡಲದಲ್ಲಿ ಮಂತ್ರಪುಸ್ತಕದ ಪೀಠವನ್ನಿಟ್ಟು ಅದರಮೇಲೆ ಮಂತ್ರದ ಪುಸ್ತಕವನ್ನಿಟ್ಟು ಹೂಗಳಿಂದ ಕ್ರಮವಾಗಿ ಪೂಜಿಸಬೇಕು. ಅದರ ಮುಂದೆ ಗುರುವಿಗೂ ಮಂಡ

ವಿದ್ಯಾಯಾಃ ಪುರತಃ ಕೃತ್ವಾ ಗುರೋರಪಿ ಚ ಮಂಡಲಂ ।
ತತ್ರಾಸನವರಂ ಕೃತ್ವಾ ಪುಷ್ಪಾದ್ಯೈರ್ಗುರುಮರ್ಚಯೇತ್ ॥ ೬೪ ॥

ತತೋಽನುಪೂಜಯೇತ್ಪೂಜ್ಯಾನ್ಭೋಜಯೇಚ್ಚ ಬುಭುಕ್ಷಿತಾನ್ ।
ತತಸ್ಸ್ವಯಂ ಚ ಭುಂಜೀತ ಶುದ್ಧಮನ್ನಂ ಯಥಾಸುಖಂ ॥ ೬೫ ॥

ನಿವೇದಿತಂ ಚ ವಾ ದೇವೇ ತಚ್ಛೇಷಂ ಚಾತ್ಮಶುದ್ಧಯೇ ।
ಶ್ರದ್ಧಧಾನೋ ನ ಲೋಭೇನ ಚಂಡಾಯ ಚ ಸಮರ್ಪಿತಂ ॥ ೬೬ ॥

ಗಂಧಮಾಲ್ಯಾದಿ ಯಚ್ಚಾನ್ಯತ್ತತ್ರಾಪ್ಯೇಷ ಸಮೋ ವಿಧಿಃ ।
ನ ತು ತತ್ರ ಶಿವೋಽಸ್ಮೀತಿ ಬುದ್ಧಿಂ ಕುರ್ಯಾದ್ವಿಚಕ್ಷಣಃ ॥ ೬೭ ॥

ಭುಕ್ತ್ವಾಚಮ್ಯ ಶಿವಂ ಧ್ಯಾತ್ವಾ ಹೃದಯೇ ಮೂಲಮುಚ್ಚರೇತ್ ।
ಕಾಲಶೇಷಂ ನಯೇದ್ಯೋಗ್ಯೈಃ ಶಿವಶಾಸ್ತ್ರಕಥಾದಿಭಿಃ ॥ ೬೮ ॥

ರಾತ್ರೌ ವ್ಯತೀತೇ ಪೂರ್ವಾಂಶೇ ಕೃತ್ವಾ ಪೂಜಾಂ ಮನೋಹರಾಂ ।
ಶಿವಯೋಃ ಶಯನಂ ತ್ವೇಕಂ ಕಲ್ಪಯೇದತಿಶೋಭನಂ ॥ ೬೯ ॥

---

ಲವನ್ನು ಮಾಡಿ ಉತ್ತಮವಾದ ಪೀಠವನ್ನಿಟ್ಟು ಹೂವುಗಳೇ ಮುಂತಾದ ಪೂಜಾದ್ರವ್ಯಗಳಿಂದ ಗುರುವನ್ನು ಪೂಜಿಸಬೇಕು.

೬೫–೬೬. ಆಬಳಿಕ ಪೂಜ್ಯರಾದವರನ್ನು ಪೂಜಿಸಿ, ಹಸಿವಿನಿಂದಿರುವವರಿಗೆ ಭೋಜನವನ್ನು ಮಾಡಿಸಿ, ಆಮೇಲೆ ತಾನು ಪರಿಶುದ್ಧವಾದ ಅನ್ನವನ್ನು ಸುಖವಾಗಿ ಊಟಮಾಡಬೇಕು. ಅಥವಾ ಆತ್ಮಶುದ್ಧಿಗಾಗಿ ದೇವರಿಗೆ ನಿವೇದನಮಾಡಿ ಚಂಡಿಕೇಶ್ವರನಿಗೆ ಸಮರ್ಪಿಸಿದುದನ್ನು ಭಕ್ತಿಯಿಂದ ಊಟಮಾಡಬೇಕು. ಲೋಭದಿಂದಲ್ಲ.

೬೭. ಶಿವನ ಪ್ರಸಾದರೂಪವಾದ ಗಂಧ ಹೂಗಳ ವಿಷಯದಲ್ಲಿಯೂ, ಮೇಲೆ ಹೇಳಿದ ವಿಧಿಯನ್ನೇ ಅನುಸರಿಸಬೇಕು. ಈ ಸಂದರ್ಭದಲ್ಲಿ ಮಾತ್ರ ನಾನೇ ಶಿವನೆಂಬ ಭಾವನೆಯನ್ನು ಮಾಡಬಾರದು.

೬೮-೬೯. ಊಟಮಾಡಿದಮೇಲೆ ಆಚಮನವನ್ನು ಮಾಡಿ ಶಿವನನ್ನು ಧ್ಯಾನಿಸಿ ಮನಸ್ಸಿನಲ್ಲಿಯೇ ಪಂಚಾಕ್ಷರಮಂತ್ರವನ್ನು ಜಪಮಾಡಿ ಮಿಕ್ಕಕಾಲವನ್ನು ಶಿವಶಾಸ್ತ್ರಕಥೆ ಮುಂತಾದುದನ್ನು ಕೇಳುತ್ತ ಕಳೆದು, ರಾತ್ರಿಯ ಮೊದಲನೆಯಯಾಮವು ಕಳೆದಮೇಲೆ ಶಿವನಿಗೆ ಮನೋಹರವಾಗಿ ಪೂಜೆಯನ್ನು ಮಾಡಿ ಶಿವದಂಪತಿಗಳಿಗೆ ಮಂಗಳಕರವಾದ ಒಂದು ಹಾಸಿಗೆಯನ್ನು ಕಲ್ಪಿಸಬೇಕು.

ಭಕ್ಷ್ಯಭೋಜ್ಯಾಂಬರಾಲೇಪಪುಷ್ಪಮಾಲಾದಿಕಂ ತಥಾ ।
ಮನಸಾ ಕರ್ಮಣಾ ವಾಪಿ ಕೃತ್ವಾ ಸರ್ವಂ ಮನೋಹರಂ ॥ ೭೦ ॥

ತತೋ ದೇವಸ್ಯ ದೇವ್ಯಾಶ್ಚ ಪಾದಮೂಲೇ ಶುಚಿಃ ಸ್ವಪೇತ್ ।
ಗೃಹಸ್ಥೋ ಭಾರ್ಯಯಾ ಸಾರ್ಧಂ ತದನ್ಯೇಽಪಿ ತು ಕೇವಲಾಃ ॥ ೭೧ ॥

ಪ್ರತ್ಯೂಷಸಮಯಂ ಬುಧ್ವಾ ಮಾತ್ರಾಮಾದ್ಯಾಮುದೀರಯೇತ್ ।
ಪ್ರಣಮ್ಯ ಮನಸಾ ದೇವಂ ಸಾಂಬಂ ಸಗಣಮವ್ಯಯಂ ॥ ೭೨ ॥

ದೇಶಕಾಲೋಚಿತಂ ಕೃತ್ವಾ ಶೌಚಾದ್ಯಮಪಿ ಶಕ್ತಿತಃ ।
ಶಂಖಾದಿನಿನದೈರ್ದಿವ್ಯೈರ್ದೇವಂ ದೇವೀಂ ಚ ಬೋಧಯೇತ್ ॥ ೭೩ ॥

ತತಸ್ತತ್ಸಮಯೋನ್ನಿದ್ರೈಃ ಪುಷ್ಪೈರತಿಸುಗಂಧಿಭಿಃ ।
ನಿರ್ವರ್ತ್ಯಃ ಶಿವಯೋಃ ಪೂಜಾಂ ಪ್ರಾರಭೇತ ಪುರೋದಿತಂ ॥ ೭೪ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯಸಂಹಿತಾಯಾ-
ಮುತ್ತರಭಾಗೇ ಅಗ್ನಿಕಾರ್ಯವರ್ಣನಂ ನಾಮ
ಸಪ್ತವಿಂಶೋಽಧ್ಯಾಯಃ

---

೭೦-೭೧. ಭಕ್ಷ್ಯಗಳು, ಭೋಜ್ಯಗಳು, ವಸ್ತ್ರ, ಗಂಧ, ಹೂ ಇವುಗಳನ್ನು ಮನೋಹರವಾಗಿರುವಂತೆ ಮನಸ್ಸಿನಲ್ಲಾದರೂ, ಕಾರ್ಯದಲ್ಲಾದರೂ, ಕಲ್ಪಿಸಿ, ಆಮೇಲೆ ದೇವದೇವಿಯರ ಪಾದಪ್ರದೇಶದಲ್ಲಿ ಪರಿಶುದ್ಧಭಾವದಿಂದ ಮಲಗಬೇಕು. ಗೃಹಸ್ಥನಾದರೆ ಪತ್ನಿಯೊಡನೆಯೂ ಅನ್ಯನಾದರೆ ಒಬ್ಬನೇ ಮಲಗಬೇಕು.

೭೨-೭೩. ಪ್ರಾತಃಕಾಲದಲ್ಲಿ ಎಚ್ಚರವಾಗಿ ಓಂಕಾರವನ್ನುಚ್ಚರಿಸಿ ಮನಸ್ಸಿನಿಂದಲೇ ಅಂಬಾ ಸಹಿತನಾದ ದೇವನಿಗೆ ನಮಸ್ಕಾರಮಾಡಿ, ಕಾಲೋಚಿತವಾದ ಶೌಚಾದಿ ಕರ್ಮಗಳನ್ನು ಶಕ್ತ್ಯನುಸಾರವಾಗಿ ಮಾಡಿ ಶಂಖವೇ ಮುಂತಾದ ಮಂಗಳವಾದ್ಯಗಳಿಂದ ದೇವದೇವಿಯರನ್ನು ಎಚ್ಚರಗೊಳಿಸಬೇಕು.

೭೪. ಆಬಳಿಕ ಆಗತಾನೇ ಅರಳಿದ ಸುವಾಸನೆಯಾದ ಪುಷ್ಪಗಳಿಂದ ಶಿವದಂಪತಿಗಳನ್ನು ಪೂಜಿಸಿ ಹಿಂದೆ ಹೇಳಿದಂತೆ ಪ್ರತಿದಿನದಲ್ಲಿಯೂ ಮಾಡಬೇಕಾದ ಕರ್ಮಗಳನ್ನು ಪ್ರಾರಂಭಿಸಬೇಕು.

ಇಲ್ಲಿಗೆ ಶಿವಮಹಾಪುರಾಣದ ವಾಯುವೀಯಸಂಹಿತೆಯ ಉತ್ತರಭಾಗದಲ್ಲಿ
ಅಗ್ನಿಕಾರ್ಯವರ್ಣನವೆಂಬ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವಮಹಾಪುರಾಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ಅಷ್ಟವಿಂಶೋಽಧ್ಯಾಯಃ

---

॥ ಉಪಮನ್ಯುರುವಾಚ ॥

**ಅತಃಪರಂ ಪ್ರವಕ್ಷ್ಯಾಮಿ ಶಿವಾಶ್ರಮನಿಷೇವಿಣಾಂ ।**
**ಶಿವಶಾಸ್ತ್ರೋಕ್ತಮಾರ್ಗೇಣ ನೈಮಿತ್ತಿಕವಿಧಿಕ್ರಮಂ ॥ ೧ ॥**

**ಸರ್ವೇಷ್ವಪಿ ಚ ಮಾಸೇಷು ಪಕ್ಷಯೋರುಭಯೋರಪಿ ।**
**ಅಷ್ಟಮ್ಯಾಂ ಚ ಚತುರ್ದಶ್ಯಾಂ ತಥಾ ಪರ್ವಣಿ ಚ ಕ್ರಮಾತ್ ॥ ೨ ॥**

**ಅಯನೇ ವಿಷುವೇ ಚೈವ ಗ್ರಹಣೇಷು ವಿಶೇಷತಃ ।**
**ಕರ್ತವ್ಯಾ ಮಹತೀ ಪೂಜಾ ಹ್ಯಧಿಕಾ ವಾಽಪಿ ಶಕ್ತಿತಃ ॥ ೩ ॥**

---

### ಇಪ್ಪತ್ತೆಂಟನೆಯ ಅಧ್ಯಾಯವು

೧. ಉಪಮನ್ಯುವು ಹೇಳಿದನು:—ಇಲ್ಲಿಂದ ಮುಂದೆ ಶಿವಶಾಸ್ತ್ರೋಕ್ತವಾದ ಆಶ್ರಮಧರ್ಮವನ್ನು ನಡೆಸುತ್ತಿರುವವರು ಆಚರಿಸಬೇಕಾದ ಶಿವಾಗಮೋಕ್ತವಾದ ನೈಮಿತ್ತಿಕಕರ್ಮಗಳ ನಿಯಮಗಳನ್ನು ಹೇಳುವೆನು.

೨-೩. ಎಲ್ಲ ತಿಂಗಳುಗಳಲ್ಲಿಯೂ ಎರಡುಪಕ್ಷಗಳ ಅಷ್ಟಮಿ, ಚತುರ್ದಶಿ, ಪರ್ವದಿನಗಳಲ್ಲಿಯೂ, ಉತ್ತರಾಯಣ, ದಕ್ಷಿಣಾಯನಗಳಲ್ಲಿಯೂ, ವಿಷುವತ್ಪುಣ್ಯಕಾಲಗಳಲ್ಲಿಯೂ, ಚಂದ್ರ ಸೂರ್ಯಗ್ರಹಣಗಳಲ್ಲಿಯೂ, ಶಕ್ತ್ಯನುಸಾರವಾಗಿ ಅಧಿಕವಾಗಿ ಶಿವದಂಪತಿಗಳಿಗೆ ಪೂಜೆಯನ್ನು ಮಾಡಬೇಕು.

**ಮಾಸಿ ಮಾಸಿ ಯಥಾನ್ಯಾಯಂ ಬ್ರಹ್ಮಕೂರ್ಚಂ ಪ್ರಸಾಧ್ಯ ತು ।**
**ಸ್ನಾಪಯಿತ್ವಾ ಶಿವಂ ತೇನ ಪಿಬೇಚ್ಛೇಷಮುಪೋಷಿತಃ ॥ ೪ ॥**

**ಬ್ರಹ್ಮಹತ್ಯಾದಿದೋಷಾಣಾಮತೀವ ಮಹತಾಮಪಿ ।**
**ನಿಷ್ಕೃತಿರ್ಬ್ರಹ್ಮಕೂರ್ಚಸ್ಯ ಪಾನಾನ್ನಾನ್ಯಾ ವಿಶಿಷ್ಯತೇ ॥ ೫ ॥**

**ಪೌಷೇ ತು ಪುಷ್ಯನಕ್ಷತ್ರೇ ಕುರ್ಯಾನ್ನೀರಾಜನಂ ವಿಭೋಃ ।**
**ಮಾಘೇ ಮಘಾಖ್ಯೇ ನಕ್ಷತ್ರೇ ಪ್ರದದ್ಯಾದ್ಘೃತಕಂಬಲಂ ॥ ೬ ॥**

**ಫಾಲ್ಗುನೇ ಚೋತ್ತರಾಂತೇ ವೈ ಪ್ರಾರಭೇತ ಮಹೋತ್ಸವಂ ।**
**ಚೈತ್ರೇ ಚಿತ್ರಾಪೌರ್ಣಮಾಸ್ಯಾಂ ದೋಲಾಂ ಕುರ್ಯಾದ್ಯಥಾವಿಧಿ ॥ ೭ ॥**

**ವೈಶಾಖ್ಯಾಂ ತು ವಿಶಾಖಾಯಾಂ ಕುರ್ಯಾತ್ಪುಷ್ಪಮಹಾಲಯಂ ।**
**ಜ್ಯೇಷ್ಠೇ ಮೂಲಾಖ್ಯನಕ್ಷತ್ರೇ ಶೀತಕುಂಭಂ ಪ್ರದಾಪಯೇತ್ ॥ ೮ ॥**

---

೪-೫. ಪ್ರತಿಯೊಂದು ತಿಂಗಳಲ್ಲಿಯೂ ಶಾಸ್ತ್ರಾನುಸಾರವಾಗಿ ಒಂದು ದಿನ ಉಪವಾಸ ಮಾಡಿ ಬ್ರಹ್ಮಕೂರ್ಚವನ್ನು ಸಿದ್ಧಪಡಿಸಿ ಅದರ ನೀರಿನಿಂದ ಶಿವನಿಗೆ ಅಭಿಷೇಕವನ್ನು ಮಾಡಿ ಮಿಕ್ಕ ನೀರನ್ನು ಪಾನಮಾಡಿದರೆ ಅದು ವಿಶೇಷವಾದ ಬ್ರಹ್ಮಹತ್ಯಾದಿ ಮಹಾಪಾಪಗಳಿಗೂ ಪ್ರಾಯಶ್ಚಿತ್ತರೂಪವಾದುದಾಗಿರುವುದು. ಇದಕ್ಕಿಂತ ಉತ್ತಮವಾದ ಪ್ರಾಯಶ್ಚಿತ್ತವು ಮತ್ತಾವುದೂ ಇರುವುದಿಲ್ಲ.

೬-೭. ಪುಷ್ಯಮಾಸದ ಪುಷ್ಯನಕ್ಷತ್ರದಲ್ಲಿ ನೀರಾಜನಕರ್ಮವನ್ನೂ, ಮಾಘಮಾಸದ ಮಘಾನಕ್ಷತ್ರದಲ್ಲಿ ತುಪ್ಪ ಮತ್ತು ಕಂಬಳಿಗಳ ದಾನವನ್ನೂ, ಫಾಲ್ಗುಣಮಾಸದ ಉತ್ತರಫಲ್ಗುನೀನಕ್ಷತ್ರದಲ್ಲಿ ಮಹೋತ್ಸವವನ್ನೂ, ಚೈತ್ರಮಾಸದ ಚಿತ್ತಾನಕ್ಷತ್ರಸಹಿತವಾದ ಪೌರ್ಣಿಮೆಯದಿನ ದೋಲಾ ( ಉಯ್ಯಾಲೆ ) ಮಹೋತ್ಸವವನ್ನೂ ಶಿವದಂಪತಿಗಳಿಗೆ ಮಾಡಬೇಕು.

೮-೯. ವೈಶಾಖಮಾಸದ ವಿಶಾಖಾನಕ್ಷತ್ರದಲ್ಲಿ ಪುಷ್ಪಮಂಟಪೋತ್ಸವವನ್ನೂ, ಜ್ಯೇಷ್ಠಮಾಸದ ಮೂಲಾನಕ್ಷತ್ರದಲ್ಲಿ ತಂಪಾದ ನೀರಿನ ಕಲಶದಾನವನ್ನೂ, ಆಷಾಢಮಾಸದ ಉತ್ತರಾಷಾಢಾನಕ್ಷತ್ರದಲ್ಲಿ ಪವಿತ್ರಾರೋಪಣವನ್ನೂ,

ಆಷಾಢೇ ಚೋತ್ತರಾಷಾಢೇ ಪವಿತ್ರಾರೋಪಣಂ ತಥಾ ।
ಶ್ರಾವಣೇ ಪ್ರಾಕೃತಾನ್ಯಾನಿ ಮಂಡಲಾನಿ ಪ್ರಕಲ್ಪಯೇತ್ ॥ ೯ ॥

ಶ್ರವಿಷ್ಠಾಖ್ಯೇತು ನಕ್ಷತ್ರೇ ಪ್ರೌಷ್ಠಪದ್ಯಾಂ ತತಃ ಪರಂ ।
ಪ್ರೋಕ್ಷಯೇಚ್ಚ ಜಲಕ್ರೀಡಾಂ ಪೂರ್ವಾಷಾಢಾಶ್ರಯೇ ದಿನೇ ॥ ೧೦ ॥

ಆಶ್ವಯುಜ್ಯಾಂ ತತೋ ದದ್ಯಾತ್ಪಾಯಸಂ ಚ ನವೌದನಂ ।
ಅಗ್ನಿಕಾರ್ಯಂ ಚ ತೇನೈವ ಕುರ್ಯಾಚ್ಛತಭಿಷಗ್ದಿನೇ ॥ ೧೧ ॥

ಕಾರ್ತಿಕ್ಯಾಂ ಕೃತ್ತಿಕಾಯೋಗೇ ದದ್ಯಾದ್ದೀಪಸಹಸ್ರಕಂ ।
ಮಾರ್ಗಶೀರ್ಷೇ ತಥಾರ್ದ್ರಾಯಾಂ ಘೃತೇನ ಸ್ನಾಪಯೇಚ್ಛಿವಂ ॥ ೧೨ ॥

ಅಶಕ್ತಸ್ತೇಷು ಕಾಲೇಷು ಕುರ್ಯಾದುತ್ಸವಮೇವ ವಾ ।
ಆಸ್ಥಾನಂ ವಾ ಮಹಾಪೂಜಾಮಧಿಕಂ ವಾ ಸಮರ್ಚನಂ ॥ ೧೩ ॥

ಆವೃತೇಽಪಿ ಚ ಕಲ್ಯಾಣೇ ಪ್ರಶಸ್ತೇಷ್ವಪಿ ಕರ್ಮಸು ।
ದೌರ್ಮನಸ್ಯೇ ದುರಾಚಾರೇ ದುಃಸ್ವಪ್ನೇ ದುಷ್ಟದರ್ಶನೇ ॥ ೧೪ ॥

---

ಶ್ರಾವಣಮಾಸದಲ್ಲಿ ಧನಿಷ್ಠಾನಕ್ಷತ್ರದದಿನ ಸಾಮಾನ್ಯವಾದ ಮಂಡಲಗಳಲ್ಲಿ ಶಿವ ದಂಪತಿಗಳ ಪೂಜೆಯನ್ನು ಮಾಡಬೇಕು.

೧೦-೧೨. ಭಾದ್ರಪದಮಾಸದಲ್ಲಿ ಪೂರ್ವಾಷಾಢಾನಕ್ಷತ್ರದ ದಿನ ಜಲ ಕ್ರೀಡಾಮಹೋತ್ಸವವನ್ನೂ, ಆಶ್ವಯುಜಮಾಸದಲ್ಲಿ ಉತ್ತಮವಾದ ಅನ್ನವನ್ನೂ ಪಾಯಸವನ್ನೂ, ದಾನಮಾಡಿ ಶತಭಿಷಾನಕ್ಷತ್ರದ ದಿನ ಅಗ್ನಿಕಾರ್ಯವನ್ನೂ, ಕಾರ್ತಿಕಮಾಸದ ಕೃತ್ತಿಕಾನಕ್ಷತ್ರದ ದಿನದಲ್ಲಿ ಸಹಸ್ರದೀಪೋತ್ಸವವನ್ನೂ, ಮಾರ್ಗ ಶಿರಮಾಸದ ಆರ್ದ್ರಾನಕ್ಷತ್ರದ ದಿನ ಶಿವನಿಗೆ ಘೃತಾಭಿಷೇಕವನ್ನೂ ಮಾಡ ಬೇಕು.

೧೩-೧೫. ಅಶಕ್ತನಾದ ಮನುಷ್ಯನು ಮೇಲೆ ಹೇಳಿದ ವಿಶೇಷ ದಿನ ಗಳಲ್ಲಿ ಉತ್ಸವಗಳು ನಡಯುವ ಸ್ಥಳದಲ್ಲಿರಬೇಕು ಅಥವಾ ಮಹಾಪೂಜೆಯನ್ನಾ ಗಲಿ, ನಿತ್ಯಕ್ಕಿಂತಲೂ, ಹೆಚ್ಚು ಪೂಜೆಯನ್ನಾಗಲಿ ಮಾಡಬೇಕು. ಮಂಗಳಕರ

**ಉತ್ಪಾತೇ ವಾಶುಭೇಽನ್ಯಸ್ಮಿನ್ರೋಗೇ ವಾ ಪ್ರಬಲೇಽಥ ವಾ ।**
**ಸ್ನಾನಪೂಜಾಜಪಧ್ಯಾನಹೋಮದಾನಾದಿಕಾಃ ಕ್ರಿಯಾಃ ॥ ೧೫ ॥**

**ನಿರ್ಮಿತಾನುಗುಣಾಃ ಕಾರ್ಯಾಃ ಪುರಶ್ಚರಣಪೂರ್ವಿಕಾಃ ।**
**ಶಿವಾನಲೇ ಚ ವಿಹತೇ ಪುನಸ್ಸಂಧಾನಮಾಚರೇತ್ ॥ ೧೬ ॥**

**ಯ ಏವಂ ಶರ್ವಧರ್ಮಿಷ್ಠೋ ವರ್ತತೇ ನಿತ್ಯಮುದ್ಯತಃ ।**
**ತಸ್ಯೈಕಜನ್ಮನಾ ಮುಕ್ತಿಂ ಪ್ರಯಚ್ಛತಿ ಮಹೇಶ್ವರಃ ॥ ೧೭ ॥**

**ಏತದ್ಯಥೋತ್ತರಂ ಕುರ್ಯಾನ್ನಿತ್ಯನೈಮಿತ್ತಿಕೇಷು ಯಃ ।**
**ದಿವ್ಯಂ ಶ್ರೀಕಂಠನಾಥಸ್ಯ ಸ್ಥಾನಮಾದ್ಯಂ ಸ ಗಚ್ಛತಿ ॥ ೧೮ ॥**

**ತತ್ರ ಭುಕ್ತ್ವಾ ಮಹಾಭೋಗಾನ್ಕಲ್ಪಕೋಟಿಶತಂ ನರಃ ।**
**ಕಾಲಾಂತರೇ ಚ್ಯುತಸ್ತಸ್ಮಾದೌಮಂ ಕೌಮಾರಮೇವ ಚ ॥ ೧೯ ॥**

---

ವಾದ ಮತ್ತು ಪ್ರಶಸ್ತವಾದ ಕಾರ್ಯಗಳು ಒದಗಿದಾಗಲೂ, ಮನಸ್ಸಿಗೆ ವ್ಯಸನವು ಬಂದಾಗಲೂ, ದುರಾಚಾರ, ದುಸ್ಸ್ವಪ್ನ, ದುಷ್ಟವಾದ ನೋಟಗಳು ಉತ್ಪಾತಗಳು ಇತರ ಅಶುಭ ಸಂದರ್ಭಗಳು, ಪ್ರಬಲವಾದ ರೋಗಕಾಲ ಇವುಗಳಲ್ಲಿ ಸ್ನಾನ, ಪೂಜೆ, ಜಪ, ಶಿವಧ್ಯಾನ, ಹೋಮದಾನಾದಿಗಳನ್ನು ಮಾಡಬೇಕು. ಇವುಗಳನ್ನು ಶಿವಮಂತ್ರಪುರಶ್ಚರಣಪೂರ್ವಕವಾಗಿ ಶಾಸ್ತ್ರೋಕ್ತ ರೀತಿಯಲ್ಲಿ ನಡೆಸಬೇಕು.

೧೬-೧೮. ಶಿವಾಗ್ನಿಯು ನಷ್ಟವಾದರೆ ಪುನಸ್ಸಂಧಾನಕರ್ಮವನ್ನು ಮಾಡಬೇಕು. ಯಾವ ಶಿವಧರ್ಮಾಸಕ್ತನು ನಿತ್ಯ ನೈಮಿತ್ತಿಕಕರ್ಮಗಳನ್ನು ಇಲ್ಲಿ ಹೇಳಿದ ರೀತಿಯಲ್ಲಿ ಪ್ರಯತ್ನಪೂರ್ವಕವಾಗಿ ಮಾಡುವನೋ ಅವನಿಗೆ ಮಹೇಶ್ವರನು ಒಂದೇಜನ್ಮದಲ್ಲಿ ಮೋಕ್ಷವನ್ನು ಅನುಗ್ರಹಿಸುವನು. ನಿತ್ಯನೈಮಿತ್ತಿಕ ಕರ್ಮಗಳ ವಿಷಯದಲ್ಲಿ ತನ್ನ ಶಕ್ತ್ಯಾನುಸಾರ ಕರ್ಮಗಳನ್ನು ನಡೆಸಿದವನು ಅನಾದಿಯಾದ ಪರಮೇಶ್ವರನ ಸ್ಥಾನವನ್ನು ಸೇರುವನು.

೧೯-೨೧. ಆ ಪರಮೇಶ್ವರನ ಸ್ಥಾನದಲ್ಲಿ ಮನುಜನು ನೂರುಕೋಟಿ ಕಲ್ಪಗಳವರೆಗೆ ಮಹಾಭೋಗಗಳನ್ನನುಭವಿಸಿ ಕಾಲಾಂತರದಲ್ಲಿ ಆ ಲೋಕದಿಂದ

**ಸಂಪ್ರಾಪ್ಯ ವೈಷ್ಣವಂ ಬ್ರಾಹ್ಮಂ ರುದ್ರಲೋಕಂ ವಿಶೇಷತಃ ।**
**ತತ್ರೋಷಿತ್ವಾ ಚಿರಂ ಕಾಲಂ ಭುಕ್ತ್ವಾ ಭೋಗಾನ್ಯಥೋದಿತಾನ್ ॥ ೨೦ ॥**

**ಪುನಶ್ಚೋರ್ಧ್ವಂ ಗತಸ್ತಸ್ಮಾದತೀತ್ಯ ಸ್ಥಾನಪಂಚಕಂ ।**
**ಶ್ರೀಕಂಠಾಜ್ಞಾನಮಾಸಾದ್ಯ ತಸ್ಮಾಚ್ಛೈವಪುರಂ ವ್ರಜೇತ್ ॥ ೨೧ ॥**

**ಅರ್ಧಚರ್ಯಾರತಶ್ಚಾಪಿ ದ್ವಿರಾವೃತ್ತ್ಯೈವಮೇವ ತು ।**
**ಪಶ್ಚಾಜ್ಜ್ಞಾನಂ ಸಮಾಸಾದ್ಯ ಶಿವಸಾಯುಜ್ಯಮಾಪ್ನುಯಾತ್ ॥ ೨೨ ॥**

**ಅರ್ಧಾರ್ಧಚರಿತೋ ಯಸ್ತು ದೇಹೀ ದೇಹಕ್ಷಯಾತ್ಪರಂ ।**
**ಅಂಡಾಂತಂ ವೋರ್ಧ್ವಮವ್ಯಕ್ತಮತೀತ್ಯ ಭುವನದ್ವಯಂ ॥ ೨೩ ॥**

**ಸಂಪ್ರಾಪ್ಯ ಪೌರುಷಂ ರೌದ್ರಸ್ಥಾನಮದ್ರೀಂದ್ರಜಾಪತೇಃ ।**
**ಅನೇಕಯುಗಸಾಹಸ್ರಂ ಭುಕ್ತ್ವಾ ಭೋಗಾನನೇಕಧಾ ॥ ೨೪ ॥**

---

ಬಂದು ಉಮಾಲೋಕ, ಕೌಮಾರಲೋಕ, ವಿಷ್ಣುಲೋಕ, ಬ್ರಹ್ಮಲೋಕ, ರುದ್ರಲೋಕ ಈ ಲೋಕಗಳಲ್ಲಿ ಬಹಳಕಾಲ ಇದ್ದು, ಅಲ್ಲಿಯ ಸುಖಗಳನ್ನು ಅನುಭವಿಸಿ ಮತ್ತೆ ಊರ್ಧ್ವಗಮನದಿಂದ ಈ ಐದು ಲೋಕಗಳನ್ನೂ ಮೀರಿ ಪರಮೇಶ್ವರನಿಂದ ಜ್ಞಾನವನ್ನು ಪಡೆದು ಆ ಜ್ಞಾನಮಹಿಮೆಯಿಂದ ಶಿವಪುರವನ್ನು ಸೇರುವನು.

೨೨. ಮೇಲೆ ಹೇಳಿದ ನಿತ್ಯನೈಮಿತ್ತಿಕ ಕರ್ಮಗಳನ್ನು ಅರ್ಧಮಟ್ಟಿಗೆ ಆಚರಿಸಿದವನು ಹಾಗೆಯೇ ಎರಡಾವರ್ತಿ ಮಾಡಿ ಪೂರ್ಣಫಲಪ್ರಾಪ್ತಿಯಿಂದ ಜ್ಞಾನವನ್ನು ಹೊಂದಿ ಶಿವಸಾಯುಜ್ಯವನ್ನು ಪಡೆವನು.

೨೩-೨೪. ಕಾಲುಭಾಗ ಧರ್ಮವನ್ನಾಚರಿಸಿದ ಮನುಷ್ಯನು ತನ್ನ ಶರೀರವನ್ನು ಬಿಟ್ಟಮೇಲೆ ಬ್ರಹ್ಮಾಂಡದೊಳಗೆ ಊರ್ಧ್ವಲೋಕಗಳೆರಡನ್ನು ದಾಟಿ ಪಾರ್ವತೀಪತಿಯಾದ ರುದ್ರಸ್ಥಾನವನ್ನು ಸೇರಿ ಅನೇಕ ಸಾವಿರ ಯುಗಗಳವರೆಗೆ ಬಗೆಬಗೆಯ ಸುಖಗಳನ್ನು ಅನುಭವಿಸಿ ಆ ಪುಣ್ಯವು ನಾಶವಾಗುತ್ತಲು ಮತ್ತೆ ಭೂಮಿಯಲ್ಲಿ ದೊಡ್ಡ ವಂಶದಲ್ಲಿ ಹುಟ್ಟುವನು.

ಪುಣ್ಯಕ್ಷಯೇ ಕ್ಷಿತಿಂ ಪ್ರಾಪ್ಯ ಕುಲೇ ಮಹತಿ ಜಾಯತೇ ।
ತತ್ರಾಪಿ ಪೂರ್ವಸಂಸ್ಕಾರವಶೇನ ಸ ಮಹಾದ್ಯುತಿಃ ॥ ೨೫ ॥

ಪಶುಧರ್ಮಾನ್ಪರಿತ್ಯಜ್ಯ ಶಿವಧರ್ಮರತೋ ಭವೇತ್ ।
ತದ್ಧರ್ಮಗೌರವಾದೇವ ಧ್ಯಾತ್ವಾ ಶಿವಪುರಂ ವ್ರಜೇತ್ ॥ ೨೬ ॥

ಭೋಗಾಂಶ್ಚ ವಿವಿಧಾನ್ಭುಕ್ತ್ವಾ ವಿದ್ಯೇಶ್ವರಪದಂ ವ್ರಜೇತ್ ।
ತತ್ರ ವಿದ್ಯೇಶ್ವರೈಸ್ಸಾರ್ಧಂ ಭುಕ್ತ್ವಾ ಭೋಗಾನ್ಬಹೂನ್ಕ್ರಮಾತ್ ॥ ೨೭ ॥

ಅಂಡಸ್ಯಾಂತರ್ಬಹಿರ್ವಾಥ ಸಕೃದಾವರ್ತತೇ ಪುನಃ ।
ತತೋ ಲಬ್ಧ್ವಾ ಶಿವಜ್ಞಾನಂ ಪರಾಂ ಭಕ್ತಿಮವಾಪ್ಯ ಚ ॥ ೨೮ ॥

ಶಿವಸಾಧರ್ಮ್ಯಮಾಸಾದ್ಯ ನ ಭೂಯೋ ವಿನಿವರ್ತತೇ ।
ಯಶ್ಚಾತೀವ ಶಿವೇ ಭಕ್ತೋ ವಿಷಯಾಸಕ್ತಚಿತ್ತವತ್ ॥ ೨೯ ॥

ಶಿವಧರ್ಮಾನಸೌ ಕುರ್ವನ್ನಕುರ್ವನ್ವಾಪಿ ಮುಚ್ಯತೇ ।
ಏಕಾವೃತ್ತೋ ದ್ವಿರಾವೃತ್ತಸ್ತ್ರಿರಾವೃತ್ತೋ ನಿವರ್ತಕಃ ॥ ೩೦ ॥

---

೨೫-೨೭. ಹಾಗೆ ಹುಟ್ಟಿ ಪೂರ್ವಜನ್ಮದ ಸಂಸ್ಕಾರದಿಂದ ಮಹಾತೇಜಸ್ವಿಯಾಗಿ ಪಶುಧರ್ಮಗಳನ್ನು ಬಿಟ್ಟು ಶಿವಧರ್ಮಾಸಕ್ತನಾಗುವನು. ಆ ಧರ್ಮದ ಮಹಿಮೆಯಿಂದಲೇ ಶಿವಲೋಕಕ್ಕೆ ಹೋಗಿ ಅಲ್ಲಿ ಅನೇಕ ಸುಖಗಳನ್ನನುಭವಿಸಿ ವಿದ್ಯೇಶ್ವರಸ್ಥಾನವನ್ನು ಹೊಂದಿ ಅಲ್ಲಿ ವಿದ್ಯೇಶ್ವರನೊಡನೆ ಅನೇಕಸುಖಗಳನ್ನನುಭವಿಸಿ ಈ ಬ್ರಹ್ಮಾಂಡದ ಒಳಗೋ ಹೊರಗೋ ಮತ್ತೆ ಜನ್ಮವನ್ನು ಪಡೆಯುವನು.

೨೮-೨೯. ತರುವಾಯ ಶಿವಜ್ಞಾನವನ್ನೂ, ಪರಾಭಕ್ತಿಯನ್ನೂ ಪಡೆದು ಶಿವನಿಗೆ ಸಮಾನನಾಗುವನು ಮತ್ತೆ ಪುನರ್ಜನ್ಮವನ್ನು ಪಡೆಯುವುದಿಲ್ಲ. ಶಿವನಲ್ಲಿ ಅತ್ಯಂತ ಭಕ್ತಿಯುಳ್ಳವನು, ವಿಷಯಗಳಲ್ಲಿ ಆಸಕ್ತನಂತೆ ಶಿವಧರ್ಮಗಳನ್ನು ಮಾಡಲಿ ಮಾಡದಿರಲಿ ಮೋಕ್ಷವನ್ನು ಹೊಂದುವನು.

೩೦-೩೧. ಶಿವಧರ್ಮದಲ್ಲಿ ಅಧಿಕಾರವುಳ್ಳವನು ಮೂರಾವರ್ತಿ ಪುನರ್ಜನ್ಮವನ್ನು ಪಡೆದಮೇಲೆ ಪುನಃ ಚಕ್ರವರ್ತಿಯಾಗಿಯೂ ಹುಟ್ಟುವುದಿಲ್ಲ.

ನ ಪುನಶ್ಚಕ್ರವರ್ತೀ ಸ್ಯಾಚ್ಛಿವಧರ್ಮಾಧಿಕಾರವಾನ್ ।
ತಸ್ಮಾಚ್ಛಿವಾಶ್ರಿತೋ ಭೂತ್ವಾ ಯೇನ ಕೇನಾಪಿ ಹೇತುನಾ ॥ ೩೧ ॥
ಶಿವಧರ್ಮೇ ಮತಿಂ ಕುರ್ಯಾಚ್ಛ್ರೇಯಸೇ ಚೇತ್ಕೃತೋದ್ಯಮಃ ।
ನಾತ್ರ ನಿರ್ಬಂಧಯಿಷ್ಯಾಮೋ ವಯಂ ಕಂಚನ ಕೇನಚಿತ್ ॥ ೩೨ ॥
ನಿರ್ಬಂಧೇಭ್ಯೋಽತಿವಾದೇಭ್ಯಃ ಪ್ರಕೃತ್ಯೈತನ್ನ ರೋಚತೇ ।
ರೋಚತೇ ವಾ ಪರೇಭ್ಯಸ್ತು ಪುಣ್ಯಸಂಸ್ಕಾರಗೌರವಾತ್ ॥ ೩೩ ॥
ಸಂಸಾರಕಾರಣಂ ಯೇಷಾಂ ನ ಪ್ರರೋಢುಮಲಂ ಭವೇತ್ ।
ಪ್ರಕೃತ್ಯನುಗುಣಂ ತಸ್ಮಾದ್ವಿಮೃಶ್ಯೈತದಶೇಷತಃ ॥ ೩೪ ॥
ಶಿವಧರ್ಮೇಽಧಿಕುರ್ವೀತ ಯದಿಚ್ಛೇಚ್ಛಿವಮಾತ್ಮನಃ ॥ ೩೫ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯಸಂಹಿತಾಯಾ-
ಮುತ್ತರಭಾಗೇ ನಿತ್ಯನೈಮಿತ್ತಿಕವಿಧಿವರ್ಣನಂ ನಾಮಾ-
ಷ್ಟಾವಿಂಶೋಽಧ್ಯಾಯಃ

---

ಆದುದರಿಂದ ಯಾವುದಾದರೂ ಕಾರಣದಿಂದ ಶಿವನಲ್ಲಿ ಭಕ್ತಿಯುಳ್ಳವನಾಗಿ ತನ್ನ ಶ್ರೇಯಸ್ಸಿಗಾಗಿ ಪ್ರಯತ್ನಪಡುವವನು ಶಿವಧರ್ಮಾಸಕ್ತನಾಗಬೇಕು.

೩೨-೩೩. ಈ ವಿಷಯದಲ್ಲಿ ನಾವು ಯಾರನ್ನೂ ಯಾವ ಕಾರಣದಿಂದಲೂ, ನಿರ್ಬಂಧಿಸುವುದಿಲ್ಲ. ಬಲಾತ್ಕಾರ, ಅತಿವಾದ ಇವು ಸ್ವಾಭಾವಿಕವಾಗಿ ಇಷ್ಟವಾದುವುಗಳಲ್ಲ. ಇತರರಿಗೆ ಇವು ಇಷ್ಟವಾದರೆ ಅವರಿಗೆ ಪುಣ್ಯರೂಪವಾದ ಸಂಸ್ಕಾರಬಲದಿಂದ ಇಷ್ಟವಾಯಿತೆಂದು ತಿಳಿಯಬೇಕು.

೩೪-೩೫. ಯಾರಿಗೆ ಸ್ವಾಭಾವಿಕವಾಗಿ ಸಂಸಾರಕಾರಣವಾದ ಗುಣಗಳು ಹೆಚ್ಚಲು ಅವಕಾಶವಿರುವುದೊ, ಯಾರಿಗೆ ಇಲ್ಲವೋ ಅಂದರೆ ಮೋಕ್ಷಕಾರಣವಾದ ಗುಣಗಳು ಹೆಚ್ಚಲು ಅವಕಾಶವಿರುವುದೋ ಅವರು ಇವುಗಳನ್ನು ಚೆನ್ನಾಗಿ ವಿಮರ್ಶೆಮಾಡಿ ತಮಗೆ ಒಳ್ಳೆಯದಾಗುವುದಕ್ಕಾಗಿ ಶಿವಧರ್ಮದಲ್ಲಿ ಅಧಿಕಾರಿಯಾಗಲು ಪ್ರಯತ್ನಪಡಬೇಕು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯುವೀಯಸಂಹಿತೆಯ ಉತ್ತರ
ಭಾಗದಲ್ಲಿ ನಿತ್ಯನೈಮಿತ್ತಿಕವರ್ಣನವೆಂಬ ಇಪ್ಪತ್ತೆಂಟನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ವಾಯುವೀಯಸಂಹಿತಾಯಾಮುತ್ತರಭಾಗೇ

## ಏಕೋನತ್ರಿಂಶೋಽಧ್ಯಾಯಃ

॥ ಶ್ರೀಕೃಷ್ಣ ಉವಾಚ ॥

ಭಗವಂಸ್ತ್ವನ್ಮುಖಾದೇವ ಶ್ರುತಂ ಶ್ರುತಿಸಮಂ ಮಯಾ ।
ಸ್ವಾಶ್ರಿತಾನಾಂ ಶಿವಪ್ರೋಕ್ತಂ ನಿತ್ಯನೈಮಿತ್ತಿಕಂ ತಥಾ ॥ ೧ ॥

ಇದಾನೀಂ ಶ್ರೋತುಮಿಚ್ಛಾಮಿ ಶಿವಧರ್ಮಾಧಿಕಾರಿಣಾಂ ।
ಕಾಮ್ಯಮಪ್ಯಸ್ತಿ ಚೇತ್ಕರ್ಮ ವಕ್ತುಮರ್ಹಸಿ ಸಾಂಪ್ರತಂ ॥ ೨ ॥

---

### ಇಪತ್ತೊಂಭತ್ತನೆಯ ಅಧ್ಯಾಯವು

೧-೨. ಶ್ರೀಕೃಷ್ಣನು ಕೇಳಿದನು—ಮಹಾಮಹಿಮನಾದ ಉಪಮನ್ಯುವೇ, ವೇದಕ್ಕೆ ಸಮವಾದ, ತನ್ನ ಭಕ್ತರಿಗೆ ಶಿವನೇ ಹೇಳಿದ ನಿತ್ಯನೈಮಿತ್ತಿಕ ಕರ್ಮಗಳ ವಿಷಯವನ್ನು ನಿನ್ನ ಬಾಯಿಯಿಂದ ಕೇಳಿದೆನು. ಇನ್ನುಮುಂದೆ ಶಿವಧರ್ಮಾಧಿಕಾರಿಗಳಿಗೆ ಕಾಮ್ಯಕರ್ಮವೂ ಇದ್ದರೆ ಅವುಗಳ ವಿಷಯವನ್ನೂ ಕೇಳಲು ಅಪೇಕ್ಷಿಸುವೆನು. ದಯವಿಟ್ಟು ಹೇಳಬೇಕು ಎನ್ನಲು,

॥ ಉಪಮನ್ಯುರುವಾಚ ॥

**ಅಸ್ತ್ಯೈಹಿಕಫಲಂ ಕಿಂಚಿದಾಮುಷ್ಮಿಕಫಲಂ ತಥಾ ।**
**ಐಹಿಕಾಮುಷ್ಮಿಕಂ ಚಾಪಿ ತಚ್ಚ ಪಂಚವಿಧಂ ಪುನಃ ॥ ೩ ॥**

**ಕಿಂಚಿತ್ಕ್ರಿಯಾಮಯಂ ಕರ್ಮ ಕಿಂಚಿತ್ಕರ್ಮ ತಪೋಮಯಂ ।**
**ಜಪಧ್ಯಾನಮಯಂ ಕಿಂಚಿತ್ಕಿಂಚಿತ್ಸರ್ವಮಯಂ ತಥಾ ॥ ೪ ॥**

**ಕ್ರಿಯಾಮಯಂ ತಥಾ ಭಿನ್ನಂ ಹೋಮದಾನಾರ್ಚನಕ್ರಮಾತ್ ॥ ೫ ॥**

**ಸರ್ವಂ ಶಕ್ತಿಮತಾಮೇವ ನಾನ್ಯೇಷಾಂ ಸಫಲಂ ಭವೇತ್ ।**
**ಶಕ್ತಿಶ್ಚಾಜ್ಞಾ ಮಹೇಶಸ್ಯ ಶಿವಸ್ಯ ಪರಮಾತ್ಮನಃ ॥ ೬ ॥**

**ತಸ್ಮಾತ್ಕಾಮ್ಯಾನಿ ಕರ್ಮಾಣಿ ಕುರ್ಯಾದಾಜ್ಞಾಧರೋ ದ್ವಿಜಃ ।**
**ಅಥ ವಕ್ಷ್ಯಾಮಿ ಕಾಮ್ಯಂ ಹಿ ಚೇಹಾಮುತ್ರ ಫಲಪ್ರದಂ ॥ ೭ ॥**

---

೩. ಉಪಮನ್ಯುವು ಹೇಳಿದನು—ಕಾಮ್ಯಕರ್ಮಗಳಲ್ಲಿ ಐಹಿಕಫಲ ಆಮುಷ್ಮಿಕಫಲ ಎಂಬ ಎರಡು ಭೇದಕರ್ಮಗಳಲ್ಲದೆ ಮತ್ತೆ ಅವು ಐದು ವಿಧವಾಗಿಯೂ ಇರುವುವು.

೪-೫. ಕ್ರಿಯಾಮಯ, ತಪೋಮಯ, ಜಪಮಯ, ಧ್ಯಾನಮಯ, ಸರ್ವಮಯ ಎಂಬ ಐದು ವಿಧವಾದ ಕಾಮ್ಯಕರ್ಮಗಳಿರುವುವು. ಕ್ರಿಯಾಮಯ ಕರ್ಮವು ಹೋಮ, ದಾನ, ಅರ್ಚನ ಎಂಬ ಭೇದಗಳಿಂದ ಬೇರೆಬೇರೆಯಾಗಿರುವುದು.

೬. ಈ ಸಮಸ್ತ ಕಾಮ್ಯಕರ್ಮಗಳೂ, ಶಕ್ತಿಯುಳ್ಳವರಿಗೆ ಸಾಧ್ಯವಾದುದಾಗಿ ಫಲಪ್ರದವಾಗುವುವು. ಇತರರಿಗೆ ಅಲ್ಲ. ಶಕ್ತಿಯೆಂಬುದು ಪರಮಾತ್ಮನಾದ ಮಹೇಶ್ವರನ ಆಜ್ಞೆಯು. ಆ ಕಾರಣದಿಂದ ಕಾಮ್ಯಕರ್ಮಗಳನ್ನು ಪರಮೇಶ್ವರನ ಆಜ್ಞೆಪಡೆದ ದ್ವಿಜನೇ ಮಾಡಬೇಕು.

೭-೮. ಶೈವರೂ, ಮಾಹೇಶ್ವರರೂ, ಕ್ರಮವಾಗಿ ಒಳಗೂ, ಹೊರಗೂ, ಮಾಡುವ ಕಾಮ್ಯಕರ್ಮಗಳನ್ನು ಹೇಳುವೆನು. ಅವು ಇಹಲೋಕದಲ್ಲಿಯೂ,

ಶೈವೈರ್ಮಾಹೇಶ್ವರೈಶ್ಚೈವ ಕಾರ್ಯಮಂತರ್ಬಹಿಃ ಕ್ರಮಾತ್ ।
ಶಿವೋ ಮಹೇಶ್ವರಶ್ಚೇತಿ ನಾತ್ಯಂತಮಿಹ ಭಿದ್ಯತೇ ॥ ೮ ॥

ಯಥಾತಥಾ ನ ಭಿದ್ಯಂತೇ ಶೈವಾ ಮಾಹೇಶ್ವರಾ ಅಪಿ ।
ಶಿವಾಶ್ರಿತಾ ಹಿ ತೇ ಶೈವಾ ಜ್ಞಾನಯಜ್ಞರತಾ ನರಾಃ ॥ ೯ ॥

ಮಾಹೇಶ್ವರಾಸ್ಸಮಾಖ್ಯಾತಾ ಕರ್ಮಯಜ್ಞರತಾ ಭುವಿ ।
ತಸ್ಮಾದಾಭ್ಯಂತರೇ ಕುರ್ಯುಃ ಶೈವಾ ಮಾಹೇಶ್ವರಾ ಬಹಿಃ ॥ ೧೦ ॥

ನ ತು ಪ್ರಯೋಗೋ ಭಿದ್ಯೇತ ವಕ್ಷ್ಯಮಾಣಸ್ಯ ಕರ್ಮಣಃ ।
ಪರೀಕ್ಷ್ಯ ಭೂಮಿಂ ವಿಧಿವದ್ಗಂಧವರ್ಣರಸಾದಿಭಿಃ ॥ ೧೧ ॥

ಮನೋಭಿಲಷಿತೇ ತತ್ರ ವಿತಾನವಿತತಾಂಬರೇ ।
ಸುಪ್ರಲಿಪ್ತೇ ಮಹೀಪೃಷ್ಠೇ ದರ್ಪಣೋದರಸಂನಿಭೇ ॥ ೧೨ ॥

---

ಪರಲೋಕದಲ್ಲಿಯೂ, ಫಲವನ್ನು ಕೊಡುವವು. ಶಿವ ಮಹೇಶ್ವರ ಸಂಜ್ಞೆಗಳಿಗೆ ವಿಶೇಷ ಭೇದವೇನೂ ಇರುವುದಿಲ್ಲ.

೯-೧೦. ಹಾಗೆಯೇ ಶೈವರಿಗೂ ಮಾಹೇಶ್ವರರಿಗೂ ಭೇದವಿರುವುದಿಲ್ಲ. ಶೈವರು ಶಿವಭಕ್ತರಾಗಿ ಜ್ಞಾನಯಜ್ಞದಲ್ಲಿ ಆಸಕ್ತರಾಗಿರುವರು. ಮಾಹೇಶ್ವರರೂ ಶಿವಭಕ್ತರಾಗಿ ಕರ್ಮಯಜ್ಞದಲ್ಲಿ ಆಸಕ್ತರಾಗಿರುವರು. ಆ ಕಾರಣದಿಂದ ಶೈವರು ಮನಸ್ಸಿನಲ್ಲಿ ಕರ್ಮವನ್ನು ಮಾಡುವರು- ಮಾಹೇಶ್ವರರು ಹೊರಗೆ ಕ್ರಿಯಾಕಲಾಪಗಳನ್ನು ನಡೆಸುವರು.

೧೧-೧೨. ಮುಂದೆ ಹೇಳುವ ಕರ್ಮಗಳಿಗೆ ಪ್ರಯೋಗಭೇದವೇನೂ ಇರುವುಲ್ಲ. ಭೂಮಿಯನ್ನು ವಿಧಿಗನುಸಾರವಾಗಿ ವಾಸನೆ ಬಣ್ಣ, ರಸ ಮುಂತಾದುವುಗಳನ್ನು ನೋಡಿ ಪರೀಕ್ಷಿಸಿ ಮನಸ್ಸಿಗೆ ಇಷ್ಟವಾದ ಸ್ಥಳದಲ್ಲಿ ಮೇಲುಕಟ್ಟುಗಳನ್ನು ವಸ್ತ್ರಗಳಿಂದ ಕಟ್ಟಿ ಭೂಮಿಯನ್ನು ಕನ್ನಡಿಯಂತೆ ಪರಿಶುದ್ಧವಾಗಿ ತೊಳೆದು,

ಪ್ರಾಚೀಮುತ್ಪಾದಯೇತ್ಪೂರ್ವಂ ಶಾಸ್ತ್ರದೃಷ್ಟೇನ ವರ್ತ್ಮನಾ ।
ಏಕಹಸ್ತಂ ದ್ವಿಹಸ್ತಂ ವಾ ಮಂಡಲಂ ಪರಿಕಲ್ಪಯೇತ್ ॥ ೧೩ ॥

ಆಲಿಖೇದ್ವಿಮಲಂ ಪದ್ಮಮಷ್ಟಪತ್ರಂ ಸಕರ್ಣಿಕಂ ।
ರತ್ನಹೇಮಾದಿಭಿಶ್ಚೂರ್ಣೈರ್ಯಥಾವಿಭವಸಂಭೃತೈಃ ॥ ೧೪ ॥

ಪಂಚಾವರಣಸಂಯುಕ್ತಂ ಬಹುಶೋಭಾಸಮನ್ವಿತಂ ।
ದಲೇಷು ಸಿದ್ಧಯಃ ಕಲ್ಪ್ಯಾಃ ಕೇಸರೇಷು ಸಶಕ್ತಿಕಾಃ ॥ ೧೫ ॥

ರುದ್ರಾ ವಾಮಾದಯಸ್ತ್ವಷ್ಟೌ ಪೂರ್ವಾದಿದಲತಃ ಕ್ರಮಾತ್ ।
ಕರ್ಣಿಕಾಯಾಂ ಚ ವೈರಾಗ್ಯಂ ಬೀಜೇಷು ನವಶಕ್ತಯಃ ॥ ೧೬ ॥

ಕಂದೇ ಶಿವಾತ್ಮಕೋ ಧರ್ಮೋ ನಾಲೇ ಜ್ಞಾನಂ ಶಿವಾಶ್ರಯಂ ।
ಕರ್ಣಿಕೋಪರಿ ಚಾಗ್ನೇಯಂ ಮಂಡಲಂ ಸೌರಮೈಂದವಂ ॥ ೧೭ ॥

---

೧೩. ಮೊದಲು ಶಾಸ್ತ್ರಾನುಸಾರವಾಗಿ ಪೂರ್ವದಿಕ್ಕನ್ನು ಗೊತ್ತುಮಾಡಿ ಅಲ್ಲಿ ಒಂದು ಅಥವಾ ಎರಡುಮೊಳ ವಿಸ್ತಾರವಾದ ಮಂಡಲವನ್ನು ಮಾಡಬೇಕು.

೧೪-೧೫. ಆ ಮಂಡಲದಲ್ಲಿ ರತ್ನ, ಚಿನ್ನ ಮುಂತಾದ ಬಣ್ಣದ ರಂಗವಲ್ಲಿಗಳಿಂದ ಕರ್ಣಿಕಾಸಹಿತವಾದ ಎಂಟು ದಳಗಳುಳ್ಳ ಕಮಲವನ್ನು ಬರೆಯಬೇಕು. ಅದರ ಸುತ್ತಲೂ ಐದು ಆವರಣಗಳು ಅಲಂಕಾರವಾಗಿರಬೇಕು. ಎಂಟು ದಳಗಳಲ್ಲಿ ಅಷ್ಟಸಿದ್ಧಿಗಳನ್ನೂ, ಕೇಸರಗಳಲ್ಲಿ ಪೂರ್ವದಿಕ್ಕಿನ ದಳವನ್ನೇ ಮೊದಲು ಮಾಡಿಕೊಂಡು ಕ್ರಮವಾಗಿ ಶಕ್ತಿಸಹಿತರಾದ ವಾಮದೇವನೇ ಮೊದಲಾದ ಎಂಟು ರುದ್ರರುಗಳನ್ನೂ ಕಲ್ಪಿಸಬೇಕು.

೧೬-೧೮. ಕರ್ಣಿಕೆಯಲ್ಲಿ ವೈರಾಗ್ಯವನ್ನೂ, ಬೀಜದಲ್ಲಿ ನವಶಕ್ತಿಯನ್ನೂ, ಕಂದದಲ್ಲಿ ಶಿವಧರ್ಮವನ್ನೂ, ನಾಲದಲ್ಲಿ ಶಿವಜ್ಞಾನವನ್ನೂ, ಕರ್ಣಿಕೆಯಮೇಲೆ ಅಗ್ನಿ, ಸೂರ್ಯ, ಚಂದ್ರಮಂಡಲಗಳನ್ನೂ, ತರುವಾಯ ಶಿವವಿದ್ಯೆ, ಆತ್ಮತತ್ತ್ವ,

ಶಿವವಿದ್ಯಾತ್ಮತತ್ತ್ವಾಖ್ಯಂ ತತ್ತ್ವತ್ರಯಮತಃ ಪರಂ ।
ಸರ್ವಾಸನೋಪರಿ ಸುಖಂ ವಿಚಿತ್ರಕುಸುಮಾನ್ವಿತಂ ॥ ೧೮ ॥

ಪಂಚಾವರಣಸಂಯುಕ್ತಂ ಪೂಜಯೇದಂಬಯಾ ಸಹ ।
ಶುದ್ಧಸ್ಫಟಿಕಸಂಕಾಶಂ ಪ್ರಸನ್ನಂ ಶೀತಲದ್ಯುತಿಂ ॥ ೧೯ ॥

ವಿದ್ಯುದ್ವಲಯಸಂಕಾಶಜಟಾಮುಕುಟಭೂಷಿತಂ ।
ಶಾರ್ದೂಲಚರ್ಮವಸನಂ ಕಿಂಚಿತ್ಸ್ಮಿತಮುಖಾಂಬುಜಂ ॥ ೨೦ ॥

ರಕ್ತಪದ್ಮದಲಪ್ರಖ್ಯಪಾದಪಾಣಿತಲಾಧರಂ ।
ಸರ್ವಲಕ್ಷಣಸಂಪನ್ನಂ ಸರ್ವಾಭರಣಭೂಷಿತಂ ॥ ೨೧ ॥

ದಿವ್ಯಾಯುಧಧರೈರ್ಯುಕ್ತಂ ದಿವ್ಯಗಂಧಾನುಲೇಪನಂ ।
ಪಂಚವಕ್ತ್ರಂ ದಶಭುಜಂ ಚಂದ್ರಖಂಡಶಿಖಾಮಣಿಂ ॥ ೨೨ ॥

---

ತತ್ತ್ವತ್ರಯ ಇವುಗಳನ್ನು ಕಲ್ಪಿಸಿ ಸಮಸ್ತ ಆಸನಗಳಮೇಲೆ ವಿಚಿತ್ರವಾದ ಹೂಗಳನ್ನು ಹಾಸಿ ಅದರಮೇಲೆ ಪಂಚಾವರಣದೇವತೆಗಳಿಂದ ಕೂಡಿದ ಅಂಬಾಸಹಿತನಾದ ಶಿವನನ್ನು ಪೂಜಿಸಬೇಕು.

೧೯-೨೧. ಆ ಶಿವನು ಪರಿಶುದ್ಧವಾದ ಸ್ಫಟಿಕಮಣಿಯಂತಿರುವ ಶರೀರದಿಂದಲೂ ಶಾಂತವಾದ ತಣ್ಣಗಿರುವ ಕಿರಣವುಳ್ಳ, ಮಿಂಚಿನಂತೆ ಹೊಳೆಯುವ ಜಡೆಯಿಂದಲೂ, ಕಿರೀಟದಿಂದಲೂ ಶೋಭಿಸುತ್ತಿರುವನು. ಹುಲಿಯಚರ್ಮವನ್ನು ಹೊದೆದು ಮುಗುಳುನಗೆಯನ್ನು ನಗುತ್ತಿರುವನು. ಕೆಂದಾವರೆಯಂತಿರುವ ಕೈಕಾಲುಗಳು, ತುಟಿಗಳು, ಮೊದಲಾದ ಸಮಸ್ತ ಶುಭಲಕ್ಷಣಗಳಿಂದಲೂ ಕೂಡಿ ಸಮಸ್ತ ಆಭರಣಗಳನ್ನೂ ಅಲಂಕರಿಸಿಕೊಂಡಿರುವನು,

೨೨-೨೩. ದೇವಯೋಗ್ಯವಾದ ಆಯುಧಗಳನ್ನು ಧರಿಸಿ ಶ್ರೇಷ್ಠವಾದ ಗಂಧವನ್ನು ಲೇಪನಮಾಡಿಕೊಂಡಿರುವನು ಐದುಮುಖ ಹತ್ತು ತೋಳುಗಳು ಶಿರಸ್ಸಿನಲ್ಲಿ ಚಂದ್ರ ಇವುಗಳಿರುವುವು. ಶಿವನ ಪೂರ್ವದಿಕ್ಕಿನ ಮುಖವು ಸೌಮ್ಯವಾಗಿ ಆಗತಾನೆ ಉದಯಿಸುವ ಸೂರ್ಯನ ಕಾಂತಿಯನ್ನು ಬೀರುತ್ತ

ಅಸ್ಯ ಪೂರ್ವಮುಖಂ ಸೌಮ್ಯಂ ಬಾಲಾರ್ಕಸದೃಶಪ್ರಭಂ ।
ತ್ರಿಲೋಚನಾರವಿಂದಾಢ್ಯಂ ಕೃತಬಾಲೇಂದುಶೇಖರಂ ॥ ೨೩ ॥

ದಕ್ಷಿಣಂ ನೀಲಜೀಮೂತಸಮಾನರುಚಿರಪ್ರಭಂ ।
ಭ್ರುಕುಟೀಕುಟಿಲಂ ಘೋರಂ ರಕ್ತವೃತ್ತೇಕ್ಷಣತ್ರಯಂ ॥ ೨೪ ॥

ದಂಷ್ಟ್ರಾಕರಾಳಂ ದುರ್ಧರ್ಷಂ ಸ್ಫುರಿತಾಧರಪಲ್ಲವಂ ।
ಉತ್ತರಂ ವಿದ್ರುಮಪ್ರಖ್ಯಂ ನೀಲಾಲಕವಿಭೂಷಿತಂ ॥ ೨೫ ॥

ಸವಿಲಾಸಂ ತ್ರಿನಯನಂ ಚಂದ್ರಾಭರಣಶೇಖರಂ ।
ಪಶ್ಚಿಮಂ ಪೂರ್ಣಚಂದ್ರಾಭಂ ಲೋಚನತ್ರಿತಯೋಜ್ಜ್ವಲಂ ॥ ೨೬ ॥

ಚಂದ್ರರೇಖಾಧರಂ ಸೌಮ್ಯಂ ಮಂದಸ್ಮಿತಮನೋಹರಂ ।
ಪಂಚಮಂ ಸ್ಫಟಿಕಪ್ರಖ್ಯಮಿಂದುರೇಖಾಸಮುಜ್ಜ್ವಲಂ ॥ ೨೭ ॥

---

ಕಮಲದಂತಿರುವ ಮೂರು ಕಣ್ಣುಗಳಿಂದಲೂ, ಶಿರಸ್ಸಿನಲ್ಲಿರುವ ಬಾಲಚಂದ್ರನಿಂದಲೂ ಪ್ರಕಾಶಿಸುತ್ತಿರುವುದು.

೨೪-೨೫. ದಕ್ಷಿಣದಿಕ್ಕಿನ ಮುಖವು ನೀಲವಾದ ಮೇಘದ ಬಣ್ಣದಂತೆ ಕಾಂತಿಯುಳ್ಳದು. ಹುಬ್ಬುಗಳು ವಕ್ರವಾಗಿ ಭಯಂಕರವಾದುವು. ಗುಂಡಾದ ಕೆಂಬಣ್ಣದ ಮೂರು ಕಣ್ಣುಗಳು, ಕೋರೆ ಹಲ್ಲುಗಳು, ಭಯಂಕರವಾಗಿ ಕಾಣುತ್ತ ತುಟಿಗಳು ಅದುರುತ್ತಿರುವುವು. ಉತ್ತರದಿಕ್ಕಿನ ಮುಖವು ಹವಳದ ಬಣ್ಣದಂತೆ ಹೊಳೆಯುತ್ತ ಕಪ್ಪಾದ ಮುಂಗುರುಳುಗಳಿಂದ ಅಲಂಕಾರವಾಗಿರುವುದು. ವಿಲಾಸಯುಕ್ತವಾದ ಮೂರುಕಣ್ಣುಗಳು, ಚಂದ್ರರೇಖೆಯ ಶಿರೋಭೂಷಣವು ಇರುವುವು.

೨೬-೨೭. ಪಶ್ಚಿಮದಿಕ್ಕಿನ ಮುಖವು ಪೂರ್ಣಚಂದ್ರನಂತೆ ಪ್ರಕಾಶಿಸುತ್ತ ಮೂರು ಕಣ್ಣುಗಳಿಂದ ಹೊಳೆಯುತ್ತ, ಚಂದ್ರರೇಖೆಯನ್ನು ಧರಿಸಿ ಸೌಮ್ಯವಾಗಿ ಮುಗುಳುನಗೆಯಿಂದ ಕೂಡಿರುವುದು. ಐದನೆಯ ಮುಖವು ಸ್ಫಟಿಕ ಮಣಿಯಂತೆ ಹೊಳೆಯುತ್ತ ಚಂದ್ರರೇಖೆಯಿಂದಲೂ ಅರಳಿದ ಕಮಲದಂತಿರುವ ಮೂರು ಕಣ್ಣುಗಳಿಂದಲೂ ಪ್ರಕಾಶಿಸುತ್ತ ಅತ್ಯಂತ ಸೌಮ್ಯವಾದುದಾಗಿರುವುದು.

**ಅತೀವ ಸೌಮ್ಯಮುತ್ಫುಲ್ಲಲೋಚನತ್ರಿತಯೋಜ್ಜ್ವಲಂ ।**
**ದಕ್ಷಿಣೇ ಶೂಲಪರಶುವಜ್ರಖಡ್ಗಾನಲೋಜ್ಜ್ವಲಂ ॥ ೨೮ ॥**

**ಸವ್ಯೇ ಚ ನಾಗನಾರಾಚಘಂಟಾಪಾಶಾಂಕುಶೋಜ್ಜ್ವಲಂ ।**
**ನಿವೃತ್ತ್ಯಾ ಜಾನುಸಂಬದ್ಧಮಾನಾಭೇಶ್ಚ ಪ್ರತಿಷ್ಠಯಾ ॥ ೨೯ ॥**

**ಆಕಂಠಂ ವಿದ್ಯಯಾ ತದ್ವದಾಲಲಾಟಂ ತು ಶಾಂತಯಾ ।**
**ತದೂರ್ಧ್ವಂ ಶಾಂತ್ಯತೀತಾಖ್ಯಕಲಯಾ ಪರಯಾ ತಥಾ ॥ ೩೦ ॥**

**ಪಂಚಾಧ್ವವ್ಯಾಪಿನಂ ಸಾಕ್ಷಾತ್ಕಲಾಪಂಚಕವಿಗ್ರಹಂ ।**
**ಈಶಾನಮುಕುಟಂ ದೇವಂ ಪುರುಷಾಖ್ಯಂ ಪುರಾತನಂ ॥ ೩೧ ॥**

**ಅಘೋರಹೃದಯಂ ತದ್ವದ್ವಾಮಗುಹ್ಯಂ ಮಹೇಶ್ವರಂ ।**
**ಸದ್ಯಪಾದಂ ಚ ತನ್ಮೂರ್ತಿಮಷ್ಟತ್ರಿಂಶತ್ಕಲಾಮಯಂ ॥ ೩೨ ॥**

---

೨೮. ಬಲದ ಐದು ಕೈಗಳಲ್ಲಿ ಶೂಲ, ಪರಶು, ವಜ್ರ, ಖಡ್ಗ, ಅಗ್ನಿ ಇವುಗಳನ್ನೂ ಎಡದ ಐದು ಕೈಗಳಲ್ಲಿ ಸರ್ಪ, ಬಾಣ, ಘಂಟೆ, ಹಗ್ಗ, ಅಂಕುಶ ಇವುಗಳನ್ನೂ ಧರಿಸಿ ಪ್ರಕಾಶಮಾನನಾಗಿರುವನು.

೨೯–೩೦. ಪಾದದಿಂದ ಮಂಡಿಯುಪರ್ಯಂತವಾಗಿ ನಿವೃತ್ತಿಕಲೆಯಿಂದಲೂ, ಮಂಡಿಯಿಂದ ಹೊಕ್ಕಳಿನವರೆಗೆ ಪ್ರತಿಷ್ಠಾಕಲೆಯಿಂದಲೂ, ಹೊಕ್ಕುಳಿನಿಂದ ಕಂಠದವರೆಗೆ ವಿದ್ಯಾಕಲೆಯಿಂದಲೂ, ಕುತ್ತಿಗೆಯಿಂದ ಹಣೆಯವರೆಗೆ ಶಾಂತಕಲೆಯಿಂದಲೂ, ಹಣೆಯಿಂದ ಮೇಲಕ್ಕೆ ಶಾಂತ್ಯತೀತವೆಂಬ ಪರಾಕಲೆಯಿಂದಲೂ ಕೂಡಿ ಐದು ಮಾರ್ಗವನ್ನೂ ಆವರಿಸಿದ ಐದು ಕಲಾಮಯವಾದ ಶರೀರವುಳ್ಳವನಾಗಿರುವನು,

೩೧–೩೨. ಆ ಮೂರ್ತಿಯೇ ತತ್ಪುರುಷನು. ಕಿರೀಟವೇ ಈಶಾನನು. ಹೃದಯವೇ ಅಘೋರನು. ಗುಹ್ಯವೇ ವಾಮದೇವನು. ಪಾದವೇ ಸದ್ಯೋಜಾತನು. ಹೀಗೆ ಪಂಚಬ್ರಹ್ಮಮೂರ್ತಿಯು ಮೂವತ್ತೆಂಟು ಕಲೆಗಳಿಂದ ಕೂಡಿದುದು.

ಮಾತೃಕಾಮಯಮೀಶಾನಂ ಪಂಚಬ್ರಹ್ಮಮಯಂ ತಥಾ ।
ಓಂಕಾರಾಖ್ಯಮಯಂ ಚೈವ ಹಂಸಶಕ್ತ್ಯಾ ಸಮನ್ವಿತಂ ॥ ೩೩ ॥

ತಥೇಚ್ಛಾತ್ಮಿಕಯಾ ಶಕ್ತ್ಯಾ ಸಮಾರೂಢಾಂಕಮಂಡಲಂ ।
ಜ್ಞಾನಾಖ್ಯಯಾ ದಕ್ಷಿಣತೋ ವಾಮತಶ್ಚ ಕ್ರಿಯಾಖ್ಯಯಾ ॥ ೩೪ ॥

ತತ್ತ್ವತ್ರಯಮಯಂ ಸಾಕ್ಷಾದ್ವಿದ್ಯಾಮೂರ್ತಿಂ ಸದಾಶಿವಂ ।
ಮೂರ್ತಿಮೂಲೇನ ಸಂಕಲ್ಪ್ಯ ಸಕಲೀಕೃತ್ಯ ಚ ಕ್ರಮಾತ್ ॥ ೩೫ ॥

ಸಂಪೂಜ್ಯ ಚ ಯಥಾನ್ಯಾಯಮರ್ಘ್ಯಾಂತಂ ಮೂಲವಿದ್ಯಯಾ ।
ಮೂರ್ತಿಮಂತಂ ಶಿವಂ ಸಾಕ್ಷಾಚ್ಛಕ್ತ್ಯಾ ಪರಮಯಾ ಸಹ ॥ ೩೬ ॥

ತತ್ರಾವಾಹ್ಯ ಮಹಾದೇವಂ ಸದಸದ್ವ್ಯಕ್ತಿವರ್ಜಿತಂ ।
ಪಂಚೋಪಕರಣಂ ಕೃತ್ವಾ ಪೂಜಯೇತ್ಪರಮೇಶ್ವರಂ ॥ ೩೭ ॥

---

೩೩-೩೪. ಈಶ್ವರನು ಅಕಾರಾದಿ ಐವತ್ತು ಮಾತೃಕಾವರ್ಣಸ್ವರೂಪನು. ಓಕಾಂರಸ್ವರೂಪನು. ಹಂಸಮಂತ್ರಶಕ್ತಿಯಿಂದ ಕೂಡಿದವನು. ಇಚ್ಛಾ ಶಕ್ತಿಯು ಅವನ ತೊಡೆಯಮೇಲೆ ಕುಳಿತಿರುವುದು. ಬಲಗಡೆ ಜ್ಞಾನಶಕ್ತಿಯೂ, ಎಡಗಡೆ ಕ್ರಿಯಾಶಕ್ತಿಯೂ ಇರುವುದು.

೩೫-೩೬. ಆತ್ಮ, ಅಂತರಾತ್ಮ, ಪರಮಾತ್ಮ, ತತ್ತ್ವತ್ರಯ ಇವುಗಳ ಸ್ವರೂಪನೂ, ಸಾಕ್ಷಾದ್ವಿದ್ಯಾಸ್ವರೂಪನೂ ಆದ ಸದಾಶಿವನನ್ನು ಧ್ಯಾನಿಸಿ ಸಕಲೀಕರಣ ಮುದ್ರೆಯನ್ನು ತೋರಿಸಿ, ಕ್ರಮವಾಗಿ ಮೂಲವಿದ್ಯಾಸ್ವರೂಪವಾದ ಪಂಚಾಕ್ಷರಮಂತ್ರದಿಂದ ಅರ್ಘ್ಯಾಂತವಾಗಿ ವಿಶೇಷವಾದ ಭಕ್ತಿಯಿಂದ ಮೂರ್ತಿಯಲ್ಲಿ ಆವಾಹನೆಮಾಡಿ ಪೂಜಿಸಬೇಕು.

೩೭-೩೯. ಸತ್, ಅಸತ್ ಎಂಬ ಭೇದ ವ್ಯವಹಾರವಿಲ್ಲದ ಮಹಾದೇವನಿಗೆ ಪಂಚೋಪಚಾರಗಳನ್ನು ಮಾಡಿ ಪಂಚಬ್ರಹ್ಮ ಮಂತ್ರಗಳು, ಷಡಂಗಗಳು, ಮಾತೃಕಾವರ್ಣಗಳು, ಓಂಕಾರ, ಶಿವಪಂಚಾಕ್ಷರ, ಶಕ್ತಿಬೀಜಾಕ್ಷರ, ಶಾಂತಿ

ಬ್ರಹ್ಮಭಿಶ್ಚ ಷಡಂಗೈಶ್ಚ ತತೋ ಮಾತೃಕಯಾ ಸಹ ।
ಪ್ರಣವೇನ ಶಿವೇನೈವ ಶಕ್ತಿಯುಕ್ತೇನ ಚ ಕ್ರಮಾತ್ ॥ ೩೮ ॥

ಶಾಂತೇನ ವಾ ತಥಾನ್ಯೈಶ್ಚ ವೇದಮಂತ್ರೈಶ್ಚ ಕೃತ್ಸ್ನಶಃ ।
ಪೂಜಯೇತ್ಪರಮಂ ದೇವಂ ಕೇವಲೇನ ಶಿವೇನ ವಾ ॥ ೩೯ ॥

ಪಾದ್ಯಾದಿಮುಖವಾಸಾಂತಂ ಕೃತ್ವಾ ಪ್ರಸ್ಥಾಪನಂ ವಿನಾ ।
ಪಂಚಾವರಣಪೂಜಾಂ ತು ಹ್ಯಾರಭೇತ ಯಥಾವಿಧಿ ॥ ೪೦ ॥

**ಇತಿ ಶ್ರೀಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-
ಮುತ್ತರಭಾಗೇ ಕಾಮ್ಯಕರ್ಮವರ್ಣನಂ ನಾಮ
ಏಕೋನತ್ರಿಂಶೋऽಧ್ಯಾಯಃ**

---

ಮಂತ್ರ ಮಿಕ್ಕ ವೇದಮಂತ್ರ ಇವುಗಳಿಂದಲೂ, ಕೇವಲ ಶಿವಮುದ್ರೆಗಳಿಂದಲೂ ಪೂಜಿಸಬೇಕು.

೪೦. ಪಾದ್ಯಾದಿ ಮುಖವಾಸಾಂತವಾಗಿ ಪೂಜೆಯನ್ನು ಮಾಡಿ ವಿಸರ್ಜನೆ ಮಾಡುವುದಕ್ಕೆ ಮೊದಲು ಕ್ರಮವಾಗಿ ಪಂಚಾವರಣ ಪೂಜೆಯನ್ನು ಪ್ರಾರಂಭ ಮಾಡಬೇಕು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯವೀಯಸಂಹಿತೆಯ ಉತ್ತರ
ಭಾಗದಲ್ಲಿ ಕಾಮ್ಯಕರ್ಮವರ್ಣನವೆಂಬ ಇಪ್ಪತ್ತೊಂಭತ್ತನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ. ನಮಃ ಶಿವಾಯ ॥

---

# ಅಥ ಶ್ರೀ ಶಿವಮಹಾಪುರಾಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ತ್ರಿಂಶೋಽಧ್ಯಾಯಃ



॥ ಉಪಮನ್ಯುರುವಾಚ ॥

ತತ್ರಾದೌ ಶಿವಯೋಃ ಪಾರ್ಶ್ವೇ ದಕ್ಷಿಣೇ ವಾಮತಃ ಕ್ರಮಾತ್ ।
ಗಂಧಾದ್ಯೈರರ್ಚಯೇತ್ಪೂರ್ವಂ ದೇವೌ ಹೇರಂಬಷಣ್ಮುಖೌ ॥ ೧ ॥

ತತೋ ಬ್ರಹ್ಮಾಣಿ ಪರಿತ ಈಶಾನಾದಿ ಯಥಾಕ್ರಮಂ ।
ಸಶಕ್ತಿಕಾನಿ ಸದ್ಯಾಂತಂ ಪ್ರಥಮಾವರಣೇ ಯಜೇತ್ ॥ ೨ ॥

ಷಡಂಗಾನ್ಯಪಿ ತತ್ರೈವ ಹೃದಯಾದೀನ್ಯನುಕ್ರಮಾತ್ ।
ಶಿವಸ್ಯ ಚ ಶಿವಾಯಾಶ್ಚ ವಾಸ್ತ್ಯೋಯಾದಿ ಸಮರ್ಚಯೇತ್ ॥ ೩ ॥

---

## ಮೂವತ್ತನೆಯ ಅಧ್ಯಾಯವು

೧. ಉಪಮನ್ಯುವಿಂತೆಂದನು—ಆವರಣಪೂಜೆಯ ಪ್ರಾರಂಭದಲ್ಲಿ ಶಿವದಂಪತಿಗಳ ಪಕ್ಕದಲ್ಲಿ ಬಲಭಾಗ ಎಡಭಾಗಗಳಲ್ಲಿ ಕ್ರಮವಾಗಿ ಗಣಪತಿ, ಷಣ್ಮುಖ, ಇವರುಗಳನ್ನು ಗಂಧಾದ್ಯುಪಚಾರಗಳಿಂದ ಪೂಜಿಸಬೇಕು.

೨-೪. ಆಮೇಲೆ ಸುತ್ತಲೂ ಈಶಾನಾದಿಯಾದ ಪಂಚಬ್ರಹ್ಮಮೂರ್ತಿಗಳನ್ನು ಅವರವರ ಶಕ್ತಿಸಹಿತವಾಗಿ ಪ್ರಥಮಾವರಣದಲ್ಲಿ ಪೂಜಿಸಬೇಕು.

ತತ್ರ ವಾಮಾದಿಕಾನ್ರುದ್ರಾನಷ್ಟೌ ವಾಮಾದಿಶಕ್ತಿಭಿಃ ।
ಅರ್ಚಯೇದ್ವಾ ನ ವಾ ಪಶ್ಚಾತ್ಪೂರ್ವಾದಿಪರಿತಃ ಕ್ರಮಾತ್ ॥ ೪ ॥

ಪ್ರಥಮಾವರಣಂ ಪ್ರೋಕ್ತಂ ಮಯಾ ತೇ ಯದುನಂದನ ।
ದ್ವಿತೀಯಾವರಣಂ ಪ್ರೀತ್ಯಾ ಪ್ರೋಚ್ಯತೇ ಶ್ರದ್ಧಯಾ ಶೃಣು ॥ ೫ ॥

ಅನಂತಂ ಪೂರ್ವದಿಕ್ಪತ್ರೇ ತಚ್ಛಕ್ತಿಂ ತಸ್ಯ ವಾಮತಃ ।
ಸೂಕ್ಷ್ಮಂ ದಕ್ಷಿಣದಿಕ್ಪತ್ರೇ ಸಹ ಶಕ್ತ್ಯಾ ಸಮರ್ಚಯೇತ್ ॥ ೬ ॥

ತತಃ ಪಶ್ಚಿಮದಿಕ್ಪತ್ರೇ ಸಹ ಶಕ್ತ್ಯಾ ಶಿವೋತ್ತಮಂ ।
ತಥೈವೋತ್ತರದಿಕ್ಪತ್ರೇ ಚೈಕನೇತ್ರಂ ಸಮರ್ಚಯೇತ್ ॥ ೭ ॥

ಏಕರುದ್ರಂ ಚ ತಚ್ಛಕ್ತಿಂ ಪಶ್ಚಾದೀಶದಲೇಽರ್ಚಯೇತ್ ।
ತ್ರಿಮೂರ್ತಿಂ ತಸ್ಯ ಶಕ್ತಿಂ ಚ ಪೂಜಯೇದಗ್ನಿದಿಗ್ದಲೇ ॥ ೮ ॥

---

ಅಲ್ಲಿಯೇ ಷಟ್ಕೋಣಮಂಡಲದಲ್ಲಿ ಆಗ್ನೇಯಾದಿಯಾಗಿ ಹೃದಯಾದಿ ಷಡಂಗ ನ್ಯಾಸಗಳನ್ನು ಮಾಡಿಕೊಂಡು ಶಿವದಂಪತಿಗಳನ್ನು ಪೂಜಿಸಬೇಕು. ಮತ್ತು ವಾಮದೇವಾದಿ ಎಂಟು ರುದ್ರಮೂರ್ತಿಗಳನ್ನು ಅವರವರ ಶಕ್ತಿಸಹಿತವಾಗಿ ಪಶ್ಚಿಮಾದಿಯಾಗಿಯಾಗಲಿ, ಪೂರ್ವಾದಿಯಾಗಲಿ ಸುತ್ತಲೂ ಎಂಟು ದಿಕ್ಕುಗಳಲ್ಲಿ ಪೂಜಿಸಬೇಕು. ಎಲೈ ಕೃಷ್ಣನೇ ಇದು ಪ್ರಥಮಾವರಣವು.

೫-೭. ದ್ವಿತೀಯಾವರಣವನ್ನು ಹೇಳುವೆನು ಕೇಳು. ಪೂರ್ವದಿಕ್ಕಿನ ಪತ್ರದಲ್ಲಿ ಎಡಗಡೆಯಲ್ಲಿ ಶಕ್ತಿಸಹಿತನಾದ ಅನಂತನನ್ನೂ, ದಕ್ಷಿಣದಲ್ಲಿ ಸೂಕ್ಷ್ಮನನ್ನೂ, ಪಶ್ಚಿಮದಲ್ಲಿ ಶಿವೋತ್ತಮನನ್ನೂ, ಉತ್ತರದಲ್ಲಿ ಏಕನೇತ್ರನನ್ನೂ ಅವರವರ ಶಕ್ತಿಸಹಿತವಾಗಿ ಪೂಜಿಸಬೇಕು.

೮-೯. ಆಮೇಲೆ ಕ್ರಮವಾಗಿ ಈಶಾನ್ಯ ಆಗ್ನೇಯ, ನೈಋತ್ಯ, ವಾಯವ್ಯಗಳಲ್ಲಿ ಏಕರುದ್ರ, ತ್ರಿಮೂರ್ತಿ, ಶ್ರೀಕಂಠ, ಶಿಖಂಡಿ, ಇವರನ್ನು ಅವರವರ ಶಕ್ತಿ

ಶ್ರೀಕಂಠಂ ನೈರ್ಋತೇ ಪತ್ರೇ ತಚ್ಛಕ್ತಿಂ ತಸ್ಯ ವಾಮತಃ ।
ತಥೈವ ಮಾರುತೇ ಪತ್ರೇ ಶಿಖಂಡೀಶಂ ಸಮರ್ಚಯೇತ್ ॥ ೯ ॥

ದ್ವಿತೀಯಾವರಣೇ ಚೇಜ್ಯಾಸ್ಸರ್ವತಶ್ಚಕ್ರವರ್ತಿನಃ ।
ತೃತೀಯಾವರಣೇ ಪೂಜ್ಯಾಃ ಶಕ್ತಿಭಿಶ್ಚಾಷ್ಟಮೂರ್ತಯಃ ॥ ೧೦ ॥

ಅಷ್ಟಸು ಕ್ರಮಶೋ ದಿಕ್ಷು ಪೂರ್ವಾದಿಪರಿತಃ ಕ್ರಮಾತ್ ।
ಭವಶ್ಶರ್ವಸ್ತಥೇಶಾನೋ ರುದ್ರಃ ಪಶುಪತಿಸ್ತತಃ ॥ ೧೧ ॥

ಉಗ್ರೋ ಭೀಮೋ ಮಹಾದೇವ ಇತ್ಯಷ್ಟೌ ಮೂರ್ತಯಃ ಕ್ರಮಾತ್ ।
ಅನಂತರಂ ತತಶ್ಚೈವ ಮಹಾದೇವಾದಯಃ ಕ್ರಮಾತ್ ॥ ೧೨ ॥

ಶಕ್ತಿಭಿಸ್ಸಹ ಸಂಪೂಜ್ಯಾಸ್ತತ್ರೈಕಾದಶ ಮೂರ್ತಯಃ ।
ಮಹಾದೇವಃ ಶಿವೋ ರುದ್ರಃ ಶಂಕರೋ ನಿಲಲೋಹಿತಃ ।
ಈಶಾನೋ ವಿಜಯೋ ಭೀಮೋ ದೇವದೇವೋ ಭವೋದ್ಭವಃ ॥ ೧೩ ॥

ಕಪರ್ದೀಶಶ್ಚ ಕಥ್ಯಂತೇ ತಥೈಕಾದಶಶಕ್ತಯಃ ।
ತತ್ರಾಷ್ಟೌ ಪ್ರಥಮಂ ಪೂಜ್ಯಾ ವಾಸ್ಗ್ನೇಯಾದಿ ಯಥಾಕ್ರಮಂ ॥ ೧೪ ॥

---

ಸಹಿತವಾಗಿ ಪೂಜಿಸಿ ಆ ದ್ವಿತೀಯಾವರಣದಲ್ಲಿ ಪ್ರಸಿದ್ಧರಾದ ಚಕ್ರವರ್ತಿಗಳನ್ನೆಲ್ಲಾ ಪೂಜಿಸಬೇಕು.

೧೦–೧೧. ತೃತೀಯಾವರಣದಲ್ಲಿ ಕ್ರಮವಾಗಿ ಎಂಟು ದಿಕ್ಕುಗಳಲ್ಲಿ ಸುತ್ತಲೂ ಪೂರ್ವಾದಿಯಾಗಿ ಶಕ್ತಿಸಹಿತರಾದ ಭವ, ಶರ್ವ, ಈಶಾನ, ರುದ್ರ, ಪಶುಪತಿ ಉಗ್ರ, ಭೀಮ, ಮಹಾದೇವ, ಎಂಬ ಅಷ್ಟಮೂರ್ತಿಗಳನ್ನು ಪೂಜಿಸಬೇಕು.

೧೨–೧೫. ಆಮೇಲೆ ಮಹಾದೇವ, ಶಿವ, ರುದ್ರ, ಶಂಕರ, ನೀಲಲೋಹಿತ, ಈಶಾನ, ವಿಜಯ, ಭೀಮ, ದೇವದೇವ, ಭವೋದ್ಭವ, ಕಪರ್ದೀಶ, ಎಂಬ ಏಕಾದಶ ರುದ್ರಮೂರ್ತಿಗಳನ್ನು ಅವರವರ ಶಕ್ತಿಸಹಿತವಾಗಿ ಪೂಜಿಸಬೇಕು. ಈ ಸಂದರ್ಭದಲ್ಲಿ ಆಗ್ನೇಯಾದಿಯಾಗಿ ಕ್ರಮವಾಗಿ ಎಂಟು ದಿಕು

ದೇವದೇವಃ ಪೂರ್ವಪತ್ರೇ ಈಶಾನಂ ಚಾಗ್ನಿಗೋಚರೇ ।
ಭವೋದ್ಭವಸ್ತಯೋರ್ಮಧ್ಯೇ ಕಪಾಲೀಶಸ್ತತಃ ಪರಂ ॥ ೧೫ ॥

ತಸ್ಮಿನ್ನಾವರಣೇ ಭೂಯೋ ವೃಷೇಂದ್ರಂ ಪುರತೋ ಯಜೇತ್ ।
ನಂದಿನಂ ದಕ್ಷಿಣೇ ತಸ್ಯ ಮಹಾಕಾಲಂ ತಥೋತ್ತರೇ ॥ ೧೬ ॥

ಶಾಸ್ತಾರಂ ವಹ್ನಿದಿಕ್ಪತ್ರೇ ಮಾತೄರ್ದಕ್ಷಿಣದಿಗ್ದಲೇ ।
ಗಜಾಸ್ಯಂ ನೈರ್ಋತೇ ಪತ್ರೇ ಷಣ್ಮುಖಂ ವಾರುಣೇ ಪುನಃ ॥ ೧೭ ॥

ಜ್ಯೇಷ್ಠಾಂ ವಾಯುದಲೇ ಗೌರೀಮುತ್ತರೇ ಚಂಡಮೈಶ್ವರೇ ।
ಶಾಸ್ತೃನಂದೀಶಯೋರ್ಮಧ್ಯೇ ಮುನೀಂದ್ರಂ ವೃಷಭಂ ಯಜೇತ್ ॥ ೧೮ ॥

ಮಹಾಕಾಲಸ್ಯೋತ್ತರತಃ ಪಿಂಗಲಂ ತು ಸಮರ್ಚಯೇತ್ ।
ಶಾಸ್ತೃಮಾತೃಸಮೂಹಸ್ಯ ಮಧ್ಯೇ ಭೃಂಗೀಶ್ವರಂ ತತಃ ॥ ೧೯ ॥

---

ಗಳಲ್ಲಿ ಮೊದಲಿನ ಎಂಟು ಮೂರ್ತಿಗಳನ್ನು ಪೂಜಿಸಿ, ಪೂರ್ವಪತ್ರದಲ್ಲಿ ದೇವದೇವನನ್ನೂ ಆಗ್ನೇಯದಲ್ಲಿ ಈಶಾನನನ್ನೂ ಇವರಿಬ್ಬರ ನಡುವೆ ಭವೋದ್ಭವನನ್ನೂ ಆಮೇಲೆ ಕಪಾಲೀಶನನ್ನೂ ಪೂಜಿಸಬೇಕು.

೧೬-೧೮. ಮತ್ತೆ ಅದೇ ಆವರಣದಲ್ಲಿಯೇ ದಕ್ಷಿಣದಿಕ್ಕಿನಲ್ಲಿ ವೃಷಭಶ್ರೇಷ್ಠನಾದ ನಂದಿಯನ್ನೂ, ಉತ್ತರದಿಕ್ಕಿನಲ್ಲಿ ಮಹಾಕಾಲನನ್ನೂ, ಆಗ್ನೇಯದಲ್ಲಿ ಶಾಸ್ತಾಕುಮಾರನನ್ನೂ, ದಕ್ಷಿಣದಲ್ಲಿ ಬ್ರಾಹ್ಮ್ಯಾದಿ ಸಪ್ತಮಾತೃಕೆಗಳನ್ನೂ ನೈಋತ್ಯದಲ್ಲಿ ಗಣಪತಿಯನ್ನೂ, ಪಶ್ಚಿಮದಲ್ಲಿ ಷಣ್ಮುಖನನ್ನೂ, ವಾಯವ್ಯದಲ್ಲಿ ಜ್ಯೇಷ್ಠಾದೇವಿಯನ್ನೂ, ಉತ್ತರದಲ್ಲಿ ಗೌರಿಯನ್ನೂ, ಈಶಾನ್ಯದಲ್ಲಿ ಚಂಡನನ್ನೂ ಶಾಸ್ತಾಕುಮಾರ ನಂದೀಶ್ವರರ ನಡುವೆ ವೃಷಭಮೂರ್ತಿಯನ್ನೂ ಪೂಜಿಸಬೇಕು.

೧೯-೨೧. ಮಹಾಕಾಲನ ಉತ್ತರದಿಕ್ಕಿನಲ್ಲಿ ಪಿಂಗಲನನ್ನೂ, ಶಾಸ್ತಾಕುಮಾರ ಸಪ್ತಮಾತೃಕೆಗಳ ನಡುವೆ ಭೃಂಗೀಶ್ವರನನ್ನೂ, ಸಪ್ತಮಾತೃಕೆ ವಿಘ್ನೇಶ್ವರರ ನಡುವೆ ವೀರಭದ್ರನನ್ನೂ, ಸ್ಕಂದ ಮಹೇಶ್ವರರ ನಡುವೆ ಸರಸ್ವತೀ

ಮಾತೃವಿಘ್ನೇಶಮಧ್ಯೇ ತು ವೀರಭದ್ರಂ ಸಮರ್ಚಯೇತ್ ।
ಸ್ಕಂದವಿಘ್ನೇಶಯೋರ್ಮಧ್ಯೇ ಯಜೇದ್ದೇವೀಂ ಸರಸ್ವತೀಂ ॥ ೨೦ ॥

ಜ್ಯೇಷ್ಠಾಕುಮಾರಯೋರ್ಮಧ್ಯೇ ಶ್ರಿಯಂ ಶಿವಪದಾರ್ಚಿತಾಂ ।
ಜ್ಯೇಷ್ಠಾಗಣಾಂಬಯೋರ್ಮಧ್ಯೇ ಮಹಾಮೋಟೀಂ ಸಮರ್ಚಯೇತ್ ॥

ಗಣಾಂಬಾಚಂಡಯೋರ್ಮಧ್ಯೇ ದೇವೀಂ ದುರ್ಗಾಂ ಪ್ರಪೂಜಯೇತ್ ।
ಅತ್ರೈವಾವರಣೇ ಭೂಯಃ ಶಿವಾನುಚರಸಂಹತಿಂ ॥ ೨೨ ॥

ರುದ್ರಪ್ರಥಮಭೂತಾಖ್ಯಾಂ ವಿವಿಧಾಂ ಚ ಸಶಕ್ತಿಕಾಂ !
ಶಿವಾಯಾಶ್ಚ ಸಖೀವರ್ಗಂ ಜಪೇದ್ಧ್ಯಾತ್ವಾ ಸಮಾಹಿತಃ ॥ ೨೩ ॥

ಏವಂ ತೃತೀಯಾವರಣಂ ವಿತತೇ ಪೂಜಿತೇ ಸತಿ ।
ಚತುರ್ಥಾವರಣಂ ಧ್ಯಾತ್ವಾ ಬಹಿಸ್ತಸ್ಯ ಸಮರ್ಚಯೇತ್ ॥ ೨೪ ॥

ಭಾನುಃ ಪೂರ್ವದಳೇ ಪೂಜ್ಯೋ ದಕ್ಷಿಣೇ ಚತುರಾನನಃ ।
ರುದ್ರೋ ವರುಣದಿಕ್ಪತ್ರೇ ವಿಷ್ಣುರುತ್ತರದಿಗ್ದಲೇ ॥ ೨೫ ॥

---

ದೇವಿಯನ್ನೂ, ಕುಮಾರಸ್ವಾಮಿ ಜ್ಯೇಷ್ಠಾದೇವಿಯರ ನಡುವೆ ಶ್ರೀದೇವಿಯನ್ನೂ, ಜ್ಯೇಷ್ಠಾ ಗೌರೀದೇವಿಯರ ನಡುವೆ ಮಹಾಮೋಟೀದೇವಿಯನ್ನೂ, ಗೌರೀ ಚಂಡರ ನಡುವೆ ದುರ್ಗಾದೇವಿಯನ್ನೂ ಪೂಜಿಸಬೇಕು.

೨೨-೨೪. ಇದೇ ತೃತೀಯಾವರಣದಲ್ಲಿ ಮತ್ತೆ ಶಿವನ ಸೇವಕರ ಸಮೂಹವಾದ ರುಪ್ರಪ್ರಮಥಭೂತಗಳೆಂಬ ಹೆಸರಿನ ಶಕ್ತಿಸಹಿತರಾದ ಸೇವಕರ ಸಮೂಹವನ್ನೂ, ದೇವಿಯ ಸಖಿಯರ ಸಮೂಹವನ್ನೂ, ಧ್ಯಾನಮಾಡಿ ಏಕಾಗ್ರಚಿತ್ತದಿಂದ ಜಪಮಾಡಬೇಕು. ಹೀಗೆ ವಿಸ್ತಾರವಾದ ತೃತೀಯಾವರಣ ಪೂಜೆಯಾದ ಮೇಲೆ ಚತುರ್ಥಾವರಣವನ್ನು ಮನಸ್ಸಿನಲ್ಲಿ ಧ್ಯಾನಿಸಿ ತೃತೀಯಾವರಣದ ಹೊರಗೆ ಪೂಜೆಮಾಡಬೇಕು.

೨೫-೨೭. ಪೂರ್ವದಳದಲ್ಲಿ ಸೂರ್ಯನನ್ನೂ, ದಕ್ಷಿಣದಲ್ಲಿ ಚತುರ್ಮುಖನನ್ನೂ, ಪಶ್ಚಿಮದಲ್ಲಿ ರುದ್ರನನ್ನೂ, ಉತ್ತರದಲ್ಲಿ ವಿಷ್ಣುವನ್ನೂ ಪೂಜಿಸಬೇಕು.

ಚತುರ್ಣಾಮಪಿ ದೇವಾನಾಂ ಪೃಥಗಾವರಣಾನ್ಯಥಾ ।
ತಸ್ಯಾಂಗಾನಿ ಷಡೇವಾದೌ ದೀಪ್ತಾದ್ಯಾಭಿಶ್ಚ ಶಕ್ತಿಭಿಃ ॥ ೨೬ ॥

ದೀಪ್ತಾ ಸೂಕ್ಷ್ಮಾ ಜಯಾ ಭದ್ರಾ ವಿಭೂತಿರ್ವಿಮಲಾ ಕ್ರಮಾತ್ ।
ಅಮೋಘಾ ವಿದ್ಯುತಾ ಚೈವ ಪೂರ್ವಾದಿಪರಿತಃ ಸ್ಥಿತಾಃ ॥ ೨೭ ॥

ದ್ವಿತೀಯಾವರಣೇ ಪೂಜ್ಯಾಶ್ಚತಸ್ರೋ ಮೂರ್ತಯಃ ಕ್ರಮಾತ್ ।
ಪೂರ್ವಾದ್ಯುತ್ತರಪರ್ಯಂತಾಃ ಶಕ್ತಯಶ್ಚ ತತಃ ಪರಂ ॥ ೨೮ ॥

ಆದಿತ್ಯೋ ಭಾಸ್ಕರೋ ಭಾನೂ ರವಿಶ್ಚೇತ್ಯನುಪೂರ್ವಶಃ ।
ಅರ್ಕೋ ಬ್ರಹ್ಮಾ ತಥಾ ರುದ್ರೋ ವಿಷ್ಣುಶ್ಚೈತೇ ವಿವಸ್ವತಃ ॥ ೨೯ ॥

ವಿಸ್ತಾರಾ ಪೂರ್ವದಿಗ್ಭಾಗೇ ಸುತಾರಾ ದಕ್ಷಿಣೇ ಸ್ಥಿತಾಃ ।
ಬೋಧನೀ ಪಶ್ಚಿಮೇ ಭಾಗೇ ಆಪ್ಯಾಯಿನ್ಯುತ್ತರೇ ಪುನಃ ॥ ೩೦ ॥

ಉಷಾಂ ಪ್ರಭಾಂ ತಥಾ ಪ್ರಾಜ್ಞಾಂ ಸಂಧ್ಯಾಮಪಿ ತತಃ ಪರಂ ।
ಐಶಾನಾದಿಷು ವಿನ್ಯಸ್ಯ ದ್ವಿತೀಯಾವರಣೇ ಯಜೇತ್ ॥ ೩೧ ॥

---

ಈ ನಾಲ್ಕು ದೇವತೆಗಳಿಗೆ ಬೇರೆಬೇರೆಯಾಗಿ ಆವರಣ ಪೂಜೆಯನ್ನು ಮಾಡಬೇಕು. ಅದಕ್ಕೂ ಆರು ಅಂಗಗಳು. ಮೊದಲು ಸೂರ್ಯಪೂಜೆಯು ಪ್ರಥಮಾವರಣದಲ್ಲಿ ಸುತ್ತಲೂ, ದೀಪ್ತಾ, ಸೂಕ್ಷ್ಮಾ, ಜಯಾ, ಭದ್ರಾ, ವಿಭೂತಿ, ವಿಮಲಾ, ಅಮೋಘಾ, ವಿದ್ಯುತಾ ಎಂಬ ಶಕ್ತಿಗಳನ್ನು ಪೂರ್ವಾದಿಯಾಗಿ ಪೂಜಿಸಬೇಕು.

೨೮-೩೧. ದ್ವಿತೀಯಾವರಣದಲ್ಲಿ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ಶಕ್ತಿಸಹಿತರಾದ ಆದಿತ್ಯ, ಭಾಸ್ಕರ, ಭಾನು, ರವಿ ಎಂಬ ನಾಲ್ಕು ಮೂರ್ತಿಗಳನ್ನೂ, ಅರ್ಕ, ಬ್ರಹ್ಮ, ರುದ್ರ, ವಿಷ್ಣು ಎಂಬ ನಾಲ್ಕು ಮೂರ್ತಿಗಳನ್ನೂ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ವಿಸ್ತಾರಾ, ಸುತಾರಾ, ಬೋಧಿನೀ, ಆಪ್ಯಾಯನೀ ಎಂಬ ಶಕ್ತಿದೇವಿಯರನ್ನೂ ಈಶಾನಾದಿ ವಿದಿಕ್ಕುಗಳಲ್ಲಿ ಉಷಾ, ಪ್ರಭಾ, ಪ್ರಾಜ್ಞಾ, ಸಂಧ್ಯಾ ಎಂಬ ಶಕ್ತಿದೇವಿಯರನ್ನೂ ಪೂಜಿಸಬೇಕು.

ಸೌಮ್ಯಮಂಗಾರಕಂ ಚೈವ ಬುಧಂ ಬುದ್ಧಿಮತಾಂ ವರಂ ।
ಬೃಹಸ್ಪತಿಂ ಬೃಹದ್ಬುದ್ಧಿಂ ಭಾರ್ಗವಂ ತೇಜಸಾಂ ನಿಧಿಂ ॥ ೩೨ ॥

ಶನೈಶ್ಚರಂ ತಥಾ ರಾಹುಂ ಕೇತುಂ ಧೂಮ್ರಂ ಭಯಂಕರಂ ।
ಸಮಂತತೋ ಯಜೇದೇತಾಂಸ್ತೃತೀಯಾವರಣೇ ಕ್ರಮಾತ್ ॥ ೩೩ ॥

ಅಥವಾ ದ್ವಾದಶಾದಿತ್ಯಾ ದ್ವಿತೀಯಾವರಣೇ ಯಜೇತ್ ।
ತೃತೀಯಾವರಣೇ ಚೈವ ರಾಶೀನ್ ದ್ವಾದಶ ಪೂಜಯೇತ್ ॥ ೩೪ ॥

ಸಪ್ತ ಸಪ್ತಗಣಾಂಶ್ಚೈವ ಬಹಿಸ್ತಸ್ಯ ಸಮಂತತಃ ।
ಋಷೀನ್ ದೇವಾಂಶ್ಚ ಗಂಧರ್ವಾನ್ಪನ್ನಗಾನಪ್ಸರೋಗಣಾನ್ ॥ ೩೫ ॥

ಗ್ರಾಮಣ್ಯಶ್ಚ ತಥಾ ಯಕ್ಷಾನ್ಯಾತುಧಾನಾಂಸ್ತಥಾ ಹಯಾನ್ ।
ಸಪ್ತಚ್ಛಂದೋಮಯಾಂಶ್ಚೈವ ವಾಲಖಿಲ್ಯಾಂಶ್ಚ ಪೂಜಯೇತ್ ॥ ೩೬ ॥

ಏವಂ ತೃತೀಯಾವರಣೇ ಸಮಭ್ಯರ್ಚ್ಯ ದಿವಾಕರಂ ।
ಬ್ರಹ್ಮಾಣಮರ್ಚಯೇತ್ಪಶ್ಚಾತ್ತ್ರಿಭಿರಾವರಣೈಃ ಸಹ ॥ ೩೭ ॥

---

೩೨-೩೪. ತೃತೀಯಾವರಣದಲ್ಲಿ ಚಂದ್ರ, ಅಂಗಾರಕ, ಬುಧ, ಬೃಹಸ್ಪತಿ ಶುಕ್ರ, ಶನೈಶ್ಚರ, ರಾಹು, ಕೇತು ಇವರುಗಳನ್ನು ಸುತ್ತಲೂ ಪೂಜಿಸಬೇಕು. ಅಥವಾ ದ್ವಿತೀಯಾವರಣದಲ್ಲಿ ದ್ವಾದಶಾದಿತ್ಯರನ್ನೂ, ತೃತೀಯಾವರಣದಲ್ಲಿ ಮೇಷಾದಿ ದ್ವಾದಶರಾಶಿಗಳನ್ನೂ ಪೂಜಿಸಬಹುದು.

೩೫–೩೬. ಅದರಿಂದ ಹೊರಗೆ ಸಪ್ತಋಷಿಗಳು, ದೇವತೆಗಳು ಗಂಧರ್ವರು ಪನ್ನಗರು, ಅಪ್ಸರರು, ಗ್ರಾಮಣಿಗಳು, ಯಕ್ಷರು ಯಾತುಧಾನರು. ಏಳು ಛಂದಸ್ಸಿನ ಸ್ವರೂಪಗಳಾದ ಕುದುರೆಗಳು, ವಾಲಖಿಲ್ಯರು, ಇವರುಗಳನ್ನು ಪೂಜಿಸಬೇಕು.

೩೭. ಹೀಗೆ ಪೂರ್ವದಿಕ್ಕಿನಲ್ಲಿ ಸೂರ್ಯನಿಗೆ ಮೂರು ಆವರಣ ಪೂಜೆಗಳನ್ನು ಮಾಡಿದ ಮೇಲೆ ದಕ್ಷಿಣದಿಕ್ಕಿನಲ್ಲಿ ಬ್ರಹ್ಮನಿಗೂ, ಮೂರು ಆವರಣ ಪೂಜೆಗಳನ್ನು ಮಾಡಬೇಕು.

**ಹಿರಣ್ಯಗರ್ಭಂ ಪೂರ್ವಸ್ಯಾಂ ವಿರಾಜಂ ದಕ್ಷಿಣೇ ತತಃ ।**
**ಕಾಲಂ ಪಶ್ಚಿಮದಿಗ್ಭಾಗೇ ಪುರುಷಂ ಚೋತ್ತರೇ ಯಜೇತ್ ॥ ೩೮ ॥**

**ಹಿರಣ್ಯಗರ್ಭಃ ಪ್ರಥಮೋ ಬ್ರಹ್ಮಾ ಕಮಲಸನ್ನಿಭಃ ।**
**ಕಾಲೋ ಜಾತ್ಯಂಜನಪ್ರಖ್ಯಃ ಪುರುಷಃ ಸ್ಫಟಿಕೋಪಮಃ ॥ ೩೯ ॥**

**ತ್ರಿಗುಣೋ ರಾಜಸಶ್ಚೈವ ತಾಮಸಃ ಸಾತ್ತ್ವಿಕಸ್ತಥಾ ।**
**ಚತ್ವಾರ ಏತೇ ಕ್ರಮಶಃ ಪ್ರಥಮಾವರಣೇ ಸ್ಥಿತಾಃ ॥ ೪೦ ॥**

**ದ್ವಿತೀಯಾವರಣೇ ಪೂಜ್ಯಾಃ ಪೂರ್ವಾದಿಪರಿತಃ ಕ್ರಮಾತ್ ।**
**ಸನತ್ಕುಮಾರಃ ಸನಕಃ ಸನಂದಶ್ಚ ಸನಾತನಃ ॥ ೪೧ ॥**

**ತೃತೀಯಾವರಣೇ ಪಶ್ಚಾದರ್ಚಯೇಚ್ಚ ಪ್ರಜಾಪತೀನ್ ।**
**ಅಷ್ಟೌ ಪೂರ್ವಾಂಶ್ಚ ಪೂರ್ವಾದೌ ತ್ರೀನ್ಪ್ರಾಕ್ಪಶ್ಚಾದನುಕ್ರಮಾತ್ ॥ ೪೨ ॥**

**ದಕ್ಷೋ ರುಚಿರ್ಭೃಗುಶ್ಚೈವ ಮರೀಚಿಶ್ಚ ತಥಾಂಗಿರಾಃ ।**
**ಪುಲಸ್ತ್ಯಃ ಪುಲಹಶ್ಚೈವ ಕ್ರತುರತ್ರಿಶ್ಚ ಕಶ್ಯಪಃ ॥ ೪೩ ॥**

**ವಸಿಷ್ಠಶ್ಚೇತಿ ವಿಖ್ಯಾತಾಃ ಪ್ರಜಾನಾಂ ಪತಯಸ್ತ್ವಿಮೇ ।**
**ತೇಷಾಂ ಭಾರ್ಯಾಶ್ಚ ತೈಸ್ಸಾರ್ಧಂ ಪೂಜನೀಯಾ ಯಥಾಕ್ರಮಂ ॥ ೪೪ ॥**

---

೩೮–೪೦. ಬ್ರಹ್ಮನ ಮೊದಲನೆಯ ಆವರಣದಲ್ಲಿ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿಯೂ ಕ್ರಮವಾಗಿ ಹಿರಣ್ಯಗರ್ಭ, ವಿರಾಜ, ಕಾಲ, ಪುರುಷ ಎಂಬ ನಾಲ್ವರನ್ನೂ ಅದೇ ಕ್ರಮದಲ್ಲಿ ತ್ರಿಗುಣ, ರಾಜಸ, ತಾಮಸ, ಸಾತ್ವಿಕ ಎಂಬ ಗುಣಗಳನ್ನೂ ಪ್ರಥಮಾವರಣದಲ್ಲಿ ಪೂಜಿಸಬೇಕು.

೪೧–೪೨. ದ್ವಿತೀಯಾವರಣದಲ್ಲಿ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ಸನತ್ಕುಮಾರ, ಸನಕ, ಸನಂದ, ಸನಾತನರನ್ನೂ, ತೃತೀಯಾವರಣದಲ್ಲಿ ಪೂರ್ವಾದಿಯಾಗಿ ಮೊದಲಿನ ಅಷ್ಟಪ್ರಜಾಪತಿಗಳನ್ನೂ ಆಮೇಲೆ ಮೂವರನ್ನೂ ಪೂಜಿಸಬೇಕು.

೪೩–೪೪. ದಕ್ಷ, ರುಚಿ, ಭೃಗು, ಮರೀಚಿ, ಅಂಗಿರಸ್ಸು, ಪುಲಸ್ತ್ಯ, ಪುಲಹ, ಕ್ರತು, ಅತ್ರಿ, ಕಶ್ಯಪ, ವಸಿಷ್ಠ, ಇವರೇ ಪ್ರಸಿದ್ಧರಾದ ಪ್ರಜಾಪತಿಗಳು. ಇವರ ಪತ್ನಿಯರನ್ನೂ ಕ್ರಮವಾಗಿ ಇವರೊಡನೆ ಪೂಜಿಸಬೇಕು.

ಪ್ರಸೂತಿಶ್ಚ ತಥಾऽಕೂತಿಃ ಖ್ಯಾತಿಃ ಸಂಭೂತಿರೇವ ಚ ।
ಧೃತಿಃ ಸ್ಮೃತಿಃ ಕ್ಷಮಾಚೈವ ಸನ್ನತಿಶ್ಚಾನಸೂಯಕಾ ॥ ೪೫ ॥

ದೇವಮಾತಾರುಂಧತೀ ಚ ಸರ್ವಾಃ ಖಲು ಪತಿವ್ರತಾಃ ।
ಶಿವಾರ್ಚನರತಾ ನಿತ್ಯಂ ಶ್ರೀಮತ್ಯಃ ಪ್ರಿಯದರ್ಶನಾಃ ॥ ೪೬ ॥

ಪ್ರಥಮಾವರಣೇ ವೇದಾಂಶ್ಚತುರೋ ವಾ ಪ್ರಪೂಜಯೇತ್ ।
ಇತಿಹಾಸಪುರಾಣಾನಿ ದ್ವಿತೀಯಾವರಣೇ ಪುನಃ ॥ ೪೭ ॥

ತೃತೀಯಾವರಣೇ ಪಶ್ಚಾದ್ಧರ್ಮಶಾಸ್ತ್ರಪುರಸ್ಸರಾಃ ।
ವೈದಿಕ್ಯೋ ನಿಖಿಲಾ ವಿದ್ಯಾಃ ಪೂಜ್ಯಾ ಏವ ಸಮಂತತಃ ॥ ೪೮ ॥

ಪೂರ್ವಾದಿಪುರತೋ ವೇದಾಸ್ತದನ್ಯೇ ತು ಯಥಾರುಚಿ ।
ಅಷ್ಟಧಾ ವಾ ಚತುರ್ಧಾ ವಾ ಕೃತ್ವಾ ಪೂಜಾಂ ಸಮಂತತಃ ॥ ೪೯ ॥

ಏವಂ ಬ್ರಹ್ಮಾಣಮಭ್ಯರ್ಚ್ಯ ತ್ರಿಭಿರಾವರಣೈರ್ಯುತಂ ।
ದಕ್ಷಿಣೇ ಪಶ್ಚಿಮೇ ಪಶ್ಚಾದ್ರುದ್ರಂ ಸಾವರಣಂ ಯಜೇತ್ ॥ ೫೦ ॥

---

೪೫-೪೬. ಪ್ರಸೂತಿ, ಆಕೂತಿ, ಖ್ಯಾತಿ, ಸಂಭೂತಿ, ಧೃತಿ, ಸ್ಮೃತಿ, ಕ್ಷಮಾ, ಸನ್ನತಿ, ಅನಸೂಯಾ, ಅದಿತಿ, ಅರುಂಧತಿ, ಇವರೇ ದಕ್ಷಾದಿ ಹನ್ನೊಂದು ಜನ ಪ್ರಜಾಪತಿಗಳ ಪತ್ನಿಯರು. ಇವರೆಲ್ಲರೂ ಪತಿವ್ರತೆಯರು. ಪ್ರತಿದಿನವೂ ಶಿವಪೂಜಾಸಕ್ತರಾಗಿ ಭಾಗ್ಯವತಿಯರಾಗಿ ಸುಂದರಿಯರಾಗಿರುವರು.

೪೭-೫೦. ಮೊದಲನೆಯ ಆವರಣದಲ್ಲಿ ನಾಲ್ಕು ವೇದಗಳನ್ನೂ, ದ್ವಿತೀಯಾವರಣದಲ್ಲಿ ಇತಿಹಾಸ ಪುರಾಣಗಳನ್ನೂ, ತೃತೀಯಾವರಣದಲ್ಲಿ ಧರ್ಮಶಾಸ್ತ್ರಾದಿ ಶಾಸ್ತ್ರಗಳನ್ನೂ, ಸಮಸ್ತ ವೈದಿಕವಿದ್ಯೆಗಳನ್ನೂ ಸುತ್ತಲೂ ಪೂಜಿಸಬೇಕು. ವೇದಾದಿಗಳನ್ನು ಪೂರ್ವಾದಿ ನಾಲ್ಕು ದಿಕ್ಕುಗಳಿಗೆ ನಾಲ್ಕು ಭಾಗವಾಗಿಯಾಗಲಿ, ಎಂಟು ದಿಕ್ಕುಗಳಿಗೆ ಎಂಟು ಭಾಗವಾಗಿಯಾಗಲಿ ಮಾಡಿ ಪೂಜೆ ಮಾಡಬೇಕು. ಹೀಗೆ ದಕ್ಷಿಣದಲ್ಲಿ ಬ್ರಹ್ಮನನ್ನು ಮೂರು ಆವರಣಗಳಿಂದ ಕೂಡಿ ಪೂಜಿಸಿ ಆಮೇಲೆ ಪಶ್ಚಿಮದಿಕ್ಕಿನಲ್ಲಿ ರುದ್ರನನ್ನು ಆವರಣ ಸಹಿತವಾಗಿ ಪೂಜಿಸಬೇಕು.

**ತಸ್ಯ ಬ್ರಹ್ಮಷಡಂಗಾನಿ ಪ್ರಥಮಾವರಣಂ ಸ್ಮೃತಂ ।**
**ದ್ವಿತೀಯಾವರಣಂ ಚೈವ ವಿದ್ಯೇಶ್ವರಮಯಂ ತಥಾ ॥ ೫೧ ॥**

**ತೃತೀಯಾವರಣೇ ಭೇದೋ ವಿದ್ಯತೇ ಸ ತು ಕಥ್ಯತೇ ।**
**ಚತಸ್ರೋ ಮೂರ್ತಯಸ್ತಸ್ಯ ಪೂಜ್ಯಾಃ ಪೂರ್ವಾದಿತಃ ಕ್ರಮಾತ್ ॥ ೫೨ ॥**

**ತ್ರಿಗುಣಸ್ಸಕಲೋ ದೇವಃ ಪುರಸ್ತಾಚ್ಛಿವಸಂಜ್ಞಕಃ ।**
**ರಾಜಸೋ ದಕ್ಷಿಣೇ ಬ್ರಹ್ಮಾ ಸೃಷ್ಟಿಕೃತ್ಪೂಜ್ಯತೇ ಭವಃ ॥ ೫೩ ॥**

**ತಾಮಸಃ ಪಶ್ಚಿಮೇ ಚಾಗ್ನಿಃ ಪೂಜ್ಯಃ ಸಂಹಾರಕೋ ಹರಃ ।**
**ಸಾತ್ತ್ವಿಕಃ ಸುಖಕೃತ್ಸೌಮ್ಯೇ ವಿಷ್ಣುರ್ವಿಶ್ವಪತಿರ್ಮೃಡಃ ॥ ೫೪ ॥**

**ಏವಂ ಪಶ್ಚಿಮದಿಗ್ಭಾಗೇ ಶಂಭೋಃ ಷಡ್ವಿಂಶಕಂ ಶಿವಂ ।**
**ಸಮಭ್ಯರ್ಚ್ಯೋತ್ತರೇ ಪಾರ್ಶ್ವೇ ತತೋ ವೈಕುಂಠಮರ್ಚಯೇತ್ ॥ ೫೫ ॥**

---

೫೧. ಆ ಪಶ್ಚಿಮದಿಕ್ಕಿನಲ್ಲಿರುವ ರುದ್ರನಿಗೆ, ಬ್ರಹ್ಮನಿಗೆ ಪೂಜೆಮಾಡಿದಂತೆ ಷಡಂಗಗಳೇ ಪ್ರಥಮಾವರಣವಾಗುವುದು. ದ್ವಿತೀಯಾವರಣವು ವಿದ್ಯೇಶ್ವರಸ್ವರೂಪವಾದುದು. ತೃತೀಯಾವರಣದಲ್ಲಿ ಸ್ವಲ್ಪ ಭೇದವಿರುವುದು. ಅದನ್ನೇ ಹೇಳುವೆನು.

೫೨–೫೪. ಆ ತೃತೀಯಾವರಣದಲ್ಲಿ ಪೂರ್ವಾದಿ ಕ್ರಮದಿಂದ ನಾಲ್ಕು ಮೂರ್ತಿಗಳನ್ನು ಪೂಜಿಸಬೇಕು. ಪೂರ್ವದಿಕ್ಕಿನಲ್ಲಿ ತ್ರಿಗುಣದಿಂದ ಕೂಡಿದ ಸಕಲನಾದ ಶಿವನೆಂಬ ಹೆಸರಿನ ದೇವನನ್ನೂ, ದಕ್ಷಿಣದಿಕ್ಕಿನಲ್ಲಿ ರಜೋಗುಣದಿಂದ ಕೂಡಿದ ಸೃಷ್ಟಿಕರ್ತನಾದ ಬ್ರಹ್ಮನನ್ನೂ, ಪಶ್ಚಿಮ ದಿಕ್ಕಿನಲ್ಲಿ ತಾಮಸ ಗುಣದಿಂದ ಕೂಡಿದ ಅಗ್ನಿಸ್ವರೂಪನಾದ ಸಂಹಾರಕಾರ್ಯವನ್ನು ಮಾಡುವ ಹರನನ್ನೂ, ಉತ್ತರ ದಿಕ್ಕಿನಲ್ಲಿ ಸಾತ್ವಿಕಗುಣದಿಂದ ಕೂಡಿದ ಸುಖವನ್ನುಂಟು ಮಾಡುವ ಪ್ರಪಂಚಾಧಿಪತಿಯಾದ ವಿಷ್ಣುವನ್ನೂ ಪೂಜಿಸಬೇಕು.

೫೫. ಈ ರೀತಿಯಲ್ಲಿ ಪಶ್ಚಿಮದಿಕ್ಕಿನಲ್ಲಿ ಇಪ್ಪತ್ತಾರು ದೇವತೆಗಳಿಂದ ಕೂಡಿದ ಶಿವನನ್ನು ಪೂಜಿಸಿದಮೇಲೆ ಉತ್ತರದಿಕ್ಕಿನಲ್ಲಿ ವಿಷ್ಣುವನ್ನು ಪೂಜಿಸಬೇಕು.

ವಾಸುದೇವಂ ಪುರಸ್ಕೃತ್ವಾ ಪ್ರಥಮಾವರಣೇ ಯಜೇತ್ ।
ಅನಿರುದ್ಧಂ ದಕ್ಷಿಣತಃ ಪ್ರದ್ಯುಮ್ನಂ ಪಶ್ಚಿಮೇ ತತಃ ॥ ೫೬ ॥

ಸೌಮ್ಯೇ ಸಂಕರ್ಷಣಂ ಪಶ್ಚಾದ್ವ್ಯತ್ಯಸ್ತೌ ವಾ ಯಜೇದಿಮೌ ।
ಪ್ರಥಮಾವರಣಂ ಪ್ರೋಕ್ತಂ ದ್ವಿತೀಯಾವರಣಂ ಶುಭಂ ॥ ೫೭ ॥

ಮತ್ಸ್ಯಃ ಕೂರ್ಮೋ ವರಾಹಶ್ಚ ನರಸಿಂಹೋಽಥ ವಾಮನಃ ।
ರಾಮಶ್ಚಾನ್ಯತಮಃ ಕೃಷ್ಣೋ ಭವಾನಶ್ವಮುಖೋಽಪಿ ಚ ॥ ೫೮ ॥

ತೃತೀಯಾವರಣೇ ಚಕ್ರಂ ಪೂರ್ವಭಾಗೇ ಸಮರ್ಚಯೇತ್ ।
ನಾರಾಯಣಾಖ್ಯಂ ಯಾಮ್ಯೇಽಸ್ತ್ರಂ ಕ್ವಚಿದವ್ಯಾಹತಂ ಯಜೇತ್ ॥ ೫೯ ॥

ಪಶ್ಚಿಮೇ ಪಾಂಚಜನ್ಯಂ ಚ ಶಾರ್ಙ್ಗಂ ಧನುರಥೋತ್ತರೇ ।
ಏವಂ ತ್ರ್ಯಾವರಣೈಸ್ಸಾಕ್ಷಾದ್ವಿಶ್ವಾಖ್ಯಂ ಪರಮಂ ಹರಿಂ ॥ ೬೦ ॥

ಮಹಾವಿಷ್ಣುಂ ಸದಾವಿಷ್ಣುಂ ಮೂರ್ತೀಕೃತ್ಯ ಸಮರ್ಚಯೇತ್ ।
ಇತ್ಥಂ ವಿಷ್ಣೋಶ್ಚತುರ್ವ್ಯೂಹಕ್ರಮಾನ್ಮೂರ್ತಿಚತುಷ್ಟಯಂ ॥ ೬೧ ॥

---

೫೬-೫೮. ಪ್ರಥಮಾವರಣದಲ್ಲಿ ಕ್ರಮವಾಗಿ ಪೂರ್ವಾದಿ ನಾಲ್ಕುದಿಕ್ಕುಗಳಲ್ಲಿ ವಾಸುದೇವ, ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣರನ್ನು ಪೂಜಿಸಬೇಕು. ಈ ನಾಲ್ವರನ್ನೂ ಬೇರೆಬೇರೆ ದಿಕ್ಕುಗಳಲ್ಲಿ ವ್ಯತ್ಯಸ್ತವಾಗಿಯಾದರೂ, ಪೂಜಿಸಬಹುದು. ದ್ವಿತೀಯಾವರಣದಲ್ಲಿ ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ಶ್ರೀರಾಮ, ಬಲರಾಮ, ಕೃಷ್ಣನಾದ ನೀನು ಹಯಗ್ರೀವ ಇವರನ್ನು ಪೂಜಿಸಬೇಕು.

೫೯-೬೦. ತೃತೀಯಾವರಣದಲ್ಲಿ ಪೂರ್ವಾದಿಕ್ರಮವಾಗಿ ನಾಲ್ಕು ದಿಕ್ಕುಗಳಲ್ಲಿ ಚಕ್ರ, ನಾರಾಯಣಾಸ್ತ್ರ, ಪಾಂಚಜನ್ಯ, ಶಾರ್ಙ್ಗಧನುಸ್ಸು ಇವುಗಳನ್ನು ಪೂಜಿಸಿ ಮೂರು ಆವರಣಗಳಿಂದ ಕೂಡಿದ ವಿಶ್ವನೆಂಬ ಹೆಸರುಳ್ಳ ಹರಿಯನ್ನು ಪೂಜಿಸಿ,

೬೧. ಯಾವಾಗಲೂ ಸರ್ವತ್ರವ್ಯಾಪಿಯಾದ ಮಹಾಮಹಿಮನಾದ ವಿಷ್ಣುವನ್ನು ಮೂರ್ತಿರೂಪದಿಂದ ಚತುರ್ವ್ಯೂಹಕ್ರಮದಲ್ಲಿ ಪೂಜಿಸಿದಮೇಲೆ ಕ್ರಮವಾಗಿ ಆ ಚತುರ್ಮೂರ್ತಿಗಳ ಶಕ್ತಿಗಳನ್ನೂ ಪೂಜಿಸಬೇಕು.

ಪೂಜಯಿತ್ವಾ ಚ ತಚ್ಛಕ್ತೀಶ್ಚತಸ್ರಃ ಪೂಜಯೇತ್ಕ್ರಮಾತ್ ।
ಪ್ರಭಾಮಾಗ್ನೇಯದಿಗ್ಭಾಗೇ ನೈಋರ್ತೇ ತು ಸರಸ್ವತೀಂ ।
ಗಣಾಂಬಿಕಾಂ ಚ ವಾಯವ್ಯೇ ಲಕ್ಷ್ಮೀಂ ರೌದ್ರೇ ಸಮರ್ಚಯೇತ್ ॥ ೬೨ ॥

ಏವಂ ಭಾನ್ವಾದಿಮೂರ್ತೀನಾಂ ತಚ್ಛಕ್ತೀನಾಮನಂತರಂ ।
ಪೂಜಾಂ ವಿಧಾಯ ಲೋಕೇಶಾಂಸ್ತತ್ರೈವಾವರಣೇ ಯಜೇತ್ ॥ ೬೩ ॥

ಇಂದ್ರಮಗ್ನಿಂ ಯಮಂ ಚೈವ ನಿಋರ್ತಿಂ ವರುಣಂ ತಥಾ ।
ವಾಯುಂ ಸೋಮಂ ಕುಬೇರಂ ಚ ಪಶ್ಚಾದೀಶಾನಮರ್ಚಯೇತ್ ॥ ೬೪ ॥

ಏವಂ ಚತುರ್ಥಾವರಣಂ ಪೂಜಯಿತ್ವಾ ವಿಧಾನತಃ ।
ಆಯುಧಾನಿ ಮಹೇಶಸ್ಯ ಪಶ್ಚಾದ್ಬಾಹ್ಯಂ ಸಮರ್ಚಯೇತ್ ॥ ೬೫ ॥

ಶ್ರೀಮತ್ತ್ರಿಶೂಲಮೈಶಾನೇ ವಜ್ರಂ ಮಾಹೇಂದ್ರದಿಙ್ಮುಖೇ ।
ಪರಶುಂ ವಹ್ನಿದಿಗ್ಭಾಗೇ ಯಾಮ್ಯೇ ಸಾಯಕಮರ್ಚಯೇತ್ ॥ ೬೬ ॥

ನೈಋರ್ತೇ ತು ಯಜೇತ್ಖಡ್ಗಂ ಪಾಶಂ ವಾರುಣಗೋಚರೇ ।
ಅಂಕುಶಂ ಮಾರುತೇ ಭಾಗೇ ಪಿನಾಕಂ ಚೋತ್ತರೇ ಯಜೇತ್ ॥ ೬೭ ॥

---

೬೨. ಆಗ್ನೇಯದಲ್ಲಿ ಪ್ರಭೆಯನ್ನೂ, ನೈಋರ್ತ್ಯದಲ್ಲಿ ಸರಸ್ವತಿಯನ್ನೂ, ವಾಯವ್ಯದಲ್ಲಿ ಗೌರಿಯನ್ನೂ, ಈಶಾನ್ಯದಲ್ಲಿ ಲಕ್ಷ್ಮಿಯನ್ನೂ ಪೂಜಿಸಬೇಕು.

೬೩-೬೪. ಈ ರೀತಿಯಲ್ಲಿ ಸೂರ್ಯಾದಿಮೂರ್ತಿಗಳನ್ನೂ, ಅವರ ಶಕ್ತಿಗಳನ್ನೂ, ಪೂಜಿಸಿದಮೇಲೆ ಅದೇ ಆವರಣದಲ್ಲಿ ಇಂದ್ರ, ಅಗ್ನಿ, ಯಮ, ನಿರ್ಯತಿ, ವರುಣ, ವಾಯು, ಕುಬೇರ ಈಶಾನ ಎಂಬ ಅಷ್ಟದಿಕ್ಪಾಲಕರನ್ನು ಪೂಜಿಸಬೇಕು.

೬೫-೬೭. ಹೀಗೆ ಚತುರ್ಥಾವರಣಪೂಜೆಯನ್ನು ಮಾಡಿದಮೇಲೆ ಅದರ ಹೊರಭಾಗದಲ್ಲಿ ಮಹೇಶ್ವರನ ಆಯುಧಗಳನ್ನು ಪೂಜಿಸಬೇಕು. ಈಶಾನ್ಯದಲ್ಲಿ ತ್ರಿಶೂಲವನ್ನೂ, ಪೂರ್ವದಲ್ಲಿ ವಜ್ರಾಯುಧವನ್ನೂ ಆಗ್ನೇಯದಲ್ಲಿ ಕೊಡಲಿಯನ್ನೂ, ದಕ್ಷಿಣದಲ್ಲಿ ಬಾಣವನ್ನೂ, ನೈರುತ್ಯದಲ್ಲಿ ಖಡ್ಗವನ್ನೂ, ಪಶ್ಚಿಮದಲ್ಲಿ ಪಾಶಾಯುಧವನ್ನೂ ವಾಯವ್ಯದಲ್ಲಿ ಅಂಕುಶವನ್ನೂ ಉತ್ತರದಲ್ಲಿ ಪಿನಾಕಧನುಸ್ಸನ್ನೂ ಸಹ ಪೂಜಿಸಬೇಕು.

ಪಶ್ಚಿಮಾಭಿಮುಖಂ ರೌದ್ರಂ ಕ್ಷೇತ್ರಪಾಲಂ ಸಮರ್ಚಯೇತ್ ॥ ೬೮ ॥

ಪಂಚಮಾವರಣಂ ಚೈವ ಸಂಪೂಜ್ಯಾನಂತರಂ ಬಹಿಃ ।
ಸರ್ವಾವರಣದೇವಾನಾಂ ಬಹಿರ್ವಾ ಪಂಚಮೇಽಥ ವಾ ।
ಪಂಚಮೇ ಮಾತೃಭಿಃ ಸಾರ್ಧಂ ಮಹೋಕ್ಷಂ ಪುರತೋ ಯಜೇತ್ ॥ ೬೯ ॥

ತತಃ ಸಮಂತತಃ ಪೂಜ್ಯಾಸ್ಸರ್ವಾ ವೈ ದೇವಯೋನಯಃ ।
ಖೇಚರಾ ಋಷಯಸ್ಸಿದ್ಧಾ ದೈತ್ಯಾ ಯಕ್ಷಾಶ್ಚ ರಾಕ್ಷಸಾಃ ॥ ೭೦ ॥

ಅನಂತಾದ್ಯಾಶ್ಚ ನಾಗೇಂದ್ರಾ ನಾಗೈಸ್ತತ್ತತ್ಕುಲೋದ್ಭವೈಃ ।
ಡಾಕಿನೀಭೂತವೇತಾಳಪ್ರೇತಭೈರವನಾಯಕಾಃ ॥ ೭೧ ॥

ಪಾತಾಲವಾಸಿನಶ್ಚಾನ್ಯೇ ನಾನಾಯೋನಿಸಮುದ್ಭವಾಃ ।
ನದ್ಯಸ್ಸಮುದ್ರಾ ಗಿರಯಃ ಕಾನನಾನಿ ಸರಾಂಸಿ ಚ ॥ ೭೨ ॥

ಪಶವಃ ಪಕ್ಷಿಣೋ ವೃಕ್ಷಾಃ ಕೀಟಾದ್ಯಾಃ ಕ್ಷುದ್ರಯೋನಯಃ ।
ನರಾಶ್ಚ ವಿವಿಧಾಕಾರಾ ಮೃಗಾಶ್ಚ ಕ್ಷುದ್ರಯೋನಯಃ ॥ ೭೩ ॥

---

೬೮-೬೯. ಪಶ್ಚಿಮಾಭಿಮುಖನಾಗಿರುವ ಭಯಂಕರನಾದ ಕ್ಷೇತ್ರಪಾಲನನ್ನು ಪೂಜಿಸಿದಮೇಲೆ, ಹೀಗೆ ಪಂಚಮಾವರಣಪೂಜೆಯಾದ ಬಳಿಕ ಸರ್ವಾವರಣ ದೇವತೆಗಳ ಹೊರಭಾಗದಲ್ಲಿಯಾಗಲಿ, ಪಂಚಮಾವರಣದಲ್ಲಾಗಲಿ, ಬ್ರಾಹ್ಮ್ಯಾದಿ ಸಪ್ತಮಾತೃಗಳೊಡನೆ ಶಿವನ ಮುಂಭಾಗದಲ್ಲಿ ಮಹಾವೃಷಭನನ್ನು ಪೂಜಿಸಬೇಕು.

೭೦-೭೩. ಆಮೇಲೆ ಸುತ್ತಲೂ, ಸಮಸ್ತ ದೇವಯೋನಿಗಳಾದ ಖೇಚರರು, ಋಷಿಗಳು, ಸಿದ್ಧರು, ದೈತ್ಯರು, ಯಕ್ಷರು, ರಾಕ್ಷಸರು, ಅನಂತನೇ ಮೊದಲಾದ ನಾಗರುಗಳು ಆ ನಾಗಕುಲದಲ್ಲಿ ಹುಟ್ಟಿದವರು, ಡಾಕಿನಿ, ಭೂತ, ಭೇತಾಳ, ಪ್ರೇತ, ಭೈರವ ಈ ಗುಂಪುಗಳ ನಾಯಕರು ಪಾತಾಳದಲ್ಲಿ ವಾಸಮಾಡುವ ನಾನಾಬಗೆಯ ಪ್ರಾಣಿಗಳು, ನದಿ, ಸಮುದ್ರ, ಪರ್ವತ ಅರಣ್ಯ, ಸರೋವರ, ಪಶು, ಪಕ್ಷಿ, ಕೀಟಗಳು, ಬೇರೆಬೇರೆ ಆಕಾರದ ಮನುಜರು, ಮೃಗಗಳು ಕ್ಷುದ್ರಮೃಗಗಳು ಇವುಗಳನ್ನು ಪೂಜಿಸಬೇಕು.

ಭುವನಾನ್ಯಂತರಂಡಸ್ಯ ತತೋ ಬ್ರಹ್ಮಾಂಡಕೋಟಯಃ ।
ಬಹಿರಂಡಾನ್ಯಸಂಖ್ಯಾನಿ ಭುವನಾನಿ ಸಹಾಧಿಪೈಃ ॥ ೭೪ ॥

ಬ್ರಹ್ಮಾಂಡಾಧಾರಕಾ ರುದ್ರಾ ದಶದಿಕ್ಷು ವ್ಯವಸ್ಥಿತಾಃ ।
ಯದ್ಗೌಣಂ ಯಚ್ಚ ಮಾಯೇಯಂ ಯದ್ವಾ ಶಾಕ್ತಂ ತತಃ ಪರಂ ॥ ೭೫ ॥

ಯತ್ಕಿಂಚಿದಸ್ತಿ ಶಬ್ದಸ್ಯ ವಾಚ್ಯಂ ಚಿದಚಿದಾತ್ಮಕಂ ।
ತತ್ಸರ್ವಂ ಶಿವಯೋಃ ಪಾರ್ಶ್ವೇ ಬುದ್ಧ್ವಾ ಸಾಮಾನ್ಯತೋ ಯಜೇತ್ ॥

ಕೃತಾಂಜಲಿಪುಟಾಃ ಸರ್ವೇಽಚಿಂತ್ಯಾಃ ಸ್ಮಿತಮುಖಾಸ್ತಥಾ ।
ಪ್ರೀತ್ಯಾ ಸಂಪ್ರೇಕ್ಷಮಾಣಾಶ್ಚ ದೇವಂ ದೇವೀಂ ಚ ಸರ್ವದಾ ॥ ೭೭ ॥

ಇತ್ಥಮಾವರಣಾಭ್ಯರ್ಚಾಂ ಕೃತ್ವಾ ವಿಕ್ಷೇಪಶಾಂತಯೇ ।
ಪುನರಭ್ಯರ್ಚ್ಯ ದೇವೇಶಂ ಪಂಚಾಕ್ಷರಮುದೀರಯೇತ್ ॥ ೭೮ ॥

---

೭೪-೭೬. ಬ್ರಹ್ಮಾಂಡದೊಳಗಿನ ಲೋಕಗಳು, ಹೊರಗಿನ ಅನೇಕ ಕೋಟಿ ಬ್ರಹ್ಮಾಂಡಗಳು, ಲೋಕಗಳು, ಲೋಕಾಧಿಪತಿಗಳು, ಬ್ರಹ್ಮಾಂಡಕ್ಕೆ ಆಶ್ರಯವಾದ ಹತ್ತು ದಿಕ್ಕುಗಳಲ್ಲಿಯೂ ಇರುವ ರುದ್ರರು, ಪ್ರಕೃತಿಯ ಗುಣ ಸಂಬಂಧವಾದವುಗಳು, ಮಾಯಾಸಂಬಂಧವಾದವುಗಳು, ಶಕ್ತಿಸಂಬಂಧವಾದುವು, ಶಬ್ದಕ್ಕೆ ವಾಚ್ಯವಾದವುಗಳು ಚಿತ್, ಅಚಿತ್ ಸ್ವರೂಪವಾದ ಸಕಲ ವಸ್ತುಗಳು ಇವೆಲ್ಲವನ್ನೂ ಶಿವದಂಪತಿಗಳ ಸಮೀಪದಲ್ಲಿರುವುದೆಂದು ತಿಳಿದು ಸಾಮಾನ್ಯವಾಗಿ ಪೂಜಿಸಬೇಕು.

೭೭-೭೮. ಸಮಸ್ತ ಆವರಣದೇವತೆಗಳೂ, ಕೈಮುಗಿದುಕೊಂಡು ನಗುತ್ತಿರುವ ಮುಖದಿಂದ ಕೂಡಿ ಪ್ರೀತಿಯಿಂದ ಶಿವದಂಪತಿಗಳನ್ನು ಯಾವಾಗಲೂ ನೋಡುತ್ತಿರುವಂತೆ ಭಾವಿಸಬೇಕು. ಹೀಗೆ ಆವರಣ ಪೂಜೆಯನ್ನು ಮಾಡಿದ ಮೇಲೆ ಮನಸ್ಸಿನ ವಿಕ್ಷೇಪಶಾಂತಿಗಾಗಿ ಮತ್ತೆ ಮಹಾದೇವನನ್ನು ಪೂಜಿಸಿ ಪಂಚಾಕ್ಷರಮಂತ್ರವನ್ನು ಉಚ್ಚರಿಸಬೇಕು-

ನಿವೇದಯೇತ್ತತಃ ಪಶ್ಚಾಚ್ಛಿವಯೋರಮೃತೋಪಮಂ ।
ಸುವ್ಯಂಜನಸಮಾಯುಕ್ತಂ ಶುದ್ಧಂ ಚಾರು ಮಹಾಚರುಂ ॥ ೭೯ ॥

ದ್ವಾತ್ರಿಂಶದಾಢಕೈರ್ಮುಖ್ಯಮಧಮಂ ತ್ವಾಢಕಾವರಂ ।
ಸಾಧಯಿತ್ವಾ ಯಥಾಸಂಪಚ್ಛ್ರದ್ಧಯಾ ವಿನಿವೇದಯೇತ್ ॥ ೮೦ ॥

ತತೋ ನಿವೇದ್ಯ ಪಾನೀಯಂ ತಾಂಬೂಲಂ ಚೋಪದಂಶಕೈಃ ।
ನೀರಾಜನಾದಿಕಂ ಕೃತ್ವಾ ಪೂಜಾಶೇಷಂ ಸಮಾಪಯೇತ್ ॥ ೮೧ ॥

ಭೋಗೋಪಯೋಗ್ಯದ್ರವ್ಯಾಣಿ ವಿಶಿಷ್ಟಾನ್ಯೇವ ಸಾಧಯೇತ್ ।
ವಿತ್ತಶಾಠ್ಯಂ ನ ಕುರ್ವೀತ ಭಕ್ತಿಮಾನ್ವಿಭವೇ ಸತಿ ॥ ೮೨ ॥

ಶಠಸ್ಯೋಪೇಕ್ಷಕಸ್ಯಾಽಪಿ ವ್ಯಂಗಂ ಚೈವಾನುತಿಷ್ಠತಃ ।
ನ ಫಲಂತ್ಯೇವ ಕರ್ಮಾಣಿ ಕಾಮ್ಯಾನೀತಿ ಸತಾಂ ಕಥಾ ॥ ೮೩ ॥

---

೭೯-೮೦. ಆಮೇಲೆ ಶಿವದಂಪತಿಗಳಿಗೆ ತನ್ನ ಸಂಪತ್ತಿನ ಶಕ್ತಿಗನು ಸಾರವಾಗಿ ಅಮೃತದಂತಿರುವ ಉತ್ತಮವಾದ ವ್ಯಂಜನಗಳಿಂದ ಕೂಡಿದ ಮಹಾ ನಿವೇದನವನ್ನು ಭಕ್ತಿಯಿಂದ ಸಿದ್ಧಪಡಿಸಿ ನಿವೇದನವನ್ನು ಮಾಡಬೇಕು. ಮೂವತ್ತೆರಡು ಕೊಳಗದಳತೆಯ ನಿವೇದನವು ಮುಖ್ಯವೆನಿಸುವುದು. ಒಂದು ಕೊಳಗದಳತೆಗಿಂತ ಕಡಿಮೆಯಾದುದು ಅಧಮವೆನಿಸುವುದು. ಆಢಕವೆಂಬುದು ಒಂದು ಅಳತೆಯ ಪಾತ್ರೆ. ಅದನ್ನೇ ಕೊಳಗವೆಂದು ಹೇಳಿದೆ.

೮೧. ಬಳಿಕ ಪಾನೀಯವನ್ನೂ, ತಾಂಬೂಲವನ್ನೂ, ನಿವೇದನಮಾಡಿ, ನೀರಾಜನಾದಿಗಳಿಂದ ಮಿಕ್ಕ ಪೂಜೆಯನ್ನು ಮಾಡಿ ಮುಗಿಸಬೇಕು.

೮೨. ಭಕ್ತಿಯಿಂದ ಕೂಡಿದ ಮನುಜನು ತನಗೆ ಸಂಪತ್ತಿದ್ದರೆ ಧನ ಲೋಭವನ್ನು ಮಾಡದೆ ಉತ್ತಮವಾದ ಭೋಗಸಾಧನವಾದ ಪದಾರ್ಥಗಳನ್ನೇ ಪೂಜಾಕಾರ್ಯಕ್ಕೆ ಸಿದ್ಧಪಡಿಸಬೇಕು.

೮೩-೮೪. ಮೂರ್ಖನಿಗೂ, ಉದಾಸೀನದಿಂದ ಕಾರ್ಯಗಳನ್ನು ಮಾಡುವವನಿಗೂ, ಅಂಗಲೋಪವನ್ನು ಮಾಡುವವನಿಗೂ, ಕಾಮ್ಯಕರ್ಮಗಳು ಫಲವನ್ನು ಕೊಡುವುದಿಲ್ಲವೆಂದು ಸಜ್ಜನರು ಹೇಳುವರು. ಆದುದರಿಂದ ಉಪೇಕ್ಷೆ

ತಸ್ಮಾತ್ತನ್ಮ್ಯಗುಪೇಕ್ಷಾಂ ಚ ತ್ಯಕ್ತ್ವಾ ಸರ್ವಾಂಗಯೋಗತಃ ।
ಕುರ್ಯಾತ್ಕಾಮ್ಯಾನಿ ಕರ್ಮಾಣಿ ಫಲಸಿದ್ಧಿಂ ಯದೀಚ್ಛತಿ ॥ ೮೪ ॥

ಇತ್ಥಂ ಪೂಜಾಂ ಸಮಾಪ್ಯಾಥ ದೇವಂ ದೇವೀಂ ಪ್ರಣಮ್ಯ ಚ ।
ಭಕ್ತ್ಯಾ ಮನಸ್ಸಮಾಧಾಯ ಪಶ್ಚಾತ್ಸ್ತೋತ್ರಮುದೀರಯೇತ್ ॥ ೮೫ ॥

ತತಃ ಸ್ತೋತ್ರಮುಪಾಸ್ಯಾಂತೇ ತ್ವಷ್ಟೋತ್ತರಶತಾವರಾಂ ।
ಜಪೇತ್ಪಂಚಾಕ್ಷರೀಂ ವಿದ್ಯಾಂ ಸಹಸ್ರೋತ್ತರಮುತ್ಸುಕಃ ॥ ೮೬ ॥

ವಿದ್ಯಾ ಪೂಜಾಂ ಗುರೋಃ ಪೂಜಾಂ ಕೃತ್ವಾ ಪಶ್ಚಾದ್ಯಥಾಕ್ರಮಂ ।
ಯಥೋದಯಂ ಯಥಾಶುದ್ಧಂ ಸದಸ್ಯಾನಪಿ ಪೂಜಯೇತ್ ॥ ೮೭ ॥

ತತ ಉದ್ವಾಸ್ಯ ದೇವೇಶಂ ಸರ್ವೈರಾವರಣೈಸ್ಸಹ ।
ಮಂಡಲಂ ಗುರವೇ ದದ್ಯಾದ್ಯಾಗೋಪಕರಣೈಸ್ಸಹ ॥ ೮೮ ॥

---

ಯನ್ನು ಬಿಟ್ಟು ಸಕಲ ಪದಾರ್ಥಗಳನ್ನೂ ಚೆನ್ನಾಗಿ ಸಿದ್ಧಪಡಿಸಿ ಕಾಮ್ಯಕರ್ಮಗಳನ್ನು ಮಾಡಬೇಕು. ಇದರಿಂದ ಅಪೇಕ್ಷಿಸಿದ ಫಲವು ಸಿದ್ಧಿಸುವುದು.

೮೫-೮೬. ಹೀಗೆ ಪೂಜೆಯನ್ನು ಪೂರೈಸಿ ಶಿವದಂಪತಿಗಳಿಗೆ ನಮಸ್ಕರಿಸಿ ಭಕ್ತಿಯಿಂದ ಮನಸ್ಸನ್ನು ಸ್ಥಿರಗೊಳಿಸಿ ಸ್ತೋತ್ರಗಳನ್ನು ಹೇಳಬೇಕು. ಆಮೇಲೆ ಕೊನೆಯಲ್ಲಿ ನೂರೆಂಟಕ್ಕೆ ಕಡಿಮೆಯಿಲ್ಲದೆ, ಉತ್ಸಾಹವಿದ್ದರೆ, ಒಂದು ಸಾವಿರದ ಎಂಟನ್ನಾದರೂ ಪಂಚಾಕ್ಷರಮಂತ್ರವನ್ನು ಜಪಮಾಡಬೇಕು.

೮೭. ಆಮೇಲೆ ಕ್ರಮವಾಗಿ ಮಂತ್ರಪೂಜೆಯನ್ನೂ ಗುರುಪೂಜೆಯನ್ನೂ ಮಾಡಿ ಯೋಗ್ಯತಾನುಸಾರವಾಗಿ ಪೂಜಾಕಾಲದಲ್ಲಿದ್ದ ಸದಸ್ಯರನ್ನೂ ಪೂಜಿಸಬೇಕು.

೮೮-೮೯. ಬಳಿಕ ಮಹಾದೇವನನ್ನು ಸಮಸ್ತ ಆವರಣದೇವತೆಗಳೊಡನೆ ಉದ್ವಾಸನೆಯನ್ನು ಮಾಡಿ ಪೂಜಾಮಂಡಲವನ್ನು ಯಾಗೋಪಕರಣಗಳೊಡನೆ ಗುರುವಿಗೆ ಕೊಡಬೇಕು. ಅಥವಾ ಶಿವಭಕ್ತರಿಗೆ ಕೊಡಬೇಕು.

ಶಿವಾಶ್ರಿತೇಭ್ಯೋ ವಾ ದದ್ಯಾತ್ಸರ್ವಮೇವಾನುಪೂರ್ವಶಃ ।
ಅಥವಾ ತಚ್ಛಿವಾಯೈವ ಶಿವಕ್ಷೇತ್ರೇ ಸಮರ್ಪಯೇತ್ ॥ ೮೯ ॥

ಶಿವಾಗ್ನೌ ವಾ ಯಜೇದ್ದೇವಂ ಹೋಮದ್ರವ್ಯೈಶ್ಚ ಸಪ್ತಭಿಃ ।
ಸಮಭ್ಯರ್ಚ್ಯ ಯಥಾನ್ಯಾಯಂ ಸರ್ವಾವರಣದೇವತಾಃ ॥ ೯೦ ॥

ಏಷ ಯೋಗೇಶ್ವರೋ ನಾಮ ತ್ರಿಷು ಲೋಕೇಷು ವಿಶ್ರುತಃ ।
ನ ತಸ್ಮಾದಧಿಕಃ ಕಶ್ಚಿದ್ಯೋಗೋಽಸ್ತಿ ಭುವನೇ ಕ್ವಚಿತ್ ॥ ೯೧ ॥

ನ ತದಸ್ತಿ ಜಗತ್ಯಸ್ಮಿನ್ನ ಸಾಧ್ಯಂ ಯದನೇನ ತು ।
ಐಹಿಕಂ ವಾ ಫಲಂ ಕಿಂಚಿದಾಮುಷ್ಮಿಕಫಲಂ ತು ವಾ ॥ ೯೨ ॥

ಇದಮಸ್ಯ ಫಲಂ ನೇದಮಿತಿ ನೈವ ನಿಯಮ್ಯತೇ ।
ಶ್ರೇಯೋರೂಪಸ್ಯ ಕೃತ್ಸ್ನಸ್ಯ ತದಿದಂ ಶ್ರೇಷ್ಠಸಾಧನಂ ॥ ೯೩ ॥

---

ಇಲ್ಲದಿದ್ದರೆ ಅದನ್ನು ಶಿವಕ್ಷೇತ್ರಗಳಲ್ಲಿ ಶಿವನಿಗೇ ಸಮರ್ಪಣೆಯನ್ನು ಮಾಡಬೇಕು.

೯೦. ಅಥವಾ ಶಿವಾಗ್ನಿಯಲ್ಲಿಯೇ ವಿಧಿಗನುಸಾರವಾಗಿ ಸಮಸ್ತ ಆವರಣದೇವತೆಗಳನ್ನೂ ಪೂಜಿಸಿ ಏಳು ವಿಧವಾದ ಹೋಮದ್ರವ್ಯಗಳಿಂದ ಹೋಮ ಮಾಡುವುದರ ಮೂಲಕವಾಗಿಯೇ ಪೂಜಿಸಬಹುದು.

೯೧-೯೩. ಯೋಗೇಶ್ವರವೆಂಬ ಹೆಸರಿನ ಈ ಪೂಜೆಯು ಮೂರುಲೋಕದಲ್ಲಿಯೂ ಪ್ರಸಿದ್ಧವಾದುದು. ಮೂರುಲೋಕದಲ್ಲಿಯೂ ಇದಕ್ಕಿಂತ ಹೆಚ್ಚಾದ ಮತ್ತೊಂದು ಯೋಗ ಕರ್ಮವಿರುವುದಿಲ್ಲ. ಐಹಿಕ ಮತ್ತು ಆಮುಷ್ಮಿಕ ಫಲ ಸಾಧನೆಯ ವಿಷಯದಲ್ಲಿ ಈ ಲೋಕದಲ್ಲಿ ಇದಕ್ಕಿಂತ ಉತ್ತಮವಾದ ಕಾಮ್ಯ ಕರ್ಮವಿರುವುದಿಲ್ಲ. ಇದಕ್ಕೆ ಇದೇ ಫಲ, ಈ ಫಲವಿಲ್ಲ ಎಂಬ ನಿಯಮವಿರುವುದಿಲ್ಲ. ಸಮಸ್ತ ಶ್ರೇಯಸ್ಸಿಗೂ ಇದೇ ಶ್ರೇಷ್ಠವಾದ ಸಾಧನವಾಗಿರುವುದು.

ಇದಂ ನ ಶಕ್ಯತೇ ವಕ್ತುಂ ಪುರುಷೇಣ ಯದರ್ಚ್ಯತೇ ।
ಚಿಂತಾಮಣೇರಿವೈತಸ್ಮಾತ್ತತ್ತೇನ ಪ್ರಾಪ್ಯತೇ ಫಲಂ ॥ ೯೪ ॥

ತಥಾಪಿ ಕ್ಷುದ್ರಮುದ್ದಿಶ್ಯ ಫಲಂ ನೈತತ್ಪ್ರಯೋಜಯೇತ್ ।
ಲಘ್ವರ್ಥೀ ಮಹತೋ ಯಸ್ಮಾತ್ಸ್ವಯಂ ಲಘುತರೋ ಭವೇತ್ ॥ ೯೫ ॥

ಮಹದ್ವಾ ಫಲಮಲ್ಪಂ ವಾ ಕೃತಂ ಚೇತ್ಕರ್ಮ ಸಿಧ್ಯತಿ ।
ಮಹಾದೇವಂ ಸಮುದ್ದಿಶ್ಯ ಕೃತಂ ಕರ್ಮ ಪ್ರಯುಜ್ಯತಾಂ ॥ ೯೬ ॥

ತಸ್ಮಾದನನ್ಯಲಭ್ಯೇಷು ಶತ್ರುಮೃತ್ಯುಜಯಾದಿಷು ।
ಫಲೇಷು ದೃಷ್ಟಾದೃಷ್ಟೇಷು ಕುರ್ಯಾದೇತದ್ವಿಚಕ್ಷಣಃ ॥ ೯೭ ॥

ಮಹತ್ಸ್ವಪಿ ಚ ಪಾತೇಷು ಮಹಾರೋಗಭಯಾದಿಷು ।
ದುರ್ಭಿಕ್ಷಾದಿಷು ಶಾಂತ್ಯರ್ಥಂ ಶಾಂತಿಂ ಕುರ್ಯಾದನೇನ ತು ॥ ೯೮ ॥

---

೯೪. ಚಿಂತಾಮಣಿಯಂತೆ ಇಷ್ಟು ಫಲಪ್ರದವಾದ ಈ ಯೋಗೀಶ್ವರವೆಂಬ ಪೂಜಾ ಮಹಿಮೆಯನ್ನು ಯಾವ ಮನುಜನೂ, ವರ್ಣಿಸಿ ಹೇಳಲಾರನು.

೯೫. ಹಾಗಾದರೂ ಅಲ್ಪವಾದ ಫಲಾಪೇಕ್ಷೆಗಾಗಿ ಈ ಪೂಜೆಯನ್ನು ಮಾಡಬಾರದು. ಮಹಾತ್ಮರಲ್ಲಿ ಅಲ್ಪಫಲವನ್ನು ಬೇಡುವ ಮನುಜನು ತಾನೇ ಅಲ್ಪನೆನಿಸಿಕೊಳ್ಳುವನು.

೯೬-೯೭. ಮಹಾದೇವನನ್ನು ಉದ್ದೇಶಿಸಿ ಮಾಡಿದ ಕರ್ಮಕ್ಕೆ ಮಹಾಫಲವೋ ಅಲ್ಪಫಲವೋ ಸಿದ್ಧಿಯಾಗಿಯೇ ಆಗುವುದು. ಆದುದರಿಂದ ಇತರ ಕರ್ಮಗಳಿಂದ ಸಾಧ್ಯವಾಗದ ಶತ್ರುಜಯ, ಮೃತ್ಯುವಾರಣ ಮುಂತಾದ ದುಷ್ಟವಾದ ಇಹಭೋಗಗಳು ಮತ್ತು ಅದೃಷ್ಟವಾದ ಸ್ವರ್ಗಾದಿ ಫಲಗಳು ಇವುಗಳ ವಿಷಯದಲ್ಲಿ ಬುದ್ಧಿವಂತನಾದವನು ಈ ಪೂಜಾಕರ್ಮವನ್ನು ಮಾಡಬೇಕು.

೯೮. ಮಹಾನಾಶಕಾಲಗಳಲ್ಲಿಯೂ, ಮಹಾರೋಗಗಳ ಭಯವುಂಟಾದಾಗಲೂ, ದುರ್ಭಿಕ್ಷವೇ ಮುಂತಾದ ದೇಶೋಪದ್ರವಗಳಲ್ಲಿಯೂ ಶಾಂತಿಗಾಗಿ ಈ ಪೂಜಾಕರ್ಮದಿಂದ ಶಾಂತಿಯನ್ನುಂಟುಮಾಡಬೇಕು.

ಬಹುನಾ ಕಿಂ ಪ್ರಲಾಪೇನ ಮಹಾವ್ಯಾಪನ್ನಿವಾರಕಂ ।
ಆತ್ಮೀಯಮಸ್ತ್ರಂ ಶೈವಾನಾಮಿದಮಾಹ ಮಹೇಶ್ವರಃ ॥ ೯೯ ॥

ತಸ್ಮಾದಿತಃ ಪರಂ ನಾಸ್ತಿ ಪರಿತ್ರಾಣಮಿಹಾತ್ಮನಃ ।
ಇತಿ ಮತ್ವಾ ಪ್ರಯುಂಜಾನಃ ಕರ್ಮೇದಂ ಶುಭಮಶ್ನುತೇ ॥ ೧೦೦ ॥

ಸ್ತೋತ್ರಮಾತ್ರಂ ಶುಚಿರ್ಭೂತ್ವಾ ಯಃ ಪಠೇತ್ಸುಸಮಾಹಿತಃ ।
ಸೋಽಪ್ಯಭೀಷ್ಟತಮಾದರ್ಥಾದಷ್ಟಾಂಶಫಲಮಾಪ್ನುಯಾತ್ ॥ ೧೦೧ ॥

ಅಥ ತಸ್ಯಾನುಸಂಧಾಯ ಪರ್ವಣ್ಯನಶನಃ ಪಠೇತ್ ।
ಅಷ್ಟಮ್ಯಾಂ ವಾ ಚತುರ್ದಶ್ಯಾಂ ಫಲಮರ್ಧಂ ಸಮಾಪ್ನುಯಾತ್ ॥ ೧೦೨ ॥

---

೯೯. ಹೆಚ್ಚುಮಾತುಗಳಿಂದೇನು ಪ್ರಯೋಜನ ? ಶಿವಭಕ್ತರಿಗೆ ದೊಡ್ಡ ವಿಪತ್ತುಗಳನ್ನು ನಾಶಮಾಡುವ ಆತ್ಮಸಂಬಂಧವಾದ ಅಸ್ತ್ರವೇ ಈ ಪೂಜೆಯೆಂದು ಮಹೇಶ್ವರನೇ ಹೇಳಿರುವನು.

೧೦೦. ಆದುದರಿಂದ ಆತ್ಮರಕ್ಷಣೆಗೆ ಇದಕ್ಕಿಂತಲೂ, ಅನುಕೂಲವಾದ ಮಾರ್ಗವು ಮತ್ತಾವುದೂ ಇಲ್ಲವೆಂದು ತಿಳಿದು, ಈ ಪೂಜಾರೂಪವಾದ ಕರ್ಮವನ್ನು ಮಾಡುವವನು ಶುಭವನ್ನು ಅನುಭವಿಸುವನು.

೧೦೧. ಮನುಷ್ಯನು ಶುಚಿಯಾಗಿ ಏಕಾಗ್ರಚಿತ್ತದಿಂದ ಶಿವಮಹಾಸ್ತೋತ್ರವನ್ನು ಮಾತ್ರ ಪಾರಾಯಣಮಾಡಿದರೆ ಮಹಾಪೂಜೆಯ ಎಂಟನೆಯ ಒಂದುಭಾಗ ಫಲವನ್ನು ಹೊಂದುವನು.

೧೦೨. ಶಿವಮಹಾಸ್ತೋತ್ರದ ಅರ್ಥಾನುಸಂಧಾನಮಾಡುತ್ತಾ ಪರ್ವಕಾಲದಲ್ಲಿ ಅಥವಾ ಅಷ್ಟಮಿ, ಚತುರ್ದಶಿಗಳಲ್ಲಿ ಉಪವಾಸಮಾಡಿ ಪಾರಾಯಣ ಮಾಡಿದರೆ ಪೂಜಾಫಲದ ಅರ್ಧಭಾಗ ಫಲವನ್ನು ಪಡೆವನು.

ಯಸ್ತ್ವರ್ಥಮನುಸಂಧಾಯ ಪರ್ವಾದಿಷು ತಥಾ ವ್ರತೀ ।
ಮಾಸಮೇಕಂ ಜಪೇತ್ಸ್ತೋತ್ರಂ ಸ ಕೃತ್ಸ್ನಂ ಫಲಮಾಪ್ನುಯಾತ್ ॥

ಇತಿ ಶ್ರೀಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-
ಮುತ್ತರಭಾಗೇ ಶೈವಾನಾಂ ಕಾಮ್ಯಕರ್ಮವರ್ಣನಂ ನಾಮ
ತ್ರಿಂಶೋಽಧ್ಯಾಯಃ



---

೧೦೩. ಪೂರ್ಣಿಮಾ ಅಥವಾ ಅಮಾವಾಸ್ಯೆಯದಿನ ಪ್ರಾರಂಭಮಾಡಿ ಒಂದು ತಿಂಗಳವರೆಗೆ ವ್ರತರೂಪವಾಗಿ ಶಿವಮಹಾಸ್ತೋತ್ರವನ್ನು ಅರ್ಥಾನುಸಂಧಾನಮಾಡುತ್ತ ಜಪ ಮಾಡಿದರೆ ಆ ಮನುಷ್ಯನು ಸಂಪೂರ್ಣಫಲವನ್ನು ಹೊಂದುವನು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯವೀಯಸಂಹಿತೆಯ ಉತ್ತರ
ಭಾಗದಲ್ಲಿ ಶೈವರು ಆಚರಿಸಬೇಕಾದ ಕಾಮ್ಯಕರ್ಮವರ್ಣನವೆಂಬ
ಮೂವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ಏಕತ್ರಿಂಶೋಽಧ್ಯಾಯಃ

॥ ಉಪಮನ್ಯುರುವಾಚ ॥

**ಸ್ತೋತ್ರಂ ವಕ್ಷ್ಯಾಮಿ ತೇ ಕೃಷ್ಣ ಪಂಚಾವರಣಮಾರ್ಗತಃ ।**
**ಯೋಗೇಶ್ವರಮಿದಂ ಪುಣ್ಯಂ ಕರ್ಮ ಯೇನ ಸಮಾಪ್ಯತೇ ॥ ೧ ॥**

**ಜಯ ಜಯ ಜಗದೇಕನಾಥ ಶಂಭೋ**
**ಪ್ರಕೃತಿಮನೋಹರ ನಿತ್ಯಚಿತ್ಸ್ವಭಾವ ।**
**ಅತಿಗತಕಲುಷಪ್ರಪಂಚವಾಚಾ-**
**ಮಪಿ ಮನಸಾಂ ಪದವೀಮತೀತತತ್ತ್ವಂ ॥ ೨ ॥**

---

## ಮೂವತ್ತೊಂದನೆಯ ಅಧ್ಯಾಯವು

೧. ಉಪಮನ್ಯುವಿಂತೆಂದನು—ಎಲೈ ಕೃಷ್ಣನೆ, ಪಂಚಾವರಣಮಾರ್ಗದಿಂದ ಮಾಡುವ ಯೋಗೇಶ್ವರವೆಂಬ ಹೆಸರಿನ ಶಿವಪೂಜಾವಿಧಾನದಲ್ಲಿ ಉಪಯೋಗಿಸುವ ಪುಣ್ಯಕರವಾದ ಶಿವಮಹಾಸ್ತೋತ್ರವನ್ನು ನಿನಗೆ ಹೇಳುವೆನು. ಈ ಸ್ತೋತ್ರಮಾಡುವುದರಿಂದ ಪಂಚಾವರಣಪೂಜಾಕರ್ಮವು ಪೂರ್ಣವಾದಂತಾಗುವುದು.

೨. ಲೋಕಗಳಿಗೆಲ್ಲ ಮುಖ್ಯನಾದ ಎಲೈ ಸ್ವಾಮಿಯೇ, ನೀನು ಸ್ವಾಭಾವಿಕವಾಗಿ ಸುಂದರನಾದವನು, ಶಾಶ್ವತವಾದ ಜ್ಞಾನಸ್ವರೂಪನು, ದೋಷಗಳಿಲ್ಲದವನು, ಮನಸ್ಸಿಗೂ ಮಾತಿಗೂ ಗೋಚರಿಸದ ಚಿತ್ಸ್ವರೂಪನು. ಇಂತಹ ನಿನಗೆ ಮಂಗಳವಾಗಲಿ.

ಸ್ವಭಾವನಿರ್ಮಲಾಭೋಗ ಜಯ ಸುಂದರಚೇಷ್ಟಿತ ।
ಸ್ವಾತ್ಮತುಲ್ಯಮಹಾಶಕ್ತೇ ಜಯ ಶುದ್ಧಗುಣಾರ್ಣವ ॥ ೩ ॥

ಅನಂತಕಾಂತಿಸಂಪನ್ನ ಜಯಾಸದೃಶವಿಗ್ರಹ ।
ಅತರ್ಕ್ಯಮಹಿಮಾಧಾರ ಜಯಾನಾಕುಲಮಂಗಲ ॥ ೪ ॥

ನಿರಂಜನ ನಿರಾಧಾರ ಜಯ ನಿಷ್ಕಾರಣೋದಯ ।
ನಿರಂತರಪರಾನಂದ ಜಯ ನಿರ್ವೃತಿಕಾರಣ ॥ ೫ ॥

ಜಯಾತಿಪರಮೈಶ್ವರ್ಯ ಜಯಾತಿಕರುಣಾಸ್ಪದ ।
ಜಯ ಸ್ವತಂತ್ರಸರ್ವಸ್ವ ಜಯಾಸದೃಶವೈಭವ ॥ ೬ ॥

ಜಯಾವೃತಮಹಾವಿಶ್ವ ಜಯಾನಾವೃತ-ಕೇನ ಚಿತ್ ।
ಜಯೋತ್ತರ ಸಮಸ್ತಸ್ಯ ಜಯಾತ್ಯಂತನಿರುತ್ತರ ॥ ೭ ॥

---

೩. ನೀನು ಸ್ವಾಭಾವಿಕವಾಗಿ ಶುದ್ಧವಾದ ಶರೀರವುಳ್ಳವನು. ಪ್ರಶಸ್ತವಾದ ಕಾರ್ಯಗಳನ್ನು ಮಾಡುವವನು. ನಿನಗೆ ಸಮಾನವಾದ ಮಹಾಶಕ್ತಿಯಿಂದ ಕೂಡಿ ಶುದ್ಧವಾದ ಗುಣಗಳಿಗೆ ಸಮುದ್ರಪ್ರಾಯನಂತಿರುವೆ. ಇಂತಹ ನಿನಗೆ ಜಯವಾಗಲಿ.

೪-೫. ನೀನು ಅಪಾರವಾದ ಕಾಂತಿಯಿಂದ ಬೆಳಗುತ್ತಿರುವೆ. ಅಸಮಾನವಾದ ಶರೀರವುಳ್ಳವನು. ಊಹಿಸಲಸಾಧ್ಯವಾದ ಮಹಿಮೆಗಳಿಗೆ ಆಶ್ರಯನಾದವನು. ನಿನ್ನ ಶಕ್ತಿಸಾಮರ್ಥ್ಯಗಳಿಗೆ ತಡೆಯಿಲ್ಲ. ನಿನ್ನಲ್ಲಿ ದೋಷಗಳೊಂದೂ ಇಲ್ಲ. ನಿನಗೆ ಯಾವ ಆಶ್ರಯವೂ ಇಲ್ಲ. ನೀನೇ ಎಲ್ಲರಿಗೂ ಆಶ್ರಯನು. ಕರ್ಮ ಬದ್ಧನಲ್ಲ. ಸ್ವೇಚ್ಛೆಯಿಂದಲೇ ಬೇಕಾದ ಶರೀರವನ್ನು ಧರಿಸಲು ಸಮರ್ಥನು. ಪರಮಾನಂದಸ್ವರೂಪನಾದವನು. ಮೋಕ್ಷಕ್ಕೆ ಕಾರಣನಾದ ಎಲೈ ಶಿವನೆ, ನಿನಗೆ ಜಯವಾಗಲಿ.

೬-೮. ನೀನು ಪರಮೈಶ್ವರ್ಯಯುಕ್ತನು. ಅತ್ಯಂತ ಕರುಣಾಶಾಲಿಯು. ಸರ್ವಸ್ವತಂತ್ರನು. ಅಸಮಾನವಾದ ಸಂಪತ್ತುಳ್ಳವನು. ಅಖಿಲಾಂಡಕೋಟಿಬ್ರಹ್ಮಾಂಡರೂಪವಾದ ಸಮಸ್ತವಿಶ್ವವನ್ನೂ ಒಳಗೂ ಹೊರಗೂ

ಜಯಾದ್ಭುತ ಜಯಾಕ್ಷುದ್ರ ಜಯಾಕ್ಷತ ಜಯಾವ್ಯಯ ।
ಜಯಾಮೇಯ ಜಯಾಮಾಯ ಜಯಾಭಾವ ಜಯಾಮಲ ॥ ೮ ॥

ಮಹಾಭುಜ ಮಹಾಸಾರ ಮಹಾಗುಣ ಮಹಾಕಥ ।
ಮಹಾಬಲ ಮಹಾಮಾಯ ಮಹಾರಸ ಮಹಾರಥ ॥ ೯ ॥

ನಮಃ ಪರಮದೇವಾಯ ನಮಃ ಪರಮಹೇತವೇ ।
ನಮಶ್ಶಿವಾಯ ಶಾಂತಾಯ ನಮಶ್ಶಿವತರಾಯ ತೇ ॥ ೧೦ ॥

ತ್ವದಧೀನಮಿದಂ ಕೃತ್ಸ್ನಂ ಜಗದ್ಧಿ ಸಸುರಾಸುರಂ ॥ ೧೧ ॥

ಅತಸ್ತ್ವದ್ವಿಹಿತಾಮಾಜ್ಞಾಂ ಕ್ಷಮತೇ ಕೋऽತಿವರ್ತಿತುಂ ॥ ೧೨ ॥

ಅಯಂ ಪುನರ್ಜನೋ ನಿತ್ಯಂ ಭವದೇಕಸಮಾಶ್ರಯಃ ।
ಭವಾನತೋऽನುಗೃಹ್ಯಾಸ್ಮೈ ಪ್ರಾರ್ಥಿತಂ ಸಂಪ್ರಯಚ್ಛತು ॥ ೧೩ ॥

---

ವ್ಯಾಪಿಸಿರುವವನು. ಎಂದರೆ ನಿನಗೆ ಯಾವ ಆವರಣವೂ ಇಲ್ಲ. ಎಲ್ಲ ವಸ್ತುಗಳಿಗೂ ನೀನೇ ಕಾರಣನು. ನಿನಗೆ ಯಾವ ವಸ್ತುವೂ ಕಾರಣವಲ್ಲ. ನಿನ್ನ ಮಹಿಮೆಯು ಅದ್ಭುತವಾಗಿರುವುದು. ನೀನು ಕಾರಣವಿಲ್ಲದವನೂ, ಆಶ್ಚರ್ಯಕರನೂ, ದೋಷವಿಲ್ಲದವನೂ, ನಾಶವಿಲ್ಲದವನೂ, ಅಳತೆಗೆ ಸಿಕ್ಕದವನೂ, ಮಾಯಾರಹಿತನೂ, ಮನಸ್ಸಿಗೂ ಗೋಚರನಾಗದುದರಿಂದ ಅಭಾವಸ್ವರೂಪನೂ, ನಿರ್ಮಲನೂ ಆಗಿರುವೆ. ಇಂತಹ ನಿನಗೆ ಜಯವಾಗಲಿ.

೯-೧೨. ಭುಜ, ಬಲ, ಗುಣ, ಕಥೆ, ಮಾಯೆ, ರಸ, ಪರಾಕ್ರಮ ಇವುಗಳ ಮಹಾಮಹಿಮೆಯಿಂದ ಕೂಡಿದವನೂ, ಶ್ರೇಷ್ಠದೇವನೂ, ಸಮಸ್ತಕ್ಕೂ ಕಾರಣನೂ, ಮಂಗಲಸ್ವರೂಪನೂ, ಶಾಂತನೂ ಆದ ನಿನಗೆ ನಮಸ್ಕಾರವು. ಸುರಾಸುರರಿಂದ ಕೂಡಿದ ಈ ಪ್ರಪಂಚವು ನಿನ್ನ ಅಧೀನವಾಗಿರುವುದು. ಆ ಕಾರಣದಿಂದ ನೀನು ವಿಧಿಸಿರುವ ಆಜ್ಞೆಯನ್ನು ಮೀರಿ ನಡೆಯಲು ಯಾರೂ ಶಕ್ತರಲ್ಲ.

೧೩. ಸ್ತೋತ್ರಮಾಡುತ್ತಿರುವ ನಾನಾದರೋ ನಿನ್ನೊಬ್ಬನನ್ನೇ ಆಶ್ರಯಿಸಿರುವೆನು. ಆದುದರಿಂದ ನೀನು ಅನುಗ್ರಹಿಸಿ ಇಷ್ಟಾರ್ಥಗಳನ್ನು ಕೊಡುವವನಾಗು.

ಜಯಾಂಬಿಕೇ ಜಗನ್ಮಾತರ್ಜಯ ಸರ್ವಜಗನ್ಮಯಿ ।
ಜಯಾನವಧಿಕೈಶ್ವರ್ಯೇ ಜಯಾನುಪಮವಿಗ್ರಹೇ ॥ ೧೪ ॥

ಜಯ ವಾಙ್ಮನಸಾತೀತೇ ಜಯಾಚಿದ್ಧ್ವಾಂತಭಂಜಿಕೇ ।
ಜಯ ಜನ್ಮಜರಾಹೀನೇ ಜಯ ಕಾಲೋತ್ತರೋತ್ತರೇ ॥ ೧೫ ॥

ಜಯಾನೇಕವಿಧಾನಸ್ಥೇ ಜಯ ವಿಶ್ವೇಶ್ವರಪ್ರಿಯೇ ।
ಜಯ ವಿಶ್ವಸುರಾರಾಧ್ಯೇ ಜಯ ವಿಶ್ವವಿಜೃಂಭಿಣಿ ॥ ೧೬ ॥

ಜಯ ಮಂಗಳದಿವ್ಯಾಂಗಿ ಜಯ ಮಂಗಳದೀಪಿಕೇ ।
ಜಯ ಮಂಗಳಚಾರಿತ್ರೇ ಜಯ ಮಂಗಳದಾಯಿನಿ ॥ ೧೭ ॥

ನಮಃ ಪರಮಕಲ್ಯಾಣಗುಣಸಂಚಯಮೂರ್ತಯೇ ।
ತ್ವತ್ತಃ ಖಲು ಸಮುತ್ಪನ್ನಂ ಜಗತ್ತ್ವಯ್ಯೇವ ಲೀಯತೇ ॥ ೧೮ ॥

---

೧೪-೧೭. ಎಲೌ ದೇವಿ, ನೀನು ಲೋಕಕ್ಕೆಲ್ಲಾ ತಾಯಿಯು. ಸಮಸ್ತ ಪ್ರಪಂಚಸ್ವರೂಪಳು, ಅಪಾರವಾದ ಈಶ್ವರಶಕ್ತಿಯುಳ್ಳವಳು, ಅಸಮಾನವಾದ ಶರೀರದಿಂದ ಕೂಡಿ ವಾಕ್ಕಿಗೂ, ಮನಸ್ಸಿಗೂ, ಅಗೋಚರಳಾಗಿರುವೆ. ಅಜ್ಞಾನವೆಂಬ ಕತ್ತಲೆಯನ್ನು ನಾಶಮಾಡುವವಳು. ನಿನಗೆ ಹುಟ್ಟು, ಮುಪ್ಪು, ಮೊದಲಾದ ವಿಕಾರಗಳಿಲ್ಲ. ಎಲ್ಲ ಕಾಲಗಳಲ್ಲಿಯೂ ಇರುವೆ. ಅನೇಕ ರೂಪಗಳನ್ನು ಧರಿಸಿರುವೆ. ವಿಶ್ವೇಶ್ವರನಿಗೆ ಪ್ರೀತಿಪಾತ್ರಳಾಗಿ ದೇವತೆಗಳಿಂದ ಪೂಜೆಮಾಡಿಸಿಕೊಳ್ಳುವೆ. ಪ್ರಪಂಚದಲ್ಲಿ ನಿನ್ನ ಮಹಿಮೆಯನ್ನು ಭಕ್ತರಿಗೆ ಪ್ರದರ್ಶಿಸುವೆ. ನಿನ್ನ ಅವಯವಗಳೂ, ಕಾಂತಿಯೂ, ನಡತೆಯೂ ಎಲ್ಲರಿಗೂ ಮಂಗಳವನ್ನುಂಟು ಮಾಡುವವು. ಎಲೌ ದೇವಿಯೇ, ನಿನಗೆ ಜಯವಾಗಲಿ.

೧೮-೧೯. ವಿಶೇಷ ಮಂಗಳಕರವಾದ ಗುಣಗಳಿಂದ ಪೂರ್ಣಳಾದ ನಿನಗೆ ನಮಸ್ಕಾರವು. ಈ ಪ್ರಪಂಚವು ನಿನ್ನಿಂದಲೇ ಹುಟ್ಟಿತು. ನಿನ್ನಲ್ಲಿಯೇ ಲಯವಾಗುವುದು. ನೀನಿಲ್ಲದೆ ಈಶ್ವರನೂ ಫಲವನ್ನು ಕೊಡಲಾರನು. ನಾನು

ತ್ವದ್ವಿನಾತಃ ಫಲಂ ದಾತುಮೀಶ್ವರೋಽಪಿ ನ ಶಕ್ನುಯಾತ್ ।
ಜನ್ಮಪ್ರಭೃತಿ ದೇವೇಶಿ ಜನೋಽಯಂ ತ್ವದುಪಾಶ್ರಿತಃ ॥ ೧೯ ॥

ಅತೋಽಸ್ಯ ತವ ಭಕ್ತಸ್ಯ ನಿರ್ವರ್ತಯ ಮನೋರಥಂ ।
ಪಂಚವಕ್ತ್ರೋ ದಶಭುಜಃ ಶುದ್ಧಸ್ಫಟಿಕಸಂನಿಭಃ ।
ವರ್ಣಬ್ರಹ್ಮ ಕಲಾದೇಹೋ ದೇವಸ್ಸಕಲನಿಷ್ಕಲಃ ॥ ೨೦ ॥

ಶಿವಭಕ್ತಿಸಮಾರೂಢಃ ಶಾಂತ್ಯತೀತಃ ಸದಾಶಿವಃ ।
ಭಕ್ತ್ಯಾ ಮಯಾರ್ಚಿತೋ ಮಹ್ಯಂ ಪ್ರಾರ್ಥಿತಂ ಶಂ ಪ್ರಯಚ್ಛತು ॥ ೨೧ ॥

ಸದಾಶಿವಾಂಕಮಾರೂಢಾ ಶಕ್ತಿರಿಚ್ಛಾ ಶಿವಾಹ್ವಯಾ ।
ಜನನೀ ಸರ್ವಲೋಕಾನಾಂ ಪ್ರಯಚ್ಛತು ಮನೋರಥಂ ॥ ೨೨ ॥

ಶಿವಯೋರ್ದಯಿತೌ ಪುತ್ರೌ ದೇವೌ ಹೇರಂಬಷಣ್ಮುಖೌ ।
ಶಿವಾನುಭಾವೌ ಸರ್ವಜ್ಞೌ ಶಿವಜ್ಞಾನಾಮೃತಾಶಿನೌ ॥ ೨೩ ॥

---

ಹುಟ್ಟಿದಂದಿನಿಂದಲೂ, ನಿನ್ನನ್ನು ಆಶ್ರಯಿಸಿಕೊಂಡಿರುವೆನು. ಆದುದರಿಂದ ನಿನ್ನ ಭಕ್ತನಾದ ಈ ನನ್ನ ಇಷ್ಟಾರ್ಥಗಳನ್ನು ನೆರವೇರಿಸು.

೨೦–೨೧. ಐದು ಮುಖ, ಹತ್ತು ಭುಜಗಳು, ಸ್ಫಟಿಕದಂತೆ ಇರುವ ಶರೀರಕಾಂತಿ, ವರ್ಣಕಲೆ, ಬ್ರಹ್ಮಕಲೆ ಇವುಗಳಿಂದ ಕೂಡಿದ ದೇಹದಿಂದ ಸದಾ ಶಿವಮೂರ್ತಿಯು ಬೆಳಗುತ್ತಿರುವನು. ಅವನು ಕಲೆಗಳಿಂದ ಕೂಡಿರುವನು, ಕಲಾರಹಿತನಾಗಿಯೂ ಇರುವನು. ಶಿವಭಕ್ತಿಯಿಂದ ಕೂಡಿದ ಶಾಂತ್ಯತೀತವೆಂಬ ಕಲೆಯಿಂದ ಕೂಡಿ ಪ್ರಕಾಶಿಸುತ್ತಿರುವನು. ಇಂತಹ ಸದಾಶಿವಮೂರ್ತಿಯು ಭಕ್ತಿಯಿಂದ ನಾನು ಮಾಡುವ ಪೂಜೆಯನ್ನು ಸ್ವೀಕರಿಸಿ ನನ್ನ ಇಷ್ಟಾರ್ಥ ಗಳನ್ನು ಕೊಡಲಿ.

೨೨–೨೬. ಸದಾಶಿವಮೂರ್ತಿಯ ತೊಡೆಯನ್ನೇರಿ ಕುಳಿತಿರುವ ಇಚ್ಛಾ ಶಕ್ತಿಸ್ವರೂಪಳೂ, ಸಮಸ್ತ ಲೋಕಗಳಿಗೂ ತಾಯಿಯೂ ಆದ ಶಿವೆಯು ನನ್ನ ಇಷ್ಟಾರ್ಥವನ್ನು ಕೊಡಲಿ. ಶಿವದಂಪತಿಗಳ ಪುತ್ರರಾದ ಗಣಪತಿ ಕುಮಾರ

ತೃಪ್ತೌ ಪರಸ್ಪರಂ ಸ್ನಿಗ್ಧೌ ಶಿವಾಭ್ಯಾಂ ನಿತ್ಯಸತ್ಕೃತೌ ।
ಸತ್ಕೃತೌ ಚ ಸದಾ ದೇವೌ ಬ್ರಹ್ಮಾದ್ಯೈಸ್ತ್ರಿದಶೈರಪಿ ॥ ೨೪ ॥

ಸರ್ವಲೋಕಪರಿತ್ರಾಣಂ ಕರ್ತುಮಭ್ಯುದಿತೌ ಸದಾ ।
ಸ್ವೇಚ್ಛಾವತಾರಂ ಕುರ್ವಂತೌ ಸ್ವಾಂಶಭೇದೈರನೇಕಶಃ ॥ ೨೫ ॥

ತಾವಿಮೌ ಶಿವಯೋಃ ಪಾರ್ಶ್ವೇ ನಿತ್ಯಮಿತ್ಥಂ ಮಯಾರ್ಚಿತೌ ।
ತಯೋರಾಜ್ಞಾಂ ಪುರಸ್ಕೃತ್ಯ ಪ್ರಾರ್ಥಿತಂ ಮೇ ಪ್ರಯಚ್ಛತಾಂ ॥ ೨೬ ॥

ಶುದ್ಧಸ್ಫಟಿಕಸಂಕಾಶಮೀಶಾನಾಖ್ಯಂ ಸದಾಶಿವಂ ।
ಮೂರ್ಧಾಭಿಮಾನಿನೀ ಮೂರ್ತಿಃ ಶಿವಸ್ಯ ಪರಮಾತ್ಮನಃ ॥ ೨೭ ॥

ಶಿವಾರ್ಚನರತಂ ಶಾಂತಂ ಶಾಂತ್ಯತೀತಂ ಖಮಾಸ್ಥಿತಂ ।
ಪಂಚಾಕ್ಷರಾಂತಿಮಂ ಬೀಜಂ ಕಲಾಭಿಃ ಪಂಚಭಿರ್ಯುತಂ ॥ ೨೮ ॥

---

ಸ್ವಾಮಿಯು ಶಿವನ ಸಮಸ್ತಗುಣಗಳಿಂದ ಕೂಡಿರುವರು. ಸರ್ವಜ್ಞರು. ಶಿವಜ್ಞಾನಾಮೃತವನ್ನು ಯಾವಾಗಲೂ ಪಾನಮಾಡುತ್ತಾ ಸಂತೋಷಚಿತ್ತದಿಂದಿರುವರು. ಪರಸ್ಪರ ಸ್ನೇಹವುಳ್ಳವರು. ಶಿವದಂಪತಿಗಳ ಮತ್ತು ಬ್ರಹ್ಮಾದಿ ದೇವತೆಗಳ ಸತ್ಕಾರಗಳನ್ನು ಯಾವಾಗಲೂ ಪಡೆಯುತ್ತಾ ಸಮಸ್ತ ಲೋಕಗಳನ್ನು ಕಾಪಾಡುವ ಕೆಲಸದಲ್ಲಿ ಸದಾ ಆಸಕ್ತರಾಗಿರುವರು. ತಮ್ಮ ಅಂಶಗಳಿಂದಲೇ ತಮಗೆ ಇಷ್ಟವಾದ ಅನೇಕ ಅವತಾರಗಳನ್ನು ಮಾಡಲು ಶಕ್ತರಾಗಿರುವರು. ಶಿವದಂಪತಿಗಳ ಪಾರ್ಶ್ವದಲ್ಲಿ ಕುಳಿತಿರುವ ಈ ಗಣಪತಿ ಕುಮಾರಸ್ವಾಮಿ ಇವರಿಬ್ಬರೂ ಪ್ರತಿದಿನವೂ ನನ್ನ ಪೂಜೆಯನ್ನು ಸ್ವೀಕರಿಸಿ ಆ ಶಿವದಂಪತಿಗಳ ಆಜ್ಞೆಯನ್ನನುಸರಿಸಿ ನನ್ನ ಇಷ್ಟಾರ್ಥಗಳನ್ನು ಕೊಡಲಿ.

೨೭-೨೮. ಪರಿಶುದ್ಧವಾದ ಸ್ಫಟಿಕಮಣಿಯಂತೆ ಪ್ರಕಾಶಿಸುವ ಈಶಾನನೆಂಬ ಮೂರ್ತಿಯು ಪರಮಾತ್ಮನಾದ, ಶಿವನ ಶಿರಸ್ಸಿಗೆ ಅಭಿಮಾನದೇವತೆಯಾಗಿರುವನು. ಈ ದೇವನು ಶಿವಪೂಜೆಯಲ್ಲಿ ಆಸಕ್ತನೂ, ಶಾಂತಚಿತ್ತನೂ, ಶಾಂತ್ಯತೀತಕಲೆಯಿಂದ ಕೂಡಿದವನೂ ಆಗಿರುವನು. ಆಕಾಶತತ್ತ್ವಾಭಿಮಾನಿಯೂ ಪಂಚಾಕ್ಷರಮಂತ್ರದ ಕೊನೆಯ ಬೀಜಾಕ್ಷರಸ್ವರೂಪನೂ, ಐದು ಕಲೆಗಳಿಂದಲೂ

ಪ್ರಥಮಾವರಣೇ ಪೂರ್ವಂ ಶಕ್ತ್ಯಾ ಸಹ ಸಮರ್ಚಿತಂ ।
ಪವಿತ್ರಂ ಪರಮಂ ಬ್ರಹ್ಮ ಪ್ರಾರ್ಥಿತಂ ಮೇ ಪ್ರಯಚ್ಛತು ॥ ೨೯ ॥

ಬಾಲಸೂರ್ಯಪ್ರತೀಕಾಶಂ ಪುರುಷಾಖ್ಯಂ ಪುರಾತನಂ ।
ಪೂರ್ವವಕ್ತ್ರಾಭಿಮಾನಂ ಚ ಶಿವಸ್ಯ ಪರಮೇಷ್ಠಿನಃ ॥ ೩೦ ॥

ಶಾಂತ್ಯಾತ್ಮಕಂ ಮರುತ್ಸಂಸ್ಥಂ ಶಂಭೋಃ ಪಾದಾರ್ಚನೇ ರತಂ ।
ಪ್ರಥಮಂ ಶಿವಬೀಜೇಷು ಕಲಾಸು ಚ ಚತುಷ್ಕಲಂ ॥ ೩೧ ॥

ಪೂರ್ವಭಾಗೇ ಮಯಾ ಭಕ್ತ್ಯಾ ಶಕ್ತ್ಯಾ ಸಹ ಸಮರ್ಚಿತಂ ।
ಪವಿತ್ರಂ ಪರಮಂ ಬ್ರಹ್ಮ ಪ್ರಾರ್ಥಿತಂ ಮೇ ಪ್ರಯಚ್ಛತು ॥ ೩೨ ॥

ಅಂಜನಾದ್ರಿಪ್ರತೀಕಾಶಮಘೋರಂ ಘೋರವಿಗ್ರಹಂ ।
ದೇವಸ್ಯ ದಕ್ಷಿಣಂ ವಕ್ತ್ರಂ ದೇವದೇವಪದಾರ್ಚಕಂ ॥ ೩೩ ॥

---

ಕೂಡಿರುವವನು. ಇಂತಹ ಈಶಾನನೆಂಬ ಹೆಸರಿನ ಪರಿಶುದ್ಧವಾದ ಪರಬ್ರಹ್ಮ ವಸ್ತುವು ಮೊದಲನೆಯ ಆವರಣದಲ್ಲಿ ತನ್ನ ಶಕ್ತಿಯೊಡನೆ ನನ್ನ ಪೂಜೆಯನ್ನು ಸ್ವೀಕರಿಸಿ ನನ್ನ ಇಷ್ಟವನ್ನು ಕೊಡಲಿ.

೩೦-೩೨. ಬಾಲಸೂರ್ಯನಂತೆ ಪ್ರಕಾಶಿಸುತ್ತಿರುವ ಪುರುಷಾಖ್ಯ ಮೂರ್ತಿಯು ಅನಾದಿಯಾಗಿ ಪರಬ್ರಹ್ಮನಾದ ಶಿವನ ಪೂರ್ವಭಾಗದ ಮುಖಕ್ಕೆ ಅಧಿಪತಿಯು. ಈ ದೇವನು ಶಾಂತ್ಯಾತ್ಮಕಕಲೆಯಿಂದ ಸಹಿತನಾಗಿ ವಾಯುತತ್ತ್ವದಲ್ಲಿ ನೆಲಸಿರುವನು. ಯಾವಾಗಲೂ ಶಿವಪಾದಾರ್ಚನೆಯಲ್ಲಿ ಆಸಕ್ತನಾಗಿರುವನು. ಶಿವಪಂಚಾಕ್ಷರೀಮಂತ್ರದ ಮೊದಲನೆಯ ಅಕ್ಷರಸ್ವರೂಪನಾಗಿರುವನು. ಚತುಷ್ಕಲೆಗಳಿಂದ ಕೂಡಿರುವನು. ಪೂರ್ವಭಾಗದಲ್ಲಿ ಭಕ್ತಿಯಿಂದ ನಾನು ಅರ್ಚಿಸಿದ, ಶಕ್ತಿಯಿಂದ ಸಹಿತವಾದ ತತ್ಪುರುಷವೆಂಬ ಈ ಪರಬ್ರಹ್ಮ ಮೂರ್ತಿಯು ನನ್ನ ಇಷ್ಟಾರ್ಥವನ್ನು ನೆರವೇರಿಸಲಿ.

೩೩-೩೫. ನೀಲಪರ್ವತದಂತೆ ಹೊಳೆಯುವ ಅಘೋರಮೂರ್ತಿಯು ಶಿವನ ದಕ್ಷಿಣದಿಕ್ಕಿನ ಮುಖಕ್ಕೆ ಅಭಿಮಾನದೇವತೆಯು. ಶಿವನ ಪಾದಪೂಜೆಯನ್ನು ಮಾಡುತ್ತಾ, ವಿದ್ಯಾಕಲೆಯಿಂದ ಕೂಡಿ ಅಗ್ನಿತತ್ತ್ವದಲ್ಲಿರುವ ಶಿವನ

ವಿದ್ಯಾಪಾದಂ ಸಮಾರೂಢಂ ವಹ್ನಿಮಂಡಲಮಧ್ಯಗಂ ।
ದ್ವಿತೀಯಂ ಶಿವಬೀಜೇಷು ಕಲಾಸ್ವಷ್ಟಕಲಾನ್ವಿತಂ ॥ ೩೪ ॥

ಶಂಭೋರ್ದಕ್ಷಿಣದಿಗ್ಭಾಗೇ ಶಕ್ತ್ಯಾ ಸಹ ಸಮರ್ಚಿತಂ ।
ಪವಿತ್ರಂ ಮಧ್ಯಮಂ ಬ್ರಹ್ಮ ಪ್ರಾರ್ಥಿತಂ ಮೇ ಪ್ರಯಚ್ಛತು ॥ ೩೫ ॥

ಕುಂಕುಮಕ್ಷೋದಸಂಕಾಶಂ ವಾಮಾಖ್ಯಂ ವರವೇಷಧೃಕ್ ।
ವಕ್ತ್ರಮುತ್ತರಮೀಶಸ್ಯ ಪ್ರತಿಷ್ಠಾಯಾಂ ಪ್ರತಿಷ್ಠಿತಂ ॥ ೩೬ ॥

ವಾರಿಮಂಡಲಮಧ್ಯಸ್ಥಂ ಮಹಾದೇವಾರ್ಚನೇ ರತಂ ।
ತುರೀಯಂ ಶಿವಬೀಜೇಷು ತ್ರಯೋದಶಕಲಾನ್ವಿತಂ ॥ ೩೭ ॥

ದೇವಸ್ಯೋತ್ತರದಿಗ್ಭಾಗೇ ಶಕ್ತ್ಯಾ ಸಹ ಸಮರ್ಚಿತಂ ।
ಪವಿತ್ರಂ ಪರಮಂ ಬ್ರಹ್ಮ ಪ್ರಾರ್ಥಿತಂ ಮೇ ಪ್ರಯಚ್ಛತು ॥ ೩೮ ॥

---

ಪಂಚಾಕ್ಷರಮಂತ್ರದ ಎರಡನೆಯ ಬೀಜಾಕ್ಷರಸ್ವರೂಪನಾಗಿರುವನು. ಎಂಟು ಕಲೆಗಳಿಂದ ಕೂಡಿರುವನು. ಶಿವನ ದಕ್ಷಿಣದಿಕ್ಕಿನಲ್ಲಿ ತನ್ನ ಶಕ್ತಿಯೊಡನೆ ನನ್ನ ಪೂಜೆಯನ್ನು ಸ್ವೀಕರಿಸಿದ ಇಂತಹ ಅಘೋರನೆಂಬ ಹೆಸರಿನ ಪರಬ್ರಹ್ಮವಸ್ತುವು ನನ್ನ ಇಷ್ಟವನ್ನು ಕೊಡಲಿ.

೩೬–೩೮. ಕುಂಕುಮಕೇಸರಿಯ ಬಣ್ಣದಂತೆ ಹೊಳೆಯುವ ಸುಂದರನಾದ ವಾಮದೇವಮೂರ್ತಿಯು ಈಶ್ವರನ ಉತ್ತರದಿಕ್ಕಿನ ಮುಖಕ್ಕೆ ಅಭಿಮಾನಿ ದೇವತೆಯು. ಈ ದೇವನು ಪ್ರತಿಷ್ಠಾಕಲೆಯಿಂದ ಕೂಡಿ ನೀರಿನ ಮಂಡದಲ್ಲಿರುತ್ತಾ ಯಾವಾಗಲೂ ಮಹಾದೇವನ ಪೂಜೆಯಲ್ಲಿ ಆಸಕ್ತನಾಗಿರುವನು. ಪಂಚಾಕ್ಷರಮಂತ್ರದ ನಾಲ್ಕನೆಯ ಬೀಜಾಕ್ಷರಸ್ವರೂಪನಾಗಿಯೂ, ಹದಿಮೂರು ಕಲೆಗಳಿಂದ ಕೂಡಿಯೂ ಇರುವ, ಮಹಾದೇವನ ಉತ್ತರದಿಕ್ಕಿನಲ್ಲಿ ತನ್ನ ಶಕ್ತಿಯೊಡನೆ ನನ್ನ ಪೂಜೆಯನ್ನು ಸ್ವೀಕರಿಸಿದ ವಾಮದೇವನೆಂಬ ಹೆಸರಿನ ಪರಿಶುದ್ಧವಾದ ಪರಬ್ರಹ್ಮವಸ್ತುವು ನನ್ನ ಇಷ್ಟವನ್ನು ನೆರವೇರಿಸಲಿ.

ಶಂಖಕುಂದೇಂದುಧವಲಂ ಸದ್ಯಾಖ್ಯಂ ಸೌಮ್ಯಲಕ್ಷಣಂ ।
ಶಿವಸ್ಯ ಪಶ್ಚಿಮಂ ವಕ್ತ್ರಂ ಶಿವಪಾದಾರ್ಚನೇ ರತಂ ॥ ೩೯ ॥

ನಿವೃತ್ತಿಪದನಿಷ್ಠಂ ಚ ಪೃಥಿವ್ಯಾಂ ಸಮವಸ್ಥಿತಂ ।
ತೃತೀಯಂ ಶಿವಬೀಜೇಷು ಕಲಾಭಿಶ್ಚಾಷ್ಟಭಿರ್ಯುತಂ ॥ ೪೦ ॥

ದೇವಸ್ಯ ಪಶ್ಚಿಮೇ ಭಾಗೇ ಶಕ್ತ್ಯಾ ಸಹ ಸಮರ್ಚಿತಂ ।
ಪವಿತ್ರಂ ಪರಮಂ ಬ್ರಹ್ಮ ಪ್ರಾರ್ಥಿತಂ ಮೇ ಪ್ರಯಚ್ಛತು ॥ ೪೧ ॥

ಶಿವಸ್ಯ ತು ಶಿವಾಯಾಶ್ಚ ಹೃನ್ಮೂರ್ತೀ ಶಿವಭಾವಿತೇ ।
ತಯೋರಾಜ್ಞಾಂ ಪುರಸ್ಕೃತ್ಯ ತೇ ಮೇ ಕಾಮಂ ಪ್ರಯಚ್ಛತಾಂ ॥ ೪೨ ॥

ಶಿವಸ್ಯ ಚ ಶಿವಾಯಾಶ್ಚ ಶಿಖಾಮೂರ್ತೀ ಶಿವಾಶ್ರಿತೇ ।
ಸತ್ಕೃತ್ಯ ಶಿವಯೋರಾಜ್ಞಾಂ ತೇ ಮೇ ಕಾಮಂ ಪ್ರಯಚ್ಛತಾಂ ॥ ೪೩ ॥

ಶಿವಸ್ಯ ಚ ಶಿವಾಯಾಶ್ಚ ವರ್ಮಣಾ ಶಿವಭಾವಿತೇ ।
ಸತ್ಕೃತ್ಯ ಶಿವಯೋರಾಜ್ಞಾಂ ತೇ ಮೇ ಕಾಮಂ ಪ್ರಯಚ್ಛತಾಂ ॥ ೪೪ ॥

ಶಿವಸ್ಯ ಚ ಶಿವಾಯಾಶ್ಚ ನೇತ್ರಮೂರ್ತೀ ಶಿವಾಶ್ರಿತೇ ।
ಸತ್ಕೃತ್ಯ ಶಿವಯೋರಾಜ್ಞಾಂ ತೇ ಮೇ ಕಾಮಂ ಪ್ರಯಚ್ಛತಾಂ ॥ ೪೫ ॥

---

೩೯–೪೧. ಶಂಖ, ಮೊಲ್ಲೆಯಹೂ ಚಂದ್ರ ಇವುಗಳಂತೆ ಶುಭ್ರವಾದ ಶರೀರಕಾಂತಿಯಿಂದ ಬೆಳಗುವ ಸದ್ಯೋಜಾತಮೂರ್ತಿಯು ಶಿವನ ಪಶ್ಚಿಮ ದಿಕ್ಕಿನ ಮುಖಕ್ಕೆ ಅಭಿಮಾನದೇವತೆಯು. ಶಿವನ ಪಾದವನ್ನು ಪೂಜಿಸುವುದರಲ್ಲಿ ಆಸಕ್ತನಾಗಿ ನಿವೃತ್ತಿಯೆಂಬ ಕಲೆಯಿಂದ ಕೂಡಿ ಪಂಚಾಕ್ಷರ ಮಂತ್ರದ ಮೂರನೆಯ ಬೀಜಾಕ್ಷರಸ್ವರೂಪನಾಗಿರುವನು. ಬಹಳ ಸೌಮ್ಯಭಾವದಿಂದಿರುವ ಈ ದೇವನು ಭೂಮಿತತ್ತ್ವದಲ್ಲಿರುವ ಎಂಟು ಕಲೆಗಳಿಂದ ಕೂಡಿ ಶಿವನ ಪಶ್ಚಿಮಭಾಗದಲ್ಲಿ ತನ್ನ ಶಕ್ತಿಯೊಡನೆ ನನ್ನ ಪೂಜೆಯನ್ನು ಸ್ವೀಕರಿಸಿ ನನ್ನ ಇಷ್ಟಾರ್ಥವನ್ನು ಕೊಡಲಿ.

೪೨-೪೬. ಶಿವದಂಪತಿಗಳ ಹೃದಯ ಶಿಖಾ ಕವಚ ನೇತ್ರ ಅಸ್ತ್ರ ಈ

ಅಸ್ತ್ರಮೂರ್ತೀ ಚ ಶಿವಯೋರ್ನಿತ್ಯಮರ್ಚನತತ್ಪರೇ ।
ಸತ್ಕೃತ್ಯ ಶಿವಯೋರಾಜ್ಞಾಂ ತೇ ಮೇ ಕಾಮಂ ಪ್ರಯಚ್ಛತಾಂ ॥ ೪೬ ॥

ವಾಮೋ ಜ್ಯೇಷ್ಠಸ್ತಥಾ ರುದ್ರಃ ಕಾಲೋ ವಿಕರಣಸ್ತಥಾ ।
ಬಲೋ ವಿಕರಣಶ್ಚೈವ ಬಲಪ್ರಮಥನಃ ಪರಃ ॥ ೪೭ ॥

ಸರ್ವಭೂತಸ್ಯ ದಮನಸ್ತಾದೃಶಾಶ್ಚಾಷ್ಟ ಶಕ್ತಯಃ ।
ಪ್ರಾರ್ಥಿತಂ ಮೇ ಪ್ರಯಚ್ಛಂತು ಶಿವಯೋರೇವ ಶಾಸನಾತ್ ॥ ೪೮ ॥

ಅಥಾನಂತಶ್ಚ ಸೂಕ್ಷ್ಮಶ್ಚ ಶಿವಶ್ಚಾಪ್ಯೇಕನೇತ್ರಕಃ ।
ಏಕರುದ್ರಾಖ್ಯಮೂರ್ತಿಶ್ಚ ಶ್ರೀಕಂಠಶ್ಚ ಶಿಖಂಡಕಃ ॥ ೪೯ ॥

ತಥಾಷ್ಟೌ ಶಕ್ತಯಸ್ತೇಷಾಂ ದ್ವಿತೀಯಾವರಣೇಽರ್ಚಿತಾಃ ।
ತೇ ಮೇ ಕಾಮಂ ಪ್ರಯಚ್ಛಂತು ಶಿವಯೋರೇವ ಶಾಸನಾತ್ ॥ ೫೦ ॥

ಭವಾದ್ಯಾ ಮೂರ್ತಯಶ್ಚಾಷ್ಟೌ ತಾಸಾಮಪಿ ಚ ಶಕ್ತಯಃ ।
ಮಹಾದೇವಾದಯಶ್ಚಾನ್ಯೇ ತಥೈಕಾದಶಮೂರ್ತಯಃ ॥ ೫೧ ॥

---

ಸಂಬಂಧವಾದ ಭಾವನಾಮೂರ್ತಿಗಳು ಎಂದರೆ ಷಡಂಗದೇವತೆಗಳು ಆ ಶಿವ ದಂಪತಿಗಳ ಆಜ್ಞಾನುಸಾರವಾಗಿ ನನ್ನ ಇಷ್ಟಾರ್ಥಗಳನ್ನು ಕೊಡಲಿ.

೪೭-೪೮. ವಾಮದೇವ, ಜ್ಯೇಷ್ಠ, ರುದ್ರ, ಕಾಲ, ಕಲವಿಕರಣ, ಬಲ ವಿಕರಣ, ಬಲಪ್ರಮಥನ, ಸರ್ವಭೂತದಮನ ಎಂಬ ಎಂಟುಮಂದಿ ರುದ್ರರೂ, ಇವರ ಸಂಬಂಧವಾದ ಅಷ್ಟಶಕ್ತಿಗಳೂ ಶಿವದಂಪತಿಗಳ ಅಪ್ಪಣೆಯಿಂದ ನನ್ನ ಇಷ್ಟಾರ್ಥಗಳನ್ನು ಕೊಡಲಿ.

೪೯-೫೦. ಎರಡನೆಯ ಆವರಣದಲ್ಲಿ ಪೂಜೆಮಾಡಿದ ಅನಂತ, ಸೂಕ್ಷ್ಮ, ಶಿವ, ಏಕನೇತ್ರ, ಏಕರುದ್ರ, ತ್ರಿಮೂರ್ತಿ, ಶ್ರೀಕಂಠ, ಶಿಖಂಡಕ ಇವರೂ ಇವರ ಅಷ್ಟಶಕ್ತಿಗಳೂ ಶಿವದಂಪತಿಗಳ ಅಪ್ಪಣೆಯಿಂದ ನನ್ನ ಇಷ್ಟಾರ್ಥಗಳನ್ನು ಕೊಡಲಿ-

೫೧-೫೨. ಭವ, ಶರ್ವ ಮುಂತಾದ ಅಷ್ಟಮೂರ್ತಿಗಳೂ, ಅವರ ಶಕ್ತಿ ಗಳೂ, ಮಹಾದೇವನೇ ಮೊದಲಾದ ಏಕಾದಶರುದ್ರಮೂರ್ತಿಗಳೂ ಅವರ ಶಕ್ತಿ

ಶಕ್ತಿಭಿಸ್ಸಹಿತಾಸ್ಸರ್ವೇ ತೃತೀಯಾವರಣೇ ಸ್ಥಿತಾಃ ।
ಸತ್ಕೃತ್ಯ ಶಿವಯೋರಾಜ್ಞಾಂ ದಿಶೇತ ಫಲಮೀಪ್ಸಿತಂ ॥ ೫೨ ॥

ವೃಷರಾಜೋ ಮಹಾತೇಜಾ ಮಹಾಮೇಘಸಮಸ್ವನಃ ।
ಮೇರುಮಂದರಕೈಲಾಸಹಿಮಾದ್ರಿಶಿಖರೋಪಮಃ ॥ ೫೩ ॥

ಸಿತಾಭ್ರಶಿಖರಾಕಾರಃ ಕಕುದಾ ಪರಿಶೋಭಿತಃ ।
ಮಹಾಭೋಗೀಂದ್ರಕಲ್ಪೇನ ವಾಲೇನ ಚ ವಿರಾಜಿತಃ ॥ ೫೪ ॥

ರಕ್ತಾಸ್ಯಶೃಂಗಚರಣೋ ರಕ್ತಪ್ರಾಯವಿಲೋಚನಃ ।
ಪೀವರೋನ್ನತಸರ್ವಾಂಗಸ್ಸುಚಾರುಗಮನೋಜ್ಜ್ವಲಃ ॥ ೫೫ ॥

ಪ್ರಶಸ್ತಲಕ್ಷಣಶ್ಶ್ರೀಮಾನ್ಪ್ರಜ್ವಲನ್ಮಣಿಭೂಷಣಃ ।
ಶಿವಪ್ರಿಯಃ ಶಿವಾಸಕ್ತಃ ಶಿವಯೋರ್ಧ್ವಜವಾಹನಃ ॥ ೫೬ ॥

---

ಗಳೂ ಮೂರನೆಯ ಆವರಣದಲ್ಲಿದ್ದು ಶಿವದಂಪತಿಗಳ ಆಜ್ಞೆಯನ್ನು ಗೌರವಿಸಿ ಇಷ್ಟಾರ್ಥವನ್ನುಂಟುಮಾಡಲಿ.

೫೩-೫೭. ಶಿವದಂಪತಿಗಳಿಗೆ ವಾಹನವಾದ ವೃಷರಾಜನು ನನ್ನ ಇಷ್ಟಾರ್ಥವನ್ನು ನೆರವೇರಿಸಲಿ. ಆ ವೃಷರಾಜನು ಮೇರು, ಮಂದರ, ಕೈಲಾಸ ಪರ್ವತ, ಹಿಮವತ್ಪರ್ವತ ಇವುಗಳ ಶಿಖರದಂತೆ ಎತ್ತರವಾದ ಭುಜದಿಂದ ಶೋಭಿಸುತ್ತಿರುವನು. ಮಹಾತೇಜಸ್ವಿಯಾದ ಆದಿಶೇಷನಿಗೆ ಸಮಾನವಾದ ಬಾಲದಿಂದಲೂ, ಕೆಂಪು ಬಣ್ಣದಿಂದ ಹೊಳೆಯುತ್ತಿರುವ ಬಾಯಿ, ಕೊಂಬು, ಕಾಲುಗಳು, ಕಣ್ಣುಗಳು ಮೊದಲಾದ ಪುಷ್ಟವಾದ ಸಕಲಾವಯವಗಳಿಂದಲೂ ಒಳ್ಳೆಯ ನಡೆಗೆಯಿಂದಲೂ ಒಪ್ಪುತ್ತಿರುವನು. ಥಳಥಳಿಸುತ್ತಿರುವ ದಿವ್ಯರತ್ನಾಭರಣಗಳನ್ನೂ ಧರಿಸಿರುವನು. ಈ ದೇವನಿಗೆ ಶಿವನಲ್ಲಿ ಬಹು ಭಕ್ತಿಯಿರುವುದು. ಶಿವನಿಗೆ ಅತ್ಯಂತ ಪ್ರೀತಿಪಾತ್ರನಾದವನು. ಶಿವನಧ್ವಜಕ್ಕೆ ಭೂಷಣನಾಗಿರುವನು. ತನ್ನ ಪಾದವನ್ನಿಡುವುದರಿಂದ ಆ ಪ್ರದೇಶಗಳನ್ನು ಪರಿಶುದ್ಧಿಮಾಡುತ್ತಾ ಪ್ರಕಾಶವಾದ ಶೂಲಾಯುಧವನ್ನು ಧರಿಸಿ ಬೆಳಗುತ್ತಿರುವನು. ಇಂತಹ ಗೋ

ತಥಾ ತಚ್ಚರಣನ್ಯಾಸಸಾವಿತಾಪರವಿಗ್ರಹಃ ।
ಗೋರಾಜಪುರುಷಃ ಶ್ರೀಮಾನ್ ಶ್ರೀಮಚ್ಛೂಲವರಾಯುಧಃ ।
ತಯೋರಾಜ್ಞಾಂ ಪುರಸ್ಕೃತ್ಯ ಸ ಮೇ ಕಾಮಂ ಪ್ರಯಚ್ಛತು ॥ ೫೭ ॥

ನಂದೀಶ್ವರೋ ಮಹಾತೇಜಾ ನಗೇಂದ್ರತನಯಾತ್ಮಜಃ ।
ಸನಾರಾಯಣಕೈರ್ದೇವೈರ್ನಿತ್ಯಮಭ್ಯರ್ಚ್ಯ ವಂದಿತಃ ॥ ೫೮ ॥

ಶರ್ವಸ್ಯಾಂತಃಪುರದ್ವಾರಿ ಸಾರ್ಧಂ ಪರಿಜನೈಸ್ಸ್ಥಿತಃ ।
ಸರ್ವೇಶ್ವರಸಮಪ್ರಖ್ಯಸ್ಸರ್ವಾಸುರವಿಮರ್ದನಃ ॥ ೫೯ ॥

ಸರ್ವೇಷಾಂ ಶಿವಧರ್ಮಾಣಾಮಧ್ಯಕ್ಷತ್ವೇಽಭಿಷೇಚಿತಃ ।
ಶಿವಪ್ರಿಯಶ್ಶಿವಾಸಕ್ತಃ ಶ್ರೀಮಚ್ಛೂಲವರಾಯುಧಃ ॥ ೬೦ ॥

ಶಿವಾಶ್ರಿತೇಷು ಸಂಸಕ್ತಸ್ತ್ವನುರಕ್ತಶ್ಚ ತೈರಪಿ ।
ಸತ್ಕೃತ್ಯ ಶಿವಯೋರಾಜ್ಞಾಂ ಸ ಮೇ ಕಾಮಂ ಪ್ರಯಚ್ಛತು ॥ ೬೧ ॥

---

ರಾಜನಾದ ವೃಷಭನು ಶಿವದಂಪತಿಗಳ ಆಜ್ಞಾನುಸಾರವಾಗಿ ನನ್ನ ಇಷ್ಟಾರ್ಥಗಳನ್ನು ಕೊಡಲಿ.

೫೮–೬೧. ಪಾರ್ವತಿಯ ಪುತ್ರನೂ ನಾರಾಯಣನೇ ಮೊದಲಾದ ದೇವತೆಗಳಿಂದ ಪೂಜಿಸಲ್ಪಡುವವನೂ ಮಹಾತೇಜಸ್ವಿಯೂ ಆದ ನಂದೀಶ್ವರನು ಶಿವನ ಅಂತಃಪುರವಬಾಗಿಲಿನಲ್ಲಿ ತನ್ನ ಪರಿಜನರೊಡನೆ ಇರುವನು. ಇವನು ಸರ್ವೇಶ್ವರನಿಗೆ ಸಮಾನನೂ, ಸಕಲ ರಾಕ್ಷಸರನ್ನೂ ನಾಶಮಾಡುವವನೂ, ಸಮಸ್ತ ಶಿವಧರ್ಮಗಳಿಗೂ ಅಧಿಪತಿಯಾಗಿಯೂ ಇರುವನು. ಶಿವನಲ್ಲೇ ನೆಟ್ಟ ಮನಸ್ಸುಳ್ಳವನಾಗಿ ಶಿವನಿಗೆ ಪ್ರೀತಿಪಾತ್ರನಾಗಿರುವನು. ತನ್ನ ಹಸ್ತದಲ್ಲಿ ಶೂಲಾಯುಧವನ್ನು ಧರಿಸಿರುವನು. ಶಿವಭಕ್ತರಲ್ಲಿ ತನಗಿರುವ ಪ್ರೀತಿಯಿಂದ ಯಾವಾಗಲೂ ಅವರೊಡನಿರುವ ಮಹಾ ತೇಜಸ್ವಿಯಾದ ನಂದೀಶ್ವರನು ಶಿವ ದಂಪತಿಗಳ ಆಜ್ಞಾನುಸಾರ ನನ್ನ ಇಷ್ಟಾರ್ಥಗಳನ್ನು ಕೊಡಲಿ.

ಮಹಾಕಾಲೋ ಮಹಾಬಾಹುರ್ಮಹಾದೇವ ಇವಾಪರಃ ।
ಮಹಾದೇವಾಶ್ರಿತಾನಾಂ ತು ನಿತ್ಯಮೇವಾಭಿರಕ್ಷತು ॥ ೬೨ ॥

ಶಿವಪ್ರಿಯಶ್ಶಿವಾಸಕ್ತಶ್ಶಿವಯೋರರ್ಚಕಸ್ಸದಾ ।
ಸತ್ಕೃತ್ಯ ಶಿವಯೋರಾಜ್ಞಾಂ ಸ ಮೇ ದಿಶತು ಕಾಂಕ್ಷಿತಂ ॥ ೬೩ ॥

ಸರ್ವಶಾಸ್ತ್ರಾರ್ಥತತ್ತ್ವಜ್ಞಃ ಶಾಸ್ತಾ ವಿಷ್ಣೋಃ ಪರಾ ತನುಃ ।
ಮಹಾಮೋಹಾತ್ಮತನಯೋ ಮಧುಮಾಂಸಾಸವಪ್ರಿಯಃ ।
ತಯೋರಾಜ್ಞಾಂ ಪುರಸ್ಕೃತ್ಯ ಸ ಮೇ ಕಾಮಂ ಪ್ರಯಚ್ಛತು ॥ ೬೪ ॥

ಬ್ರಹ್ಮಾಣೀ ಚೈವ ಮಾಹೇಶೀ ಕೌಮಾರೀ ವೈಷ್ಣವೀ ತಥಾ ।
ವಾರಾಹೀ ಚೈವ ಮಾಹೇಂದ್ರೀ ಚಾಮುಂಡಾ ಚಂಡವಿಕ್ರಮಾ ॥ ೬೫ ॥

ಏತಾ ವೈ ಮಾತರಸ್ಸಪ್ತ ಸರ್ವಲೋಕಸ್ಯ ಮಾತರಃ ।
ಪ್ರಾರ್ಥಿತಂ ಮೇ ಪ್ರಯಚ್ಛಂತು ಪರಮೇಶ್ವರಶಾಸನಾತ್ ॥ ೬೬ ॥

---

೬೨-೬೩. ಎರಡನೆಯ ಮಹಾದೇವನಂತೆ ಪರಾಕ್ರಮದಿಂದ ಬೆಳಗುತ್ತಿರುವ ಮಹಾಕಾಲನು ಶಿವಭಕ್ತರನ್ನು ಯಾವಾಗಲೂ ರಕ್ಷಿಸುತ್ತಾ ಶಿವನಿಗೆ ಪ್ರೀತಿಪಾತ್ರನಾಗಿ ಭಕ್ತಿಯಿಂದ ಶಿವದಂಪತಿಗಳನ್ನು ಪೂಜಿಸುತ್ತಿರುವನು. ಇಂತಹ ಮಹಾಕಾಲನು ಶಿವದಂಪತಿಗಳ ಆಜ್ಞಾನುಸಾರವಾಗಿ ನನ್ನ ಇಷ್ಟವನ್ನು ನೆರವೇರಿಸಲಿ.

೬೪. ಶಾಸ್ತಾಕುಮಾರನು ವಿಷ್ಣುವಿನ ಒಂದು ಅವತಾರವು. ಇವನು ಸಮಸ್ತ ಶಾಸ್ತ್ರಗಳ ತತ್ತ್ವವನ್ನೂ ಚೆನ್ನಾಗಿ ತಿಳಿದಿರುವನು. ಮಹಾಮೋಹನ ಮಗನು. ಮದ್ಯಮಾಂಸಾಸಕ್ತನು. ಇಂತಹ ಈ ಶಾಸ್ತಾಕುಮಾರನು ಶಿವದಂಪತಿಗಳ ಆಜ್ಞಾನುಸಾರವಾಗಿ ನನ್ನ ಇಷ್ಟಾರ್ಥವನ್ನು ಕೊಡಲಿ.

೬೫-೬೬. ಸಮಸ್ತ ಲೋಕಗಳಿಗೂ ತಾಯಿಯರಾದ ಬ್ರಾಹ್ಮೀ ಮಾಹೇಶ್ವರೀ ಕೌಮಾರೀ ವೈಷ್ಣವೀ ವಾರಾಹೀ ಇಂದ್ರಾಣೀ ಚಾಮುಂಡಾ ಎಂಬ ಸಪ್ತಮಾತೃಕೆಗಳು ಪರಮೇಶ್ವರಾಜ್ಞೆಯಿಂದ ನನ್ನ ಇಷ್ಟವನ್ನು ಕೊಡಲಿ.

**ಮತ್ತಮಾತಂಗವದನೋ ಗಂಗೋಮಾಶಂಕರಾತ್ಮಜಃ ।**
**ಆಕಾಶದೇಹೋ ದಿಗ್ಬಾಹುಸ್ಸೋಮಸೂರ್ಯಾಗ್ನಿಲೋಚನಃ ॥ ೬೭ ॥**

**ಐರಾವತಾದಿಭಿರ್ದಿವ್ಯೈರ್ದಿಗ್ಗಜೈರ್ನಿತ್ಯಮರ್ಚಿತಃ ।**
**ಶಿವಜ್ಞಾನಮದೋದ್ಭಿನ್ನಸ್ತ್ರಿದಶಾನಾಮವಿಘ್ನಕೃತ್ ॥ ೬೮ ॥**

**ವಿಘ್ನಕೃಚ್ಚಾಸುರಾದೀನಾಂ ವಿಘ್ನೇಶಃ ಶಿವಭಾವಿತಃ ।**
**ಸತ್ಕೃತ್ಯ ಶಿವಯೋರಾಜ್ಞಾಂ ಸ ನೋ ದಿಶತು ಕಾಂಕ್ಷಿತಂ ॥ ೬೯ ॥**

**ಷಣ್ಮುಖಶ್ಶಿವಸಂಭೂತಃ ಶಕ್ತಿವಜ್ರಧರಃ ಪ್ರಭುಃ ।**
**ಅಗ್ನೇಶ್ಚ ತನಯೋ ದೇವೋ ಹ್ಯಪರ್ಣಾತನಯಃ ಪುನಃ ॥ ೭೦ ॥**

**ಗಂಗಾಯಾಶ್ಚ ಗಣಾಂಬಾಯಾಃ ಕೃತ್ತಿಕಾನಾಂ ತಥೈವ ಚ ।**
**ವಿಶಾಖೇನ ಚ ಶಾಖೇನ ನೈಗಮೇಯೇನ ಚಾವೃತಃ ॥ ೭೧ ॥**

---

೬೭-೬೯. ವಿಘ್ನೇಶ್ವರನು ಮದಿಸಿದ ಆನೆಯಂತಿರುವ ಮುಖವುಳ್ಳವನು. ಗಂಗಾ ಉಮಾದೇವಿ ಶಿವ ಇವರ ಪುತ್ರನು. ಇವನಿಗೆ ಆಕಾಶವೇ ಶರೀರವು. ದಿಕ್ಕುಗಳೇ ತೋಳುಗಳು. ಸೂರ್ಯಚಂದ್ರಾದಿಗಳೇ ಕಣ್ಣುಗಳು. ಐರಾವತವೇ ಮೊದಲಾದ ಸಮಸ್ತ ದಿಗ್ಗಜಗಳಿಂದ ಪೂಜಿಸಲ್ಪಡುವನು. ಶಿವಸಂಬಂಧವಾದ ಜ್ಞಾನದಿಂದ ಮದವನ್ನು ನಾಶಮಾಡಿಕೊಂಡ ದೇವತೆಗಳಿಗೆ ವಿಘ್ನವನ್ನು ಪರಿಹರಿಸುವನು. ಅಸುರರಿಗೆ ವಿಘ್ನವನ್ನುಂಟುಮಾಡುವನು. ಶಿವನಿಗೆ ಪ್ರೀತಿಪಾತ್ರನಾದ ಇಂತಹ ವಿಘ್ನೇಶ್ವರನು ಶಿವದಂಪತಿಗಳ ಆಜ್ಞಾನುಸಾರವಾಗಿ ಇಷ್ಟಾರ್ಥವನ್ನು ಕೊಡಲಿ.

೭೦-೭೪. ಶಿವನಿಂದ ಉತ್ಪನ್ನನಾದ ಕುಮಾರಸ್ವಾಮಿಯು ಶಕ್ತಿಯನ್ನೂ ವಜ್ರಾಯುಧವನ್ನೂ ಧರಿಸಿ ಪ್ರಕಾಶಿಸುತ್ತಿರುವನು. ಈ ದೇವನು ಮೊದಲು ಅಗ್ನಿಗೆ ಮಗನು, ಬಳಿಕ ಪಾರ್ವತಿಯ ಪುತ್ರನು, ಬಳಿಕ ಗಂಗಾ ಗಣಾಂಬಾ ಕೃತ್ತಿಕಾ ಇವರ ಪುತ್ರನು. ಸಮಸ್ತ ವೇದಶಾಖೆಗಳನ್ನೂ ತಿಳಿದಿರುವನು ವಿಶಾಖನೆಂಬ ಹೆಸರಿನಿಂದ ಪ್ರಸಿದ್ಧನಾದವನು. ಇಂದ್ರನನ್ನು ಜಯಿಸಿ ಚಂದ್ರನನ್ನು ಸೇನಾಪತಿಯನ್ನಾಗಿ ಮಾಡಿಕೊಂಡಿದ್ದ ತಾರಕಾಸುರನನ್ನು ಜಯಿಸಿ

ಇಂದ್ರಜಿಚ್ಚಂದ್ರಸೇನಾನೀಸ್ತಾರಕಾಸುರಜಿತ್ತಥಾ ।
ಶೈಲಾನಾಂ ಮೇರುಮುಖ್ಯಾನಾಂ ವೇಧಕಶ್ಚ ಸ್ವತೇಜಸಾ ॥ ೭೨ ॥

ತಪ್ತಚಾಮೀಕರಪ್ರಖ್ಯಃ ಶತಪತ್ರದಲೇಕ್ಷಣಃ ।
ಕುಮಾರಸ್ತು ಕುಮಾರಾಣಾಂ ರೂಪೋದಾಹರಣಂ ಮಹತ್ ॥ ೭೩ ॥

ಶಿವಪ್ರಿಯಶ್ಶಿವಾಸಕ್ತಃ ಶಿವಪಾದಾರ್ಚಕಃ ಸದಾ ।
ಸತ್ಕೃತ್ಯ ಶಿವಯೋರಾಜ್ಞಾಂ ಸ ಮೇ ದಿಶತು ಕಾಂಕ್ಷಿತಂ ॥ ೭೪ ॥

ಜ್ಯೇಷ್ಠಾ ವರಿಷ್ಠಾ ವರದಾ ಶಿವಯೋರ್ಯಜನೇ ರತಾ ।
ತಯೋರಾಜ್ಞಾಂ ಪುರಸ್ಕೃತ್ಯ ಸಾ ಮೇ ದಿಶತು ಕಾಂಕ್ಷಿತಂ ॥ ೭೫ ॥

ತ್ರೈಲೋಕ್ಯವಂದಿತಾ ಸಾಕ್ಷಾದುಲ್ಕಾಕಾರಾ ಗಣಾಂಬಿಕಾ ।
ಜಗತ್ಸೃಷ್ಟಿವಿವೃಧ್ಯರ್ಥಂ ಬ್ರಹ್ಮಣಾಭ್ಯರ್ಥಿತಾ ಶಿವಾತ್ ॥ ೭೬ ॥

---

ದವನು. ತನ್ನ ತೇಜಸ್ಸಿನಿಂದ ಮೇರುಪರ್ವತವೇ ಮೊದಲಾದ ಪರ್ವತಗಳನ್ನು ತಿರಸ್ಕರಿಸುತ್ತಾ, ಚಿನ್ನದಂತಿರುವ ಶರೀರಕಾಂತಿಯಿಂದಲೂ ಕಮಲದಂತಿರುವ ಕಣ್ಣುಗಳಿಂದಲೂ ಒಪ್ಪುತ್ತಿರುವನು. ಯಾವಾಗಲೂ ಕುಮಾರಾವಸ್ಥೆಯಲ್ಲಿರುವನು. ಶಿವಭಕ್ತನಾಗಿ ಶಿವನ ಪಾದವನ್ನು ಯಾವಾಗಲೂ ಪೂಜಿಸುತ್ತಿರುವನು. ಶಿವನಿಗೆ ಅತ್ಯಂತ ಪ್ರೀತಿಪಾತ್ರನು. ಈ ಪ್ರಕಾರದಿಂದಿರುವ ಆರುಮುಖಗಳುಳ್ಳ ಕುಮಾರಸ್ವಾಮಿಯು ಶಿವದಂಪತಿಗಳ ಆಜ್ಞೆಯನ್ನು ಗೌರವಿಸಿ ನನ್ನ ಇಷ್ಟಗಳನ್ನು ನೆರವೇರಿಸಲಿ.

೭೫. ಭಕ್ತರಿಗೆ ವರವನ್ನು ಕೊಡುವವಳೂ ಅತ್ಯಂತಶ್ರೇಷ್ಠಳೂ ಶಿವದಂಪತಿಗಳನ್ನು ಪೂಜಿಸುವುದರಲ್ಲಿ ಆಸಕ್ತಳೂ ಆದ ಜ್ಯೇಷ್ಠಾದೇವಿಯು ಶಿವದಂಪತಿಗಳ ಆಜ್ಞೆಯಿಂದ ನನ್ನ ಇಷ್ಟಾರ್ಥವನ್ನು ನೆರವೇರಿಸಲಿ.

೭೬-೭೯. ಬ್ರಹ್ಮನು ತಾನು ಸೃಷ್ಟಿಸಿದ ಜಗತ್ತು ಅಭಿವೃದ್ಧಿಯನ್ನು ಹೊಂದುವುದಕ್ಕಾಗಿ ಶಿವನನ್ನು ಪ್ರಾರ್ಥಿಸಿದುದರಿಂದ ಶಿವನ ಶಕ್ತಿಸ್ವರೂಪಳಾದ ಶಿವೆಯ ಹುಬ್ಬುಗಳ ಮಧ್ಯಭಾಗದಿಂದ ಕೊಳ್ಳಿಯ ಆಕಾರವಾಗಿ ಹುಟ್ಟಿದ ಗಣಾಂ

ಶಿವಾಯಾಃ ಪ್ರವಿಭಕ್ತಾಯಾ ಭ್ರುವೋರಂತರನಿಸ್ಸೃತಾಃ ।
ದಾಕ್ಷಾಯಣೀ ಸತೀ ಮೇನಾ ತಥಾ ಹೈಮವತೀ ಹ್ಯುಮಾ ॥ ೭೭ ॥

ಕೌಶಿಕ್ಯಾಶ್ಚೈವ ಜನನೀ ಭದ್ರಕಾಲ್ಯಾಸ್ತಥೈವ ಚ ।
ಅಪರ್ಣಾಯಾಶ್ಚ ಜನನೀ ಪಾಟಲಾಯಾಸ್ತಥೈವ ಚ ॥ ೭೮ ॥

ಶಿವಾರ್ಚನರತಾ ನಿತ್ಯಂ ರುದ್ರಾಣೀ ರುದ್ರವಲ್ಲಭಾ ।
ಸತ್ಕೃತ್ಯ ಶಿವಯೋರಾಜ್ಞಾಂ ಸಾ ಮೇ ದಿಶತು ಕಾಂಕ್ಷಿತಂ ॥ ೭೯ ॥

ಚಂಡಃ ಸರ್ವಗಣೇಶಾನಃ ಶಂಭೋರ್ವದನಸಂಭವಃ ।
ಸತ್ಕೃತ್ಯ ಶಿವಯೋರಾಜ್ಞಾಂ ಸ ಮೇ ದಿಶತು ಕಾಂಕ್ಷಿತಂ ॥ ೮೦ ॥

ಪಿಂಗಲೋ ಗಣಪಃ ಶ್ರೀಮಾನ್ಶಿವಾಸಕ್ತಃ ಶಿವಪ್ರಿಯಃ ।
ಆಜ್ಞಯಾ ಶಿವಯೋರೇವ ಸ ಮೇ ಕಾಮಂ ಪ್ರಯಚ್ಛತು ॥ ೮೧ ॥

ಭೃಂಗೀಶೋ ನಾಮ ಗಣಪಃ ಶಿವಾರಾಧನತತ್ಪರಃ ।
ಪ್ರಯಚ್ಛತು ಸ ಮೇ ಕಾಮಂ ಪತ್ಯುರಾಜ್ಞಾಪುರಸ್ಸರಂ ॥ ೮೨ ॥

---

ಬಿಕೆಯು ಮೂರುಲೋಕದ ಜನರಿಂದಲೂ ನಮಸ್ಕರಿಸಲ್ಪಡುತ್ತಿರುವಳು. ಇಂತಹ ಈ ಗಣಾಂಬಿಕೆಯೂ ಮತ್ತು ಶಿವೆಯ ಬೇರೆಬೇರೆ ಅವತಾರಭೇದಗಳಾದ ದಾಕ್ಷಾಯಣೀ ಸತೀ ಮೇನಾ ಹೈಮವತೀ ಉಮಾ ಕೌಶಿಕೀದೇವಿಯ ತಾಯಿ ಭದ್ರಕಾಳಿಯ ತಾಯಿ ಅಪರ್ಣಾ ಪಾಟಲಾ ಇವರ ತಾಯಿಯರು ಇವರೆಲ್ಲರೂ ಶಿವದಂಪತಿಗಳ ಆಜ್ಞೆಯನ್ನು ಗೌರವಿಸಿ ನನ್ನ ಇಷ್ಟಾರ್ಥಗಳನ್ನು ಕೊಡಲಿ.

೮೦. ಶಿವನ ಮುಖದಿಂದ ಹುಟ್ಟಿದ ಸಮಸ್ತ ಗಣಗಳಿಗೂ ಅಧಿಪತಿಯಾದ ಚಂಡನು ಶಿವದಂಪತಿಗಳ ಅಪ್ಪಣೆಯಿಂದ ನನ್ನ ಅಭೀಷ್ಟವನ್ನು ನೆರವೇರಿಸಲಿ.

೮೧-೮೨. ಶಿವನಿಗೆ ಪ್ರೀತಿಪಾತ್ರರೂ, ಶಿವನನ್ನೇ ಪೂಜಿಸುವುದರಲ್ಲಿ ಆಸಕ್ತರೂ ಆದ ಪಿಂಗಲ ಭೃಂಗೀಶ ಎಂಬ ಗಣಪರು ಶಿವದಂಪತಿಗಳ ಅಪ್ಪಣೆಯಿಂದ ನನ್ನ ಇಷ್ಟಾರ್ಥವನ್ನು ಕೊಡಲಿ.

ವೀರಭದ್ರೋ ಮಹಾತೇಜಾ ಹಿಮಕುಂದೇಂದುಸನ್ನಿಭಃ ।
ಭದ್ರಕಾಲೀಪ್ರಿಯೋ ನಿತ್ಯಂ ಮಾತೄಣಾಂ ಚಾಭಿರಕ್ಷಿತಾ ॥ ೮೩ ॥

ಯಜ್ಞಸ್ಯ ಚ ಶಿರೋಹರ್ತಾ ದಕ್ಷಸ್ಯ ಚ ದುರಾತ್ಮನಃ ।
ಉಪೇಂದ್ರೇಂದ್ರಯಮಾದೀನಾಂ ದೇವಾನಾಮಂಗತಕ್ಷಕಃ ॥ ೮೪ ॥

ಶಿವಸ್ಯಾನುಚರಶ್ಶ್ರೀಮಾಞ್ಛಿವಶಾಸನಪಾಲಕಃ ।
ಶಿವಯೋಃ ಶಾಸನಾದೇವ ಸ ಮೇ ದಿಶತು ಕಾಂಕ್ಷಿತಂ ॥ ೮೫ ॥

ಸರಸ್ವತೀ ಮಹೇಶಸ್ಯ ವಾಕ್ಸರೋಜಸಮುದ್ಭವಾ ।
ಶಿವಯೋಃ ಪೂಜನೇ ಸಕ್ತಾ ಸಾ ಮೇ ದಿಶತು ಕಾಂಕ್ಷಿತಂ ॥ ೮೬ ॥

ವಿಷ್ಣೋರ್ವಕ್ಷಸ್ಥಿತಾ ಲಕ್ಷ್ಮೀಃ ಶಿವಯೋಃ ಪೂಜನೇ ರತಾ ।
ಶಿವಯೋಃ ಶಾಸನಾದೇವ ಸಾ ಮೇ ದಿಶತು ಕಾಂಕ್ಷಿತಂ ॥ ೮೭ ॥

ಮಹಾಮೋಟೀ ಮಹಾದೇವ್ಯಾಃ ಪಾದಪೂಜಾಪರಾಯಣಾ ।
ತಸ್ಯಾ ಏವ ನಿಯೋಗೇನ ಸಾ ಮೇ ದಿಶತು ಕಾಂಕ್ಷಿತಂ ॥ ೮೮ ॥

---

೮೩-೮೫. ಮಹಾತೇಜಸ್ವಿಯೂ, ಮಲ್ಲಿಗೆಯ ಹೂ ಚಂದ್ರ ಇವರಂತೆ ಶುಭ್ರನಾದವನೂ ಭದ್ರಕಾಳಿಗೆ ಪ್ರೀತಿಪಾತ್ರನಾದವನೂ, ಬ್ರಾಹ್ಮ್ಯಾದಿ ಸಪ್ತ ಮಾತೃಗಳನ್ನು ರಕ್ಷಿಸಿದವನೂ, ಯಜ್ಞದ ಮತ್ತು ದಕ್ಷನ ಶಿರಸ್ಸನ್ನು ನಾಶಮಾಡಿದವನೂ, ಉಪೇಂದ್ರ ಇಂದ್ರ ಯಮ ಮುಂತಾದ ದೇವತೆಗಳ ಅಂಗಗಳನ್ನು ಕತ್ತರಿಸಿದವನೂ, ಶಿವನ ಸೇವಕನೂ, ಶಿವನ ಆಜ್ಞೆಯನ್ನು ನಡೆಸುವವನೂ ಆದ ವೀರಭದ್ರನು ಶಿವದಂಪತಿಗಳ ಆಜ್ಞೆಯಿಂದ ನನ್ನ ಇಷ್ಟವನ್ನು ಪೂರ್ತಿಮಾಡಲಿ.

೮೬-೮೮. ಶಿವದಂಪತಿಗಳ ಪೂಜೆಯಲ್ಲಿ ಆಸಕ್ತರಾದ, ಮಹೇಶ್ವರನ ವಾಕ್ಯವೆಂಬ ಕಮಲದಲ್ಲಿ ಹುಟ್ಟಿದ ಸರಸ್ವತಿಯೂ, ವಿಷ್ಣುವಿನ ಎದೆಯಲ್ಲಿ ವಾಸಮಾಡುವ ಮಹಾಲಕ್ಷ್ಮಿಯೂ, ಮಹಾದೇವಿಯ ಪಾದಪೂಜಾಸಕ್ತಳಾದ ಮಹಾಮೋಟಿಯೂ, ಶಿವದಂಪತಿಗಳ ಅಪ್ಪಣೆಯಿಂದ ನನ್ನ ಇಷ್ಟಾರ್ಥಗಳನ್ನು ಕೊಡಲಿ.

**ಕೌಶಿಕೀ ಸಿಂಹಮಾರೂಢಾ ಪಾರ್ವತ್ಯಾಃ ಪರಮಾ ಸುತಾ ।**
**ವಿಷ್ಣೋರ್ನಿದ್ರಾ ಮಹಾಮಾಯಾ ಮಹಾಮಹಿಷಮರ್ದಿನೀ ॥ ೮೯ ॥**

**ನಿಶುಂಭಶುಂಭಸಂಹರ್ತ್ರೀ ಮಧುಮಾಂಸಾಸವಪ್ರಿಯಾ ।**
**ಸತ್ಕೃತ್ಯ ಶಾಸನಂ ಮಾತುಸ್ಸಾ ಮೇ ದಿಶತು ಕಾಂಕ್ಷಿತಂ ॥ ೯೦ ॥**

**ರುದ್ರಾ ರುದ್ರಸಮಪ್ರಖ್ಯಾಃ ಪ್ರಮಥಾಃ ಪ್ರಥಿತೌಜಸಃ ।**
**ಭೂತಾಖ್ಯಾಶ್ಚ ಮಹಾವೀರ್ಯಾ ಮಹಾದೇವಸಮಪ್ರಭಾಃ ॥ ೯೧ ॥**

**ನಿತ್ಯಮುಕ್ತಾ ನಿರುಪಮಾ ನಿರ್ದ್ವಂದ್ವಾ ನಿರುಪಪ್ಲವಾಃ ।**
**ಸಶಕ್ತಯಸ್ಸಾನುಚರಾಸ್ಸರ್ವಲೋಕನಮಸ್ಕೃತಾಃ ॥ ೯೨ ॥**

**ಸರ್ವೇಷಾಮೇವ ಲೋಕಾನಾಂ ಸೃಷ್ಟಿಸಂಹರಣಕ್ಷಮಾಃ ।**
**ಪರಸ್ಪರಾನುರಕ್ತಾಶ್ಚ ಪರಸ್ಪರಮನುವ್ರತಾಃ ॥ ೯೩ ॥**

---

೮೯-೯೦. ಪಾರ್ವತಿಯ ಶ್ರೇಷ್ಠ ಪುತ್ರಿಯೂ, ಸಿಂಹಾರೂಢೆಯೂ, ವಿಷ್ಣುವಿನ ನಿದ್ರಾಸ್ವರೂಪಳೂ, ಮಹಾಮಾಯಾಸ್ವರೂಪಳೂ, ಮಹಿಷಾಸುರನನ್ನು ಕೊಂದವಳೂ, ಶುಂಭ ನಿಶುಂಭರೆಂಬ ದೈತ್ಯರನ್ನು ಸಂಹಾರಮಾಡಿದವಳೂ, ಮದ್ಯ ಮಾಂಸಗಳಲ್ಲಿ ಅತ್ಯಂತ ಪ್ರೀತಿಯುಳ್ಳವಳೂ, ಪಾರ್ವತಿಯ ಪ್ರೀತಿಪುತ್ರಿಯೂ, ಆದ ಕೌಶಿಕಿ ಎಂಬ ದೇವತೆಯು ತನ್ನ ತಾಯಿಯಾದ ಪಾರ್ವತಿಯ ಅಪ್ಪಣೆಯಿಂದ ನನ್ನ ಇಷ್ಟಾರ್ಥವನ್ನು ಕೊಡಲಿ.

೯೧-೯೩. ರುದ್ರನಿಗೆ ಸಮಾನರಾದ ಏಕಾದಶರುದ್ರರೂ, ಪ್ರಸಿದ್ಧಪರಾಕ್ರಮಿಗಳಾದ ಪ್ರಮಥರೂ, ಮಹಾಪರಾಕ್ರಮಿಗಳೂ ಮಹಾದೇವನಿಗೆ ಸಮಾನವಾದ ಕಾಂತಿಯಿಂದ ಕೂಡಿದವರೂ ಆದ ಭೂತಗಣಗಳೂ, ನನ್ನ ಇಷ್ಟವನ್ನು ನೆರವೇರಿಸಲಿ. ಇವರು ಯಾವಾಗಲೂ ಮುಕ್ತಿಸ್ವರೂಪರೂ, ಅಸಮಾನರೂ, ಸುಖದುಃಖಾದಿದ್ವಂದ್ವಗಳಿಲ್ಲದವರೂ, ಯಾವ ಉಪದ್ರವಗಳೂ ಇಲ್ಲದವರೂ, ಆಗಿರುವರು. ತಮ್ಮ ತಮ್ಮ ಶಕ್ತಿದೇವಿಯರಿಂದಲೂ, ಸೇವಕರಿಂದಲೂ, ಕೂಡಿ ಸಮಸ್ತಜನರಿಂದಲೂ ನಮಸ್ಕರಿಸಲ್ಪಡುವವರು. ಸಮಸ್ತಲೋಕಗಳನ್ನೂ ಸೃಷ್ಟಿ

ಪರಸ್ಪರಮತಿಸ್ನಿಗ್ಧಾಃ ಪರಸ್ಪರನಮಸ್ಕೃತಾಃ ।
ಶಿವಪ್ರಿಯತಮಾ ನಿತ್ಯಂ ಶಿವಲಕ್ಷಣಲಕ್ಷಿತಾಃ ॥ ೯೪ ॥

ಸೌಮ್ಯಾಘೋರಾಸ್ತಥಾ ಮಿಶ್ರಾಶ್ಚಾಂತರಾಲದ್ವಯಾತ್ಮಿಕಾಃ ।
ವಿರೂಪಾಶ್ಚ ಸುರೂಪಾಶ್ಚ ನಾನಾರೂಪಧರಾಸ್ತಥಾ ॥ ೯೫ ॥

ಸತ್ಕೃತ್ಯ ಶಿವಯೋರಾಜ್ಞಾಂ ತೇ ಮೇ ಕಾಮಂ ದಿಶಂತು ವೈ ।
ದೇವ್ಯಾಃ ಪ್ರಿಯಸಖೀವರ್ಗೋ ದೇವೀಲಕ್ಷಣಲಕ್ಷಿತಃ ॥ ೯೬ ॥

ಸಹಿತೋ ರುದ್ರಕನ್ಯಾಭಿಃ ಶಕ್ತಿಭಿಶ್ಚಾಪ್ಯನೇಕಶಃ ।
ತೃತೀಯಾವರಣೇ ಶಂಭೋರ್ಭಕ್ತ್ಯಾ ನಿತ್ಯಂ ಸಮರ್ಚಿತಃ ॥ ೯೭ ॥

ಸತ್ಕೃತ್ಯ ಶಿವಯೋರಾಜ್ಞಾಂ ಸ ಮೇ ದಿಶತು ಮಂಗಲಂ ।
ದಿವಾಕರೋ ಮಹೇಶಸ್ಯ ಮೂರ್ತಿರ್ದೀಪ್ತಸುಮಂಡಲಃ ॥ ೯೮ ॥

---

ಸುವ ಮತ್ತು ಸಂಹರಿಸುವ ಶಕ್ತಿಯುಳ್ಳವರು. ತಮ್ಮತಮ್ಮಲ್ಲಿ ಒಬ್ಬರನ್ನೊಬ್ಬರು ಅನುಸರಿಸಿ ಪ್ರೀತಿಸಿ ಗೌರವಿಸಿ ಸ್ನೇಹದಿಂದಿರುವವರು. ಯಾವಾಗಲೂ ಶಿವನ ಲಕ್ಷಣಗಳಿಂದ ಕೂಡಿ ಶಿವನಿಗೆ ಪ್ರೀತಿಪಾತ್ರರಾಗಿರುವರು. ಇವರಲ್ಲಿ ಕೆಲವರು ಸೌಮ್ಯಗುಣವುಳ್ಳವರು, ಕೆಲವರು ಮಿಶ್ರಗುಣವುಳ್ಳವರು, ಕೆಲವರು ಸುಂದರರು, ಕೆಲವರು ವಿಕಾರರೂವುಳ್ಳವರು. ಇಂತಹ ಈ ಪ್ರಮಥಗಣಗಳು ಶಿವದಂಪತಿಗಳ ಆಜ್ಞೆಯನ್ನು ಗೌರವಿಸಿ ನನ್ನ ಇಷ್ಟವನ್ನು ನೆರವೇರಿಸಲಿ.

೯೬-೯೭. ದೇವಿಯ ಲಕ್ಷಣಗಳಿಂದ ಕೂಡಿದ, ದೇವಿಯ ಸಖೀಜನರೂ ರುದ್ರಕನ್ಯೆಯರೂ ಅನೇಕ ಶಕ್ತಿದೇವಿಯರೂ ಇವರೆಲ್ಲರೂ ಶಿವನ ತೃತೀಯಾವರಣದಲ್ಲಿ ಯಾವಾಗಲೂ ಪೂಜೆಯನ್ನು ಕೈಗೊಳ್ಳುತ್ತಿರುವರು. ದೇವಿಯ ಪ್ರಿಯಸಖಿಯರ ಈ ಗುಂಪು ಶಿವದಂಪತಿಗಳ ಆಜ್ಞೆಯನ್ನು ಗೌರವಿಸಿ ನನಗೆ ಮಂಗಳವನ್ನುಂಟುಮಾಡಲಿ.

೯೮-೧೦೧. ಮಹೇಶ್ವರನ ಮೂರ್ತಿಸ್ವರೂಪನಾದ ಸೂರ್ಯನು ಪ್ರಕಾಶಿಸುವ ಮಂಡಲಾಕೃತಿಯಿಂದಿರುವನು. ನಿರ್ಗುಣನಾಗಿದ್ದರೂ ಸತ್ವರಜಸ್ತಮೋ

ನಿರ್ಗುಣೋ ಗುಣಸಂಕೀರ್ಣಸ್ತಥೈವ ಗುಣಕೇವಲಃ ।
ಅವಿಕಾರಾತ್ಮಕಶ್ಚಾದ್ಯ ಏಕಸ್ಸಾಮಾನ್ಯವಿಕ್ರಿಯಃ ॥ ೯೯ ॥

ಅಸಾಧಾರಣಕರ್ಮಾ ಚ ಸೃಷ್ಟಿಸ್ಥಿತಿಲಯಕ್ರಮಾತ್ ।
ಏವಂ ತ್ರಿಧಾ ಚತುರ್ಧಾ ಚ ವಿಭಕ್ತಃ ಪಂಚಧಾ ಪುನಃ ॥ ೧೦೦ ॥

ಚತುರ್ಥಾವರಣೇ ಶಂಭೋಃ ಪೂಜಿತಶ್ಚಾನುಗೈಸ್ಸಹ ।
ಶಿವಪ್ರಿಯಃ ಶಿವಾಸಕ್ತಃ ಶಿವಪಾದಾರ್ಚನೇ ರತಃ ॥ ೧೦೧ ॥

ಸತ್ಕೃತ್ಯ ಶಿವಯೋರಾಜ್ಞಾಂ ಸ ಮೇ ದಿಶತು ಮಂಗಲಂ ।
ದಿವಾಕರಷಡಂಗಾನಿ ದೀಪ್ತಾದ್ಯಾಶ್ಚಾಷ್ಟಶಕ್ತಯಃ ॥ ೧೦೨ ॥

ಆದಿತ್ಯೋ ಭಾಸ್ಕರೋ ಭಾನೂ ರವಿಶ್ಚೇತ್ಯನುಪೂರ್ವಶಃ ।
ಅರ್ಕೋ ಬ್ರಹ್ಮಾ ತಥಾ ರುದ್ರೋ ವಿಷ್ಣುಶ್ಚಾದಿತ್ಯಮೂರ್ತಯಃ ॥ ೧೦೩ ॥

ವಿಸ್ತರಾ ಸುತರಾ ಬೋಧಿನ್ಯಾಪ್ಯಾಯಿನ್ಯಪರಾ ಪುನಃ ।
ಉಷಾ ಪ್ರಭಾ ತಥಾ ಪ್ರಾಜ್ಞಾ ಸಂಧ್ಯಾ ಚೇತ್ಯಪಿ ಶಕ್ತಯಃ ॥ ೧೦೪ ॥

---

ಗುಣಗಳಿಂದ ಕೂಡಿ ಕೇವಲ ಗುಣಸ್ವರೂಪನಾಗಿರುವನು. ಸ್ವಭಾವತಃ ವಿಕಾರವಿಲ್ಲದವನಾದರೂ, ಸೃಷ್ಟಿಕಾಲದಲ್ಲಿ ಸಾಮಾನ್ಯವಾದ ವಿಕಾರಗಳಿಂದ ಕೂಡಿದವನಾಗಿ ಪ್ರಪಂಚದ ಸೃಷ್ಟಿ ಸ್ಥಿತಿ ಸಂಹಾರಗಳನ್ನು ಮಾಡುತ್ತಿರುವನು. ಶಿವನ ನಾಲ್ಕನೆಯ ಆವರಣದಲ್ಲಿ ಪೂಜೆಯನ್ನು ಸ್ವೀಕರಿಸುತ್ತಾ ಶಿವನಿಗೆ ಪ್ರೀತಿಪಾತ್ರನಾಗಿಯೂ ಶಿವಭಕ್ತಿಯುಕ್ತನಾಗಿಯೂ, ಅವನ ಪಾದಪೂಜೆಯಲ್ಲಾಸಕ್ತನಾಗಿಯೂ, ಇರುವ ಸೂರ್ಯನು ಶಿವದಂಪತಿಗಳ ಆಜ್ಞೆಯಿಂದ ನನಗೆ ಮಂಗಳವನ್ನುಂಟುಮಾಡಲಿ.

೧೦೨-೧೦೫. ಸೂರ್ಯನ ಆರು ಅಂಗದೇವತೆಗಳು, ದೀಪ್ತಾದಿ ಎಂಟು ಶಕ್ತಿಗಳು, ಆದಿತ್ಯ, ಭಾಸ್ಕರ, ಭಾನು, ರವಿ, ಅರ್ಕ, ಬ್ರಹ್ಮಾ, ರುದ್ರ, ವಿಷ್ಣು, ಎಂಬ ಅಷ್ಟಮೂರ್ತಿಗಳು, ವಿಸ್ತರಾ, ಸುತರಾ, ಬೋಧಿನೀ, ಆಪ್ಯಾಯಿನೀ, ಉಷಾ, ಪ್ರಭಾ, ಪ್ರಾಜ್ಞಾ, ಸಂಧ್ಯಾ, ಎಂಬ ಶಕ್ತಿದೇವತೆಗಳು, ಚಂದ್ರನೇ

ಸೋಮಾದಿಕೇತುಪರ್ಯಂತಾ ಗ್ರಹಾಶ್ಚ ಶಿವಭಾವಿತಾಃ ।
ಶಿವಯೋರಾಜ್ಞಯಾ ನುನ್ನಾ ಮಂಗಲಂ ಪ್ರದಿಶಂತು ಮೇ ॥ ೧೦೫ ॥

ಅಥವಾ ದ್ವಾದಶಾದಿತ್ಯಾಸ್ತಥಾ ದ್ವಾದಶ ಶಕ್ತಯಃ ।
ಋಷಯೋ ದೇವಗಂಧರ್ವಾಃ ಪನ್ನಗಾಪ್ಸರಸಾಂ ಗಣಾಃ ॥ ೧೦೬ ॥

ಗ್ರಾಮಣ್ಯಶ್ಚ ತಥಾ ಯಕ್ಷಾ ರಾಕ್ಷಸಾಶ್ಚಾಸುರಾಸ್ತಥಾ ।
ಸಪ್ತ ಸಪ್ತಗಣಾಶ್ಚೈತೇ ಸಪ್ತಚ್ಛಂದೋಮಯಾ ಹಯಾಃ ॥ ೧೦೭ ॥

ವಾಲಿಖಿಲ್ಯಾದಯಶ್ಚೈವ ಸರ್ವೇ ಶಿವಪದಾರ್ಚಕಾಃ ।
ಸತ್ಕೃತ್ಯ ಶಿವಯೋರಾಜ್ಞಾಂ ಮಂಗಲಂ ಪ್ರದಿಶಂತು ಮೇ ॥ ೧೦೮ ॥

ಬ್ರಹ್ಮಾಥ ದೇವದೇವಸ್ಯ ಮೂರ್ತಿರ್ಭೂಮಂಡಲಾಧಿಪಃ ।
ಚತುಷ್ಷಷ್ಟಿಗುಣೈಶ್ವರ್ಯೋ ಬುದ್ಧಿತತ್ತ್ವೇ ಪ್ರತಿಷ್ಠಿತಃ ॥ ೧೦೯ ॥

ನಿರ್ಗುಣೋ ಗುಣಸಂಕೀರ್ಣಸ್ತಥೈವ ಗುಣಕೇವಲಃ ।
ಅವಿಕಾರಾತ್ಮಕೋದೇವಸ್ತತಸ್ಸಾಧಾರಣಃ ಪುರಃ ॥ ೧೧೦ ॥

---

ಮೊದಲಾಗಿ ಕೇತುಪರ್ಯಂತವಾದ ಗ್ರಹಗಳು ಇವರೆಲ್ಲರೂ ಶಿವದಂಪತಿಗಳ ಆಜ್ಞೆಯಿಂದ ಪ್ರೇರಿತರಾಗಿ ನನಗೆ ಮಂಗಳವನ್ನುಂಟುಮಾಡಲಿ.

೧೦೬-೧೦೮. ಅಥವಾ ದ್ವಾದಶಾದಿತ್ಯರೂ, ಅವರ ಶಕ್ತಿಗಳೂ, ಋಷಿಗಳು, ದೇವತೆಗಳು, ಗಂಧರ್ವರು, ಪನ್ನಗರು, ಅಪ್ಸರರು, ಗ್ರಾಮಣಿಗಳು, ಯಕ್ಷರು, ರಾಕ್ಷಸರು, ಅಸುರರು, ಈ ಬಗೆಯ ಏಳೇಳು ಗುಂಪುಗಳು ಏಳು ಛಂದಸ್ಸಿನ ರೂಪವಾದ ಸೂರ್ಯನ ಕುದುರೆಗಳು, ವಾಲಖಿಲ್ಯರೆಂಬ ಋಷಿಗಳು ಶಿವನ ಪಾದಪೂಜೆಯನ್ನು ಮಾಡುವ ಇವರೆಲ್ಲರೂ ಶಿವದಂಪತಿಗಳ ಅಪ್ಪಣೆಯಿಂದ ನನಗೆ ಮಂಗಳವನ್ನುಂಟುಮಾಡಲಿ.

೧೦೯-೧೧೩. ಬ್ರಹ್ಮನು, ದೇವದೇವನಾದ ಶಿವನ ಒಂದು ಮೂರ್ತಿಯಾಗಿ, ಭೂಮಂಡಲಕ್ಕೆ ಅಧಿಪತಿಯಾಗಿರುವನು. ಅರವತ್ತುನಾಲ್ಕು ಗುಣಗಳಿಂದ ಕೂಡಿದ ಸಂಪತ್ತುಳ್ಳ, ಬುದ್ಧಿತತ್ತ್ವಕ್ಕೆ ಅಭಿಮಾನಿದೇವತೆಯಾಗಿರು

**ಅಸಾಧಾರಣಕರ್ಮಾ ಚ ಸೃಷ್ಟಿಸ್ಥಿತಿಲಯಕ್ರಮಾತ್ ।**
**ಏವಂ ತ್ರಿಧಾ ಚತುರ್ಧಾ ಚ ವಿಭಕ್ತಃ ಪಂಚಧಾ ಪುನಃ　　॥ ೧೧೧ ॥**

**ಚತುರ್ಥಾವರಣೇ ಶಂಭೋಃ ಪೂಜಿತಶ್ಚ ಸಹಾನುಗಃ ।**
**ಶಿವಪ್ರಿಯಃ ಶಿವಾಸಕ್ತಶ್ಶಿವಪಾದಾರ್ಚನೇ ರತಃ　　॥ ೧೧೨ ॥**

**ಸತ್ಕೃತ್ಯ ಶಿವಯೋರಾಜ್ಞಾಂ ಸ ಮೇ ದಿಶತು ಮಂಗಳಂ ।**
**ಹಿರಣ್ಯಗರ್ಭೋ ಲೋಕೇಶೋ ವಿರಾಟ್ಕಾಲಶ್ಚ ಪೂರುಷಃ　　॥ ೧೧೩ ॥**

**ಸನತ್ಕುಮಾರಃ ಸನಕಃ ಸನಂದಶ್ಚ ಸನಾತನಃ ।**
**ಪ್ರಜಾನಾಂ ಪತಯಶ್ಚೈವ ದಕ್ಷಾದ್ಯಾ ಬ್ರಹ್ಮಸೂನವಃ　　॥ ೧೧೪ ॥**

**ಏಕಾದಶ ಸಪತ್ನೀಕಾ ಧರ್ಮಸಂಕಲ್ಪ ಏವ ಚ ।**
**ಶಿವಾರ್ಚನರತಾಶ್ಚೈತೇ ಶಿವಭಕ್ತಿಪರಾಯಣಾಃ　　॥ ೧೧೫ ॥**

---

ವನು. ನಿರ್ಗುಣನೂ, ಗುಣಗಳಿಂದ ಕೂಡಿದವನೂ, ಕೇವಲ ಗುಣಸ್ವರೂಪನೂ, ಆಗಿರುವನು. ನಿರ್ವಿಕಾರಸ್ವರೂಪನೂ, ಸೃಷ್ಟಿ, ಸ್ಥಿತಿ, ಸಂಹಾರರೂಪನಾದ ಸಾಮಾನ್ಯಕಾರ್ಯಗಳನ್ನು ಮಾಡುವವನೂ, ಆದ ಈಬ್ರಹ್ಮನು ಶಿವನ ನಾಲ್ಕನೆಯ ಆವರಣದಲ್ಲಿ ಪೂಜಿಸಲ್ಪಡುತ್ತಾ ಶಿವನಿಗೆ ಪ್ರೀತಿಪಾತ್ರನಾಗಿ ಶಿವನಲ್ಲಿ ನೆಟ್ಟ ಮನಸ್ಸಿನಿಂದ ತನ್ನ ಅನುಚರರೊಡನೆ ಕೂಡಿ ಶಿವನ ಪಾದವನ್ನು ಯಾವಾಗಲೂ ಪೂಜಿಸುತ್ತಿರುವನು. ಇಂತಹ ಈ ಬ್ರಹ್ಮನು ಶಿವದಂಪತಿಗಳ ಅಪ್ಪಣೆಯನ್ನು ಗೌರವಿಸಿ ನನಗೆ ಮಂಗಳವನ್ನುಂಟುಮಾಡಲಿ.

೧೧೩-೧೧೫. ಶಿವನಲ್ಲಿ ಭಕ್ತಿಯುಳ್ಳವರೂ ಶಿವಪೂಜಾಸಕ್ತರೂ ಆದ ಹಿರಣ್ಯಗರ್ಭ, ಲೋಕೇಶ್ವರ, ವಿರಾಟ್ಪುರುಷ, ಕಾಲಪುರುಷ, ಸನತ್ಕುಮಾರ, ಸನಕ, ಸನಂದನ, ಸನಾತನ, ಬ್ರಹ್ಮಪುತ್ರರೂ ಪತ್ನೀಸಹಿತರೂ ಆದ ದಕ್ಷಾದಿ ಹನ್ನೊಂದುಜನ ಪ್ರಜಾಪತಿಗಳು, ಧರ್ಮ, ಸಂಕಲ್ಪ, ಇವರೆಲ್ಲರೂ ಶಿವನ ಆಜ್ಞೆಗೆ ಅಧೀನರಾಗಿ ನನಗೆ ಮಂಗಳವನ್ನುಂಟುಮಾಡಲಿ.

ಶಿವಾಜ್ಞಾವಶಗಾಸ್ಸರ್ವೇ ದಿಶಂತು ಮಮ ಮಂಗಳಂ ।
ಚತ್ವಾರಶ್ಚ ತಥಾ ವೇದಾಸ್ಸೇತಿಹಾಸಪುರಾಣಕಾಃ ॥ ೧೧೬ ॥

ಧರ್ಮಶಾಸ್ತ್ರಾಣಿ ವಿದ್ಯಾಭಿರ್ವೈದಿಕೀಭಿಸ್ಸಮನ್ವಿತಾಃ ।
ಪರಸ್ಪರವಿರುದ್ಧಾರ್ಥಾಃ ಶಿವಪ್ರಕೃತಿಪಾದಕಾಃ ॥ ೧೧೭ ॥

ಸತ್ಕೃತ್ಯ ಶಿವಯೋರಾಜ್ಞಾಂ ಮಂಗಲಂ ಪ್ರದಿಶಂತು ಮೇ ।
ಅಥ ರುದ್ರೋ ಮಹಾದೇವಃ ಶಂಭೋರ್ಮೂರ್ತಿರ್ಗರೀಯಸೀ ॥ ೧೧೮ ॥

ವಾಹ್ನೇಯಮಂಡಲಾಧೀಶಃ ಪೌರುಷೈಶ್ವರ್ಯವಾನ್ಪ್ರಭುಃ ।
ಶಿವಾಭಿಮಾನಸಂಪನ್ನೋ ನಿರ್ಗುಣಸ್ತ್ರಿಗುಣಾತ್ಮಕಃ ॥ ೧೧೯ ॥

ಕೇವಲಂ ಸಾತ್ತ್ವಿಕಶ್ಚಾಪಿ ರಾಜಸಶ್ಚೈವ ತಾಮಸಃ ।
ಅವಿಕಾರರತಃ ಪೂರ್ವಂ ತತಸ್ತು ಸಮವಿಕ್ರಿಯಃ ॥ ೧೨೦ ॥

ಅಸಾಧಾರಣಕರ್ಮಾ ಚ ಸೃಷ್ಟ್ಯಾದಿಕರಣಾತ್ಪೃಥಕ್ ।
ಬ್ರಹ್ಮಣೋಽಪಿ ಶಿರಶ್ಛೇತ್ತಾ ಜನಕಸ್ತಸ್ಯ ತತ್ಸುತಃ ॥ ೧೨೧ ॥

---

೧೧೬-೧೧೭. ಪರಸ್ಪರ ವಿರುದ್ಧಾರ್ಥಗಳುಳ್ಳವುಗಳಾಗಿದ್ದರೂ ಶಿವತತ್ತ್ವವನ್ನು ಪ್ರತಿಪಾದಿಸತಕ್ಕ ಇತಿಹಾಸ ಪುರಾಣಗಳೊಡನೆ ಕೂಡಿದ ನಾಲ್ಕು ವೇದಗಳೂ, ಧರ್ಮಶಾಸ್ತ್ರಗಳೂ, ವೈದಿಕವಿದ್ಯೆಗಳೂ, ಶಿವದಂಪತಿಗಳ ಆಜ್ಞೆಯನ್ನು ಗೌರವಿಸಿ ನನಗೆ ಮಂಗಳವನ್ನುಂಟುಮಾಡಲಿ.

೧೧೮-೧೨೩. ಶಿವನ ಶ್ರೇಷ್ಠವಾದ ಮೂರ್ತಿಯೆಂದು ಪರಿಗಣಿಸಲ್ಪಟ್ಟಿರುವ ರುದ್ರನು, ಅಗ್ನಿ ಮಂಡಲಾಧಿಪತಿಯೂ, ಪುರುಷೈಶ್ವರ್ಯಯುತನೂ, ಶಿವನಲ್ಲಿ ಅಭಿಮಾನಿಯೂ, ಆಗಿರುವನು. ನಿರ್ಗುಣಸ್ವರೂಪನಾದರೂ ಕಾರ್ಯಕ್ಕಾಗಿ ತ್ರಿಗುಣಸ್ವರೂಪನಾಗಿ ಇಷ್ಟಾನುಸಾರ ಒಂದೊಂದೇ ಗುಣಗಳಿಂದ ಕೂಡಿ ತ್ರಿಮೂರ್ತಿರೂಪನಾಗಿರುವನು. ಸ್ವಭಾವತಃ ನಿರ್ವಿಕಾರಸ್ವರೂಪನಾಗಿದ್ದರೂ ಸೃಷ್ಟ್ಯಾದಿ ಕಾರ್ಯಾರ್ಥವಾಗಿ ಬೇಕಾದ ಆಕಾರವನ್ನು ಧರಿಸುವನು. ಬ್ರಹ್ಮ ವಿಷ್ಣುಗಳಿಗೆ ಜ್ಞಾನವನ್ನು ಬೋಧಿಸಿ ಅವರಿಗೆ ಅನುಗ್ರಹವನ್ನುಂಟುಮಾಡತಕ್ಕವನು.

ಜನಕಸ್ತನಯಶ್ಚಾಪಿ ವಿಷ್ಣೋರಪಿ ನಿಯಾಮಕಃ ।
ಬೋಧಕಶ್ಚ ತಯೋರ್ನಿತ್ಯಮನುಗ್ರಹಕರಃ ಪ್ರಭುಃ ॥ ೧೨೨ ॥

ಅಂಡಸ್ಯಾಂತರ್ಬಹಿರ್ವರ್ತೀ ರುದ್ರೋ ಲೋಕದ್ವಯಾಧಿಪಃ ।
ಶಿವಪ್ರಿಯಃ ಶಿವಾಸಕ್ತಃ ಶಿವಪಾದಾರ್ಚನೇ ರತಃ ॥ ೧೨೩ ॥

ಶಿವಸ್ಯಾಜ್ಞಾಂ ಪುರಸ್ಕೃತ್ಯ ಸ ಮೇ ದಿಶತು ಮಂಗಲಂ ।
ತಸ್ಯ ಬ್ರಹ್ಮ ಷಡಂಗಾನಿ ವಿದ್ಯೇಶಾಂತಂ ತಥಾಷ್ಟಕಂ ॥ ೧೨೪ ॥

ಚತ್ವಾರೋ ಮೂರ್ತಿಭೇದಾಶ್ಚ ಶಿವಪೂರ್ವಾಃ ಶಿವಾರ್ಚಕಾಃ ।
ಶಿವೋ ಭವೋ ಹರಶ್ಚೈವ ಮೃಡಶ್ಚೈವ ತಥಾSಪರಃ ।
ಶಿವಸ್ಯಾಜ್ಞಾಂ ಪುರಸ್ಕೃತ್ಯ ಮಂಗಲಂ ಪ್ರದಿಶಂತು ಮೇ ॥ ೧೨೫ ॥

ಅಥ ವಿಷ್ಣುರ್ಮಹೇಶಸ್ಯ ಶಿವಸ್ಯೈವ ಪರಾ ತನುಃ ।
ವಾರಿತತ್ತ್ವಾಧಿಪಃ ಸಾಕ್ಷಾದವ್ಯಕ್ತಪದಸಂಸ್ಥಿತಃ ॥ ೧೨೬ ॥

ನಿರ್ಗುಣಸ್ಸತ್ತ್ವಬಹುಲಸ್ತಥೈವ ಗುಣಕೇವಲಃ ।
ಅವಿಕಾರಾಭಿಮಾನೀ ಚ ತ್ರಿಸಾಧಾರಣವಿಕ್ರಿಯಃ ॥ ೧೨೭ ॥

---

ಬ್ರಹ್ಮಾಂಡದ ಒಳಗೂ ಹೊರಗೂ ವ್ಯಾಪಿಸಿಕೊಂಡಿರುವನು. ಶಿವನಿಗೆ ಪ್ರೀತಿಪಾತ್ರನಾದವನು. ಶಿವನಲ್ಲಿ ಆಸಕ್ತಿಯಿಂದ ಅವನ ಪಾದಪೂಜೆಯನ್ನು ಯಾವಾಗಲೂ ಮಾಡತಕ್ಕವನು. ಇಂತಹ ರುದ್ರನು ಶಿವದಂಪತಿಗಳ ಅಪ್ಪಣೆಯನ್ನು ಪಡೆದು ನನಗೆ ಮಂಗಳವನ್ನುಂಟುಮಾಡಲಿ.

೧೨೪-೧೨೫. ಆ ರುದ್ರನ ಸಂಬಂಧವಾದ ಆರು ಅಂಗಗಳಿಂದ ಕೂಡಿದ ವೇದಮಂತ್ರಗಳೂ, ವಿದ್ಯೇಶಾಂತವಾದ ಎಂಟುದೇವತೆಗಳೂ, ಶಿವಪೂಜಾಸಕ್ತರಾದ ಶಿವ, ಭವ, ಹರ, ಮೃಡ, ಎಂಬ ನಾಲ್ಕು ಮೂರ್ತಿಭೇದಗಳೂ, ಶಿವನ ಆಜ್ಞಾನುಸಾರವಾಗಿ ನನಗೆ ಮಂಗಳವನ್ನುಂಟುಮಾಡಲಿ.

೧೨೬-೧೩೩. ಮಹೇಶ್ವರನಾದ ಶಿವನ ಮತ್ತೊಂದು ಮೂರ್ತಿಭೇದವಾದ ವಿಷ್ಣುವು ಜಲತತ್ತ್ವಕ್ಕೆ ಅಧಿಪತಿಯಾಗಿ ಅವ್ಯಕ್ತವೆಂಬ ಸ್ಥಾನದಲ್ಲಿರುವನು.

ಅಸಾಧಾರಣಕರ್ಮಾ ಚ ಸೃಷ್ಟ್ಯಾದಿಕಾರಣಾತ್ಪೃಥಕ್ !
ದಕ್ಷಿಣಾಂಗಭವೇನಾಪಿ ಸ್ಪರ್ಧಮಾನಃ ಸ್ವಯಂಭುವಾ ॥ ೧೨೮ ॥

ಆದ್ಯೇನ ಬ್ರಹ್ಮಣಾ ಸಾಕ್ಷಾತ್ಸೃಷ್ಟಃ ಸ್ರಷ್ಟಾ ಚ ತಸ್ಯ ತು ।
ಅಂಡಸ್ಯಾಂತರ್ಬಹಿರ್ವರ್ತೀ ವಿಷ್ಣುರ್ಲೋಕದ್ವಯಾಧಿಪಃ ॥ ೧೨೯ ॥

ಅಸುರಾಂತಕರಶ್ಚಕ್ರೀ ಶಕ್ರಸ್ಯಾಪಿ ತಥಾಽನುಜಃ ।
ಪ್ರಾದುರ್ಭೂತಶ್ಚ ದಶಧಾ ಭೃಗುಶಾಪಾಚ್ಛಲಾದಿಹ ॥ ೧೩೦ ॥

ಭೂಭಾರನಿಗ್ರಹಾರ್ಥಾಯ ಸ್ವೇಚ್ಛಯಾಽವಾತರತ್ಕ್ಷಿತೌ ।
ಅಪ್ರಮೇಯಬಲೋ ಮಾಯೀ ಮಾಯಯಾ ಮೋಹಯಞ್ಜಗತ್ ॥ ೧೩೧ ॥

ಮೂರ್ತಿಂ ಕೃತ್ವಾ ಮಹಾವಿಷ್ಣುಂ ಸದಾ ವಿಷ್ಣುಮಥಾಪಿ ವಾ ।
ವೈಷ್ಣವೈಃ ಪೂಜಿತೋ ನಿತ್ಯಂ ಮೂರ್ತಿತ್ರಯಮಯಾಸನೇ ॥ ೧೩೨ ॥

ನಿರ್ಗುಣಸ್ವರೂಪನಾದರೂ ಕಾರ್ಯಾರ್ಥವಾಗಿ ಸತ್ವಗುಣಪ್ರಧಾನವಾದ ರೂಪವುಳ್ಳವನು. ನಿರ್ವಿಕಾರಸ್ವರೂಪನಾದರೂ ಅಸ್ತಿ, ಜಾಯತೇ, ವರ್ಧತೇ ಎಂಬ ಸಾಧಾರಣವಾದ ಮೂರು ವಿಕಾರಗಳನ್ನು ಪಡೆದು ಸೃಷ್ಟ್ಯಾದಿಕರ್ಮಗಳನ್ನೂ ವಿಶೇಷವಾದ ಅನೇಕ ಮಹಿಮಾಯುಕ್ತವಾದ ಕಾರ್ಯಗಳನ್ನೂ ಮಾಡುವನು. ಶಿವನ ಬಲಭಾಗದಲ್ಲಿ ಹುಟ್ಟಿದ ಬ್ರಹ್ಮನೊಡನೆ ಸ್ಪರ್ಧಿಸುವನು. ಅನಾದಿಯಾದ ಪರಬ್ರಹ್ಮನ ಸೃಷ್ಟಿಗೆ ಒಳಗಾದವನಾದರೂ ಚತುರ್ಮುಖಬ್ರಹ್ಮನನ್ನು ಸೃಷ್ಟಿಸಿರುವನು. ಬ್ರಹ್ಮಾಂಡದ ಒಳಗೂ ಹೊರಗೂ ವ್ಯಾಪಿಸಿರುವನು. ಭೂಲೋಕ, ಸ್ವರ್ಗಲೋಕಗಳಿಗೆ ಅಧಿಪತಿಯಾಗಿರುವನು. ಚಕ್ರಾಯುಧವನ್ನು ಧರಿಸಿ ರಾಕ್ಷಸರನ್ನು ನಾಶಮಾಡುವನು. ಭೃಗುಋಷಿಯ ಶಾಪದಿಂದ ದೇವೇಂದ್ರನಿಗೆ ತಮ್ಮನಾಗಿ ಅವತರಿಸಿ ಭೂಮಿಯ ಭಾರವನ್ನು ನಾಶಮಾಡುವುದಕ್ಕೋ, ಅಥವಾ ತನ್ನ ಇಷ್ಟದಿಂದಲೋ ಹತ್ತು ಅವತಾರಗಳನ್ನು ಮಾಡಿರುವನು. ಅಪರಿಮಿತ ಪರಾಕ್ರಮಶಾಲಿಯೂ ಮಾಯಾಸ್ವರೂಪನಾಗಿಯೂ, ತನ್ನ ಮಾಯೆಯಿಂದ ಲೋಕವನ್ನು ಭ್ರಾಂತಿಗೊಳಿಸುತ್ತಲೂ ಇರುವ ಈ ಮಹಾವಿಷ್ಣುವು ಯಾವಾಗಲೂ ವಿಷ್ಣುಭಕ್ತರಿಂದ

**ಶಿವಪ್ರಿಯಃ ಶಿವಾಸಕ್ತಃ ಶಿವಪಾದಾರ್ಚನೇ ರತಃ ।**
**ಶಿವಸ್ಯಾಜ್ಞಾಂ ಪುರಸ್ಕೃತ್ಯ ಸ ಮೇ ದಿಶತು ಮಂಗಳಂ ॥ ೧೩೩ ॥**

**ವಾಸುದೇವೋಽನಿರುದ್ಧಶ್ಚ ಪ್ರದ್ಯುಮ್ನಶ್ಚ ತತಃ ಪರಃ ।**
**ಸಂಕರ್ಷಣಸ್ಸಮಾಖ್ಯಾತಾಶ್ಚತಸ್ರೋ ಮೂರ್ತಯೋ ಹರೇಃ ॥ ೧೩೪ ॥**

**ಮತ್ಸ್ಯಃ ಕೂರ್ಮೋ ವರಾಹಶ್ಚ ನಾರಸಿಂಹೋಽಥ ವಾಮನಃ ।**
**ರಾಮತ್ರಯಂ ತಥಾ ಕೃಷ್ಣೋ ವಿಷ್ಣುಸ್ತುರಗವಕ್ತ್ರಕಃ ॥ ೧೩೫ ॥**

**ಚಕ್ರಂ ನಾರಾಯಣಸ್ಯಾಸ್ತ್ರಂ ಪಾಂಚಜನ್ಯಂ ಚ ಶಾರ್ಙ್ಗಕಂ ।**
**ಸತ್ಕೃತ್ಯ ಶಿವಯೋರಾಜ್ಞಾಂ ಮಂಗಲಂ ಪ್ರದಿಶಂತು ಮೇ ॥ ೧೩೬ ॥**

**ಪ್ರಭಾ ಸರಸ್ವತೀ ಗೌರೀ ಲಕ್ಷ್ಮೀಶ್ಚ ಶಿವಭಾವಿತಾ ।**
**ಶಿವಯೋಃ ಶಾಸನಾದೇತಾ ಮಂಗಲಂ ಪ್ರದಿಶಂತು ಮೇ ॥ ೧೩೭ ॥**

**ಇಂದ್ರೋಽಗ್ನಿಶ್ಚ ಯಮಶ್ಚೈವ ನಿರ್ಋತಿರ್ವರುಣಸ್ತಥಾ ।**
**ವಾಯುಃ ಸೋಮಃ ಕುಬೇರಶ್ಚ ತಥೇಶಾನಸ್ತ್ರಿಶೂಲಧೃಕ್। ॥ ೧೩೮ ॥**

---

ಪೂಜೆಮಾಡಿಸಿ ಕೊಳ್ಳುತ್ತಾ ಶಿವನಿಗೆ ಪ್ರೀತಿಪಾತ್ರನಾಗಿ ಶಿವನಲ್ಲಿ ಆಸಕ್ತಿಯಿಂದ ಶಿವನ ಪಾದವನ್ನು ಪೂಜಿಸುವನು. ಇಂತಹ ಈ ವಿಷ್ಣುವು ಶಿವನ ಆಜ್ಞೆಯನ್ನು ಅನುಸರಿಸಿ ನನಗೆ ಮಂಗಳನ್ನುಂಟುಮಾಡಲಿ.

೧೩೪-೧೩೬. ವಾಸುದೇವ ಅನಿರುದ್ಧ ಪ್ರದ್ಯುಮ್ನ ಸಂಕರ್ಷಣರೆಂಬ ಹರಿಯ ಚತುರ್ಮೂರ್ತಿಗಳೂ, ಮತ್ಸ್ಯ ಕೂರ್ಮ ವರಾಹ ನಾರಸಿಂಹ ವಾಮನ ರಾಮತ್ರಯ (ಪರಶುರಾಮ ದಶರಥರಾಮ ಬಲರಾಮ) ಕೃಷ್ಣ, ಹಯಗ್ರೀವ, ಎಂಬ ಹರಿಯ ದಶಾವತಾರ ಮೂರ್ತಿಗಳೂ ಚಕ್ರ, ನಾರಾಯಣಾಸ್ತ್ರ, ಪಾಂಚ ಜನ್ಯ, ಶಾರ್ಙ್ಗ ಎಂಬ ಹರಿಯ ಆಯುಧಗಳೂ ಶಿವದಂಪತಿಗಳ ಆಜ್ಞೆಯಿಂದ ನನಗೆ ಮಂಗಳವನ್ನು ಕೊಡಲಿ.

೧೩೭-೧೩೯. ಶಿವನಲ್ಲಿ ಭಕ್ತಿಯುಳ್ಳ ಪ್ರಭಾ, ಸರಸ್ವತೀ, ಗೌರೀ, ಲಕ್ಷ್ಮೀ ದೇವಿಯರೂ ಇಂದ್ರ, ಅಗ್ನಿ, ಯಮ, ನಿರ್ಋತಿ, ವರುಣ, ವಾಯು, ಕುಬೇರ,

ಸರ್ವೇ ಶಿವಾರ್ಚನರತಾಃ ಶಿವಸದ್ಭಾವಭಾವಿತಾಃ ।
ಸತ್ಕೃತ್ಯ ಶಿವಯೋರಾಜ್ಞಾಂ ಮಂಗಲಂ ಪ್ರದಿಶಂತು ಮೇ ॥ ೧೩೯ ॥

ತ್ರಿಶೂಲಮಥ ವಜ್ರಂ ಚ ತಥಾ ಪರಶುಸಾಯಕೌ ।
ಖಡ್ಗಪಾಶಾಂಕುಶಾಶ್ಚೈವ ಪಿನಾಕಶ್ಚಾಯುಧೋತ್ತಮಃ ॥ ೧೪೦ ॥

ಸವ್ಯಾಯುಧಾನಿ ದೇವಸ್ಯ ದೇವ್ಯಾಶ್ಚೈತಾನಿ ನಿತ್ಯಶಃ ।
ದಿತ್ಕೃತ್ಯ ಶಿವಯೋರಾಜ್ಞಾಂ ರಕ್ಷಾಂ ಕುರ್ವಂತು ಮೇ ಸದಾ ॥ ೧೪೧ ॥

ವೃಷರೂಪಧರೋ ದೇವಃ ಸೌರಭೇಯೋ ಮಹಾಬಲಃ ।
ವಡವಾಖ್ಯಾನಲಸ್ಪರ್ಧಾಂ ಪಂಚಗೋಮಾತೃಭಿರ್ವೃತಃ ॥ ೧೪೨ ॥

ವಾಹನತ್ವಮನುಪ್ರಾಪ್ತಸ್ತಪಸಾ ಪರಮೇಶಯೋಃ ।
ತಯೋರಾಜ್ಞಾಂ ಪುರಸ್ಕೃತ್ಯ ಸ ಮೇ ಕಾಮಂ ಪ್ರಯಚ್ಛತು ॥ ೧೪೩ ॥

ನಂದಾ ಸುನಂದಾ ಸುರಭಿಃ ಸುಶೀಲಾ ಸುಮನಾಸ್ತಥಾ ।
ಪಂಚಗೋಮಾತರಸ್ತ್ವೇತಾಃ ಶಿವಲೋಕೇ ವ್ಯವಸ್ಥಿತಾಃ ॥ ೧೪೪ ॥

---

ಈಶಾನ, ಎಂಬ ಶಿವಪೂಜಾಸಕ್ತರೂ ಶಿವಭಕ್ತಿಯುಳ್ಳವರೂ ಆದ ಅಷ್ಟಲೋಕ ಪಾಲಕರೂ ಶಿವದಂಪತಿಗಳ ಆಜ್ಞೆಯಿಂದ ನನಗೆ ಮಂಗಳವನ್ನುಂಟುಮಾಡಲಿ.

೧೪೦-೧೪೧. ತ್ರಿಶೂಲ, ವಜ್ರ, ಪಾಶುಪತಾಸ್ತ್ರ, ಖಡ್ಗ, ಪಾಶ, ಅಂಕುಶ, ಪಿನಾಕ ಎಂಬ ಶಿವನ ಮತ್ತು ದೇವಿಯ ದಿವ್ಯಾಯುಧಗಳೂ ಶಿವದಂಪತಿಗಳ ಆಜ್ಞಾನುಸಾರವಾಗಿ ನನಗೆ ಯಾವಾಗಲೂ ರಕ್ಷಣೆಯನ್ನು ಮಾಡುತ್ತಿರಲಿ.

೧೪೨-೧೪೩. ಕಾಮಧೇನುವಿನ ಪುತ್ರನೂ, ಐದುಮಂದಿ ಗೋಮಾತೆಯರಿಂದ ಕೂಡಿ ಬಡಬಾಗ್ನಿಯೊಡನೆ ಮೇಲಾಟಮಾಡುವವನೂ, ತಪಸ್ಸಿನಿಂದ ಶಿವದಂಪತಿಗಳನ್ನು ಮೆಚ್ಚಿಸಿ ಅವರ ಅನುಗ್ರಹದಿಂದ ಅವರಿಗೆ ವಾಹನರೂಪವಾಗಿರುವ ವೃಷಭಾಕಾರವನ್ನು ಪಡೆದಿರುವವನೂ ಆದ ವೃಷಭದೇವನು ಶಿವದಂಪತಿಗಳ ಆಜ್ಞೆಯಿಂದ ನನಗೆ ಇಷ್ಟವನ್ನು ಕೊಡಲಿ.

೧೪೪-೧೪೫. ನಂದಾ, ಸುನಂದಾ, ಸುರಭಿ, ಸುಶೀಲಾ, ಸುಮನಾ, ಎಂಬ ಪಂಚ ಗೋಮಾತೆಯರು ಎಂದರೆ ಐದು ಕಾಮಧೇನುಗಳು ಶಿವಲೋಕದಲ್ಲಿದ್ದು

ಶಿವಭಕ್ತಿಪರಾ ನಿತ್ಯಂ ಶಿವಾರ್ಚನಪರಾಯಣಾಃ ।
ಶಿವಯೋಃ ಶಾಸನಾದೇವ ದಿಶಂತು ಮಮ ವಾಂಛಿತಂ ॥ ೧೪೫ ॥

ಕ್ಷೇತ್ರಪಾಲೋ ಮಹಾತೇಜಾ ನೀಲಜೀಮೂತಸನ್ನಿಭಃ ।
ದಂಷ್ಟ್ರಾಕರಾಳವದನಃ ಸ್ಫುರದ್ರಕ್ತಾಧರೋಜ್ಜ್ವಲಃ ॥ ೧೪೬ ॥

ರಕ್ತೋರ್ಧ್ವಮೂರ್ಧಜಃ ಶ್ರೀಮಾನ್ಭ್ರುಕುಟೀಕುಟಿಲೇಕ್ಷಣಃ ।
ರಕ್ತವೃತ್ತತ್ರಿನಯನಃ ಶಶಿಪನ್ನಗಭೂಷಣಃ ॥ ೧೪೭ ॥

ನಗ್ನಸ್ತ್ರಿಶೂಲಪಾಶಾಸಿಕಪಾಲೋದ್ಯತಪಾಣಿಕಃ ।
ಭೈರವೋ ಭೈರವೈಸ್ಸಿದ್ಧೈರ್ಯೋಗಿನೀಭಿಶ್ಚ ಸಂವೃತಃ ॥ ೧೪೮ ॥

ಕ್ಷೇತ್ರೇ ಕ್ಷೇತ್ರೇ ಸಮಾಸೀನಃ ಸ್ಥಿತೋ ಯೋ ರಕ್ಷಕಸ್ಸತಾಂ ।
ಶಿವಪ್ರಣಾಮಪರಮಃ ಶಿವಸದ್ಭಾವಭಾವಿತಃ ॥ ೧೪೯ ॥

---

ಕೊಂಡು ಶಿವನಲ್ಲಿ ಭಕ್ತಿಯಿಂದ ಪ್ರತಿದಿನವೂ ಶಿವನ ಪೂಜೆಯನ್ನು ಮಾಡು ತ್ತಿರುವರು. ಅವರು ಶಿವನ ಅಪ್ಪಣೆಯಿಂದ ನನ್ನ ಇಷ್ಟಾರ್ಥವನ್ನುಂಟುಮಾಡಲಿ.

೧೪೬-೧೫೦. ನೀಲಮೇಘದ ಕಾಂತಿಗೆ ಸಮಾನವಾದ ಶರೀರಕಾಂತಿ ಯುಳ್ಳ ಕ್ಷೇತ್ರಪಾಲಕನು, ಕೋರೆಹಲ್ಲುಗಳಿಂದ ಕೂಡಿದ ಭಯಂಕರವಾದ ಮುಖ, ಚಲಿಸುತ್ತಿರುವ ಕೆಂದುಟಿ, ಕೆಂಪಾದ ಎದ್ದು ನಿಂತಿರುವ ತಲೆಯ ಕೂದಲುಗಳು, ಹುಬ್ಬುಗಳ ಗಂಟಿನಿಂದ ವಕ್ರವಾದ ನೋಟ, ಕೆಂಪಾಗಿ ಗುಂಡಾಗಿರುವ ಮೂರು ಕಣ್ಣುಗಳು ಇವುಗಳಿಂದ ಮಹಾ ಭಯಂಕರನಾಗಿ ಕಾಣಿಸುತ್ತಿರುವನು. ಚಂದ್ರ ನನ್ನೂ ಹಾವುಗಳನ್ನೂ ಅಲಂಕಾರಮಾಡಿಕೊಂಡಿರುವನು. ಬೆತ್ತಲೆಯಾಗಿ ತ್ರಿಶೂಲ ಪಾಶ ಶಕ್ತಿ ಕಪಾಲ ಇವುಗಳನ್ನು ಹಿಡಿದಿರುವನು. ಭಯಂಕರರಾದ ಸಿದ್ಧರಿಂದಲೂ ಯೋಗಿನೀಗಣಗಳಿಂದಲೂ ಕೂಡಿ ಪ್ರತಿಯೊಂದು ಕ್ಷೇತ್ರದಲ್ಲಿಯೂ ವಾಸವಾಗಿರುವ ಸಜ್ಜನರನ್ನು ರಕ್ಷಿಸುವುದರಲ್ಲಿ ಆಸಕ್ತನಾಗಿರುವನು. ಭಕ್ತಿ ಯಿಂದ ಯಾವಾಗಲೂ ಶಿವನನ್ನು ನಮಸ್ಕಾರಮಾಡುತ್ತಿರವನು. ಶಿವನನ್ನೇ ಧ್ಯಾನಿಸುತ್ತಿರುವನು. ಶಿವಭಕ್ತರನ್ನು ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕ

ಶಿವಾಶ್ರಿತಾನ್ವಿಶೇಷೇಣ ರಕ್ಷನ್ಪುತ್ರಾನಿವೌರಸಾನ್ ।
ಸತ್ಕೃತ್ಯ ಶಿವಯೋರಾಜ್ಞಾಂ ಸ ಮೇ ದಿಶತು ಮಂಗಲಂ ॥ ೧೫೦ ॥

ತಾಲಜಂಘಾದಯಸ್ತಸ್ಯ ಪ್ರಥಮಾವರಣೇಽರ್ಚಿತಾಃ ।
ಸತ್ಕೃತ್ಯ ಶಿವಯೋರಾಜ್ಞಾಂ ಚತ್ವಾರಃ ಸಮವಂತು ಮಾಂ ॥ ೧೫೧ ॥

ಭೈರವಾದ್ಯಾಶ್ಚ ಯೇ ಚಾನ್ಯೇ ಸಮಂತಾತ್ತಸ್ಯ ವೇಷ್ಟಿತಾಃ ।
ತೇಽಪಿ ಮಾಮನುಗೃಹ್ಣಂತಿ ಶಿವಶಾಸನಗೌರವಾತ್ ॥ ೧೫೨ ॥

ನಾರದಾದ್ಯಾಶ್ಚ ಮುನಯೋ ದಿವ್ಯಾ ದೇವೈಶ್ಚ ಪೂಜಿತಾಃ ।
ಸಾಧ್ಯಾ ನಾಗಾಶ್ಚ ಯೇ ದೇವಾ ಜನಲೋಕನಿವಾಸಿನಃ ॥ ೧೫೩ ॥

ವಿನಿವೃತ್ತಾಧಿಕಾರಾಶ್ಚ ಮಹರ್ಲೋಕನಿವಾಸಿನಃ ।
ಸಪ್ತರ್ಷಯಸ್ತಥಾಽನ್ಯೇ ವೈ ವೈಮಾನಿಕಗಣೈಸ್ಸಹ ॥ ೧೫೪ ॥

ಸರ್ವೇ ಶಿವಾರ್ಚನರತಾಃ ಶಿವಾಜ್ಞಾವಶವರ್ತಿನಃ ।
ಶಿವಯೋರಾಜ್ಞಯಾ ಮಹ್ಯಂ ದಿಶಂತು ಮಮ ಕಾಂಕ್ಷಿತಂ ॥ ೧೫೫ ॥

ಗಂಧರ್ವಾದ್ಯಾಃ ಪಿಶಾಚಾಂತಾಶ್ಚತಸ್ರೋ ದೇವಯೋನಯಃ ।
ಸಿದ್ಧಾ ವಿದ್ಯಾಧರಾದ್ಯಾಶ್ಚ ಯೇಽಪಿ ಚಾನ್ಯೇ ನಭಶ್ಚರಾಃ ॥ ೧೫೬ ॥

---

ಳಂತೆ ಕಾಪಾಡುವನು. ಇಂತಹ ಕ್ಷೇತ್ರಪಾಲಕನು ಶಿವದಂಪತಿಗಳ ಆಜ್ಞೆಯನ್ನು ಗೌರವಿಸಿ ನನಗೆ ಮಂಗಳವನ್ನುಂಟುಮಾಡಲಿ.

೧೫೧-೧೫೫. ಮೊದಲನೆಯ ಆವರಣದಲ್ಲಿ ಪೂಜಿಸಿದ ನಾಲ್ವರು ತಾಲಜಂಘಾದಿಗಳು, ಸುತ್ತಲೂ ನೆರೆದಿರುವ ಭೈರವಾದಿಗಳು, ನಾರದಾದಿ ಮುನಿಗಳು ಸಾಧ್ಯರು, ನಾಗರು, ಜನಲೋಕನಿವಾಸಿಗಳಾದದೇವತೆಗಳು ಮಹರ್ಲೋಕನಿವಾಸಿಗಳು, ಸಪ್ತರ್ಷಿಗಳು, ವಿಮಾನಸಂಚಾರಮಾಡುವ ದೇವಗಣಗಳು, ಇವರೆಲ್ಲರೂ ಶಿವಪೂಜಾಸಕ್ತರಾಗಿ ಶಿವನ ಆಜ್ಞೆಯಂತೆ ನಡೆಯುತ್ತಿರುವರು. ಇವರೆಲ್ಲರೂ ಶಿವದಂಪತಿಗಳ ಅಪ್ಪಣೆಯಿಂದ ನನಗೆ ಇಷ್ಟಾರ್ಥಗಳನ್ನು ಕೊಡಲಿ.

೧೫೬-೧೬೩. ಗಂಧರ್ವರೇ ಮೊದಲಾಗಿ ಪಿಶಾಚಿಗಳವರೆಗೆ ಇರುವ ನಾಲ್ಕು ದೇವಯೋನಿಗಳಾದ ಪ್ರಾಣಿಗಳು, ಸಿದ್ಧರು, ವಿದ್ಯಾಧರರೇ ಮೊದಲಾದ

ಅಸುರಾ ರಾಕ್ಷಸಾಶ್ಚೈವ ಪಾತಾಲತಲವಾಸಿನಃ ।
ಅನಂತಾದ್ಯಾಶ್ಚ ನಾಗೇಂದ್ರಾ ವೈನತೇಯಾದಯೋ ದ್ವಿಜಾಃ ॥ ೧೫೭ ॥

ಕೂಶ್ಮಾಂಡಃ ಪ್ರೇತವೇತಾಲಾ ಗ್ರಹಾ ಭೂತಗಣಾಃ ಪರೇ ।
ಡಾಕಿನ್ಯಶ್ಚಾಪಿ ಯೋಗಿನ್ಯಃ ಶಾಕಿನ್ಯಶ್ಚಾಪಿ ತಾದೃಶಃ ॥ ೧೫೮ ॥

ಕ್ಷೇತ್ರಾರಾಮಗೃಹಾದೀನಿ ದೀರ್ಘಾನ್ಯಾಯತನಾನಿ ಚ ।
ದ್ವೀಪಾಸ್ಸಮುದ್ರಾ ನದ್ಯಶ್ಚ ನದಾಶ್ಚಾನ್ಯೇ ಸರಾಂಸಿ ಚ ॥ ೧೫೯ ॥

ಗಿರಯಶ್ಚ ಸುಮೇರ್ವಾದ್ಯಾಃ ಕಾನನಾನಿ ಸಮಂತತಃ ।
ಪಶವಃ ಪಕ್ಷಿಣೋ ವೃಕ್ಷಾಃ ಕೃಮಿಕೀಟಾದಯೋ ಮೃಗಾಃ ॥ ೧೬೦ ॥

ಭುವನಾನ್ಯಪಿ ಸರ್ವಾಣಿ ಭುವನಾನಾಮಧೀಶ್ವರಾಃ ।
ಅಂಡಾನ್ಯಾವರಣೈಸ್ಸಾರ್ಧಮಾಶಾಶ್ಚ ದಶ ದಿಗ್ಗಜಾಃ ॥ ೧೬೧ ॥

ವರ್ಣಾಃ ಪದಾನಿ ಮಂತ್ರಾಶ್ಚ ತತ್ತ್ವಾನ್ಯಪಿ ಸಹಾಧಿಪೈಃ ।
ಬ್ರಹ್ಮಾಂಡಧಾರಕಾ ರುದ್ರಾ ರುದ್ರಾಶ್ಚಾನ್ಯೇ ಸಶಕ್ತಿಕಾಃ ॥ ೧೬೨ ॥

---

ಆಕಾಶದಲ್ಲಿ ಸಂಚರಿಸುವವರು, ಪಾತಾಳದಲ್ಲಿ ವಾಸಿಸುವ ಅಸುರರು, ರಾಕ್ಷಸರು, ಅನಂತನೇ ಮೊದಲಾದ ನಾಗರು, ಗರುಡನೇ ಮೊದಲಾದ ಪಕ್ಷಿಗಳು, ಕೂಷ್ಮಾಂಡ, ಪ್ರೇತ, ಭೇತಾಳ, ಮುಂತಾದ ಗ್ರಹಗಳು, ಡಾಕಿನೀ, ಶಾಕಿನಿ, ಯೋಗಿನೀ, ಮುಂತಾದ ಭೂತಗಣಗಳು, ಕ್ಷೇತ್ರಗಳು, ತೋಟಗಳು, ತೀರ್ಥಗಳು ಮನೆ, ದ್ವೀಪ, ಸಮುದ್ರ, ನದಿಗಳು, ನದಗಳು, ಸರೋವರಗಳು, ಸುಮೇರುವೇ ಮುಂತಾದ ಪರ್ವತಗಳು, ಕಾಡುಗಳು, ಪಶುಗಳು, ಪಕ್ಷಿಗಳು, ಮರಗಳು, ಕೃಮಿ, ಕೀಟಗಳು, ಮೃಗಗಳು, ಸಮಸ್ತ ಲೋಕಗಳು, ಲೋಕಾಧಿಪತಿಗಳು ಆವರಣ ಸಹಿತವಾದ ಬ್ರಹ್ಮಾಂಡಗಳು, ಹತ್ತು ದಿಕ್ಕುಗಳು, ದಿಗ್ಗಜಗಳು, ಅಕ್ಷರಗಳು ಪದಗಳು ಮಂತ್ರಗಳು ತತ್ತ್ವಗಳು ತತ್ತ್ವಾಧಿಪತಿಗಳು ಬ್ರಂಹ್ಮಾಂಡಕ್ಕೆ ಆಶ್ರಯ ರೂಪರಾದ ರುದ್ರರು, ಶಕ್ತಿಸಹಿತರಾದ ಇತರ ರುದ್ರಮೂರ್ತಿಗಳು, ಈ ಪ್ರಪಂ

**ಯಚ್ಚ ಕಿಂಚಿಜ್ಜಗತ್ಯಸ್ಮಿಂಸ್ದೃಷ್ಟಂ ಚಾನುಮಿತಂ ಶ್ರುತಂ ।**
**ಸರ್ವೇ ಕಾಮಂ ಪ್ರಯಚ್ಛಂತು ಶಿವಯೋರೇವ ಶಾಸನಾತ್ ॥ ೧೬೩ ॥**

**ಅಥ ವಿದ್ಯಾ ಪರಾ ಶೈವೀ ಪಶುಪಾಶವಿಮೋಚಿನೀ ।**
**ಪಂಚಾರ್ಥಸಂಜ್ಞಿತಾ ದಿವ್ಯಾ ಪಶುವಿದ್ಯಾಬಹಿಷ್ಕೃತಾ ॥ ೧೬೪ ॥**

**ಶಾಸ್ತ್ರಂ ಚ ಶಿವಧರ್ಮಾಖ್ಯಂ ಧರ್ಮಾಖ್ಯಂ ಚ ತದುತ್ತರಂ ।**
**ಶೈವಾಖ್ಯಂ ಶಿವಧರ್ಮಾಖ್ಯಂ ಪುರಾಣಂ ಶ್ರುತಿಸಂಮಿತಂ ॥ ೧೬೫ ॥**

**ಶೈವಾಗಮಾಶ್ಚ ಯೇ ಚಾನ್ಯೇ ಕಾಮಿಕಾದ್ಯಾಶ್ಚತುರ್ವಿಧಾಃ ।**
**ಶಿವಾಭ್ಯಾಮವಿಶೇಷೇಣ ಸತ್ಕೃತ್ಯೇಹ ಸಮರ್ಚಿತಾಃ ॥ ೧೬೬ ॥**

**ತಾಭ್ಯಾಮೇವ ಸಮಾಜ್ಞಾತಾ ಮಮಾಭಿಪ್ರೇತಸಿದ್ಧಯೇ ।**
**ಕರ್ಮೇದಮನುಮನ್ಯಂತಾಂ ಸಫಲಂ ಸಾಧ್ವನುಷ್ಠಿತಂ ॥ ೧೬೭ ॥**

---

ಚದಲ್ಲಿ ನೋಡಿದ ಕೇಳಿದ ಅನುಮಾನದಿಂದೂಹಿಸಿದ ಸಮಸ್ತ ವಸ್ತುಗಳು ಇವರೆಲ್ಲರೂ ಶಿವದಂಪತಿಗಳ ಆಜ್ಞೆಯಿಂದ ಇಷ್ಟಾರ್ಥವನ್ನು ಕೊಡಲಿ.

೧೬೪-೧೬೭. ಶಿವಸಂಬಂಧವಾದ ಪರಾವಿದ್ಯೆಯು ಪಶುಸ್ವರೂಪರಾದ ಜೀವರುಗಳ ದುಃಖರೂಪವಾದ ಪಾಶಗಳನ್ನು ಬಿಡಿಸತಕ್ಕದ್ದಾಗಿರುವುದು. ಆ ವಿದ್ಯೆಯು ಪಂಚಾಕ್ಷರಮಂತ್ರವಾದುದರಿಂದ ಅಕ್ಷರಸಂಖ್ಯಾನುಸಾರವಾಗಿ ಪಂಚಾರ್ಥವೆಂಬ ಹೆಸರುಳ್ಳದು. ಪಶುರೂಪರಾದ ಜೀವರುಗಳ ಅಜ್ಞಾನರೂಪವಾದ ತಿಳುವಳಿಕೆಯ ಸಂಬಂಧವಿಲ್ಲದುದು. ಶಿವಧರ್ಮವೆಂಬ ಶಾಸ್ತ್ರವೂ ಶ್ರೇಷ್ಠವಾದ ಧರ್ಮವನ್ನು ತಿಳಿಸತಕ್ಕದ್ದು. ಶಿವಪುರಾಣವೆಂಬುದು ವೇದಕ್ಕೆ ಸಮಾನವಾದುದು. ಶೈವಾಗಮಗಳೂ ಕಾಮಿಕಾದಿ ನಾಲ್ಕು ವಿಧವಾದ ತಂತ್ರಶಾಸ್ತ್ರಗಳೂ ಶಿವದಂಪತಿಗಳಿಗೆ ಸಮಾನವಾದುವುಗಳಾಗಿ ಪೂಜಾರ್ಹವಾದುವುಗಳಾಗಿರುವುವು. ಆ ಶಾಸ್ತ್ರಗಳಲ್ಲಿ ವಿಧಿಸಿದ ಕರ್ಮಗಳು ನನ್ನ ಇಷ್ಟಸಿದ್ಧಿಯನ್ನುಂಟುಮಾಡಲಿ. ಅವುಗಳನ್ನು ಕ್ರಮವಾಗಿ ಅನುಷ್ಠಾನಮಾಡುವುದರಿಂದ ಸಫಲವಾದವುಗಳಾಗಲಿ.

**ಶ್ವೇತಾದ್ಯಾ ನಕುಲೀಶಾಂತಾಃ ಸಶಿಷ್ಯಾಶ್ಚಾಪಿ ದೇಶಿಕಾಃ ।**
**ತತ್ಸಂತತೀಯಾ ಗುರವೋ ವಿಶೇಷಾದ್ಗುರವೋ ಮಮ ॥ ೧೬೮ ॥**

**ಶೈವಾ ಮಾಹೇಶ್ವರಾಶ್ಚೈವ ಜ್ಞಾನಕರ್ಮಪರಾಯಣಾಃ ।**
**ಕರ್ಮೇದಮನುಮನ್ಯಂತಾಂ ಸಫಲಂ ಸಾಧ್ವನುಷ್ಠಿತಂ ॥ ೧೬೯ ॥**

**ಲೌಕಿಕಾ ಬ್ರಾಹ್ಮಣಾಸ್ಸರ್ವೇ ಕ್ಷತ್ರಿಯಾಶ್ಚ ವಿಶಃ ಕ್ರಮಾತ್ ।**
**ವೇದವೇದಾಂತತತ್ತ್ವಜ್ಞಾಃ ಸರ್ವಶಾಸ್ತ್ರವಿಶಾರದಾಃ ॥ ೧೭೦ ॥**

**ಸಾಂಖ್ಯಾ ವೈಶೇಷಿಕಾಶ್ಚೈವ ಯೌಗಾ ನೈಯಾಯಿಕಾ ನರಾಃ ।**
**ಸೌರಾ ಬ್ರಾಹ್ಮಾಸ್ತಥಾ ರೌದ್ರಾ ವೈಷ್ಣವಾಶ್ಚಾಪರೇ ನರಾಃ ॥ ೧೭೧ ॥**

**ಶಿಷ್ಟಾಃ ಸರ್ವೇ ವಿಶಿಷ್ಟಾಶ್ಚ ಶಿವಶಾಸನಯಂತ್ರಿತಾಃ ।**
**ಕರ್ಮೇದಮನುಮನ್ಯಂತಾಂ ಮಮಾಭಿಪ್ರೇತಸಾಧಕಂ ॥ ೧೭೨ ॥**

---

೧೬೮-೧೬೯. ಶ್ವೇತಮುನಿ ಮೊದಲಾಗಿ ನಕುಲೀಶನ ಪರ್ಯಂತವಾಗಿರುವ ಶಿಷ್ಯರೊಡನೆ ಕೂಡಿದ ಗುರುಗಳು, ಅವರ ಸಂತತಿಯಲ್ಲಿ ಹುಟ್ಟಿದವರು, ನನಗೆ ಗುರುಗಳಾಗಿರುವರು, ಶೈವರು, ಮಾಹೇಶ್ವರರು, ಜ್ಞಾನ ಮತ್ತು ಕರ್ಮಾನುಷ್ಠಾನಗಳಲ್ಲಿ ಆಸಕ್ತರಾದ ಇವರೆಲ್ಲರೂ ನಾನು ಮಾಡಿದ ಈ ಪೂಜಾಕರ್ಮವೂ ಸ್ತೋತ್ರರೂಪವಾದ ಕರ್ಮವೂ ಸರಿಯಾಗಿ ನಡೆದು ಸಫಲವಾದುದಾಯಿತೆಂದು ಅನುಗ್ರಹಿಸಲಿ.

೧೭೦-೧೭೨. ಲೋಕವ್ಯವಹಾರವನ್ನು ತಿಳಿದ ಸಮಸ್ತ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ವೇದವೇದಾಂತಗಳ ತತ್ತ್ವವನ್ನು ತಿಳಿದವರಾದ ಸರ್ವಶಾಸ್ತ್ರಗಳನ್ನೂ ತಿಳಿದ ಪಂಡಿತರು, ಸಾಂಖ್ಯ, ವೈಶೇಷಿಕ, ಯೋಗ, ನ್ಯಾಯ ಈ ಶಾಸ್ತ್ರಗಳನ್ನು ಬಲ್ಲ ವಿದ್ವಾಂಸರು, ಸೂರ್ಯ, ಬ್ರಹ್ಮ, ರುದ್ರ, ವಿಷ್ಣು ಈ ದೇವತೆಗಳನ್ನು ಉಪಾಸನೆ ಮಾಡುವ ಉಪಾಸಕರು, ಶಿವನ ಅಪ್ಪಣೆಗೆ ಕಟ್ಟುಬಿದ್ದು ಶಾಸ್ತ್ರೋಕ್ತವಾದ ಆಚಾರವನ್ನು ನಡೆಸತಕ್ಕವರು, ವಿಶೇಷ ಧರ್ಮಾಸಕ್ತರು ಇವರೆಲ್ಲರೂ, ಈ ಕರ್ಮವು ನನ್ನ ಇಷ್ಟಾರ್ಥವನ್ನು ಕೊಡತಕ್ಕುದೆಂದು ಅನುಮಾನಪ್ರಮಾಣದಿಂದಲೇ ತಿಳಿದುಕೊಳ್ಳಲಿ [ಒಪ್ಪಿಕೊಳ್ಳಲಿ].

ಶೈವಾಃ ಸಿದ್ಧಾಂತಮಾರ್ಗಸ್ಥಾಃ ಶೈವಾಃ ಪಾಶುಪತಾಸ್ತಥಾ ।
ಶೈವಾ ಮಹಾವ್ರತಧರಾಃ ಶೈವಾಃ ಕಾಪಾಲಿಕಾಃ ಪರೇ ॥ ೧೭೩ ॥

ಶಿವಾಜ್ಞಾಪಾಲಕಾಃ ಪೂಜ್ಯಾ ಮಮಾಪಿ ಶಿವಶಾಸನಾತ್ ।
ಸರ್ವೇ ಮಾಮನುಗೃಹ್ಣಂತು ಶಂಸಂತು ಸಫಲಕ್ರಿಯಾಂ ॥ ೧೭೪ ॥

ದಕ್ಷಿಣಜ್ಞಾನನಿಷ್ಠಾಶ್ಚ ದಕ್ಷಿಣೋತ್ತರಮಾರ್ಗಗಾಃ ।
ಅವಿರೋಧೇನ ವರ್ತಂತಾಂ ಮಂತ್ರಶ್ರೇಯೋಽರ್ಥಿನೋ ಮಮ ॥ ೧೭೫ ॥

ನಾಸ್ತಿಕಾಶ್ಚ ಶಠಾಶ್ಚೈವ ಕೃತಘ್ನಾಶ್ಚೈವ ತಾಮಸಾಃ ।
ಪಾಷಂಡಾಶ್ಚಾತಿಪಾಪಾಶ್ಚ ವರ್ತಂತಾಂ ದೂರತೋ ಮಮ ॥ ೧೭೬ ॥

ಬಹುಭಿಃ ಕಿಂ ಸ್ತುತೈರತ್ರ ಯೇಽಪಿ ಕೇಽಪಿ ಚಿದಾಸ್ತಿಕಾಃ ।
ಸರ್ವೇ ಮಾಮನುಗೃಹ್ಣಂತು ಸಂತಃ ಶಂಸಂತು ಮಂಗಲಂ ॥ ೧೭೭ ॥

---

೧೭೩-೧೭೪. ಶಿವಭಕ್ತರಾದ ಸಿದ್ಧಾಂತಿಗಳು, ಪಾಶುಪತರು, ಮಹಾವ್ರತಧರರು, ಕಾಪಾಲಿಕರು ಇವರೆಲ್ಲರೂ ಶಿವನ ಆಜ್ಞೆಯನ್ನು ನಡೆಸತಕ್ಕವರಾದುದರಿಂದ ನನಗೂ ಪೂಜ್ಯರಾಗಿರುವರು. ಇವರೆಲ್ಲರೂ ನಾನು ಮಾಡುವ ಪೂಜಾಸ್ತೋತ್ರರೂಪವಾದ ಕರ್ಮಗಳು ಫಲದಾಯಕವಾದುವುಗಳೆಂದು ಶ್ಲಾಘಿಸಿ ನನಗೆ ಅನುಗ್ರಹವನ್ನುಂಟುಮಾಡಲಿ.

೧೭೫. ದಕ್ಷಿಣಜ್ಞಾನಾಭ್ಯಾಸದಲ್ಲಿ ಆಸಕ್ತರಾದ ಜನರೂ ಶಿವಧರ್ಮಾನುಷ್ಠಾನ್ನದ ವಿಷಯದಲ್ಲಿ ದಕ್ಷಿಣವಾಮಾಚಾರಮಾರ್ಗಗಳನ್ನು ಅನುಸರಿಸಿದವರೂ ಪಂಚಾಕ್ಷರಮಂತ್ರದಿಂದಲೇ ಶ್ರೇಯಸ್ಸನ್ನು ಬಯಸುವ ನನ್ನ ವಿಷಯದಲ್ಲಿ ವಿರೋಧವಿಲ್ಲದವರಾಗಲಿ.

೧೭೬. ನಾಸ್ತಿಕರೂ, ಶಠರೂ, ಕೃತಘ್ನರೂ, ತಾಮಸರೂ, ಪಾಷಂಡರೂ ಪಾಪಿಗಳೂ ನನಗೆ ದೂರದಲ್ಲಿರಲಿ.

೧೭೭. ಹೆಚ್ಚು ಸ್ತೋತ್ರಗಳಿಂದೇನುಪ್ರಯೋಜನ? ಯಾರುಯಾರು ಆಸ್ತಿಕರೋ, ಸಜ್ಜನರೋ ಅವರೆಲ್ಲರೂ ನನಗೆ ಅನುಗ್ರಹವನ್ನು ಮಾಡಿ ಮಂಗಳವನ್ನು ಮಾಡಲಿ.

ನಮಶ್ಶಿವಾಯ ಸಾಂಬಾಯ ಸಸುತಾಯಾದಿಹೇತವೇ ।
ಪಂಚಾವರಣರೂಪೇಣ ಪ್ರಪಂಚೇನಾವೃತಾಯ ತೇ ॥ ೧೭೮ ॥

ಇತ್ಯುಕ್ತ್ವಾ ದಂಡವದ್ಭೂಮೌ ಪ್ರಣಿಪತ್ಯ ಶಿವಂ ಶಿವಾಂ ।
ಜಪೇತ್ಪಂಚಾಕ್ಷರೀಂ ವಿದ್ಯಾಮಷ್ಟೋತ್ತರಶತಾವರಾಂ ॥ ೧೭೯ ॥

ತಥೈವ ಶಕ್ತಿವಿದ್ಯಾಂ ಚ ಜಪಿತ್ವಾ ತತ್ಸಮರ್ಪಣಂ ।
ಕೃತ್ವಾ ತಂ ಕ್ಷಮಯಿತ್ವೇಶಂ ಪೂಜಾಶೇಷಂ ಸಮಾಪಯೇತ್ ॥ ೧೮೦ ॥

ಏತತ್ಪುಣ್ಯತಮಂ ಸ್ತೋತ್ರಂ ಶಿವಯೋರ್ಹೃದಯಂಗಮಂ ।
ಸರ್ವಾಭೀಷ್ಟಪ್ರದಂ ಸಾಕ್ಷಾದ್ಭುಕ್ತಿಮುಕ್ತ್ಯೈಕಸಾಧನಂ ॥ ೧೮೧ ॥

ಯ ಇದಂ ಕೀರ್ತಯೇನ್ನಿತ್ಯಂ ಶೃಣುಯಾದ್ವಾ ಸಮಾಹಿತಃ ।
ಸ ವಿಧೂಯಾಶು ಪಾಪಾನಿ ಶಿವಸಾಯುಜ್ಯಮಾಪ್ನುಯಾತ್ ॥ ೧೮೨ ॥

---

೧೭೮-೧೮೦. ಪಂಚಾವರಣರೂಪವಾದ ಪ್ರಪಂಚದಿಂದಾವೃತನೂ, ಆದಿ ಕಾರಣನೂ, ಅಂಬಾಸಹಿತನೂ, ಪುತ್ರಸಹಿತನೂ ಆದ ಶಿವನಿಗೆ ನಮಸ್ಕಾರವು. ಎಂದು ಹೇಳಿ ಶಿವದಂಪತಿಗಳಿಗೆ ಭೂಮಿಯಲ್ಲಿ ಸಾಷ್ಟಾಂಗನಮಸ್ಕಾರವನ್ನು ಮಾಡಿ ನೂರೆಂಟು ಪಂಚಾಕ್ಷರಮಂತ್ರವನ್ನು ಜಪಿಸಿ, ಹಾಗೆಯೇ ನೂರೆಂಟು ದೇವೀಮಂತ್ರವನ್ನೂ ಜಪಿಸಿ ಶಿವದಂಪತಿಗಳಿಗೆ ಸಮರ್ಪಿಸಿ, ಕ್ಷಮಾಪಣೆಯನ್ನು ಕೇಳಿಕೊಂಡು ಮಿಕ್ಕ ಪೂಜೆಯನ್ನು ಮುಗಿಸಬೇಕು.

೧೮೧-೧೮೨. ಈ ಸ್ತೋತ್ರವು ಶಿವದಂಪತಿಗಳಿಗೆ ಪ್ರೀತಿಯನ್ನುಂಟು ಮಾಡುವ ಪುಣ್ಯಕರವಾದ ಸ್ತೋತ್ರವಾಗಿರುವುದು. ಸಮಸ್ತ ಇಷ್ಟಾರ್ಥಗಳನ್ನೂ ಭುಕ್ತಿ, ಮುಕ್ತಿಗಳನ್ನೂ ಕೊಡುವುದು. ಇದನ್ನು ಯಾರು ಪ್ರತಿದಿನವೂ ಪಠನ ಮಾಡುವರೋ ಅಥವಾ ಶ್ರವಣಮಾಡುವರೋ ಅವರು ಬೇಗನೆ ಪಾಪಗಳನ್ನು ಕಳೆದುಕೊಂಡು ಶಿವಸಾಯುಜ್ಯವನ್ನು ಪಡೆವರು.

ಗೋಘ್ನಶ್ಚೈವ ಕೃತಘ್ನಶ್ಚ ವೀರಹಾ ಭ್ರೂಣಹಾಪಿ ವಾ ।
ಶರಣಾಗತಘಾತೀ ಚ ಮಿತ್ರವಿಶ್ರಂಭಘಾತಕಃ ॥ ೧೮೩ ॥

ದುಷ್ಟಪಾಪಸಮಾಚಾರೋ ಮಾತೃಹಾ ಪಿತೃಹಾಪಿ ವಾ ।
ಸ್ತವೇನಾನೇನ ಜಪ್ತೇನ ತತ್ತತ್ಪಾಪಾತ್ಪ್ರಮುಚ್ಯತೇ ॥ ೧೮೪ ॥

ದುಃಸ್ವಪ್ನಾದಿಮಹಾನರ್ಥಸೂಚಕೇಷು ಭಯೇಷು ಚ ।
ಯದಿ ಸಂಕೀರ್ತಯೇದೇತನ್ನ ತತೋಽನರ್ಥಭಾಗ್ಭವೇತ್ ॥ ೧೮೫ ॥

ಆಯುರಾರೋಗ್ಯಮೈಶ್ವರ್ಯಂ ಯಚ್ಚಾನ್ಯದಪಿ ವಾಂಛಿತಂ ।
ಸ್ತೋತ್ರಸ್ಯಾಸ್ಯ ಜಪೇ ತಿಷ್ಠಂಸ್ತತ್ಸರ್ವಂ ಲಭತೇ ನರಃ ॥ ೧೮೬ ॥

ಅಸಂಪೂಜ್ಯ ಶಿವಂ ಸ್ತೋತ್ರಜಪಾತ್ಫಲಮುದಾಹೃತಂ ।
ಸಂಪೂಜ್ಯ ಚ ಜಪೇ ತಸ್ಯ ಫಲಂ ವಕ್ತುಂ ನ ಶಕ್ಯತೇ ॥ ೧೮೭ ॥

---

೧೮೩-೧೮೪. ಗೋವನ್ನೂ, ವೀರನನ್ನೂ, ಗರ್ಭವನ್ನೂ, ಶರಣಾಗತನನ್ನೂ, ಮಾತಾಪಿತೃಗಳನ್ನೂ ನಾಶಮಾಡಿದವರೂ, ಕೃತಘ್ನರೂ, ಮಿತ್ರರಿಗೆ ಮೋಸಮಾಡಿದವರೂ, ಕೆಟ್ಟ ಪಾಪಕಾರ್ಯಗಳನ್ನು ಮಾಡಿದವರೂ ಆದರೂ, ಈ ಸ್ತೋತ್ರವನ್ನು ಜಪಮಾಡಿದರೆ ಎಂದರೆ ಪಠನಮಾಡಿದರೆ ಆ ಪಾಪಗಳಿಂದ ಬಿಡುಗಡೆಯನ್ನು ಹೊಂದುವರು.

೧೮೫. ಕೆಟ್ಟಕನಸು ಮುಂತಾದ ಮಹಾನರ್ಥವನ್ನೂ, ಭಯವನ್ನೂ, ಸೂಚಿಸುವ ಸಂದರ್ಭಗಳಲ್ಲಿ ಈ ಸ್ತೋತ್ರವನ್ನು ಪಾರಾಯಣ ಮಾಡಿದರೆ ಅದರಿಂದಾಗುವ (ಉಂಟಾಗುವ) ಅನರ್ಥಗಳು ತಪ್ಪಿಹೋಗುವುವು ಎಂದರೆ ಆ ತೊಂದರೆಗಳು ಪರಿಹಾರವಾಗುವುವು.

೧೮೬. ಮನುಷ್ಯನು ಈ ಸ್ತೋತ್ರಜಪದಿಂದ, ಆಯುಸ್ಸು, ಆರೋಗ್ಯ, ಐಶ್ವರ್ಯ ಮುಂತಾದ ಸಕಲ ಇಷ್ಟಾರ್ಥಗಳನ್ನೂ ಪಡೆಯುವನು.

೧೮೭. ಶಿವನನ್ನು ಪೂಜಿಸದೆ ಬರೀ ಸ್ತೋತ್ರಪಾರಾಯಣದಿಂದಲೇ ಫಲವಾಗುವುದೆಂದು ಹೇಳಿರುವುದು. ಹೀಗಿರುವಲ್ಲಿ ಶಿವನನ್ನು ಪೂಜಿಸಿ ಸ್ತೋತ್ರವನ್ನೂ ಪಾರಾಯಣಮಾಡಿದರೆ ಅದರ ಫಲವನ್ನು ಹೇಳಲು ಸಾಧ್ಯವಿಲ್ಲ.

ಆಸ್ತಾಮಿಯಂ ಫಲಾವಾಪ್ತಿರಸ್ಮಿನ್ ಸಂಕೀರ್ತಿತೇ ಸತಿ ।
ಸಾರ್ಧಮಂಬಿಕಯಾ ದೇವಃ ಶ್ರುತ್ವೈವಂ ದಿವಿ ತಿಷ್ಠತಿ ॥ ೧೮೮ ॥

ತಸ್ಮಾನ್ನಭಸಿ ಸಂಪೂಜ್ಯ ದೇವದೇವಂ ಸಹೋಮಯಾ ।
ಕೃತಾಂಜಲಿಪುಟಸ್ತಿಷ್ಠಂಸ್ತೋತ್ರಮೇತದುದೀರಯೇತ್ ॥ ೧೮೯ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-
ಮುತ್ತರಭಾಗೇ ಶಿವಮಹಾಸ್ತೋತ್ರವರ್ಣನಂ ನಾಮ
ಏಕತ್ರಿಂಶೋಽಧ್ಯಾಯಃ



---

೧೮೮-೧೮೯. ಈ ಫಲವಿಷಯವಿರಲಿ. ಈ ಸ್ತೋತ್ರಪಾರಾಯಣವನ್ನು ಮಾಡಿದರೆ ಅಂಬಾಸಹಿತನಾದ ಶಿವನು ತಾನೇ ಆಕಾಶದಲ್ಲಿ ಬಂದು ನಿಂತು ಕೇಳುವನು. ಆದುದರಿಂದ ಉಮಾಸಹಿತನಾದ ಶಿವನನ್ನು ಆಕಾಶದಲ್ಲಿಯೇ ಪೂಜಿಸಿ ಕೈಮುಗಿದು ನಿಂತು ಈ ಸ್ತೋತ್ರಪಾರಾಯಣ ಮಾಡಬೇಕು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯವೀಯಸಂಹಿತೆಯ ಉತ್ತರ
ಭಾಗದಲ್ಲಿ ಶಿವಮಹಾಸ್ತೋತ್ರವರ್ಣನವೆಂಬ ಮೂವತ್ತೊಂದನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ದ್ವಾತ್ರಿಂಶೋಽಧ್ಯಾಯಃ

---

॥ ಉಪಮನ್ಯುರುವಾಚ ॥

ಏತತ್ತೇ ಕಥಿತಂ ಕೃಷ್ಣ ಕರ್ಮೇಹಾಮುತ್ರ ಸಿದ್ಧಿದಂ ।
ಕ್ರಿಯಾತಪೋಜಪಧ್ಯಾನಸಮುಚ್ಚಯಮಯಂ ಪರಂ ॥ ೧ ॥

ಅಥ ವಕ್ಷ್ಯಾಮಿ ಶೈವಾನಾಮಿಹೈವ ಫಲದಂ ನೃಣಾಂ ।
ಪೂಜಾಹೋಮಜಪಧ್ಯಾನತಪೋದಾನಮಯಂ ಮಹತ್ ॥ ೨ ॥

---

### ಮೂವತ್ತೆರಡನೆಯ ಅಧ್ಯಾಯವು

೧–೨. ಉಪಮನ್ಯುವು ಹೇಳಿದನು—ಎಲೈ ಕೃಷ್ಣನೇ, ಇಹಪರಲೋಕಗಳಲ್ಲಿ ಫಲವನ್ನು ಕೊಡತಕ್ಕ ಕ್ರಿಯೆ, ತಪಸ್ಸು, ಜಪ, ಧ್ಯಾನ ಇವುಗಳಿಂದ ಕೂಡಿದ ಶ್ರೇಷ್ಠವಾದ ಕರ್ಮವಿಚಾರವನ್ನು ಇದುವರೆಗೆ ಹೇಳಿದೆನು. ಇಲ್ಲಿಂದ ಮುಂದೆ ಶಿವಭಕ್ತರಾದ ಮನುಜರಿಗೆ ಇಹಲೋಕದಲ್ಲಿಯೇ ಫಲವನ್ನು ಕೊಡುವ ಹೋಮ, ಪೂಜೆ, ಜಪ, ಧ್ಯಾನ, ತಪಸ್ಸು, ದಾನ ಇವುಗಳ ಮಹಿಮೆಯನ್ನು ಹೇಳುವೆನು.

ತತ್ರ ಸಂಸಾಧಯೇತ್ಪೂರ್ವಂ ಮಂತ್ರಂ ಮಂತ್ರಾರ್ಥವಿತ್ತಮಃ ।
ದೃಷ್ಟಸಿದ್ಧಿಕರಂ ಕರ್ಮ ನಾನ್ಯಥಾ ಫಲದಂ ಯತಃ ॥ ೩ ॥

ಸಿದ್ಧಮಂತ್ರೋಽಪ್ಯದೃಷ್ಟೇನ ಪ್ರಬಲೇನ ತು ಕೇನಚಿತ್ ।
ಪ್ರತಿಬಂಧಫಲಂ ಕರ್ಮ ನ ಕುರ್ಯಾತ್ಸಹಸಾ ಬುಧಃ ॥ ೪ ॥

ತಸ್ಯ ತು ಪ್ರತಿಬಂಧಸ್ಯ ಕರ್ತುಂ ಶಕ್ಯೇಹ ನಿಷ್ಕೃತಿಃ ।
ಪರೀಕ್ಷ್ಯ ಶಕುನಾದ್ಯೈಸ್ತದಾದೌ ನಿಷ್ಕೃತಿಮಾಚರೇತ್ ॥ ೫ ॥

ಯೋಽನ್ಯಥಾ ಕುರುತೇ ಮೋಹಾತ್ಕರ್ಮೈಹಿಕಫಲಂ ನರಃ ।
ಸ ತೇನ ಫಲಭಾಕ್ನ ಸ್ಯಾತ್ಪ್ರಾಪ್ನುಯಾಚ್ಚೋಪಹಾಸ್ಯತಾಂ ॥ ೬ ॥

---

೩. ಇಹಲೋಕದಲ್ಲಿಯೇ ಫಲವನ್ನು ಕೊಡುವ ಕರ್ಮಗಳನ್ನು ಮಾಡುವ ಸಂದರ್ಭದಲ್ಲಿ, ಮನುಷ್ಯನು ಮೊದಲು ಮಂತ್ರಾರ್ಥವನ್ನು ತಿಳಿದು ಮಂತ್ರಸಿದ್ಧಿಯನ್ನು ಮಾಡಿಕೊಳ್ಳಬೇಕು. ಹಾಗಿಲ್ಲದಿದ್ದರೆ ಮಾಡಿದ ಕರ್ಮವು ಫಲದಾಯಕವಾಗುವುದಿಲ್ಲ.

೪. ಮಂತ್ರಸಿದ್ಧಿಯಾದರೂ ಪ್ರಬಲವಾದ ಯಾವುದೋ ಒಂದು ಅದೃಷ್ಟ ಫಲದಿಂದ ಕರ್ಮಫಲಕ್ಕೆ ತಡೆಯುಂಟಾಗುವುದು. ಆದುದರಿಂದ ಅಂತಹ ತಡೆಯುಂಟಾಗುವ ಕರ್ಮವನ್ನು ವಿದ್ವಾಂಸನಾದವನು ಚೆನ್ನಾಗಿ ವಿಚಾರಮಾಡದೆ ಆತುರದಿಂದ ಮಾಡಬಾರದು.

೫. ಅಂತಹ ಪ್ರತಿಬಂಧಕವನ್ನು ನಿವಾರಿಸುವುದಕ್ಕೆ ಪ್ರಾಯಶ್ಚಿತ್ತರೂಪವಾದ ಶಾಂತಿಕರ್ಮವನ್ನು ಮಾಡಬಹುದು. ಶಕುನಾದಿಗಳಿಂದ ಫಲಪ್ರಾಪ್ತಿಗೆ ಉಂಟಾಗುವ ತಡೆಯನ್ನು ಪರೀಕ್ಷಿಸಿ ಮೊದಲು ಪ್ರಾಯಶ್ಚಿತ್ತರೂಪವಾದ ಶಾಂತಿ ಕರ್ಮವನ್ನು ಆಚರಿಸಬೇಕು.

೬. ಯಾವ ಮನುಜನು ಪ್ರತಿಬಂಧಕನಿವೃತ್ತಿಗೆ ಪ್ರಾಯಶ್ಚಿತ್ತರೂಪವಾದ ಶಾಂತಿಕರ್ಮವನ್ನು ಮಾಡದೆ ಅಜ್ಞಾನದಿಂದ ಐಹಿಕಫಲದಾಯಕವಾದ ಕರ್ಮವನ್ನು ಮಾಡುವನೋ ಅವನು ಅದರಿಂದ ಫಲವನ್ನು ಹೊಂದಲಾರನು. ಅಲ್ಲದೆ ಲೋಕದಲ್ಲಿ ಹಾಸ್ಯಕ್ಕೂ ಗುರಿಯಾಗುವನು.

ಅವಿಸ್ರಬ್ಧೋ ನ ಕುರ್ವೀತ ಕರ್ಮ ದೃಷ್ಟಫಲಂ ಕ್ವಚಿತ್ ।
ಸ ಖಲ್ವಶ್ರದ್ಧಧಾನಃ ಸ್ಯಾನ್ನಾಶ್ರದ್ಧಃ ಫಲಮೃಚ್ಛತಿ ॥ ೭ ॥

ನಾಪರಾಧೋಽಸ್ತಿ ದೇವಸ್ಯ ಕರ್ಮಣ್ಯಪಿತು ನಿಷ್ಫಲೇ ।
ಯಥೋಕ್ತಕಾರಿಣಾಂ ಪುಂಸಾಮಿಹೈವ ಫಲದರ್ಶನಾತ್ ॥ ೮ ॥

ಸಾಧಕಃ ಸಿದ್ಧಮಂತ್ರಶ್ಚ ನಿರಸ್ತಪ್ರತಿಬಂಧಕಃ ।
ವಿಶ್ವಸ್ತಃ ಶ್ರದ್ಧಧಾನಶ್ಚ ಕುರ್ವನ್ನಾಪ್ನೋತಿ ತತ್ಫಲಂ ॥ ೯ ॥

ಅಥವಾ ತತ್ಫಲಾವ್ಯಾಪ್ತ್ಯೈ ಬ್ರಹ್ಮಚರ್ಯರತೋ ಭವೇತ್ ।
ರಾತ್ರೌ ಹವಿಷ್ಯಮಶ್ನೀಯಾತ್ಪಾಯಸಂ ವಾ ಫಲಾನಿ ವಾ ॥ ೧೦ ॥

ಹಿಂಸಾದಿ ಯನ್ನಿಷಿದ್ಧಂ ಸ್ಯಾನ್ನ ಕುರ್ಯಾನ್ಮನಸಾಪಿ ತತ್ ।
ಸದಾ ಭಸ್ಮಾನುಲಿಪ್ತಾಂಗಸ್ಸುವೇಷಶ್ಚ ಶುಚಿರ್ಭವೇತ್ ॥ ೧೧ ॥

---

೭. ನಂಬಿಕೆಯಿಲ್ಲದವನು ಇಹಲೋಕದಲ್ಲಿಯೇ ಫಲವನ್ನು ಕೊಡುವ ಕರ್ಮವನ್ನೆಂದಿಗೂ ಮಾಡಬಾರದು. ಅವನು ಅಪನಂಬಿಕೆಯಿಂದ ಮಾಡಿದ ಕರ್ಮಕ್ಕೆ ಫಲವನ್ನು ಹೊಂದಲಾರನು.

೮. ಶಾಸ್ತ್ರವಿಹಿತವಾದ ರೀತಿಯಲ್ಲಿ ಕರ್ಮವನ್ನು ಮಾಡಿದ ಅನೇಕರಿಗೆ ಇಹಲೋಕದಲ್ಲಿಯೇ ಫಲಪ್ರಾಪ್ತಿಯಾಗಿರುವುದನ್ನು ನೋಡಿರುವುದರಿಂದ ಕರ್ಮವು ಕಾರಣಾಂತರದಿಂದ ನಿಷ್ಫಲವಾದಲ್ಲಿ ದೇವತೆಯು ತಪ್ಪೇನೂ ಇರುವುದಿಲ್ಲ.

೯. ಇಹಫಲಸಾಧನೆಗಾಗಿ ಕರ್ಮಮಾಡತಕ್ಕವನು ಮಂತ್ರಸಿದ್ಧಿಯನ್ನು ಮಾಡಿಕೊಂಡು ಪ್ರತಿಬಂಧಕಗಳನ್ನು ನಿವಾರಿಸಿ ನಂಬಿಕೆಯಿಂದಲೂ, ಆಸಕ್ತಿಯಿಂದಲೂ ಕರ್ಮವನ್ನು ಮಾಡಿದರೆ ಅದರ ಪೂರ್ಣಫಲವನ್ನು ಪಡೆಯುವನು.

೧೦-೧೧. ಅಥವಾ ಫಲಪ್ರಾಪ್ತಿಗಾಗಿ ಕರ್ಮಮಾಡತಕ್ಕವನು ಬ್ರಹ್ಮಚರ್ಯವ್ರತದಲ್ಲಿದ್ದು [ಸ್ತ್ರೀಸಂಗಮಾಡದೆ] ರಾತ್ರಿಯಲ್ಲಿ ಹವಿಸ್ಸನ್ನಾಗಲಿ, ಪಾಯಸವನ್ನಾಗಲಿ, ಹಣ್ಣುಗಳನ್ನಾಗಲಿ, ಆಹಾರಮಾಡಿಕ್ಕೊಂಡು ಶಾಸ್ತ್ರನಿಷಿದ್ಧವಾದ ಹಿಂಸಾದಿ ಕೃತ್ಯಗಳನ್ನು ಮನಸ್ಸಿನಿಂದಲೂ ಮಾಡದೆ, ಯಾವಾಗಲೂ ಭಸ್ಮಧಾರಣೆಯನ್ನು ಮಾಡಿಕ್ಕೊಂಡು ಒಳ್ಳೆಯ ವೇಷದಿಂದ ಪರಿಶುದ್ಧನಾಗಿರಬೇಕು.

ಇತ್ಥಮಾಚಾರವಾನ್ಭೂತ್ವಾ ಸ್ವಾನುಕೂಲೇ ಶುಭೇಽಹನಿ।
ಪೂರ್ವೋಕ್ತಲಕ್ಷಣೇ ದೇಶೇ ಪುಷ್ಪದಾಮಾದ್ಯಲಂಕೃತೇ ॥ ೧೨ ॥

ಆಲಿಪ್ಯ ಶಕೃತಾ ಭೂಮಿಂ ಹಸ್ತಮಾನಾವರಾಂ ಯಥಾ ।
ವಿಲಿಖೇತ್ಕಮಲೇ ಭದ್ರೇ ದೀಪ್ಯಮಾನಂ ಸ್ವತೇಜಸಾ ॥ ೧೩ ॥

ತಪ್ತಜಾಂಬೂನದಮಯಮಷ್ಟಪತ್ರಂ ಸಕೇಸರಂ।
ಮಧ್ಯೇ ಕರ್ಣಿಕಯಾ ಯುಕ್ತಂ ಸರ್ವರತ್ನೈರಲಂಕೃತಂ ॥ ೧೪ ॥

ಸ್ವಾಕಾರಸದೃಶೇನೈವ ನಾಲೇನ ಚ ಸಮನ್ವಿತಂ ।
ತಾದೃಶೇ ಸ್ವರ್ಣನಿರ್ಮಾಣೇ ಕಂದೇ ಸಮ್ಯಗ್ವಿಧಾನತಃ ॥ ೧೫

ತತ್ರಾಣಿಮಾದಿಕಂ ಸರ್ವಂ ಸಂಕಲ್ಪ್ಯ ಮನಸಾ ಪುನಃ ।
ರತ್ನಜಂ ವಾಥ ಸೌವರ್ಣಂ ಸ್ಫಾಟಿಕಂ ವಾ ಸಲಕ್ಷಣಂ।
ಲಿಂಗಂ ಸವೇದಿಕಂ ಚೈವ ಸ್ಥಾಪಯಿತ್ವಾ ವಿಧಾನತಃ ॥ ೧೬ ॥

---

೧೨-೧೩. ಈರೀತಿಯಾದ ಆಚಾರದಿಂದ ಕೂಡಿದವನಾಗಿ ತನಗೆ ಅನುಕೂಲವಾದ ಶುಭದಿನಲ್ಲಿ ಹಿಂದೆ ಹೇಳಿದ ಲಕ್ಷಣಗಳಿಂದ ಕೂಡಿದ ಪ್ರದೇಶದಲ್ಲಿ ಒಂದುಮೊಳ ವಿಸ್ತಾರಕ್ಕೆ ಕಡಿಮೆಯಿಲ್ಲದಂತೆ ಭೂಮಿಯನ್ನು ಸಗಣಿಯಿಂದ ಸಾರಿಸಿ ಅದರಮೇಲೆ ಮಂಗಳಕರವಾದ ಎರಡು ಪದ್ಮಗಳನ್ನು ಪ್ರಕಾಶಿಸುವಂತೆ ರಂಗವಲ್ಲಿಗಳಿಂದ ಬರೆದು ಪುಷ್ಪಮಾಲಾದಿಗಳಿಂದ ಅಲಂಕರಿಸಬೇಕು.

೧೪-೧೫. ಆ ಕಮಲಗಳು ಪುಟವಿಕ್ಕಿದ ಚಿನ್ನದ ಬಣ್ಣದಂತಿರುವ ಎಂಟು ದಳಗಳಿಂದಲೂ, ಕೇಸರಗಳಿಂದಲೂ, ನಡುವೆ ಕರ್ಣಿಕೆಯಿಂದಲೂ ಕೂಡಿ ಸಮಸ್ತರತ್ನಾಲಂಕಾರಗಳನ್ನು ಪಡೆದಿರಬೇಕು. ಆ ಕಮಲಗಳಿಗೆ ತಕ್ಕ ನಾಳದಿಂದಲೂ, ಗೆಡ್ಡೆಯಿಂದಲೂ ಕೂಡಿದ ಸ್ಥಳದಲ್ಲಿ ವಿಧಿಗನುಸಾರವಾಗಿ,

೧೬-೧೭. ಅಣಿಮಾದಿಸಪ್ತಸಿದ್ಧಿಗಳನ್ನು ಸಂಕಲ್ಪಪೂರ್ವಕವಾಗಿ ಮನಸ್ಸಿನಿಂದಲೇ ಕಲ್ಪಿಸಿ ರತ್ನದಿಂದಲಾಗಲಿ, ಸುವರ್ಣದಿಂದಲಾಗಲಿ, ಸ್ಫಟಿಕದಿಂದಲಾಗಲಿ ಮಾಡಿದ ಲಕ್ಷಣಯುಕ್ತವಾದ ಲಿಂಗವನ್ನು ವೇದೋಕ್ತವಿಧಿಯಿಂದ

**ತತ್ರಾವಾಹ್ಯ ಯಜೇದ್ದೇವಂ ಸಾಂಬಂ ಸಗಣಮವ್ಯಯಂ ।**
**ತತ್ರ ಮಾಹೇಶ್ವರೀ ಕಲ್ಪ್ಯಾ ಮೂರ್ತಿಮೂರ್ತಿಮತಃ ಪ್ರಭೋಃ ॥ ೧೭ ॥**

**ಚತುರ್ಭುಜಾ ಚತುರ್ವಕ್ತ್ರಾ ಸರ್ವಾಭರಣಭೂಷಿತಾ ।**
**ಶಾರ್ದೂಲಚರ್ಮವಸನಾ ಕಿಂಚದ್ವಿಹಸಿತಾನನಾ ॥ ೧೮ ॥**

**ವರದಾಭಯಹಸ್ತಾ ಚ ಮೃಗಟಂಕಧರಾ ತಥಾ ।**
**ಅಥವಾಽಷ್ಟಭುಜಾ ಚಿಂತ್ಯಾ ಚಿಂತಕಸ್ಯ ಯಥಾರುಚಿ ॥ ೧೯ ॥**

**ತದಾ ತ್ರಿಶೂಲಪರಶುಖಡ್ಗವಜ್ರಾಣಿ ದಕ್ಷಿಣೇ ।**
**ವಾಮೇ ಪಾಶಾಂಕುಶೌ ತದ್ವತ್ಖೇಟಂ ನಾಗಂ ಚ ಬಿಭ್ರತೀ ॥ ೨೦ ॥**

**ಬಾಲಾರ್ಕಸದೃಶಪ್ರಖ್ಯಾ ಪ್ರತಿವಕ್ತ್ರಂ ತ್ರಿಲೋಚನಾ ।**
**ತಸ್ಯಾಃ ಪೂರ್ವಮುಖಂ ಸೌಮ್ಯಂ ಸ್ವಾಕಾರಸದೃಶಪ್ರಭಂ ॥ ೨೧ ॥**

---

ಸ್ಥಾಪಿಸಿ, ಆ ಲಿಂಗದಲ್ಲಿ ಅಂಬಾಸಹಿತನೂ, ಪರಿವಾರಗಣಗಳಿಂದ ಕೂಡಿದವನೂ, ಆದ ದೇವನನ್ನು ಆವಾಹನೆಮಾಡಿ ಪೂಜಿಸಬೇಕು.

೧೮-೧೯. ಈ ಸಂದರ್ಭದಲ್ಲಿ ಮೂರ್ತಿರೂಪನಾದ ಶಿವನ ಪತ್ನಿಯಾದ ದೇವಿಗೆ ಚತುರ್ಭುಜಗಳೂ, ನಾಲ್ಕು ಮುಖಗಳೂ ಇದ್ದು ಸಮಸ್ತವಾದ ಆಭರಣಗಳನ್ನೂ ಧರಿಸಿ, ಹುಲಿಯ ಚರ್ಮವನ್ನೇ ವಸ್ತ್ರವಾಗಿ ಹೊದ್ದುಕೊಂಡು ಮಂದಹಾಸವನ್ನು ಸೂಸುತ್ತಾ ವರದ, ಅಭಯ, ಮೃಗ, ಟಂಕಾಯುಧಗಳನ್ನು ಧರಿಸಿರುವಂತೆ ಧ್ಯಾನಿಸಬೇಕು. ಧ್ಯಾನಮಾಡುವವನ ಇಷ್ಟಾನುಸಾರವಾಗಿ ದೇವಿಗೆ ಅಷ್ಟಭುಜಗಳಿರುವಂತೆ ಬೇಕಾದರೂ ಧ್ಯಾನಮಾಡಬಹುದು.

೨೦-೨೩. ಅಷ್ಟಭುಜಾದೇವಿಯನ್ನು ಚಿಂತಿಸಿದಾಗ ಬಲಗೈಗಳಲ್ಲಿ ತ್ರಿಶೂಲ, ಪರಶು, ಖಡ್ಗ, ವಜ್ರ ಈ ಆಯುಧಗಳನ್ನೂ, ಎಡಗೈಗಳಲ್ಲಿ ಪಾಶ, ಅಂಕುಶ, ಗುರಾಣಿ, ನಾಗ ಈ ಆಯುಧಗಳನ್ನೂ ಧರಿಸಿ ಪ್ರತಿಮುಖದಲ್ಲಿಯೂ, ಬಾಲಸೂರ್ಯಕಿರಣದಂತಿರುವ ಮೂರುಕಣ್ಣುಗಳು ಇರುವಂತೆಯೂ, ಪೂರ್ವದಿಕ್ಕಿನ ಮುಖವು ಸೌಮ್ಯವಾಗಿ ತನ್ನ ಆಕಾರಕ್ಕೆ ತಕ್ಕಂತೆಯೂ, ದಕ್ಷಿಣದಿಕ್ಕಿನ ಮುಖವು ನೀಲಮೇಘಕ್ಕೆ ಸಮಾನವಾಗಿ ಭಯಂಕರವಾಗಿಯೂ, ಉತ್ತರ

ದಕ್ಷಿಣಂ ನೀಲಜೀಮೂತಸದೃಶಂ ಘೋರದರ್ಶನಂ ।
ಉತ್ತರಂ ವಿದ್ರುಮಪ್ರಖ್ಯಂ ನೀಲಾಲಕವಿಭೂಷಿತಂ ॥ ೨೨ ॥

ಪಶ್ಚಿಮಂ ಪೂರ್ಣಚಂದ್ರಾಭಂ ಸೌಮ್ಯಮಿಂದುಕಲಾಧರಂ ।
ತದಂಕಮಂಡಲಾರೂಢಾ ಶಕ್ತಿರ್ಮಾಹೇಶ್ವರೀ ಪರಾ ॥ ೨೩ ॥

ಮಹಾಲಕ್ಷ್ಮೀರಿತಿ ಖ್ಯಾತಾ ಶ್ಯಾಮಾ ಸರ್ವಮನೋಹರಾ ।
ಮೂರ್ತಿಂ ಕೃತ್ವೈವಮಾಕಾರಂ ಸಕಲೀಕೃತ್ಯ ಚ ಕ್ರಮಾತ್ ॥ ೨೪ ॥

ಮೂರ್ತಿಮಂತಮಥಾವಾಹ್ಯ ಯಜೇತ್ಪರಮಕಾರಣಂ ।
ಸ್ನಾನಾರ್ಥೇ ಕಲ್ಪಯೇತ್ತತ್ರ ಪಂಚಗವ್ಯಂ ತು ಕಾಪಿಲಂ ॥ ೨೫ ॥

ಪಂಚಾಮೃತಂ ಚ ಪೂರ್ಣಾನಿ ಬೀಜಾನಿ ಚ ವಿಶೇಷತಃ ।
ಪುರಸ್ತಾನ್ಮಂಡಲಂ ಕೃತ್ವಾ ರತ್ನಚೂರ್ಣಾದ್ಯಲಂಕೃತಂ ॥ ೨೬ ॥

---

ದಿಕ್ಕಿನ ಮುಖವು ಹವಳದ ಕಾಂತಿಯಂತೆ ಕಪ್ಪಾದ ಮುಂಗುರುಳುಗಳಿಂದ ಶೋಭಿಸುತ್ತಲೂ, ಪಶ್ಚಿಮದಿಕ್ಕಿನ ಮುಖವು ಪೂರ್ಣಚಂದ್ರನಂತೆ ಸೌಮ್ಯವಾದುದಾಗಿ ಚಂದ್ರಕಲೆಯನ್ನು ಧರಿಸಿದುದಾಗಿಯೂ, ಇರುವಂತೆ ಚಿಂತಿಸಿ ಶಿವನ ತೊಡೆಯಮೇಲೆ ಕುಳಿತ ಮಾಹೇಶ್ವರೀರೂಪವಾದ ಪರಾಶಕ್ತಿಯನ್ನು ಧ್ಯಾನಿಸಬೇಕು.

೨೪. ಈ ದೇವಿಯು ಮನೋಹರವಾದ ಮೇಘವರ್ಣದಿಂದ ಕೂಡಿದವಳಾಗಿ ಮಹಾಲಕ್ಷ್ಮಿಯೆಂಬ ಹೆಸರನ್ನು ಹೊಂದಿರುವಳು. ಈರೀತಿಯಾದ ಆಕಾರದಿಂದ ಕೂಡಿದ ಮೂರ್ತಿಯನ್ನು ಮಾಡಿ, ಕ್ರಮವಾಗಿ ಸಕಲೀಕರಣಮುದ್ರೆಯಿಂದ ಸಮಸ್ತಕ್ಕೂ ಕಾರಣನಾದ ಪರಮೇಶ್ವರನನ್ನು ಮೂರ್ತಿರೂಪದಿಂದ ಆವಾಹನೆಮಾಡಿ ಪೂಜಿಸಬೇಕು.

೨೫–೨೬. ಪೂಜಾಸಂದರ್ಭದಲ್ಲಿ ಶಿವನ ಸ್ನಾನಾರ್ಥವಾಗಿ ಕಪಿಲವರ್ಣದ ಹಸುವಿನ ಪಂಚಗವ್ಯಗಳನ್ನೂ, ಪಂಚಾಮೃತಗಳಿಂದ ತುಂಬಿದ ಪಾತ್ರೆಗಳನ್ನೂ ಕಲ್ಪಿಸಿ, ಶಿವನ ಲಿಂಗ ಅಥವಾ ಮೂರ್ತಿಯ ಮುಂಭಾಗದಲ್ಲಿ ಮಂಡಲ

ಕರ್ಣಿಕಾಯಾಂ ಪ್ರವಿನ್ಯಸ್ಯೇದೀಶಾನಕಲಶಂ ಪುನಃ ।
ಸದ್ಯಾದಿಕಲಶಾನ್ಪಶ್ಚಾತ್ಪರಿತಸ್ತಸ್ಯ ಕಲ್ಪಯೇತ್ ॥ ೨೭ ॥

ತತೋ ವಿದ್ಯೇಶಕಲಶಾನಷ್ಟೌ ಪೂರ್ವಾದಿವತ್ಕ್ರಮಾತ್ ।
ತೀರ್ಥಾಂಬುಪೂರಿತಾನ್ಕೃತ್ವಾ ಸೂತ್ರೇಣಾವೇಷ್ಟ್ಯ ಪೂರ್ವವತ್ ॥ ೨೮ ॥

ಪುಣ್ಯದ್ರವ್ಯಾಣಿ ನಿಕ್ಷಿಪ್ಯ ಸಮಂತ್ರಂ ಸನಿಧಾನಕಂ ।
ದುಕೂಲಾದ್ಯೇನ ವಸ್ತ್ರೇಣ ಸಮಾಚ್ಛಾದ್ಯ ಸಮಂತತಃ ॥ ೨೯ ॥

ಸರ್ವತ್ರ ಮಂತ್ರಂ ವಿನ್ಯಸ್ಯ ತತ್ತನ್ಮಂತ್ರಪುರಸ್ಸರಂ ।
ಸ್ನಾನಕಾಲೇ ತು ಸಂಪ್ರಾಪ್ತೇ ಸರ್ವಮಂಗಲನಿಃಸ್ವನೈಃ ॥ ೩೦ ॥

ಪಂಚಗವ್ಯಾದಿಭಿಶ್ಚೈವ ಸ್ನಾಪಯೇತ್ಪರಮೇಶ್ವರಂ ।
ತತಃ ಕುಶೋದಕಾದ್ಯಾನಿ ಸ್ವರ್ಣರತ್ನೋದಕಾನ್ಯಪಿ ॥ ೩೧ ॥

ಗಂಧಪುಷ್ಪಾದಿಸಿದ್ಧಾನಿ ಮಂತ್ರಸಿದ್ಧಾನಿ ಚ ಕ್ರಮಾತ್ ।
ಉದ್ಧೃತ್ಯೋದ್ಧೃತ್ಯ ಮಂತ್ರೇಣ ತೈಸ್ತೈಃ ಸ್ನಾಪ್ಯ ಮಹೇಶ್ವರಂ ॥ ೩೨ ॥

---

ವನ್ನು ಮಾಡಿ ರತ್ನದ ರಂಗವಲ್ಲಿಗಳಿಂದಲಂಕರಿಸಿ, ನಡುವೆ ಇರುವ ಕರ್ಣಿಕೆಯಲ್ಲಿ ಈಶಾನಕಲಶವನ್ನೂ, ತರುವಾಯ ಸುತ್ತಲೂ ನಾಲ್ಕುದಿಕ್ಕುಗಳಲ್ಲಿ ಸದ್ಯೋಜಾತಾದಿಕಲಶಗಳನ್ನೂ ಸ್ಥಾಪಿಸಬೇಕು.

೨೮-೩೦. ಆಮೇಲೆ ಪೂರ್ವಾದಿ ಎಂಟುದಿಕ್ಕುಗಳಲ್ಲಿ ಎಂಟು ವಿದ್ಯೇಶ್ವರ ಕಲಶಗಳನ್ನಿಟ್ಟು ತೀರ್ಥೋದಕಗಳನ್ನು ತುಂಬಿ, ದಾರವನ್ನು ಸುತ್ತಿ, ಪರಿಶುದ್ಧ ವಸ್ತುಗಳನ್ನು ಮಂತ್ರಪೂರ್ವಕವಾಗಿ ಕಲಶದೊಳಗೆ ಹಾಕಿ, ವಸ್ತ್ರಗಳಿಂದಲಂಕರಿಸಿ, ಸ್ನಾನಕಾಲವು ಪ್ರಾಪ್ತವಾಗುತ್ತಲು ಮಂಗಳವಾದ್ಯಪುರಸ್ಸರವಾಗಿ ಪಂಚಗವ್ಯಾದಿ ದ್ರವ್ಯಗಳಿಂದ ಪರಮೇಶ್ವರನಿಗೆ ಸ್ನಾನಮಾಡಿಸಬೇಕು.

೩೧-೩೨. ಬಳಿಕ, ಕುಶೋದಕ, ಸ್ವರ್ಣೋದಕ, ರತ್ನೋದಕ, ಗಂಧೋದಕ, ಪುಷ್ಪೋದಕಗಳ ಸ್ನಾನವನ್ನು ಕ್ರಮವಾಗಿ ಮಂತ್ರಪೂರ್ವಕವಾಗಿ ಆಯಾ ವಸ್ತುಗಳನ್ನು ತೆಗೆದುಕೊಂಡು ಸ್ನಾನಮಾಡಿಸಿ, ಗಂಧಪುಷ್ಪದೀಪಾದಿಗಳನ್ನು ಸಮರ್ಪಿಸಿ ಪೂಜಾಕರ್ಮವನ್ನು ನಡೆಸಬೇಕು.

**ಗಂಧಪುಷ್ಪಾದಿದೀಪಾಂಶ್ಚ ಪೂಜಾಕರ್ಮ ಸಮಾಚರೇತ್ ।**
**ಪಲಾವರಃ ಸ್ಯಾದಾಲೇಪ ಏಕಾದಶಪಲೋತ್ತರಃ ॥ ೩೩ ॥**

**ಸುವರ್ಣರತ್ನಪುಷ್ಪಾಣಿ ಶುಭಾನಿ ಸುರಭೀಣಿ ಚ ।**
**ನೀಲೋತ್ಪಲಾದ್ಯುತ್ಪಲಾನಿ ಬಿಲ್ವಪತ್ರಾಣ್ಯನೇಕಶಃ ॥ ೩೪ ॥**

**ಕಮಲಾನಿ ಚ ರಕ್ತಾನಿ ಶ್ವೇತಾನ್ಯಪಿ ಚ ಶಂಭವೇ ।**
**ಕೃಷ್ಣಾಗುರೂದ್ಭವೋ ಧೂಪಃ ಸಕರ್ಪೂರಾಜ್ಯಗುಗ್ಗುಲಃ ॥ ೩೫ ॥**

**ಕಪಿಲಾಘೃತಸಂಸಿದ್ಧಾ ದೀಪಾಃ ಕರ್ಪೂರವರ್ತಿಜಾಃ ।**
**ಪಂಚ ಬ್ರಹ್ಮಷಡಂಗಾನಿ ಪೂಜಾನ್ಯಾವರಣಾನಿ ಚ ॥ ೩೬ ॥**

**ನೈವೇದ್ಯಃ ಪಯಸಾ ಸಿದ್ಧಃ ಸಗುಡಾಜ್ಯೋ ಮಹಾಚರುಃ ।**
**ಪಾಟಲೋತ್ಪಲಪದ್ಮಾದ್ಯೈಃ ಪಾನೀಯಂ ಚ ಸುಗಂಧಿತಂ ॥ ೩೭ ॥**

---

೩೩-೩೪. ಶಿವನಿಗೆ ಗಂಧವು ಒಂದು ಪಲಕ್ಕೆ ಕಡಿಮೆಯಿಲ್ಲದೆ ಹನ್ನೊಂದು ಪಲಕ್ಕೆ ಹೆಚ್ಚದೆ ಇರಬೇಕು. ಚಿನ್ನ ಮತ್ತು ರತ್ನದ ಪುಷ್ಪಗಳನ್ನೂ, ಮಂಗಳಕರವಾದ ಸುಗಂಧವಾದ ಹೂಗಳನ್ನೂ, ನೀಲಿ, ಕೆಂಪು ಮತ್ತು ಬಿಳಿಯ ಬಣ್ಣದ ಕಮಲಗಳನ್ನೂ, ಬಿಲ್ವಪತ್ರೆಗಳನ್ನೂ ಪೂಜಾರ್ಥವಾಗಿ ಉಪಯೋಗಿಸ ಬೇಕು.

೩೫-೩೬. ಕರ್ಪೂರ, ತುಪ್ಪ, ಗುಗ್ಗುಲ ಇವುಗಳಿಂದ ಕೂಡಿದ ಕರಿ ಅಗರುಚಕ್ಕೆಯ ಧೂಪವೂ, ಕಪಿಲೆ ಹಸುವಿನ ತುಪ್ಪದಿಂದ ಮಾಡಿದ ಧೂಪವೂ, ಶಿವಪೂಜೆಗಾಗಿ ಕಲ್ಪಿಸಬೇಕು. ಪಂಚಬ್ರಹ್ಮಪೂಜೆ, ಷಡಂಗಪೂಜೆ, ಆವರಣ ಪೂಜೆ ಇವುಗಳನ್ನು ಅವಶ್ಯಕವಾಗಿ ಮಾಡಬೇಕು.

೩೭-೩೯. ಹಾಲು, ಬೆಲ್ಲ, ತುಪ್ಪ ಇವುಗಳಿಂದ ಕೂಡಿದ ಮಹಾಚರು ನೈವೇದ್ಯವೂ, ಪಾದರಿ, ನೈದಿಲೆ ಕಮಲ ಮುಂತಾದ ಹೂಗಳ ವಾಸನೆಯನ್ನು ಕಟ್ಟಿದ ಗಂಗೋದಕವೂ, ಐದು ಸುಗಂಧದ್ರವ್ಯಗಳಿಂದ ಕೂಡಿದ ತಾಂಬೂಲವೂ, ಚಿನ್ನ, ರತ್ನಗಳು ಇವುಗಳಿಂದ ಕೂಡಿದ ಆಭರಣಗಳೂ, ತೆಳ್ಳಗೆ ಹೊಸದಾದ

**ಪಂಚಸೌಗಂಧಿಕೋಪೇತಂ ತಾಂಬೂಲಂ ಚ ಸುಸಂಸ್ಕೃತಂ ।**
**ಸುವರ್ಣರತ್ನಸಿದ್ಧಾನಿ ಭೂಷಣಾನಿ ವಿಶೇಷತಃ ॥ ३८ ॥**

**ವಾಸಾಂಸಿ ಚ ವಿಚಿತ್ರಾಣಿ ಸೂಕ್ಷ್ಮಾಣಿ ಚ ನವಾನಿ ಚ ।**
**ದರ್ಶನೀಯಾನಿ ದೇಯಾನಿ ಗಾನವಾದ್ಯಾದಿಭಿಸ್ಸಹ ॥ ३೯ ॥**

**ಜಪಶ್ಚ ಮೂಲಮಂತ್ರಸ್ಯ ಲಕ್ಷಃ ಪರಮಸಂಖ್ಯಯಾ ।**
**ಏಕಾಪರಾ ತ್ರ್ಯುತ್ತರಾ ಚ ಪೂಜಾ ಫಲವಶಾದಿಹ ॥ ೪೦ ॥**

**ದಶಸಂಖ್ಯಾವರೋ ಹೋಮಃ ಪ್ರತಿದ್ರವ್ಯಂ ಶತೋತ್ತರಃ ।**
**ಘೋರರೂಪಃ ಶಿವಶ್ಚಿಂತ್ಯೋ ಮಾರಣೋಚ್ಚಾಟನಾದಿಷು ॥ ೪೧ ॥**

**ಶಿವಲಿಂಗೇ ಶಿವಾಗ್ನೌ ಚ ಹ್ಯನ್ಯಾಸು ಪ್ರತಿಮಾಸು ಚ ।**
**ಚಿಂತ್ಯಸ್ಸೌಮ್ಯತನುಶ್ಶಂಭುಃ ಕಾರ್ಯೇ ಶಾಂತಿಕಪೌಷ್ಟಿಕೇ ॥ ೪೨ ॥**

---

ವಿಚಿತ್ರವಾದ ವಸ್ತ್ರಗಳೂ, ಇವುಗಳನ್ನು ನೋಡುವವರಿಗೆ ಚೆನ್ನಾಗಿ ಕಾಣುವಂತೆ ಬಗೆಬಗೆಯ ಗಾನ ಮತ್ತು ವಾದ್ಯಧ್ವನಿಗಳೊಡನೆ ಶಿವನಿಗೆ ಪೂಜಾರ್ಥವಾಗಿ ಸಮರ್ಪಿಸಬೇಕು.

೪೦-೪೧. ಮೂಲಮಂತ್ರಜಪವನ್ನು ಕೊನೆಯಪಕ್ಷದಲ್ಲಿ ಒಂದು ಲಕ್ಷವನ್ನಾದರೂ ಮಾಡಬೇಕು. ಪ್ರತಿದಿನವೂ ಫಲಾಪೇಕ್ಷೆಗನುಸಾರವಾಗಿ ಒಂದಾವೃತ್ತಿಗೆ ಕಡಿಮೆಯಾಗದೆ ತ್ರಿಕಾಲದಲ್ಲಿಯಾದರೂ ಪೂಜೆಯನ್ನು ಮಾಡಬೇಕು. ಹೋಮಮಾಡಬೇಕಾದರೆ ಜಪಸಂಖ್ಯೆಯ ಹತ್ತನೆಯ ಒಂದುಭಾಗ ಸಂಖ್ಯೆಯು ಎಷ್ಟಾಗುವುದೋ ಅಷ್ಟನ್ನು ಮಾಡಬೇಕು. ಪ್ರತಿಯೊಂದು ಹೋಮದ್ರವ್ಯವನ್ನೂ ನೂರು ಹೋಮಕ್ಕಿಂತ ಹೆಚ್ಚಿಗೆ ಉಪಯೋಗಿಸಬೇಕು.

೪೨. ಮಾರಣ, ಉಚ್ಚಾಟನ ಮುಂತಾದ ಕ್ರೂರಕಾರ್ಯಗಳಲ್ಲಿ ಭಯಂಕರರೂಪದಿಂದಿರುವಂತೆ ಶಿವನನ್ನು ಧ್ಯಾನಿಸಬೇಕು. ಶಾಂತಿಕ, ಪೌಷ್ಟಿಕಕರ್ಮಗಳಲ್ಲಿ ಶಿವಲಿಂಗ, ಅಗ್ನಿ ಪ್ರತಿಮೆ ಇವುಗಳಲ್ಲಿ ಸೌಮ್ಯವಾದ ಆಕಾರವುಳ್ಳವನಂತೆ ಶಿವನನ್ನು ಧ್ಯಾನಮಾಡಬೇಕು.

ಆಯುಸೌ ಸ್ರುಕ್ಸ್ರುವೌ ಕಾರ್ಯೌ ಮಾರಣಾದಿಷು ಕರ್ಮಸು ।
ತದನ್ಯತ್ರ ತು ಸೌವರ್ಣೌ ಶಾಂತಿಕಾರ್ಯೇಷು ಕೃತ್ಸ್ನಶಃ ॥ ೪೩ ॥

ದೂರ್ವಯಾ ಘೃತಗೋಕ್ಷೀರಮಿಶ್ರಯಾ ಮಧುನಾ ತಥಾ ।
ಚರುಣಾ ಸಘೃತೇನೈವ ಕೇವಲಂ ಪಯಸಾಪಿ ವಾ ॥ ೪೪ ॥

ಜುಹುಯಾನ್ಮೃತ್ಯುವಿಜಯೇ ತಿಲೈರೋಗೋಪಶಾಂತಯೇ ।
ಘೃತೇನ ಪಯಸಾ ಚೈವ ಕಮಲೈರ್ವಾಥ ಕೇವಲೈಃ ॥ ೪೫ ॥

ಸಮೃದ್ಧಿಕಾಮೋ ಜುಹುಯಾನ್ಮಹಾದಾರಿದ್ರ್ಯಶಾಂತಯೇ ।
ಜಾತೀಪುಷ್ಪೇಣ ವಶ್ಯಾರ್ಥೀ ಜುಹುಯಾತ್ಸಘೃತೇನ ತು ॥ ೪೬ ॥

ಘೃತೇನ ಕರವೀರೈಶ್ಚ ಕುರ್ಯಾದಾಕರ್ಷಣಂ ದ್ವಿಜಃ ।
ತೈಲೇನೋಚ್ಚಾಟನಂ ಕುರ್ಯಾತ್ಸ್ತಂಭನಂ ಮಧುನಾ ಪುನಃ ॥ ೪೭ ॥

ಸ್ತಂಭನಂ ಸರ್ಷಪೇಣಾಪಿ ಲಶುನೇನ ತು ಪಾತನಂ ।
ತಾಡನಂ ರುಧಿರೇಣ ಸ್ಯಾತ್ಖರಸ್ಯೋಷ್ಟ್ರಸ್ಯ ಚೋಭಯೋಃ ॥ ೪೮ ॥

---

೪೩. ಮಾರಣಾದಿ ಕ್ರೂರಕರ್ಮಗಳಿಗೆ ಕಬ್ಬಿಣದ ಸ್ರುಕ್ಸ್ರುವಗಳನ್ನೂ ಶಾಂತಿಕರ್ಮಗಳಿಗೆ ಸುವರ್ಣದ ಸ್ರುಕ್ಸ್ರುವಗಳನ್ನೂ ಉಪಯೋಗಿಸಬೇಕು.

೪೪-೪೫. ಮೃತ್ಯುಂಜಯಕ್ಕಾಗಿ ಗರಿಕೆ, ತುಪ್ಪ, ಹಸುವಿನಹಾಲು, ಜೇನು ಇವುಗಳನ್ನು ಮಿಶ್ರಮಾಡಿ ಹೋಮಮಾಡಬೇಕು. ಅಥವಾ ಚರು, ತುಪ್ಪ ಇವುಗಳಿಂದಲಾಗಲಿ, ಬರಿಯ ಹಾಲಿನಿಂದಲಾಗಲಿ ಹೋಮಮಾಡಬೇಕು. ರೋಗಶಾಂತಿಗಾಗಿ ಎಳ್ಳಿನಿಂದಲೂ, ದಾರಿದ್ರ್ಯಶಾಂತಿಗಾಗಿ ತುಪ್ಪ, ಹಾಲು, ಕಮಲ ಇವುಗಳಿಂದಲೂ ಹೋಮಮಾಡಬೇಕು.

೪೬-೪೭. ವಶೀಕರಣ ಕರ್ಮಕ್ಕೆ ಜಾಜೀಹೂ ಮತ್ತು ತುಪ್ಪವನ್ನೂ, ಆಕರ್ಷಣಕ್ಕೆ ಕಣಿಗಲೆಹೂ ಮತ್ತು ತುಪ್ಪವನ್ನೂ, ಉಚ್ಚಾಟನೆಗೆ ಎಣ್ಣೆಯನ್ನೂ, ಸ್ತಂಭನೆಗೆ ಜೇನನ್ನಾಗಲಿ, ಸಾಸುವೆಯನ್ನಾಗಲಿ, ಪಾತನಕ್ಕೆ ಬೆಳ್ಳುಳ್ಳಿಯನ್ನೂ ಹೋಮಮಾಡಬೇಕು.

೪೮-೪೯. ತಾಡನ ಕರ್ಮಕ್ಕೆ ಕತ್ತೆ ಮತ್ತು ಒಂಟೆ ಇವುಗಳ ರಕ್ತವನ್ನೂ, ಮಾರಣ ಮತ್ತು ಉಚ್ಚಾಟನ ಕರ್ಮಕ್ಕೆ ಎಳ್ಳುಬೆರಸಿದ ಮುಳ್ಳು

ಮಾರಣೋಚ್ಚಾಟನೇ ಕುರ್ಯಾದ್ರೋಹಿಬೀಜೈಸ್ತಿಲಾನ್ವಿತೈಃ ।
ವಿದ್ವೇಷಣಂ ಚ ತೈಲೇನ ಕುರ್ಯಾಲ್ಲಾಂಗಲಕಸ್ಯ ತು ॥ ೪೯ ॥

ಬಂಧನಂ ರೋಹಿಬೀಜೇನ ಸೇನಾಸ್ತಂಭನಮೇವ ಚ ।
ರಕ್ತಸರ್ಷಪಸಂಮಿಶ್ರೈರ್ಹೋಮದ್ರವ್ಯೈರಶೇಷತಃ ॥ ೫೦ ॥

ಹಸ್ತಯಂತ್ರೋದ್ಭವೈಸ್ತೈಲೈರ್ಜುಹುಯಾದಾಭಿಚಾರಿಕೇ ।
ಕಟುಕೀತುಷಸಂಯುಕ್ತೈಃ ಕಾರ್ಪಾಸಾಸ್ಥಿಭಿರೇವ ಚ ॥ ೫೧ ॥

ಸರ್ಷಪೈಸ್ತೈಲಸಂಮಿಶ್ರೈರ್ಜುಹುಯಾದಾಭಿಚಾರಿಕೇ ।
ಜ್ವರೋಪಶಾಂತಿದಂ ಕ್ಷೀರಂ ಸೌಭಾಗ್ಯಫಲದಂ ತಥಾ ॥ ೫೨ ॥

ಸರ್ವಸಿದ್ಧಿಕರೋ ಹೋಮಃ ಕ್ಷೌದ್ರಾಜ್ಯದಧಿಭಿರ್ಯುತೈಃ ।
ಕ್ಷೀರೇಣ ತಂಡುಲೈಶ್ಚೈವ ಚರುಣಾ ಕೇವಲೇನ ವಾ ॥ ೫೪ ॥

---

ಮುತ್ತುಗದ ಬೀಜವನ್ನೂ, ವಿದ್ವೇಷಣಕರ್ಮಕ್ಕೆ ತೆಂಗಿನ ಎಣ್ಣೆಯನ್ನೂ ಹೋಮ ಮಾಡಬೇಕು.

೫೦. ಬಂಧನ ಸೇನಾಸ್ತಂಭನಕರ್ಮಕ್ಕೆ ಮುಳ್ಳುಮುತ್ತುಗದ ಬೀಜಕ್ಕೆ ಕೆಂಪು ಸಾಸುವೆಯನ್ನು ಬೆರಸಿ ಹೋಮಮಾಡಬೇಕು.

೫೧. ಆಭಿಚಾರಿಕ ಕರ್ಮದಲ್ಲಿ ಕೈಗಾಣದಿಂದ ಎಳ್ಳೆಣ್ಣೆಯನ್ನು ತೆಗೆದು ಹೋಮಮಾಡಬೇಕು ಮತ್ತು ಕಟುಕರೋಹಿಣಿಯ ಚೂರ್ಣ, ಹತ್ತಿಯಬೀಜ, ಸಾಸುವೆ, ಎಳ್ಳೆಣ್ಣೆ ಇವುಗಳನ್ನು ಮಿಶ್ರಮಾಡಿ ಹೋಮಮಾಡಬೇಕು.

೫೨-೫೪. ಹಾಲನ್ನು ಹೋಮಮಾಡಿದರೆ ಜ್ವರಶಾಂತಿಯನ್ನೂ, ಸೌಭಾಗ್ಯವನ್ನೂ ಉಂಟುಮಾಡುವುದು. ಜೇನುತುಪ್ಪ, ತುಪ್ಪ, ಮೊಸರು ಇವುಗಳನ್ನು ಮಿಶ್ರಮಾಡಿ ಹೋಮಮಾಡಿದರೆ ಸಕಲ ಸಿದ್ಧಿಯೂ ಉಂಟಾಗುವುದು. ಹಾಲು, ಅಕ್ಕಿ, ಬರಿಯಅನ್ನ ಇವುಗಳ ಹೋಮವು ಶಾಂತಿಯನ್ನೂ ಪುಷ್ಟಿಯನ್ನೂ, ಉಂಟುಮಾಡುವುದು. ಸಮಿತ್ತೇ ಮೊದಲಾದ ಏಳು ದ್ರವ್ಯಗಳಿಂದ

ಶಾಂತಿಕಂ ಪೌಷ್ಟಿಕಂ ವಾಪಿ ಸಪ್ತಭಿಃ ಸಮಿದಾದಿಭಿಃ ।
ದ್ರವ್ಯೈರ್ವಿಶೇಷತೋ ಹೋಮೋ ವಶ್ಯಮಾಕರ್ಷಣಂ ತಥಾ ॥ ೫೪ ॥

ವಶ್ಯಮಾಕರ್ಷಣಂ ಚೈವ ಶ್ರೀಪದಂ ಚ ವಿಶೇಷತಃ ।
ಬಿಲ್ವಪತ್ರೈಸ್ತು ಹವನಂ ಶತ್ರೋರ್ವಿಜಯದಂ ತಥಾ ॥ ೫೫ ॥

ಸಮಿಧಃ ಶಾಂತಿಕಾರ್ಯೇಷು ಪಾಲಾಶಖದಿರಾದಿಕಾಃ ।
ಕರವೀರಾರ್ಕಜಾಃ ಕ್ರೌರ್ಯೇ ಕಂಟಕಿನ್ಯಶ್ಚ ವಿಗ್ರಹೇ ॥ ೫೬ ॥

ಪ್ರಶಾಂತಃ ಶಾಂತಿಕಂ ಕುರ್ಯಾತ್ಪೌಷ್ಟಿಕಂ ಚ ವಿಶೇಷತಃ ।
ನಿರ್ಘೃಣಃ ಕ್ರುದ್ಧಚಿತ್ತಸ್ತು ಪ್ರಕುರ್ಯಾದಾಭಿಚಾರಿಕಂ ॥ ೫೭ ॥

ಅತೀವ ದುರವಸ್ಥಾಯಾಂ ಪ್ರತೀಕಾರಾಂತರಂ ನ ಚೇತ್ ।
ಆತತಾಯಿನಮುದ್ದಿಶ್ಯ ಪ್ರಕುರ್ಯಾದಾಭಿಚಾರಿಕಂ ॥ ೫೮ ॥

---

ಶಾಸ್ತ್ರೋಕ್ತವಿಶೇಷ ಹೋಮುಮಾಡಿದರೆ ವಶೀಕರಣವೂ, ಆಕರ್ಷಣವೂ, ಉಂಟಾಗುವುದು.

೫೫. ವಶ್ಯ ಮತ್ತು ಆಕರ್ಷಣ ಕರ್ಮಗಳು ವಿಶೇಷವಾಗಿ ಸಂಪತ್ತನ್ನುಂಟುಮಾಡುವುವು. ಬಿಲ್ವಪತ್ರೆಗಳಿಂದ ಹೋಮವನ್ನು ಮಾಡಿದರೆ ಶತ್ರುಗಳನ್ನು ಜಯಿಸುವ ಶಕ್ತಿಯುಂಟಾಗುವುದು.

೫೬. ಶಾಂತಿಕರ್ಮಗಳಿಗೆ ಮುತ್ತುಗ, ಕಗ್ಗಲಿ ಮುಂತಾದ ಸಮಿತ್ತುಗಳನ್ನೂ, ಕ್ರೂರಕರ್ಮಗಳಿಗೆ ಕಣಗಲೆ, ಎಕ್ಕ ಈ ಸಮಿತ್ತುಗಳನ್ನೂ ಯುದ್ಧಕರ್ಮದಲ್ಲಿ ಮುಳ್ಳುಗಳುಳ್ಳ ಸಮಿತ್ತುಗಳನ್ನೂ ಉಪಯೋಗಿಸಬೇಕು.

೫೭. ಶಾಂತಚಿತ್ತನಾಗಿ ಶಾಂತಿಕ ಪೌಷ್ಟಿಕಕರ್ಮಗಳನ್ನು ಮಾಡಬೇಕು. ದಯಾಹೀನನೂ, ಕೋಪಸ್ವಭಾವದವನೂ, ಆಗಿ ಆಭಿಚಾರಿಕಕರ್ಮವನ್ನು ಮಾಡಬೇಕು.

೫೮. ಆತತಾಯಿ ಎಂದರೆ ವಿಷವನ್ನು ಹಾಕುವುದು, ಮನೆಗೆ • ಬೆಂಕಿಯನ್ನು ಹಾಕುವುದು ಮುಂತಾದ ಪರರಿಗೆ ಉಪದ್ರಗಳನ್ನು ಕೊಡುವ ಮನುಷ್ಯನ ವಿಷಯದಲ್ಲಿ ಬೇರೆ ಪ್ರತೀಕಾರವನ್ನು ಮಾಡುವುದು ಸಾಧ್ಯವಿಲ್ಲ

ಸ್ವರಾಷ್ಟ್ರಪತಿಮುದ್ದಿಶ್ಯ ನ ಕುರ್ಯಾದಾಭಿಚಾರಿಕಂ ।
ಯದ್ಯಾಸ್ತಿಕಸ್ಸುಧರ್ಮಿಷ್ಠೋ ಮಾನ್ಯೋ ವಾ ಯೋಽಪಿ ಕೋಽಪಿ ವಾ ॥

ತಮುದ್ದಿಶ್ಯಾಪಿ ನೋ ಕುರ್ಯಾದಾತತಾಯಿನಮಪ್ಯುತ ।
ಮನಸಾ ಕರ್ಮಣಾ ವಾಚಾ ಯೋಽಪಿ ಕೋಽಪಿ ಶಿವಾಶ್ರಿತಃ ॥ ೬೦ ॥

ಸ್ವರಾಷ್ಟ್ರಪತಿಮುದ್ದಿಶ್ಯ ಶಿವಾಶ್ರಿತಮಥಾಪಿ ವಾ ।
ಕೃತ್ವಾಭಿಚಾರಿಕಂ ಕರ್ಮ ಸದ್ಯೋ ವಿನಿಪತೇನ್ನರಃ ॥ ೬೧ ॥

ಸ್ವರಾಷ್ಟ್ರಪಾಲಕಂ ತಸ್ಮಾಚ್ಛಿವಭಕ್ತಂ ಚ ಕಂಚನ ।
ನ ಹಿಂಸ್ಯಾದಭಿಚಾರಾದ್ಯೈರ್ಯದೀಚ್ಛೇತ್ಸುಖಮಾತ್ಮನಃ ॥ ೬೨ ॥

ಅನ್ಯಂ ಕಮಪಿ ಚೋದ್ದಿಶ್ಯ ಕೃತ್ವಾ ವೈ ಮಾರಣಾದಿಕಂ ।
ಪಶ್ಚಾತ್ತಾಪೇನ ಸಂಯುಕ್ತಃ ಪ್ರಾಯಶ್ಚಿತ್ತಂ ಸಮಾಚರೇತ್ ॥ ೬೩ ॥

---

ದಾಗ ವಿಶೇಷವಾದ ತೊಂದರೆಗಳು ಪ್ರಾಪ್ತವಾಗಿದ್ದರೆ ಆಭಿಚಾರಕರ್ಮವನ್ನು ಮಾಡಬೇಕು. ಮತ್ತಾವ ವಿಷಯದಲ್ಲಿಯೂ ಈ ಕರ್ಮವನ್ನು ಮಾಡಬಾರದು.

೫೯-೬೧. ತಮ್ಮ ದೇಶಾಧಿಪತಿಯನ್ನೂ ಆಸ್ತಿಕನೂ, ಧರ್ಮಿಷ್ಠನೂ, ಗೌರವಶಾಲಿಯೂ ಆದ ಮನುಜನನ್ನೂ, ಉದ್ದೇಶಿಸಿ, ಅವನು ಆತತಾಯಿಯಾದರೂ ಆಭಿಚಾರಕರ್ಮವನ್ನು ಮಾಡಬಾರದು. ಮನೋವಾಕ್ಕಾಯಕರ್ಮಗಳಿಂದ ಶಿವಭಕ್ತನಾದ ಮನುಷ್ಯನನ್ನೂ, ಶಿವಭಕ್ತನಾದ ದೇಶಾಧಿಪತಿಯನ್ನೂ, ಉದ್ದೇಶಿಸಿ ಆಭಿಚಾರಕರ್ಮವನ್ನು ಮಾಡಿದರೆ ಆ ಮನುಷ್ಯನು ಆ ಕ್ಷಣದಲ್ಲೇ ನರಕಕ್ಕೆ ಹೋಗುವನು.

೬೨. ಆ ಕಾರಣದಿಂದ ತನ್ನ ಸುಖವನ್ನು ಬಯಸುವವನು ಸ್ವದೇಶಾಧಿಪತಿಯನ್ನೂ, ಶಿವಭಕ್ತನಾದ ಮನುಷ್ಯನನ್ನೂ ಅಭಿಚಾರಾದಿ ಕೃತ್ಯಗಳಿಂದ ಹಿಂಸೆಪಡಿಸಬಾರದು.

೬೩. ಮತ್ತೊಬ್ಬನನ್ನು ಉದ್ದೇಶಿಸಿ ಮಾರಣಾದಿ ಕರ್ಮಗಳನ್ನು ಮಾಡಿದವನು ಪಶ್ಚಾತ್ತಾಪದಿಂದ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು.

**ಬಾಣಲಿಂಗೇऽಪಿ ವಾ ಕುರ್ಯಾನ್ನಿರ್ಧನೋ ಧನವಾನಪಿ ।**
**ಸ್ವಯಂಭೂತೇऽಥ ವಾ ಲಿಂಗೇ ಆರ್ಷಕೇ ವೈದಿಕೇऽಪಿ ವಾ ॥ ೬೪ ॥**

**ಅಭಾವೇ ಹೇಮರತ್ನಾನಾಮಶಕ್ತೌ ಚ ತದರ್ಜನೇ ।**
**ಮನಸೈವಾಚರೇದೇತದ್ದ್ರವ್ಯೈರ್ವಾ ಪ್ರತಿರೂಪಕೈಃ ॥ ೬೫ ॥**

**ಕ್ವಚಿದಂಶೇ ತು ಯಃ ಶಕ್ತಸ್ತ್ವಶಕ್ತಃ ಕ್ವಚಿದಂಶಕೇ ।**
**ಸೋऽಪಿ ಶಕ್ತ್ಯನುಸಾರೇಣ ಕುರ್ವಂಶ್ಚೇತ್ಫಲಮೃಚ್ಛತಿ ॥ ೬೬ ॥**

**ಕರ್ಮಣ್ಯನುಷ್ಠಿತೇऽಪ್ಯಸ್ಮಿನ್ಫಲಂ ಯತ್ರ ನ ದೃಶ್ಯತೇ ।**
**ದ್ವಿಸ್ತ್ರಿರ್ವಾವರ್ತಯೇತ್ತತ್ರ ಸರ್ವಥಾ ದೃಶ್ಯತೇ ಫಲಂ ॥ ೬೭ ॥**

**ಪೂಜೋಪಯುಕ್ತಂ ಯದ್ದ್ರವ್ಯಂ ಹೇಮರತ್ನಾದ್ಯನುತ್ತಮಂ ।**
**ತತ್ಸರ್ವಂ ಗುರವೇ ದದ್ಯಾದ್ದಕ್ಷಿಣಾಂ ಚ ತತಃ ಪೃಥಕ್ ॥ ೬೮ ॥**

---

೬೪-೬೫. ದರಿದ್ರನಾಗಲಿ, ಧನವಂತನಾಗಲಿ ಶಿವಪೂಜೆಯನ್ನು ಬಾಣಲಿಂಗದಲ್ಲಿಯಾಗಲಿ, ತಾನಾಗಿ ಉದ್ಭವಿಸಿದ ಲಿಂಗದಲ್ಲಿಯಾಗಲಿ, ಋಷಿಗಳು ವೇದ ವಿಧಿಯಿಂದ ಪ್ರತಿಷ್ಠೆಮಾಡಿದ ಲಿಂಗದಲ್ಲಿಯಾಗಲಿ, ಇವುಗಳಿಲ್ಲದಿದ್ದರೆ ಚಿನ್ನ, ರತ್ನ ಇವುಗಳಿಂದ ಮಾಡಿದ ಲಿಂಗದಲ್ಲಿಯಾಗಲಿ, ಇವುಗಳನ್ನು ಸಂಪಾದಿಸಲು ಶಕ್ತಿಯಿಲ್ಲದಿದ್ದರೆ ಮನಸ್ಸಿನಲ್ಲಿಯೇ ಕಲ್ಪಿಸಿದ ಲಿಂಗದಲ್ಲಿಯಾಗಲಿ ಮಾಡಬೇಕು.

೬೬-೬೭. ಕೆಲವು ವಿಷಯಗಳಲ್ಲಿ ಶಕ್ತನೂ, ಮತ್ತೆ ಕೆಲವು ವಿಷಯಗಳಲ್ಲಿ ಅಶಕ್ತನೂ ಆದ ಮನುಷ್ಯನು ತನ್ನ ಶಕ್ತಿಗನುಸಾರವಾಗಿ ಪೂಜಾದಿಗಳನ್ನು ಮಾಡಿದರೆ ಫಲವನ್ನು ಪಡೆಯುವನು. ಇಲ್ಲಿ ಹೇಳುವಂತೆ ಕರ್ಮಗಳನ್ನು ಮಾಡಿದರೂ ಫಲವುಂಟಾಗದೆ ಹೋದರೆ, ಎರಡು ಅಥವಾ ಮೂರಾವೃತ್ತಿ ಅದೇ ಕರ್ಮವನ್ನು ಮಾಡಿದರೆ ಫಲವು ಖಂಡಿತವಾಗಿ ಉಂಟಾಗುವುದು.

೬೮-೬೯. ಶಿವನ ಪೂಜೆಗೆ ಉಪಯೋಗಿಸಿದ ಸುವರ್ಣ, ರತ್ನ ಮುಂತಾದ ಅತ್ಯುತ್ತಮವಾದ ವಸ್ತುಗಳನ್ನು ದಕ್ಷಿಣೆಯೊಡನೆ ಗುರುವಿಗೆ ಕೊಡ

ಸ ಚೇನ್ನೇಚ್ಛತಿ ತತ್ಸರ್ವಂ ಶಿವಾಯ ವಿನಿವೇದಯೇತ್ ।
ಅಥವಾ ಶಿವಭಕ್ತೇಭ್ಯೋ ನಾನ್ಯೇಭ್ಯಸ್ತು ಪ್ರದೀಯತೇ ॥ ೬೯ ॥

ಯಃ ಸ್ವಯಂ ಸಾಧಯೇಚ್ಛಕ್ತ್ಯಾ ಗುರ್ವಾದಿನಿರಪೇಕ್ಷಯಾ ।
ಸೋಽಪ್ಯೇವಮಾಚರೇದತ್ರ ನ ಗೃಹ್ಣೀಯಾತ್ಸ್ವಯಂ ಪುನಃ ॥ ೭೦ ॥

ಸ್ವಯಂ ಗೃಹ್ಣಾತಿ ಯೋ ಲೋಭಾತ್ಪೂಜಾಂಗದ್ರವ್ಯಮುತ್ತಮಂ ।
ಕಾಂಕ್ಷಿತಂ ನ ಲಭೇನ್ಮೂಢೋ ನಾತ್ರ ಕಾರ್ಯಾ ವಿಚಾರಣಾ ॥ ೭೧ ॥

ಅರ್ಚಿತಂ ಯತ್ತು ತಲ್ಲಿಂಗಂ ಗೃಹ್ಣೀಯಾದ್ವಾ ನ ವಾ ಸ್ವಯಂ ।
ಗೃಹ್ಣೀಯಾದ್ಯದಿ ತನ್ನಿತ್ಯಂ ಸ್ವಯಂ ವಾನ್ಯೋಽಪಿ ವಾಽರ್ಚಯೇತ್ ॥೭೨॥

ಯಥೋಕ್ತಮೇವ ಕರ್ಮೈತದಾಚರೇದ್ಯೋಽನಪಾಯತಃ ।
ಫಲಂ ವ್ಯಭಿಚರೇನ್ನೈವಮಿತ್ಯತಃ ಕಿಂ ಪ್ರರೋಚಕಂ ॥ ೭೩ ॥

---

ಬೇಕು. ಗುರುವು ಅವುಗಳನ್ನು ತೆಗೆದುಕೊಳ್ಳದಿದ್ದರೆ ಶಿವನಿಗೇ ಅರ್ಪಿಸಬೇಕು. ಅಥವಾ ಶಿವಭಕ್ತರಿಗೆ ಕೊಡಬೇಕು. ಇತರರಿಗೆ ಕೊಡಬಾರದು.

೭೦. ಗುರು ಮುಂತಾದವರಿಲ್ಲದೆ ತಾನೇ ಪೂಜಾದಿಕಾರ್ಯಗಳನ್ನು ನಡೆಸಿದರೆ ಅವನೂ ಪೂಜೆಗೆ ಉಪಯೋಗಿಸಿದ ಪದಾರ್ಥಗಳನ್ನು ಶಿವನ ಪ್ರೀತಿಗಾಗಿ ಭಕ್ತರಿಗೆ ಕೊಡಬೇಕು. ತಾನೇ ಇಟ್ಟುಕೊಳ್ಳಕೂಡದು.

೭೧. ಉತ್ತಮವಾದ ಪೂಜಾಂಗದ್ರವ್ಯಗಳನ್ನು ಲೋಭದಿಂದ ತಾನೇ ಇಟ್ಟುಕೊಂಡರೆ ಆ ಮೂಢನು ತನ್ನ ಇಷ್ಟಾರ್ಥಗಳನ್ನು ಪಡೆಯಲಾರನು. ಇದರಲ್ಲಿ ಸಂದೇಹವಿರುವುದಿಲ್ಲ.

೭೨. ಪೂಜೆಮಾಡಿದ ಲಿಂಗವನ್ನು ತಾನೇ ತೆಗೆದುಕೊಳ್ಳಲಿ ಅಥವಾ ತೆಗೆದುಕೊಳ್ಳದೇಹೋಗಲಿ, ತಾನೇ ತೆಗೆದುಕೊಂಡರೆ ಅದನ್ನು ಪ್ರತಿದಿನವೂ ತಾನೋ ಇತರರೋ ಪೂಜಿಸುತ್ತಿರಬೇಕು.

೭೩. ಶಾಸ್ತ್ರೋಕ್ತವಾದ ಪೂಜಾಕರ್ಮವನ್ನು ಬಿಡದೆ ಯಾವನು ಆಚರಿಸುವನೋ ಅವನಿಗೆ ಫಲವು ತಪ್ಪುವುದೇ ಇಲ್ಲ. ಇದಕ್ಕಿಂತಲೂ ಜನರಿಗೆ ಇದರ ಮಹಿಮೆಯನ್ನು ಹೇಳುವುದು ಇನ್ನೇನಿರುವುದು ?

ತಥಾಪ್ಯುದ್ದೇಶತೋ ವಕ್ಷ್ಯೇ ಕರ್ಮಣಃ ಸಿದ್ಧಿಮುತ್ತಮಾಂ ।
ಅಪಿ ಶತ್ರುಭಿರಾಕ್ರಾಂತೋ ವ್ಯಾಧಿಭಿರ್ವ್ಯಾಪ್ಯನೇಕಶಃ ॥ ೭೪ ॥

ಮೃತ್ಯೋರಾಸ್ಯಗತಶ್ಚಾಪಿ ಮುಚ್ಯತೇ ನಿರಪಾಯತಃ ।
ಪೂಜಾಯತೇಽತಿಕೃಪಣೋ ರಿಕ್ತೋ ವೈಶ್ರವಣಾಯತೇ ॥ ೭೫ ॥

ಕಾಮಾಯತೇ ವಿರೂಪೋಽಪಿ ವೃದ್ಧೋಽಪಿ ತರುಣಾಯತೇ ।
ಶತ್ರುರ್ಮಿತ್ರಾಯತೇ ಸದ್ಯೋ ವಿರೋಧೀ ಕಿಂಕರಾಯತೇ ॥ ೭೬ ॥

ವಿಷಾಯತೇ ಯದಮೃತಂ ವಿಷಮಪ್ಯಮೃತಾಯತೇ ।
ಸ್ಥಲಾಯತೇ ಸಮುದ್ರೋಽಪಿ ಸ್ಥಲಮಪ್ಯರ್ಣವಾಯತೇ ॥ ೭೭ ॥

ಮಹೀಧರಾಯತೇ ಶ್ವಭ್ರಂ ಸ ಚ ಶ್ವಭ್ರಾಯತೇ ಗಿರಿಃ ।
ಪದ್ಮಾಕರಾಯತೇ ವಹ್ನಿಃ ಸರೋ ವೈಶ್ವಾನರಾಯತೇ ॥ ೭೮ ॥

---

೭೪-೭೬. ಹಾಗಾದರೂ ಉದ್ದೇಶಪೂರ್ವಕವಾಗಿ ಕರ್ಮದ ಫಲ ಸಿದ್ಧಿಯ ಸ್ವರೂಪವನ್ನು ಹೇಳುವೆನು. ಪೂಜಾಫಲವು ಪ್ರಾಪ್ತವಾದರೆ ಮನುಷ್ಯನಿಗೆ ಶತ್ರುಗಳು ಮುತ್ತಿಗೆಯನ್ನು ಹಾಕಿರಲಿ, ಅನೇಕ ರೋಗಗಳು ಬಂದಿರಲಿ, ಮೃತ್ಯುವಿನ ಬಾಯಿಗೆ ಅವನು ಸಿಕ್ಕಿಕೊಂಡಿರಲಿ, ಅಪಾಯವಿಲ್ಲದೆ ಬಿಡುಗಡೆಯನ್ನು ಹೊಂದುವನು. ನೀಚನು ಪೂಜಾರ್ಹನಾಗುವನು. ದರಿದ್ರನು ಕುಬೇರನಂತಾಗುವನು. ಕುರೂಪಿಯು ಮನ್ಮಥನಂತಾಗುವನು. ಮುದುಕನು ಪ್ರಾಯದವನಾಗುವನು. ಶತ್ರುವು ಮಿತ್ರನಾಗುವನು. ದ್ವೇಷಿಸುವವನು ಸೇವಕನಂತಾಗುವನು.

೭೭-೭೮. ಅಮೃತವು ವಿಷವಾಗುವುದು. ವಿಷವು ಅಮೃತವಾಗುವುದು. ಸಮುದ್ರವು ನೆಲವಾಗುವುದು. ನೆಲವು ಸಮುದ್ರವಾಗುವುದು. ಹಳ್ಳವು ಬೆಟ್ಟವಾಗುವುದು. ಬೆಟ್ಟವು ಹಳ್ಳವಾಗುವುದು. ಬೆಂಕಿಯು ಸರೋವರವಾಗುವುದು. ಸರೋವರವು ಬೆಂಕಿಯಾಗುವುದು.

ವನಾಯತೇ ಯದುದ್ಯಾನಂ ತದುದ್ಯಾನಾಯತೇ ವನಂ ।
ಸಿಂಹಾಯತೇ ಮೃಗಃ ಕ್ಷುದ್ರಃ ಸಿಂಹಃ ಕ್ರೀಡಾಮೃಗಾಯತೇ ॥ ೭೯ ॥

ಸ್ತ್ರಿಯೋಽಭಿಸಾರಿಕಾಯಂತೇ ಲಕ್ಷ್ಮೀಃ ಸುಚರಿತಾಯತೇ ।
ಸ್ವೈರಪ್ರೇಷ್ಯಾಯತೇ ವಾಣೀ ಕೀರ್ತಿಸ್ತು ಗಣಿಕಾಯತೇ ॥ ೮೦ ॥

ಸ್ವೈರಾಚಾರಾಯತೇ ಮೇಧಾ ವಜ್ರಸೂಚೀಯತೇ ಮನಃ ।
ಮಹಾವಾತಾಯತೇ ಶಕ್ತಿರ್ಬಲಂ ಮತ್ತಗಜಾಯತೇ ॥ ೮೧ ॥

ಸ್ತಂಭಾಯತೇ ಸಮುದ್ಯೋಗೈಃ ಶತ್ರುಪಕ್ಷಸ್ಥಿತಾ ಕ್ರಿಯಾ ।
ಶತ್ರುಪಕ್ಷಾಯತೇಽರೀಣಾಂ ಸರ್ವ ಏವ ಸುಹೃಜ್ಜನಃ ॥ ೮೨ ॥

ಶತ್ರವಃ ಕುಣಪಾಯಂತೇ ಜೀವಂತೋಽಪಿ ಸಬಾಂಧವಾಃ ।
ಆಪನ್ನೋಽಪಿ ಗತಾರಿಷ್ಟಃ ಸ್ವಯಂ ಖಲ್ವಮೃತಾಯತೇ ॥ ೮೩ ॥

---

೭೯-೮೦. ತೋಟವು ಕಾಡಾಗುವುದು. ಕಾಡು ತೋಟವಾಗುವುದು. ಅಲ್ಪಮೃಗಗಳು ಸಿಂಹವಾಗುವುವು. ಸಿಂಹವು ಆಟದ ಅಲ್ಪಮೃಗವಾಗುವುದು. ಸ್ತ್ರೀಯರು ಅಭಿಸಾರಿಕೆಯರಾಗುವರು. ಲಕ್ಷ್ಮಿಯು ಒಳ್ಳೆಯ ನಡತೆಯವಳಾಗುವಳು. ಸರಸ್ವತಿಯು ದೂತಿಯಾಗುವಳು. ಕೀರ್ತಿಯು ಸೂಳೆಯಾಗುವಳು.

೮೧-೮೨. ಬುದ್ಧಿಯು ತಸ್ನಿಷ್ಟವಂತೆ ವರ್ತಿಸುವುದು. ಮನಸ್ಸು ವಜ್ರದ ಸೂಜಿಯಂತಾಗುವುದು. ಶಕ್ತಿಯು ದೊಡ್ಡ ಗಾಳಿಯಂತಾಗುವುದು. ಬಲವು ಮದಿಸಿದ ಆನೆಯಂತಾಗುವುದು. ಉದ್ಯೋಗಮಾಡುವುದರಿಂದ ಶತ್ರುಪಕ್ಷದವರ ಕೆಲಸವೆಲ್ಲ ಸ್ತಂಭಿಸುವುದು. ಶತ್ರುಗಳ ಸಮಸ್ತ ಮಿತ್ರರೂ ಅವರ ಶತ್ರುಗಳಾಗುವರು.

೮೩-೮೪. ಶತ್ರುಗಳು ಜೀವಿಸಿದ್ದರೂ ಅವರ ಬಂಧುಗಳುಸಹಿತವಾಗಿ ಹೆಣದಂತಾಗುವರು. ಆಪತ್ತನ್ನು ಹೊಂದಿದವನಾದರೂ ತನ್ನ ಅರಿಷ್ಟವನ್ನು ಕಳೆದುಕೊಂಡು ಅಮೃತಸ್ವರೂಪನಾಗುವನು. ಪ್ರತಿದಿನವೂ ಅಪಥ್ಯವನ್ನು

**ರಸಾಯನಾಯತೇ ನಿತ್ಯಮಪಥ್ಯಮಪಿ ಸೇವಿತಂ ।**
**ಅನಿಶಂ ಕ್ರಿಯಮಾಣಾಪಿ ರತಿಸ್ತ್ವಭಿನವಾಯತೇ ॥ ೮೪ ॥**

**ಅನಾಗತಾದಿಕಂ ಸರ್ವಂ ಕರಸ್ಥಾಮಲಕಾಯತೇ ।**
**ಯಾದೃಚ್ಛಿಕಫಲಾಯಂತೇ ಸಿದ್ಧಯೋಽಪ್ಯಣಿಮಾದಯಃ ॥ ೮೫ ॥**

**ಬಹುನಾತ್ರ ಕಿಮುಕ್ತೇನ ಸರ್ವಕಾಮಾರ್ಥಸಿದ್ಧಿಷು ।**
**ಅಸ್ಮಿನ್ಕರ್ಮಣಿ ನಿರ್ವೃತ್ತೇ ತ್ವನವಾಪ್ಯಂ ನ ವಿದ್ಯತೇ ॥ ೮೬ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-**
**ಮುತ್ತರಭಾಗೇ ಐಹಿಕಸಿದ್ಧಿಕರ್ಮವರ್ಣನಂ ನಾಮ**
**ದ್ವಾತ್ರಿಂಶೋಽಧ್ಯಾಯಃ**

---

ಸೇವಿಸಿದರೂ, ಅದು ರಸಾಯನವಾಗುವುದು. ಯಾವಾಗಲೂ ರತಿಯಲ್ಲಿ ಆಸಕ್ತನಾಗಿದ್ದರೂ ಅದು ಹೊಸದಾದ ಯೌವನಸುಖವನ್ನೇ ಕೊಡುತ್ತಿರುವುದು.

೮೫-೮೬. ದುರ್ಲಭವಾದ ವಸ್ತುಗಳೆಲ್ಲವೂ ತಕ್ಷಣ ಕರಗತವಾಗುವುವು. ಅಣಿಮಾದಿ ಸಿದ್ಧಿಗಳು ಕೇಳಿದಾಗ ಫಲವನ್ನು ಕೊಡುವುವು. ಹೆಚ್ಚು ಹೇಳುವುದರಿಂದೇನು? ಈ ಶಿವಪೂಜಾಕರ್ಮವನ್ನು ಮಾಡಿದಮೇಲೆ ಇಷ್ಟಾರ್ಥಸಿದ್ಧಿಗಳಲ್ಲಿ ಹೊಂದದೆ ಇರತಕ್ಕವು ಯಾವುವೂ ಇರುವುದಿಲ್ಲ. ಎಲ್ಲವೂ ಸಿದ್ಧಿಸುವುದು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯವೀಯಸಂಹಿತೆಯ ಉತ್ತರಭಾಗದಲ್ಲಿ ಐಹಿಕಸಿದ್ಧಿಕರ್ಮವರ್ಣನವೆಂಬ ಮೂವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ. ನಮಃ ಶಿವಾಯ ॥

---

# ಅಥ ಶ್ರೀ ಶಿವ ಮಹಾ ಪುರಾಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ತ್ರಯಸ್ತ್ರಿಂಶೋಽಧ್ಯಾಯಃ



॥ ಉಪಮನ್ಯುರುವಾಚ ॥

**ಅತಃ ಪರಂ ಪ್ರವಕ್ಷ್ಯಾಮಿ ಕೇವಲಾಮುಷ್ಮಿಕಂ ವಿಧಿಂ ।**
**ನೈತೇನ ಸದೃಶಂ ಕಿಂಚಿತ್ಕರ್ಮಾಸ್ತಿ ಭುವನತ್ರಯೇ ॥ ೧ ॥**

**ಪುಣ್ಯಾತಿಶಯಸಂಯುಕ್ತೈಃ ಸರ್ವೈರ್ದೇವೈರನುಷ್ಠಿತಃ ।**
**ಬ್ರಹ್ಮಣಾ ವಿಷ್ಣುನಾ ಚೈವ ರುದ್ರೇಣ ಚ ವಿಶೇಷತಃ ॥ ೨ ॥**

---

### ಮೂವತ್ತಮೂರನೆಯ ಅಧ್ಯಾಯವು

೧. ಇನ್ನು ಮುಂದೆ ಪರಲೋಕದಲ್ಲಿ ಫಲವನ್ನು ಕೊಡುವ ಪೂಜಾವಿಧಿಯನ್ನು ಹೇಳುವೆನು. ಮೂರುಲೋಕಗಳಲ್ಲಿಯೂ ಇದಕ್ಕೆ ಸಮಾನವಾದ ಕರ್ಮವು ಇರುವುದಿಲ್ಲ.

೨-೫. ಈ ಶಿವಪೂಜಾಕರ್ಮವು ಅತ್ಯಂತ ಪುಣ್ಯದಿಂದ ಕೂಡಿದುದು. ಬ್ರಹ್ಮ, ವಿಷ್ಣು, ರುದ್ರ, ಇಂದ್ರಾದಿ ಲೋಕಪಾಲಕರು, ಸೂರ್ಯಾದಿ ನವಗ್ರಹಗಳು

ಇಂದ್ರಾದಿಲೋಕಪಾಲೈಶ್ಚ ಸೂರ್ಯಾದ್ಯೈರ್ನವಭಿರ್ಗ್ರಹೈಃ ।
ವಿಶ್ವಾಮಿತ್ರವಸಿಷ್ಠಾದ್ಯೈರ್ಬ್ರಹ್ಮವಿದ್ಭಿರ್ಮಹರ್ಷಿಭಿಃ ॥ ೩ ॥

ಶ್ವೇತಾಗಸ್ತ್ಯದಧೀಚಾದ್ಯೈರಸ್ಮಾಭಿಶ್ಚ ಶಿವಾಶ್ರಿತೈಃ ।
ನಂದೀಶ್ವರಮಹಾಕಾಲಭೃಂಗೀಶಾದ್ಯೈರ್ಗಣೇಶ್ವರೈಃ ॥ ೪ ॥

ಪಾತಾಲವಾಸಿಭಿರ್ದೈತ್ಯೈಃ ಶೇಷಾದ್ಯೈಶ್ಚ ಮಹೋರಗೈಃ ।
ಸಿದ್ಧೈರ್ಯಕ್ಷೈಶ್ಚ ಗಂಧರ್ವೈ ರಕ್ಷೋಭೂತಪಿಶಾಚಕೈಃ ॥ ೫ ॥

ಸ್ವಂ ಸ್ವಂ ಪದಮನುಪ್ರಾಪ್ತಂ ಸರ್ವೈರಯಮನುಷ್ಠಿತಃ ।
ಅನೇನ ವಿಧಿನಾ ಸರ್ವೇ ದೇವಾ ದೇವತ್ವಮಾಗತಾಃ ॥ ೬ ॥

ಬ್ರಹ್ಮಾ ಬ್ರಹ್ಮತ್ವಮಾಪನ್ನೋ ವಿಷ್ಣುರ್ವಿಷ್ಣುತ್ವಮಾಗತಃ ।
ರುದ್ರೋ ರುದ್ರತ್ವಮಾಪನ್ನ ಇಂದ್ರಶ್ಚೇಂದ್ರತ್ವಮಾಗತಃ ॥ ೭ ॥

---

ಮುಂತಾಗಿ ಸಮಸ್ತ ದೇವತೆಗಳೂ, ಇದನ್ನು ಮಾಡಿರುವರು. ವಿಶ್ವಾಮಿತ್ರ, ವಸಿಷ್ಠ ಮುಂತಾದ ಬ್ರಹ್ಮಜ್ಞಾನಿಗಳಾದ ಮಹರ್ಷಿಗಳೂ ಶ್ವೇತ, ಅಗಸ್ತ್ಯ, ದಧೀಚಿ, ನಾನು ಮುಂತಾದ ಶಿವಭಕ್ತರೂ, ನಂದೀಶ್ವರ, ಮಹಾಕಾಲ, ಭೃಂಗೀಶ ಮುಂತಾದ ಗಣೇಶ್ವರರೂ ಪಾತಾಲವಾಸಿಗಳಾದ ದೈತ್ಯರೂ, ಆದಿಶೇಷನೇ ಮೊದಲಾದ ಉರಗರು, ಸಿದ್ಧರು, ಯಕ್ಷರು, ಗಂಧರ್ವರು, ರಾಕ್ಷಸರು, ಭೂತಗಣಗಳು, ಪಿಶಾಚಗಳೂ ಇವರೆಲ್ಲರೂ ಶಿವಪೂಜೆಯನ್ನು ಮಾಡಿರುವರು.

೬-೭. ಈ ಪೂಜಾವಿಧಾನದಿಂದ ಸಮಸ್ತದೇವತೆಗಳೂ, ಬ್ರಹ್ಮ, ವಿಷ್ಣು ರುದ್ರ, ಇಂದ್ರ, ಗಣೇಶ ಮುಂತಾದ ದೇವತೆಗಳೂ ತಮ್ಮತಮ್ಮ ಪದವಿಯನ್ನು ಪಡೆದಿರುವರು.

ಗಣೇಶಶ್ಚ ಗಣೇಶತ್ವಮನೇನ ವಿಧಿನಾ ಗತಃ ।
ಸಿತಚಂದನತೋಯೇನ ಲಿಂಗಂ ಸ್ನಾಪ್ಯ ಶಿವಂ ಶಿವಾಂ ।
ಶ್ವೇತೈರ್ವಿಕಸಿತೈಃ ಪದ್ಮೈಃ ಸಂಪೂಜ್ಯ ಪ್ರಣಿಪತ್ಯ ಚ ॥ ೮

ತತ್ರ ಪದ್ಮಾಸನಂ ರಮ್ಯಂ ಕೃತ್ವಾ ಲಕ್ಷಣಸಂಯುತಂ ।
ವಿಭವೇ ಸತಿ ಹೇಮಾದ್ಯೈ ರತ್ನಾದ್ಯೈರ್ವಾ ಸ್ವಶಕ್ತಿತಃ ॥ ೯ ॥

ಮಧ್ಯೇ ಕೇಸರಜಾಲಸ್ಯ ಸ್ಥಾಪ್ಯ ಲಿಂಗಂ ಕನೀಯಸಂ ।
ಅಂಗುಷ್ಠಪ್ರತಿಮಂ ರಮ್ಯಂ ಸರ್ವಗಂಧಮಯಂ ಶುಭಂ ॥ ೧೦ ॥

ದಕ್ಷಿಣೇ ಸ್ಥಾಪಯಿತ್ವಾ ತು ಬಿಲ್ವಪತ್ರೈಃ ಸಮರ್ಚಯೇತ್ ।
ಅಗುರುಂ ದಕ್ಷಿಣೇ ಪಾರ್ಶ್ವೇ ಪಶ್ಚಿಮೇ ತು ಮನಶ್ಶಿಲಾಂ ॥ ೧೧ ॥

ಉತ್ತರೇ ಚಂದನಂ ದದ್ಯಾದ್ಧರಿತಾಲಂ ತು ಪೂರ್ವತಃ ।
ಸುಗಂಧೈಃ ಕುಸುಮೈರಮ್ಯೈರ್ವಿಚಿತ್ರೈಶ್ಚಾಪಿ ಪೂಜಯೇತ್ ॥ ೧೨ ॥

---

೮. ದೇವತೆಗಳು ಬಿಳಿಯ ಶ್ರೀಗಂಧದ ನೀರಿನಿಂದ ಲಿಂಗಕ್ಕೆ ಅಭಿಷೇಕವನ್ನು ಮಾಡಿ ಬಿಳಿಯ ಕಮಲಗಳಿಂದ ಶಿವದಂಪತಿಗಳನ್ನು ಪೂಜಿಸಿ ನಮಸ್ಕಾರಮಾಡಿ ಈ ನಿಯಮದಿಂದಲೇ ತಮ್ಮತಮ್ಮ ಪದವಿಗಳನ್ನು ಪಡೆದಿರುವರು-

೯-೧೦. ಶಿವಪೂಜಾಸಂದರ್ಭದಲ್ಲಿ ಸಂಪತ್ತಿಗೆ ತಕ್ಕಂತೆ ಚಿನ್ನದಿಂದಲೋ ರತ್ನಾದಿಗಳಿಂದಲೋ, ತನ್ನ ಶಕ್ತಿಗನುಸಾರವಾಗಿ ಮನೋಹರವಾದ ಲಕ್ಷಣಗಳಿಂದ ಕೂಡಿದ ಪದ್ಮಾಕಾರವಾದ ಪೀಠವನ್ನು ಮಾಡಿಸಿ ಆ ಪದ್ಮಪೀಠದ ಕೇಸರಗಳ ನಡುವೆ ಕೈಯ್ಯ ಹೆಬ್ಬೆರಳಿನ ಗಾತ್ರವಾದ ಸಣ್ಣ ಲಿಂಗವನ್ನಿಟ್ಟು ಸಮಸ್ತ ಸುಗಂಧಗಳನ್ನೂ ಆ ಲಿಂಗದ ದಕ್ಷಿಣದಿಕ್ಕಿನಲ್ಲಿಟ್ಟು ಬಿಲ್ವಪತ್ರೆಯಿಂದ ಪೂಜಿಸಬೇಕು.

೧೧-೧೨. ಲಿಂಗದ ದಕ್ಷಿಣದಲ್ಲಿ ಅಗುರು ಗಂಧವನ್ನೂ, ಪಶ್ಚಿಮದಲ್ಲಿ ಮಣಿಶಿಲೆಯನ್ನೂ, ಉತ್ತರದಲ್ಲಿ ಶ್ರೀಗಂಧವನ್ನೂ, ಪೂರ್ವದಲ್ಲಿ ಹರಿತಾಲವನ್ನು ಸಮರ್ಪಿಸಿ ಸುಗಂಧವಾದ ಹೂಗಳಿಂದ ಪೂಜಿಸಬೇಕು.

ಧೂಪಂ ಕೃಷ್ಣಾಗುರುಂ ದದ್ಯಾತ್ಸರ್ವತಶ್ಚ ಸಗುಗ್ಗುಲಂ ।
ವಾಸಾಂಸಿ ಚಾsತಿಸೂಕ್ಷ್ಮಾಣಿ ವಿಕಾಶಾನಿ ನಿವೇದಯೇತ್ ॥ ೧೩ ॥

ಪಾಯಸಂ ಘೃತಸಂಮಿಶ್ರಂ ಘೃತದೀಪಾಂಶ್ಚ ದಾಪಯೇತ್ ।
ಸರ್ವಂ ನಿವೇದ್ಯ ಮಂತ್ರೇಣ ತತೋ ಗಚ್ಛೇತ್ಪ್ರದಕ್ಷಿಣಾಂ ॥ ೧೪ ॥

ಪ್ರಣಮ್ಯ ಭಕ್ತ್ಯಾ ದೇವೇಶಂ ಸ್ತುತ್ವಾ ಚಾಂತೇ ಕ್ಷಮಾಪಯೇತ್ ।
ಸರ್ವೋಪಹಾರಸಂಮಿಶ್ರಂ ತತೋ ಲಿಂಗಂ ನಿವೇದಯೇತ್ ॥ ೧೫ ॥

ಶಿವಾಯ ಶಿವಮಂತ್ರೇಣ ದಕ್ಷಿಣಾಮೂರ್ತಿಮಾಶ್ರಿತಃ ।
ಏವಂ ಯೋsರ್ಚಯತೇ ನಿತ್ಯಂ ಪಂಚಗಂಧಮಯಂ ಶುಭಂ ॥ ೧೬ ॥

ಸರ್ವಪಾಪವಿನಿರ್ಮುಕ್ತಃ ಶಿವಲೋಕೇ ಮಹೀಯತೇ ।
ಏತದ್ವ್ರತೋತ್ತಮಂ ಗುಹ್ಯಂ ಶಿವಲಿಂಗಮಹಾವ್ರತಂ ॥ ೧೭ ॥

೧೩.೧೪. ಗುಗ್ಗುಲುವಿನಿಂದ ಕೂಡಿದ ಕರಿಅಗುರು ಚಕ್ಕೆಯ ಧೂಪವನ್ನೂ, ಸೂಕ್ಷ್ಮವೂ ಪ್ರಕಾಶಿಸುತ್ತಿರುವುದೂ ಆದ ವಸ್ತ್ರಗಳನ್ನೂ, ತುಪ್ಪದೊಡನೆ ಕೂಡಿದ ಪಾಯಸವನ್ನೂ, ತುಪ್ಪದ ದೀಪಗಳನ್ನೂ ಸಮರ್ಪಿಸಿ ಮಂತ್ರಪೂರ್ವಕವಾಗಿ ಎಲ್ಲವನ್ನೂ ನಿವೇದನಮಾಡಿ ಬಳಿಕ ಪ್ರದಕ್ಷಿಣೆಯನ್ನು ಮಾಡಬೇಕು.

೧೫. ಭಕ್ತಿಯಿಂದ ದೇವದೇವನಾದ ಶಿವನಿಗೆ ನಮಸ್ಕಾರವನ್ನುಮಾಡಿ ಸ್ತೋತ್ರವನ್ನು ಮಾಡಿ ಕೊನೆಯಲ್ಲಿ ಕ್ಷಮಾಪಣೆಯನ್ನು ಕೇಳಿಕೊಳ್ಳಬೇಕು. ಆಮೇಲೆ ಶಿವಪಂಚಾಕ್ಷರ ಮಂತ್ರದಿಂದ ಸುಮಸ್ತ ಉಪಹಾರಗಳಿಂದ ಕೂಡಿದ ಲಿಂಗವನ್ನು ಶಿವನಿಗೆ ಸಮರ್ಪಿಸಿ ದಕ್ಷಿಣಾಮೂರ್ತಿಯನ್ನು ಸ್ತೋತ್ರ ಮಾಡಬೇಕು.

೧೬-೧೭. ಈರೀತಿಯಲ್ಲಿ ಪ್ರತಿದಿನವೂ ಪಂಚಗಂಧಗಳಿಂದ ಮಂಗಳಕರವಾದ ಶಿವಪೂಜೆಯನ್ನು ಯಾರು ಮಾಡುವರೋ ಅವರು ಸಕಲ ಪಾಪಗಳನ್ನೂ ಕಳೆದುಕೊಂಡು ಶಿವಲೋಕದಲ್ಲಿ ಮಹಾಮಹಿಮೆಯಿಂದ ಕೂಡಿ ಸುಖ

**ಭಕ್ತಸ್ಯ ತೇ ಸಮಾಖ್ಯಾತಂ ನ ದೇಯಂ ಯಸ್ಯ ಕಸ್ಯ ಚಿತ್ ।**
**ದೇಯಂ ಚ ಶಿವಭಕ್ತೇಭ್ಯಃ ಶಿವೇನ ಕಥಿತಂ ಪುರಾ ॥ ೧೮ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯಸಂಹಿತಾಯಾ-**
**ಮುತ್ತರಭಾಗೇ ಆಮುಷ್ಮಿಕಕರ್ಮವಿಧಿವರ್ಣನಂ ನಾಮ**
**ತ್ರಯಸ್ತ್ರಿಂಶೋಽಧ್ಯಾಯಃ**

---

ವನ್ನನುಭವಿಸುವರು. ಇದು ಗೋಪ್ಯವಾದ, ಉತ್ತಮವಾದ ಶಿವಲಿಂಗ ಮಹಾ ವ್ರತವು.

೧೮. ಎಲೈ ಕೃಷ್ಣನೇ, ಭಕ್ತನಾದ್ದರಿಂದ ನಿನಗೆ ಇದನ್ನು ಹೇಳಿರುವೆನು. ಇದನ್ನು ಸಾಮಾನ್ಯನಿಗೆ ಹೇಳಬಾರದು. ಶಿವಭಕ್ತರಿಗೆ ಮಾತ್ರ ಹೇಳಬೇಕೆಂದು ಪೂರ್ವದಲ್ಲಿ ಶಿವನೇ ಹೇಳಿರುತ್ತಾನೆ.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯುವೀಯ ಸಂಹಿತೆಯ ಉತ್ತರ
ಭಾಗದಲ್ಲಿ ಆಮುಷ್ಮಿಕವಿಧಿವರ್ಣನವೆಂಬ ಮೂವತ್ತಮೂರನೆಯ
ಅಧ್ಯಾಯವು ಮುಗಿದುದು.



|| ಶ್ರೀಃ ||

|| ಓಂ ನಮಃ ಶಿವಾಯ ||

---

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ಚತುಸ್ತ್ರಿಂಶೋಽಧ್ಯಾಯಃ

---

|| ಉಪಮನ್ಯುರುವಾಚ ||

ನಿತ್ಯಾನ್ನೈಮಿತ್ತಿಕಾತ್ಕಾಮ್ಯಾದ್ಯಾ ಸಿದ್ಧಿರಿಹ ಕೀರ್ತಿತಾ ।
ಸಾ ಸರ್ವಾ ಲಭ್ಯತೇ ಸದ್ಯೋ ಲಿಂಗಬೇರಪ್ರತಿಷ್ಠಯಾ || ೧ ||

ಸರ್ವೋ ಲಿಂಗಮಯೋ ಲೋಕಸ್ಸರ್ವಂ ಲಿಂಗೇ ಪ್ರತಿಷ್ಠಿತಂ ।
ತಸ್ಮಾತ್ಪ್ರತಿಷ್ಠಿತೇ ಲಿಂಗೇ ಭವೇತ್ಸರ್ವಂ ಪ್ರತಿಷ್ಠಿತಂ । || ೨ ||

---

## ಮೂವತ್ತನಾಲ್ಕನೆಯ ಅಧ್ಯಾಯವು

೧. ಉಪಮನ್ಯುವು ಹೇಳಿದನು—ನಿತ್ಯ, ನೈಮಿತ್ತಿಕ, ಕಾಮ್ಯಕರ್ಮಗಳಿಂದ ಯಾವ ಫಲವು ಬರುವುದೋ ಅವೆಲ್ಲವೂ ಶಿವನ ಲಿಂಗಮೂರ್ತಿಗಳ ಪ್ರತಿಷ್ಠೆಯಿಂದ ಬರುವುವು.

೨. ಸಮಸ್ತ ಲೋಕಗಳೂ ಲಿಂಗರೂಪನಾದ ಪರಮಾತ್ಮನ ಸ್ವರೂಪವಾದುವುಗಳು. ಮತ್ತು ಅವೆಲ್ಲವೂ ಲಿಂಗರೂಪನಾದ ಪರಮಾತ್ಮನಲ್ಲಿಯೇ ಸ್ಥಿರವಾಗಿರುವುವು. ಆ ಕಾರಣದಿಂದ ಪರಮಾತ್ಮನಿಗೆ ಪ್ರತಿನಿಧಿಯಾದ ಲಿಂಗವನ್ನು ಪ್ರತಿಷ್ಠೆ ಮಾಡಿದರೆ ಎಲ್ಲವನ್ನೂ ಪ್ರತಿಷ್ಠೆ ಮಾಡಿದಂತಾಗುವುದು.

ಬ್ರಹ್ಮಣಾ ವಿಷ್ಣುನಾ ವಾऽಪಿ ರುದ್ರೇಣಾನ್ಯೇನ ಕೇನ ವಾ ।
ಲಿಂಗಪ್ರತಿಷ್ಠಾಮುತ್ಸೃಜ್ಯ ಕ್ರಿಯತೇ ಸ್ವಪದಸ್ಥಿತಿಃ ॥ ೩ ॥

ಕಿಮನ್ಯದಿಹ ವಕ್ತವ್ಯಂ ಪ್ರತಿಷ್ಠಾಂ ಪ್ರತಿ ಕಾರಣಂ ।
ಪ್ರತಿಷ್ಠಿತಂ ಶಿವೇನಾಪಿ ಲಿಂಗಂ ವೈಶ್ವೇಶ್ವರಂ ಯತಃ ॥ ೪ ॥

ತಸ್ಮಾತ್ಸರ್ವಪ್ರಯತ್ನೇನ ಪರತ್ರೇಹ ಚ ಶರ್ಮಣೇ ।
ಸ್ಥಾಪಯೇತ್ಪರಮೇಶಸ್ಯ ಲಿಂಗಂ ಬೇರಮಥಾऽಪಿ ವಾ ॥ ೫ ॥

॥ ಶ್ರೀ ಕೃಷ್ಣ ಉವಾಚ ॥

ಕಿಮಿದಂ ಲಿಂಗಮಾಖ್ಯಾತಂ ಕಥಂ ಲಿಂಗೀ ಮಹೇಶ್ವರಃ ।
ಕಥಂ ಚ ಲಿಂಗಭಾವೋऽಸ್ಯ ಕಸ್ಮಾದಸ್ಮಿನ್ ಶಿವೋऽರ್ಚ್ಯತೇ ॥ ೬ ॥

॥ ಉಪಮನ್ಯುರುವಾಚ ॥

ಅವ್ಯಕ್ತಂ ಲಿಂಗಮಾಖ್ಯಾತಂ ತ್ರಿಗುಣಪ್ರಭವಾಪ್ಯಯಂ ।
ಅನಾದ್ಯನಂತಂ ವಿಶ್ವಸ್ಯ ಯದುಪಾದಾನಕಾರಣಂ ॥ ೭ ॥

---

೩. ಬ್ರಹ್ಮ, ವಿಷ್ಣು, ರುದ್ರರು ಲಿಂಗಪ್ರತಿಷ್ಠಾಫಲದಿಂದಲೇ ತಮ್ಮ ಪದವಿಯನ್ನು ಪಡೆದಿರುವರು.

೪. ಶಿವನೇ ಕಾಶಿಯಲ್ಲಿ ವಿಶ್ವೇಶ್ವರಲಿಂಗವನ್ನು ಪ್ರತಿಷ್ಠೆಮಾಡಿರುವನು. ಆದುದರಿಂದ ಲಿಂಗವನ್ನು ಪ್ರತಿಷ್ಠೆ ಮಾಡಬೇಕೆಂಬ ವಿಷಯದಲ್ಲಿ ಬೇರೆ ಕಾರಣವನ್ನು ಹೇಳಲು ಸಾಧ್ಯವಾಗುವುದಿಲ್ಲ.

೫. ಆದುದರಿಂದ ಸರ್ವಪ್ರಯತ್ನದಿಂದಲೂ, ಇಹಪರಗಳ ಸುಖಪ್ರಾಪ್ತಿಗಾಗಿ ಪರಮೇಶ್ವರನ ಲಿಂಗವನ್ನಾಗಲಿ, ಮೂರ್ತಿಯನ್ನಾಗಲಿ ಪ್ರತಿಷ್ಠೆಮಾಡಬೇಕು.

೬. ಶ್ರೀಕೃಷ್ಣನು ಕೇಳಿದನು—ಎಲೈ ಉಪಮನ್ಯುಮುನಿಯೇ, ಲಿಂಗವೆಂಬುದಾವುದು? ಮಹೇಶ್ವರನು ಹೇಗೆ ಲಿಂಗಿಯಾದನು? ಏತಕ್ಕಾಗಿ ಶಿವನನ್ನು ಪೂಜಿಸಬೇಕು ಎನ್ನಲು,

೭-೮. ಉಪಮನ್ಯುವಿಂತೆಂದನು—ಸತ್ವರಜಸ್ತಮೋಗುಣಗಳಿಂದುಂಟಾದ ಅವ್ಯಕ್ತವೆಂಬ ಪ್ರಕೃತಿಯೇ ಲಿಂಗವೆನಿಸುವುದು. ಅದಕ್ಕೆ ಆದ್ಯಂತಗಳಿಲ್ಲ. ಈ

**ತದೇವ ಮೂಲಪ್ರಕೃತಿರ್ಮಾಯಾ ಚ ಗಗನಾತ್ಮಿಕಾ ।**
**ತತ ಏವ ಸಮುತ್ಪನ್ನಂ ಜಗದೇತಚ್ಚರಾಚರಂ ॥ ೮ ॥**

**ಅಶುದ್ಧಂ ಚೈವ ಶುದ್ಧಂ ಯಚ್ಛುದ್ಧಾಶುದ್ಧಂ ಚ ತತ್ತ್ರಿಧಾ ।**
**ತತಃ ಶಿವೋ ಮಹೇಶಶ್ಚ ರುದ್ರೋ ವಿಷ್ಣುಃ ಪಿತಾಮಹಃ ॥ ೯ ॥**

**ಭೂತಾನಿ ಚೇಂದ್ರಿಯೈರ್ಜಾತಾ ಲೀಯಂತೇಽತ್ರ ಶಿವಾಜ್ಞಯಾ ।**
**ಅತ ಏವ ಶಿವೋ ಲಿಂಗೋ ಲಿಂಗಮಾಜ್ಞಾಪಯೇದ್ಯತಃ ॥ ೧೦ ॥**

**ಯತೋ ನ ತದನಾಜ್ಞಾತಂ ಕಾರ್ಯಾಯ ಪ್ರಭವೇತ್ಸ್ವತಃ ।**
**ತತೋ ಜಾತಸ್ಯ ವಿಶ್ವಸ್ಯ ತತ್ರೈವ ವಿಲಯೋ ಯತಃ ॥ ೧೧ ॥**

**ಅನೇನ ಲಿಂಗತಾ ತಸ್ಯ ಭವೇನ್ನಾನ್ಯೇನ ಕೇನಚಿತ್ ।**
**ಲಿಂಗ ಚ ಶಿವಯೋರ್ದೇಹಸ್ತಾಭ್ಯಾಂ ಯಸ್ಮಾದಧಿಷ್ಠಿತಂ ॥ ೧೨ ॥**

---

ಪ್ರಪಂಚೋತ್ಪತ್ತಿಗೆ ಈ ಪ್ರಕೃತಿಯೇ ಕಾರಣವು. ಇದನ್ನೇ ಮೂಲಪ್ರಕತಿಯೆಂದೂ ಮಾಯೆಯೆಂದೂ ಹೇಳುವರು. ಇದು ಆಕಾಶಸ್ವರೂಪವಾದುದು. ಇದರಿಂದಲೇ ಈ ಸಮಸ್ತ ಚರಾಚರ ಪ್ರಾಣಿಗಳಿಂದ ಕೂಡಿದ ಪ್ರಪಂಚವು ಉಂಟಾಗಿರುವುದು.

೯-೧೦. ಆ ಅವ್ಯಕ್ತವು ಅಶುದ್ಧ, ಶುದ್ಧ, ಶುದ್ಧಾಶುದ್ಧ ಎಂದು ಮೂರು ಬಗೆಯಾಗಿರುವುದು. ಆ ಅವ್ಯಕ್ತತತ್ತ್ವದಿಂದಲೇ ಶಿವ, ಮಹೇಶ್ವರ, ರುದ್ರ, ವಿಷ್ಣು, ಬ್ರಹ್ಮ, ಪಂಚಭೂತಗಳು, ಇಂದ್ರಿಯಗಳು, ಇವೆಲ್ಲವೂ ಹುಟ್ಟಿದುವು. ಇವುಗಳೆಲ್ಲವೂ ಶಿವನ ಅಪ್ಪಣೆಯಿಂದ ಆ ಅವ್ಯಕ್ತದಲ್ಲಿಯೇ ಲಯವನ್ನು ಹೊಂದುವುವು. ಆ ಕಾರಣದಿಂದಲೇ ಲಿಂಗರೂಪನಾದ ಶಿವನು ಲಿಂಗರೂಪವಾದ ಪ್ರಕೃತಿಯನ್ನು ಆಜ್ಞಾಪಿಸುವನು.

೧೧. ಲಿಂಗದ ಆಜ್ಞೆಯಿಲ್ಲದೆ ಪ್ರಕೃತಿರೂಪವಾದ ಲಿಂಗವು ತಾನಾಗಿ ಕಾರ್ಯಕಾರಿಯಾಗುವುದಿಲ್ಲವಾದುದರಿಂದ ಪ್ರಕೃತಿಯಿಂದ ಹುಟ್ಟಿದ ಪ್ರಪಂಚವು ಆ ಪ್ರಕೃತಿಯಲ್ಲಿಯೇ ಲಯವನ್ನು ಹೊಂದುವುದು.

೧೨. ಈ ಕಾರಣದಿಂದ ಶಿವನಿಗೆ ಲಿಂಗತ್ವವೂ ಬಂದಿರುವುದು. ಬೇರೆ ಕಾರಣದಿಂದಲ್ಲ. ಶಿವದಂಪತಿಗಳ ಶರೀರವೇ ಲಿಂಗವೆನಿಸುವುದು. ಲಿಂಗದಲ್ಲಿ

ಅತಸ್ತತ್ರ ಶಿವಃ ಸಾಂಬೋ ನಿತ್ಯಮೇವ ಸಮರ್ಚ್ಯತೇ ।
ಲಿಂಗವೇದೀ ಮಹಾದೇವೀ ಲಿಂಗಂ ಸಾಕ್ಷಾನ್ಮಹೇಶ್ವರಃ ॥ ೧೩ ॥

ತಯೋಃ ಸಂಪೂಜನಾದೇವ ಸ ಚ ಸಾ ಚ ಸಮರ್ಚಿತೌ ।
ನ ತಯೋರ್ಲಿಂಗದೇಹತ್ತ್ವಂ ವಿದ್ಯತೇ ಪರಮಾರ್ಥತಃ ॥ ೧೪ ॥

ಯತಸ್ತ್ವೇತೌ ವಿಶುದ್ಧೌ ತೌ ದೇಹಸ್ತದುಪಚಾರತಃ ।
ತದೇವ ಪರಮಾ ಶಕ್ತಿಃ ಶಿವಸ್ಯ ಪರಮಾತ್ಮನಃ ॥ ೧೫ ॥

ಶಕ್ತಿರಾಜ್ಞಾಂ ಯದಾದತ್ತೇ ಪ್ರಸೂತೇ ತಚ್ಚರಾಚರಂ ।
ನ ತಸ್ಯ ಮಹಿಮಾ ಶಕ್ಯೋ ವಕ್ತುಂ ವರ್ಷಶತೈರಪಿ ॥ ೧೬ ॥

ಯೇನಾದೌ ಮೋಹಿತೌ ಸ್ಯಾತಾಂ ಬ್ರಹ್ಮನಾರಾಯಣಾವಪಿ ।
ಪುರಾ ತ್ರಿಭುವನಸ್ಯಾಸ್ಯ ಪ್ರಲಯೇ ಸಮುಪಸ್ಥಿತೇ ॥ ೧೭ ॥

---

ಶಿವದಂಪತಿಗಳು ನೆಲೆಸಿರುವರು. ಆದುದರಿಂದಲೆ ಆ ಲಿಂಗರೂಪದಲ್ಲಿ ಅಂಬಾ ಸಹಿತನಾದ ಶಿವನನ್ನು ಪ್ರತಿದಿನವೂ ಜನರು ಪೂಜಿಸುವರು.

೧೩-೧೪. ಲಿಂಗವೇದಿಯನ್ನು ಮಹಾದೇವಿಯೆಂದೂ, ಲಿಂಗವನ್ನು ಸಾಕ್ಷಾನ್ಮಹೇಶ್ವರನೆಂದೂ ಭಾವಿಸಿ ಲಿಂಗವನ್ನು ಪೂಜಿಸಿದರೆ ಶಿವದಂಪತಿಗಳನ್ನು ಪೂಜಿಸಿದಂತಾಗುವುದು. ನಿಜವಾಗಿಯೂ, ಶಿವದಂಪತಿಗಳಿಗೆ ಲಿಂಗಶರೀರವಿರುವುದಿಲ್ಲ.

೧೫. ಶಿವದಂಪತಿಗಳು ಪರಿಶುದ್ಧರಾದುದರಿಂದ ಅವರಿಗೆ ದೇಹಸ್ವರೂಪವನ್ನು ಔಪಚಾರಕವಾಗಿ ಹೇಳಿರುವುದು. ಪರಮಾತ್ಮನ ಶ್ರೇಷ್ಠವಾದ ಶಕ್ತಿಯೇ ದೇವಿಯೆನಿಸುವುದು.

೧೬. ಶಕ್ತಿಯು ಪರಮೇಶ್ವರನ ಆಜ್ಞೆಯಿಂದಲೇ ಚರಾಚರಪ್ರಪಂಚವನ್ನು ಹುಟ್ಟಿಸುವುದು. ಅದರ ಮಹಿಮೆಯನ್ನು ಒಂದು ನೂರು ವರ್ಷ ಹೇಳಿದರೂ ಮುಗಿಸಲಾಗುವುದಿಲ್ಲ. ಆ ಶಕ್ತಿಯ ಮಹಿಮೆಯಿಂದಲೇ ಬ್ರಹ್ಮ, ನಾರಾಯಣರೂ ಪೂರ್ವದಲ್ಲಿ ಅಜ್ಞಾನವನ್ನು ಹೊಂದಿದರು.

೧೭-೧೮. ಹಿಂದೆ ಮೂರು ಲೋಕಕ್ಕೂ ಪ್ರಳಯಕಾಲವು ಪ್ರಾಪ್ತವಾಗಲು ಆ ಪ್ರಳಯಸಮುದ್ರದ ನೀರಿನಲ್ಲಿ ಮಹಾವಿಷ್ಣುವು ಸುಖವಾಗಿ ನಿದ್ದೆ

ವಾರಿಶಯ್ಯಾಗತೋ ವಿಷ್ಣುಃ ಸುಷ್ವಾಪಾನಾಕುಲಃ ಸುಖಂ ।
ಯದೃಚ್ಛಯಾ ಗತಸ್ತತ್ರ ಬ್ರಹ್ಮಾ ಲೋಕಪಿತಾಮಹಃ ॥ ೧೮ ॥

ದದರ್ಶ ಪುಂಡರೀಕಾಕ್ಷಂ ಸ್ವಪಂತಂ ತಮನಾಕುಲಂ ।
ಮಾಯಯಾ ಮೋಹಿತಃ ಶಂಭೋರ್ವಿಷ್ಣುಮಾಹ ಪಿತಾಮಹಃ ॥ ೧೯ ॥

ಕಸ್ತ್ವಂ ವದೇತ್ಯಮರ್ಷೇಣ ಪ್ರೃಷ್ಟ್ವೋತ್ಥಾಪ್ಯ ಮಾಧವಂ ।
ಸ ತು ಹಸ್ತಪ್ರಹಾರೇಣ ತೀವ್ರೇಣಾಭಿಹತಃ ಕ್ಷಣಾತ್ ॥ ೨೦ ॥

ಪ್ರಬುದ್ಧೋತ್ಥಾಯ ಶಯನಾದ್ದದರ್ಶ ಪರಮೇಷ್ಠಿನಂ ।
ತಮಾಹ ಚಾಂತಃಸಂಕ್ರುದ್ಧಃ ಸ್ವಯಮಕ್ರುದ್ಧವದ್ಧರಿಃ ॥ ೨೧ ॥

ಕುತಸ್ತ್ವಮಾಗತೋ ವತ್ಸ ಕಸ್ಮಾತ್ತ್ವಂ ವ್ಯಾಕುಲೋ ವದ ।
ಇತಿ ವಿಷ್ಣುವಚಃ ಶ್ರುತ್ವಾ ಪ್ರಭುತ್ವಗುಣಸೂಚಕಂ ॥ ೨೨ ॥

---

ಮಾಡುತ್ತಿದ್ದನು. ಸೃಷ್ಟಿಕರ್ತನಾದ ಬ್ರಹ್ಮನು ಅಕಸ್ಮಾತ್ತಾಗಿ ಅಲ್ಲಿಗೆ ಬಂದು ಯಾವ ತೊಂದರೆಯೂ ಇಲ್ಲದೆ ಸುಖವಾಗಿ ಮಲಗಿರುವ ಕಮಲಾಕ್ಷನಾದ ವಿಷ್ಣುವನ್ನು ನೋಡಿದನು.

೧೯-೨೦. ಶಿವಮಾಯೆಯಿಂದ ಮೋಹಿತನಾದ ಬ್ರಹ್ಮನು ವಿಷ್ಣುವನ್ನು ಕುರಿತು ಎಲೈ ನೀನು ಯಾರು? ಇಲ್ಲೇಕೆ ಮಲಗಿರುವೆ? ಹೇಳು ಎಂದು ಕೈಯಿಂದ ತಟ್ಟಿ ಎಬ್ಬಿಸಿದನು. ವಿಷ್ಣುವು ಬಲವಾದ ಆ ಏಟಿನಿಂದ ಆ ಕ್ಷಣದಲ್ಲಿಯೇ ಎಚ್ಚರಗೊಂಡು ಹಾಸಿಗೆಯಿಂದೆದ್ದು ಎದುರಿಗೆ ನಿಂತಿರುವ ಬ್ರಹ್ಮನನ್ನು ಕಂಡನು.

೨೧-೨೨. ವಿಷ್ಣುವು ಬ್ರಹ್ಮನನ್ನು ಕುರಿತು ಒಳಗೆ ಕೋಪವಿದ್ದರೂ ಅದನ್ನು ಹೊರಗೆ ತೋರಿಸದೆ ಎಲೈ ಬಾಲಕನೇ, ಏನು ಕಾರಣ ಇಲ್ಲಿಗೆ ಬಂದೆ? ನಿನ್ನ ದುಃಖಕ್ಕೆ ಕಾರಣವೇನು ಹೇಳು, ಎಂದು ಕೇಳಲು ಪ್ರಭುತ್ವವನ್ನು ಸೂಚಿಸುವ ವಿಷ್ಣುವಿನ ಮಾತನ್ನು ಕೇಳಿ ಬ್ರಹ್ಮನು ರಜೋಗುಣದಿಂದ ಕೂಡಿದವನಾದುದರಿಂದ ದ್ವೇಷದಿಂದ ಮತ್ತಿಂತೆಂದನು.

ರಜಸಾ ಬದ್ಧವೈರಸ್ತಂ ಬ್ರಹ್ಮಾ ಪುನರಭಾಷತ ।
ವತ್ಸೇತಿ ಮಾಂ ಕುತೋ ಬ್ರೂಷೇ ಗುರುಃ ಶಿಷ್ಯಮಿವಾತ್ಮನಃ ॥ ೨೩ ॥

ಮಾಂ ನ ಜಾನಾಸಿ ಕಿಂ ನಾಥಂ ಪ್ರಪಂಚೋ ಯಸ್ಯ ಮೇ ಕೃತಿಃ ।
ತ್ರಿಧಾತ್ಮಾನಂ ವಿಭಜ್ಯೇದಂ ಸೃಷ್ಟ್ವಾಥ ಪರಿಪಾಲ್ಯತೇ ॥ ೨೪ ॥

ಸಂಹರಾಮಿ ನ ಮೇ ಕಶ್ಚಿತ್ಸ್ರಷ್ಟಾ ಜಗತಿ ವಿದ್ಯತೇ ।
ಇತ್ಯುಕ್ತೇ ಸತಿ ಸೋಽಪ್ಯಾಹ ಬ್ರಹ್ಮಾಣಂ ವಿಷ್ಣುರವ್ಯಯಃ ॥ ೨೫ ॥

ಅಹಮೇವಾದಿಕರ್ತಾಽಸ್ಯ ಹರ್ತಾ ಚ ಪರಿಪಾಲಕಃ ।
ಭವಾನಪಿ ಮಮೈವಾಂಗಾದವತೀರ್ಣಃ ಪುರಾವ್ಯಯಾತ್ ॥ ೨೬ ॥

ಮನ್ನಿಯೋಗಾತ್ತ್ವಮಾತ್ಮಾನಂ ತ್ರಿಧಾ ಕೃತ್ವಾ ಜಗತ್ತ್ರಯಂ ।
ಸೃಜಸ್ಯವಸಿ ಚಾಂತೇ ತತ್ಪುನಃ ಪ್ರತಿಸೃಜಸ್ಯಪಿ ॥ ೨೭ ॥

ವಿಸ್ಮೃತೋಽಸಿ ಜಗನ್ನಾಥಂ ನಾರಾಯಣಮನಾಮಯಂ ।
ತವಾಪಿ ಜನಕಂ ಸಾಕ್ಷಾನ್ಮಾಮೇವಮವಮನ್ಯಸೇ ॥ ೨೮ ॥

---

೨೩-೨೪. ಗುರುವು ತನ್ನ ಶಿಷ್ಯನನ್ನು ಸಂಬೋಧಿಸುವಂತೆ ಬಾಲಕನೇ ಎಂದು ನನ್ನನ್ನೇಕೆ ಸಂಬೋಧಿಸಿದೆ? ಈ ಪ್ರಪಂಚವನ್ನು ಸೃಷ್ಟಿಸಲು ನಾನೇ ಮೂರುಭಾಗವಾಗಿ ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುವೆನು. ನನ್ನನ್ನು ಸೃಷ್ಠಿಸಿದವನು ಯಾರೂ ಇರುವುದಿಲ್ಲ. ಇಂತಹ ನನ್ನನ್ನು ಈ ಪ್ರಪಂಚಕ್ಕೆಲ್ಲಾ ಒಡೆಯನೆಂಬುದನ್ನು ತಿಳಿಯೆಯಾ?

೨೫-೨೭. ಹೀಗೆಂದು ಹೇಳಲು ವಿಷ್ಣುವು ಬ್ರಹ್ಮನನ್ನು ಕುರಿತು ನಾನೇ ಈ ಪ್ರಪಂಚಕ್ಕೆ ಮೊದಲನೆಯ ಕರ್ತೃವು. ಇನ್ನು ರಕ್ಷಿಸಿ ನಾಶಮಾಡುವವನೂ ನಾನೇ. ನೀನೂ ನನ್ನ ಅವಯವದಿಂದ ಹುಟ್ಟಿದವನು. ನನ್ನ ಅಪ್ಪಣೆಯಿಂದಲೇ ನೀನು ಮೂರುರೂಪದಿಂದ ಮೂರುಲೋಕವನ್ನೂ ಸೃಷ್ಟಿಸಿ ಕಾಪಾಡಿ ಕೊನೆಯಲ್ಲಿ ನಾಶವನ್ನೂ ಮಾಡುವೆ.

೨೮-೨೯. ಲೋಕಕ್ಕೆಲ್ಲ ಒಡಯನಾದ ನಿರ್ದುಷ್ಟನಾದ ನಾರಾಯಣ ನನ್ನು ಮರೆತಿರುವೆ. ಸಾಕ್ಷಾತ್ ನಿನ್ನ ತಂದೆಯಾದ ನನ್ನನ್ನು ಅಪಮಾನ

ತವಾಪರಾಧೋ ನಾಸ್ತ್ಯತ್ರ ಭ್ರಾಂತೋಽಸಿ ಮಮ ಮಾಯಯಾ ।
ಮತ್ಪ್ರಸಾದಾದಿಯಂ ಭ್ರಾಂತಿರಪೈಷ್ಯತಿ ತವಾಚಿರಾತ್ ॥ ೨೯ ॥

ಶೃಣು ಸತ್ಯಂ ಚತುರ್ವಕ್ತ್ರ ಸರ್ವದೇವೇಶ್ವರೋ ಹ್ಯಹಂ ।
ಕರ್ತಾ ಭರ್ತಾ ಚ ಹರ್ತಾ ಚ ನ ಮಯಾಸ್ತಿ ಸಮೋ ವಿಭುಃ ॥ ೩೦ ॥

ಏವಮೇವ ವಿವಾದೋಽಭೂದ್ಬ್ರಹ್ಮವಿಷ್ಣ್ವೋಃ ಪರಸ್ಪರಂ ।
ಅಭವಚ್ಚ ಮಹಾಯುದ್ಧಂ ಭೈರವಂ ರೋಮಹರ್ಷಣಂ ॥ ೩೧ ॥

ಮುಷ್ಟಿಭಿರ್ನಿಘ್ನತೋಸ್ತೀವ್ರಂ ರಜಸಾ ಬದ್ಧವೈರಯೋಃ ।
ತಯೋರ್ದರ್ಪಾಪಹಾರಾಯ ಪ್ರಬೋಧಾಯ ಚ ದೇವಯೋಃ ॥ ೩೨ ॥

ಮಧ್ಯೇ ಸಮಾವಿರಭವಲ್ಲಿಂಗಮೈಶ್ವರಮದ್ಭುತಂ ।
ಜ್ವಾಲಾಮಾಲಾಸಹಸ್ರಾಢ್ಯಮಪ್ರಮೇಯಮನೌಪಮಂ ॥ ೩೩ ॥

---

ಮಾಡುತ್ತಿರುವೆ. ಈ ವಿಷಯದಲ್ಲಿ ನಿನ್ನ ತಪ್ಪಿಲ್ಲ. ನನ್ನ ಮಾಯೆಯಿಂದಲೇ ನೀನು ಭ್ರಾಂತನಾಗಿರುವೆ. ನನ್ನ ಅನುಗ್ರಹದಿಂದಲೇ ಈ ನಿನ್ನ ಭ್ರಾಂತಿಯು ಬೇಗನೆ ನಾಶವಾಗುವುದು.

೩೦. ಎಲೈ ಚತುರ್ಮುಖನೇ, ನಿಜವನ್ನು ಹೇಳುವೆನು, ಕೇಳು. ಸಮಸ್ತ ದೇವತೆಗಳಿಗೂ ನಾನೇ ಅಧಿಪತಿಯು. ಎಲ್ಲರನ್ನೂ ಸೃಷ್ಟಿಸಿ ಪಾಲಿಸಿ ನಾಶಮಾಡುವೆನು. ನನಗೆ ಸಮನಾದ ಮತ್ತೊಬ್ಬ ಪ್ರಭುವಿಲ್ಲ ಎಂದನು.

೩೧. ಈರೀತಿಯಲ್ಲಿ ಬ್ರಹ್ಮವಿಷ್ಣುಗಳಿಬ್ಬರಿಗೂ ಕಲಹವುಂಟಾಗಿ ರಜೋಗುಣಸಂಬಂಧವಾದ ದ್ವೇಷದಿಂದ ಒಬ್ಬರನ್ನೊಬ್ಬರು ಮುಷ್ಟಿಯಿಂದ ಹೊಡೆಯುತ್ತ ಭಯಂಕರವಾಗಿ ದೊಡ್ಡ ಯುದ್ಧವನ್ನು ಮಾಡುತ್ತಿದ್ದರು.

೩೨-೩೩. ಆ ದೇವತೆಗಳಿಬ್ಬರ ಗರ್ವವನ್ನು ನಾಶಮಾಡಿ ಅವರಿಗೆ ತಿಳಿವಳಿಕೆಯನ್ನುಂಟುಮಾಡುವುದಕ್ಕಾಗಿ ಅವರಿಬ್ಬರ ನಡುವೆ ಈಶ್ವರಸಂಬಂಧವಾದ ಒಂದು ಲಿಂಗವು ಆವಿರ್ಭವಿಸಿತು. ಅದು ಅಸಂಖ್ಯಾತ ಜ್ವಾಲಾಮಾಲೆಗಳಿಂದ ಕೂಡಿ ಆದಿಮಧ್ಯಾಂತಗಳೂ, ವೃದ್ಧಿಕ್ಷಯಗಳೂ ಇಲ್ಲದೆ ಪ್ರಕಾಶಿಸುತ್ತಿತ್ತು.

ಕ್ಷಯವೃದ್ಧಿವಿನಿರ್ಮುಕ್ತಮಾದಿಮಧ್ಯಾಂತವರ್ಜಿತಂ ।
ತಸ್ಯ ಜ್ವಾಲಾಸಹಸ್ರೇಣ ಬ್ರಹ್ಮವಿಷ್ಣೂ ವಿಮೋಹಿತೌ ॥ ೩೪ ॥

ವಿಸೃಜ್ಯ ಯುದ್ಧಂ ಕಿಂ ತ್ವೇತದಿತ್ಯಚಿಂತಯತಾಂ ತದಾ ।
ನ ತಯೋಸ್ತಸ್ಯ ಯಾಥಾತ್ಮ್ಯಂ ಪ್ರಬುದ್ಧಮಭವದ್ಯದಾ ॥ ೩೫ ॥

ತದಾ ಸಮುದ್ಯತೌ ಸ್ಯಾತಾಂ ತಸ್ಯಾದ್ಯಂತಂ ಪರೀಕ್ಷಿತುಂ ॥ ೩೬ ॥

ತತ್ರ ಹಂಸಾಕೃತಿರ್ಬ್ರಹ್ಮಾ ವಿಶ್ವತಃ ಪಕ್ಷಸಂಯುತಃ ।
ಮನೋಽನಿಲಜವೋ ಭೂತ್ವಾ ಗತಸ್ತೂರ್ಧ್ವಂ ಪ್ರಯತ್ನತಃ ॥ ೩೭ ॥

ನಾರಾಯಣೋಽಪಿ ವಿಶ್ವಾತ್ಮಾ ನೀಲಾಂಜನಚಯೋಪಮಂ ।
ವಾರಾಹಮಮಿತಂ ರೂಪಮಾಸ್ಥಾಯ ಗತವಾನಧಃ ॥ ೩೮ ॥

ಏವಂ ವರ್ಷಸಹಸ್ರಂ ತು ತ್ವರನ್ವಿಷ್ಣುರಧೋ ಗತಃ ।
ನಾಪಶ್ಯದಲ್ಪಮಪ್ಯಸ್ಯ ಮೂಲಂ ಲಿಂಗಸ್ಯ ಸೂಕರಃ ॥ ೩೯ ॥

---

೩೪-೩೬. ಆ ಜ್ವಾಲಾಲಿಂಗದ ಅನೇಕ ಜ್ವಾಲೆಗಳಿಂದ ಭ್ರಾಂತರಾಗಿ ವಿಷ್ಣುಬ್ರಹ್ಮರು ಯುದ್ಧವನ್ನು ಬಿಟ್ಟು ಇದೇನೆಂದು ಬೇಗನೆ ಯೋಚಿಸಿದರು. ಅವರಿಬ್ಬರಿಗೂ ಅದರ ತತ್ತ್ವವು ತಿಳಿಯದಿರಲು ಅದರ ತುದಿಮೊದಲನ್ನು ಪರೀಕ್ಷಿಸಬೇಕೆಂಬುದಾಗಿ ಪ್ರಯತ್ನಪಟ್ಟರು.

೩೭-೩೮. ಈ ಸಂದರ್ಭದಲ್ಲಿ ಬ್ರಹ್ಮನು ವ್ಯಾಪ್ತಿತುಂಬ ರೆಕ್ಕೆಗಳಿಂದ ಕೂಡಿದ ಹಂಸಾಕೃತಿಯನ್ನು ಧರಿಸಿ ವಾಯುವೇಗ ಮನೋವೇಗಗಳಿಂದ ಕೂಡಿ ಮೇಲಕ್ಕೆ ಹಾರಿಹೋದನು. ನಾರಾಯಣನು ನೀಲಪರ್ವತದಂತೆ ಇರುವ ಅಸಮಾನವಾದ ಹಂದಿಯ ರೂಪವನ್ನು ತಾಳಿ ಆ ಲಿಂಗದ ತಳಭಾಗಕ್ಕೆ ಹೋದನು.

೩೯-೪೦. ಹಂದಿಯರೂಪದಿಂದಿದ್ದ ವಿಷ್ಣುವು ಸಾವಿರ ವರ್ಷಗಳವರೆಗೆ ಕೆಳಭಾಗಕ್ಕೆ ವೇಗವಾಗಿ ಹೋದರೂ ಲಿಂಗದ ಮೂಲವನ್ನು ಸ್ವಲ್ಪವಾದರೂ ಕಾಣಲಿಲ್ಲ. ಅಷ್ಟೇಕಾಲದವರೆಗೂ ಬ್ರಹ್ಮನು ಲಿಂಗದತುದಿಯನ್ನು ತಿಳಿಯ

ತಾವತ್ಕಾಲಂ ಗತಶ್ಚೋರ್ಧ್ವಂ ತಸ್ಯಾಂತಂ ಜ್ಞಾತುಮಿಚ್ಛಯಾ ।
ಶ್ರಾಂತೋತ್ಯಂತಮದೃಷ್ಟ್ವಾಂತಂ ಪಪಾತಾಧಃ ಪಿತಾಮಹಃ ॥ ೪೦ ॥

ತಥೈವ ಭಗವಾನ್ವಿಷ್ಣುಃ ಶ್ರಾಂತಃ ಸಂವಿಗ್ನಲೋಚನಃ ।
ಕ್ಲೇಶೇನ ಮಹತಾ ತೂರ್ಣಮಧಸ್ತಾದುತ್ಥಿತೋಽಭವತ್ ॥ ೪೧ ॥

ಸಮಾಗತಾವಥಾನ್ಯೋನ್ಯಂ ವಿಸ್ಮಯಸ್ಮೇರವೀಕ್ಷಣೌ ।
ಮಾಯಯಾ ಮೋಹಿತೌ ಶಂಭೋಃ ಕೃತ್ಯಾಕೃತ್ಯಂ ನ ಜಗ್ಮತುಃ ॥ ೪೨ ॥

ಪೃಷ್ಠತಃ ಪಾರ್ಶ್ವತಸ್ತಸ್ಯ ಜಾಗ್ರತಶ್ಚ ಸ್ಥಿತಾವುಭೌ ।
ಪ್ರಣಿಪತ್ಯ ಕಿಮಾತ್ಮೇದಮಿತ್ಯಚಿಂತಯತಾಂ ತದಾ ॥ ೪೩ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-
ಮುತ್ತರಭಾಗೇ ಹರಿವಿಧಿಮೋಹವರ್ಣನಂ ನಾಮ
ಚತುಸ್ತ್ರಿಂಶೋಽಧ್ಯಾಯಃ

---

ಬೇಕೆಂಬಾಸೆಯಿಂದ ಮೇಲಕ್ಕೆ ಹೋಗುತ್ತ ಬಹಳವಾಗಿ ಬಳಲಿ ತುದಿಯನ್ನು ಕಾಣದೆ ಕೆಳಕ್ಕೆ ಬಿದ್ದುಬಿಟ್ಟನು.

೪೧. ಹಾಗೆಯೇ ಮಹಾಮಹಿಮನಾದ ವಿಷ್ಣುವು ಬಳಲಿ ಬಹಳ ಕಷ್ಟದಿಂದ ಬೇಗನೆ ಕೆಳಭಾಗದಿಂದೆದ್ದನು.

೪೨. ಹಾಗೆ ಬಂದು ಇಬ್ಬರೂ ಆಶ್ಚರ್ಯಚಕಿತರಾಗಿ ಒಬ್ಬರನ್ನೊಬ್ಬರು ನೋಡುತ್ತ ಶಿವನ ಮಾಯೆಯಿಂದ ಮೋಹಿತರಾಗಿ ಏನು ಮಾಡಬೇಕೆಂಬುದನ್ನು ತಿಳಿಯದೇ ಸ್ವಲ್ಪಕಾಲ ನಿಶ್ಚೇಷ್ಟಿತರಾಗಿದ್ದರು.

೪೩. ಬಳಿಕ ಅವರಿಬ್ಬರೂ ಆ ಜ್ವಾಲಾಲಿಂಗದ ಹಿಂದೆಯೂ, ಮುಂದೆಯೂ, ಪಕ್ಕಗಳಲ್ಲಿಯೂ ನಿಂತು ನಮಸ್ಕರಿಸಿ ಈ ಆತ್ಮಸ್ವರೂಪವೇನೆಂಬದಾಗಿ ಯೋಚಿಸುತ್ತಿದ್ದರು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯವೀಯಸಂಹಿತೆಯ ಉತ್ತರ
ಭಾಗದಲ್ಲಿ ವಿಷ್ಣುಬ್ರಹ್ಮರಿಗೆ ಉಂಟಾದ ಮೋಹವರ್ಣನವೆಂಬ
ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ಪಂಚತ್ರಿಂಶೋಽಧ್ಯಾಯಃ

---

॥ ಉಪಮನ್ಯುರುವಾಚ ॥

ಅಥಾವಿರಭವತ್ತತ್ರ ಸನಾದಂ ಶಬ್ದಲಕ್ಷಣಂ ।
ಓಮಿತ್ಯೇಕಾಕ್ಷರಂ ಬ್ರಹ್ಮ ಬ್ರಹ್ಮಣಃ ಪ್ರತಿಪಾದಕಂ ॥ ೧ ॥

ತದಪ್ಯವಿದಿತಂ ತಾವದ್ಬ್ರಹ್ಮಣಾ ವಿಷ್ಣುನಾ ತಥಾ ।
ರಜಸಾ ತಮಸಾ ಚಿತ್ತಂ ತಯೋರ್ಯಸ್ಮಾತ್ತಿರಸ್ಕೃತಂ ॥ ೨ ॥

---

## ಮೂವತ್ತೈದನೆಯ ಅಧ್ಯಾಯವು

೧-೨. ಉಪಮನ್ಯುವಿಂತೆಂದನು—ಆಬಳಿಕ ಆ ಸ್ಥಳದಲ್ಲಿ ಬ್ರಹ್ಮಸ್ವರೂಪವನ್ನು ವಿವರಿಸುವ "ಓಂ" ಎಂಬ ಒಂದೇ ಅಕ್ಷರರೂಪವಾದ, ಶಬ್ದಲಕ್ಷಣಗಳಿಂದ ಕೂಡಿದ ಒಂದು ಧ್ವನಿಯು ಉತ್ಪನ್ನವಾಯಿತು. ರಜಸ್ತಮೋಗುಣಗಳಿಂದ ಮಲಿನವಾದ ಮನಸ್ಸುಳ್ಳ ವಿಷ್ಣುಬ್ರಹ್ಮರಿಗೆ ಆ ಧ್ವನಿಯು ತಿಳಿಯದೇ ಹೋಯಿತು.

ತದಾ ವಿಭಕ್ತಮಭವಚ್ಚತುರ್ಧೈಕಕಂ ತದಕ್ಷರಂ ।
ಅ ಉ ಮೇತಿ ತ್ರಿಮಾತ್ರಾಭಿಃ ಪರಸ್ತಾಚ್ಚಾರ್ಧಮಾತ್ರಯಾ ॥ ೩ ॥

ತತ್ರಾಕಾರಃ ಸ್ಥಿತೋ ಭಾಗೇ ಜ್ವಲಲ್ಲಿಂಗಸ್ಯ ದಕ್ಷಿಣೇ ।
ಉಕಾರಶ್ಚೋತ್ತರೇ ತದ್ವನ್ಮಕಾರಸ್ತಸ್ಯ ಮಧ್ಯತಃ ॥ ೪ ॥

ಅರ್ಧಮಾತ್ರಾತ್ಮಕೋ ನಾದಃ ಶ್ರೂಯತೇ ಲಿಂಗಮೂರ್ಧನಿ ।
ವಿಭಕ್ತೇಽಪಿ ತದಾ ತಸ್ಮಿನ್ಪ್ರಣವೇ ಪರಮಾಕ್ಷರೇ ॥ ೫ ॥

ವಿಭಾಗಾರ್ಥಂ ಚ ತೌ ದೇವೌ ನ ಕಿಂಚಿದವಜಗ್ಮತುಃ ।
ವೇದಾತ್ಮನಾ ತದಾ ವ್ಯಕ್ತಃ ಪ್ರಣವೋ ವಿಕೃತಿಂ ಗತಃ ॥ ೬ ॥

ತತ್ರಾಕಾರೋ ಋಗಭವದುಕಾರೋ ಯಜುರವ್ಯಯಃ ।
ಮಕಾರಸ್ಸಾಮ ಸಂಜಾತೋ ನಾದಸ್ತ್ವಾಥರ್ವಣೀ ಶ್ರುತಿಃ ॥ ೭ ॥

ಋಗಯಂ ಸ್ಥಾಪಯಾಮಾಸ ಸಮಾಸಾತ್ತ್ವರ್ಥಮಾತ್ಮನಃ ।
ರಜೋಗುಣೇಷು ಬ್ರಹ್ಮಾಣಂ ಮೂರ್ತಿಷ್ವಾದ್ಯಂ ಕ್ರಿಯಾಸ್ವಪಿ ॥ ೮ ॥

೩-೪. ಆಗ ಆ ಒಂದೇ ಅಕ್ಷರವು ಅ. ಉ. ಮ ಎಂಬ ಮೂರು ಮಾತ್ರೆಗಳ ಕೊನೆಯಲ್ಲಿ ಅರ್ಧಮಾತ್ರಾಸಹಿತವಾಗಿ ಭಾಗವಾಯಿತು. ಆ ಜ್ವಾಲಾ ಲಿಂಗದ ಬಲಭಾಗವೇ ಅಕಾರವು, ಎಡಭಾಗವೇ ಉಕಾರವು, ಮಧ್ಯಪ್ರದೇಶವೇ ಮಕಾರವು.

೫. ಆ ಜ್ವಾಲಾಲಿಂಗದ ನೆತ್ತಿಯಲ್ಲಿ ಅರ್ಧಮಾತ್ರಾಸ್ವರೂಪವಾದ ನಾದವು ಕೇಳಿಬರುತ್ತಿದ್ದಿತು. ಹೀಗೆ ಆ ಪ್ರಣವವು ವಿಭಾಗವಾದರೂ ಆ ಭಾಗದ ಅಭಿಪ್ರಾಯವನ್ನು ಆ ವಿಷ್ಣುಬ್ರಹ್ಮರು ತಿಳಿಯಲಿಲ್ಲ.

೬-೭. ಆ ಸಮಯದಲ್ಲಿ ವಿಕಾರವನ್ನು ಹೊಂದಿದಪ್ರಣವಾಕ್ಷರವು ವೇದ ರೂಪದಲ್ಲಿ ವ್ಯಕ್ತವಾಯಿತು. ಈ ಸಂದರ್ಭದಲ್ಲಿ ಅಕಾರವು ಋಗ್ವೇದವಾಯಿತು. ಉಕಾರವು ಯಜುರ್ವೇದವಾಯಿತು. ಮಕಾರವು ಸಾಮವೇದವಾಯಿತು. ನಾದವು ಅಥರ್ವಣವೇದವಾಯಿತು.

೮-೧೦. ಋಗ್ವೇದವು ಒಟ್ಟಿನಲ್ಲಿ ತನ್ನ ಸ್ವರೂಪವನ್ನು ಮುಂದೆ ಹೇಳುವಂತೆ ವ್ಯಕ್ತಪಡಿಸಿತು. ತ್ರಿಗುಣಗಳಲ್ಲಿ ರಜೋಗುಣವನ್ನೂ, ತ್ರಿಮೂರ್ತಿ

**ಸೃಷ್ಟಿಂ ಲೋಕೇಷು ಪೃಥಿವೀಂ ತತ್ತ್ವೇಷ್ವಾತ್ಮಾನಮವ್ಯಯಂ ।**
**ಕಲಾಧ್ವನಿ ನಿವೃತ್ತಿಂ ಚ ಸದ್ಯಂ ಬ್ರಹ್ಮಸು ಪಂಚಸು ॥ ೯ ॥**

**ಲಿಂಗಭಾಗೇಷ್ವಧೋಭಾಗಂ ಬೀಜಾಖ್ಯಂ ಕಾರಣತ್ರಯೇ ।**
**ಚತುಃಷಷ್ಟಿಗುಣೈಶ್ವರ್ಯಂ ಬೌದ್ಧಂ ಯದಣಿಮಾದಿಷು ॥ ೧೦ ॥**

**ತದಿತ್ಥಮರ್ಥೈರ್ದಶಭಿರ್ವ್ಯಾಪ್ತಂ ವಿಶ್ವಮೃಚಾ ಜಗತ್ ।**
**ಅಥೋಪಸ್ಥಾಪಯಾಮಾಸ ಸ್ವಾರ್ಥಂ ದಶವಿಧಂ ಯಜುಃ ॥ ೧೧ ॥**

**ಸತ್ತ್ವಂ ಗುಣೇಷು ವಿಷ್ಣುಂ ಚ ಮೂರ್ತಿಷ್ವಾದ್ಯಂ ಕ್ರಿಯಾಸ್ವಪಿ ।**
**ಸ್ಥಿತಿಂ ಲೋಕೇಷ್ವಂತರಿಕ್ಷಂ ವಿದ್ಯಾಂ ತತ್ತ್ವೇಷು ಚ ತ್ರಿಷು ॥ ೧೨ ॥**

**ಕಲಾಧ್ವಸು ಪ್ರತಿಷ್ಠಾಂ ಚ ವಾಮಂ ಬ್ರಹ್ಮಸು ಪಂಚಸು ।**
**ಮಧ್ಯಂ ತು ಲಿಂಗಭಾಗೇಷು ಯೋನಿಂ ಚ ತ್ರಿಷು ಹೇತುಷು ॥ ೧೩ ॥**

---

ಗಳಲ್ಲಿ ಮೊದಲನೆಯ ಮೂರ್ತಿಯಾದ ಬ್ರಹ್ಮನನ್ನೂ, ಕ್ರಿಯೆಯಲ್ಲಿ ಸೃಷ್ಟಿಯನ್ನೂ, ಲೋಕಗಳಲ್ಲಿ ಭೂಲೋಕವನ್ನೂ, ತತ್ತ್ವಗಳಲ್ಲಿ ಆತ್ಮತತ್ತ್ವವನ್ನೂ, ಕಲೆಗಳಲ್ಲಿ ನಿವೃತ್ತಿಕಲೆಯನ್ನೂ, ಪಂಚಬ್ರಹ್ಮರಲ್ಲಿ ಸದ್ಯೋಜಾತನನ್ನೂ, ಲಿಂಗಭಾಗದಲ್ಲಿ ಅಧೋಭಾಗವನ್ನೂ, ಮೂರು ಕಾರಣಗಳಲ್ಲಿ ಬೀಜರೂಪವಾದ ಕಾರಣವನ್ನೂ, ಅಣಿಮಾದಿ ಅರವತ್ತುನಾಲ್ಕು ಗುಣಗಳಲ್ಲಿ ಬುದ್ಧಿಗುಣವನ್ನೂ ವ್ಯಕ್ತಪಡಿಸಿ, ಹೀಗೆ ಹತ್ತು ವಸ್ತುಗಳಿಂದ ಋಗ್ವೇದವು ಪ್ರಪಂಚವನ್ನು ವ್ಯಾಪಿಸಿಕೊಂಡಿರುವುದು.

೧೧-೧೩. ಆಮೇಲೆ ಯಜುರ್ವೇದವು ತನ್ನ ಸ್ವರೂಪವನ್ನು-ಗುಣಗಳಲ್ಲಿ ಸತ್ವಗುಣವನ್ನೂ ಮೂರ್ತಿಗಳಲ್ಲಿ ವಿಷ್ಣುವನ್ನೂ, ಕ್ರಿಯೆಗಳಲ್ಲಿ ಸ್ಥಿತಿ ಕ್ರಿಯೆಯನ್ನೂ, ಲೋಕಗಳಲ್ಲಿ ಅಂತರಿಕ್ಷಲೋಕವನ್ನೂ, ತತ್ತ್ವಗಳಲ್ಲಿ ವಿದ್ಯಾತತ್ತ್ವವನ್ನೂ, ಕಲೆಗಳಲ್ಲಿ ಪ್ರತಿಷ್ಠಾಕಲೆಗಳನ್ನೂ, ಪಂಚಬ್ರಹ್ಮರಲ್ಲಿ ವಾಮದೇವನನ್ನೂ, ಲಿಂಗಭಾಗದಲ್ಲಿ ಮಧ್ಯಭಾಗವನ್ನೂ, ಕಾರಣಗಳಲ್ಲಿ ಯೋನಿಯನ್ನೂ, ಐಶ್ವರ್ಯದಲ್ಲಿ ಪ್ರಕೃತ್ಯೈಶ್ವರ್ಯವನ್ನೂ ಈರೀತಿಯಲ್ಲಿ ಹತ್ತುವಿಧವಾಗಿ ವ್ಯಕ್ತಪಡಿಸಿತು.

ಪ್ರಾಕೃತಂ ಚ ಯಥೈಶ್ವರ್ಯಂ ತಸ್ಮಾದ್ವಿಶ್ವಂ ಯಜುರ್ಮಯಂ ।
ತಥೋಪಸ್ಥಾಪಯಾಮಾಸ ಸಾಮಾರ್ಥಂ ದಶಧಾತ್ಮನಃ ॥ ೧೪ ॥

ತಮೋಗುಣೇಷ್ವಥೋ ರುದ್ರಂ ಮೂರ್ತಿಷ್ವಾದ್ಯಂ ಕ್ರಿಯಾಸು ಚ ।
ಸಂಹೃತಿಂ ತ್ರಿಷು ಲೋಕೇಷು ತತ್ತ್ವೇಷು ಶಿವಮುತ್ತಮಂ ॥ ೧೫ ॥

ವಿದ್ಯಾಕಲಾಸ್ವಘೋರಂ ಚ ತಥಾ ಬ್ರಹ್ಮಸು ಪಂಚಸು ।
ಲಿಂಗಭಾಗೇಷು ಪೀಠೋರ್ಧ್ವಂ ಬೀಜಿನಂ ಕಾರಣತ್ರಯೇ ॥ ೧೬ ॥

ಪೌರುಷಂ ಚ ತಥೈಶ್ವರ್ಯಮಿತ್ಥಂ ಸಾಮ್ನಾ ತತಂ ಜಗತ್ ।
ಅಥಾಥರ್ವಾಹ ನೈರ್ಗುಣ್ಯಮರ್ಥಂ ಪ್ರಥಮಮಾತ್ಮನಃ ॥ ೧೭ ॥

ತತೋ ಮಹೇಶ್ವರಂ ಸಾಕ್ಷಾನ್ಮೂರ್ತಿಷ್ವಪಿ ಸದಾಶಿವಂ ।
ಕ್ರಿಯಾಸು ನಿಷ್ಕ್ರಿಯಸ್ಯಾಪಿ ಶಿವಸ್ಯ ಪರಮಾತ್ಮನಃ ॥ ೧೮ ॥

ಭೂತಾನುಗ್ರಹಣಂ ಚೈವ ಮುಚ್ಯಂತೇ ಯೇನ ಜಂತವಃ ।
ಲೋಕೇಷ್ವಪಿ ಯತೋ ವಾಚೋ ನಿವೃತ್ತಾ ಮನಸಾ ಸಹ ॥ ೧೯ ॥

---

೧೪-೧೬. ಬಳಿಕ ಸಾಮವೇದವು ತನ್ನ ಸ್ವರೂಪವನ್ನು—ಗುಣಗಳಲ್ಲಿ ತಮೋಗುಣ, ಮೂರ್ತಿಗಳಲ್ಲಿ ರುದ್ರ, ಕ್ರಿಯೆಗಳಲ್ಲಿ ಸಂಹಾರ, ಲೋಕಗಳಲ್ಲಿ ಶಿವ ಲೋಕ, ತತ್ತ್ವಗಳಲ್ಲಿ ಶಿವತತ್ತ್ವ, ಕಲೆಗಳಲ್ಲಿ ವಿದ್ಯಾಕಲೆ, ಪಂಚಬ್ರಹ್ಮರಲ್ಲಿ ಅಘೋರ, ಲಿಂಗಭಾವದಲ್ಲಿ ಪೀಠದ ಮೇಲಿನ ಭಾಗ, ಕಾರಣಗಳಲ್ಲಿ ಬೀಜಕ್ಕೆ ಕಾರಣ, ಐಶ್ವರ್ಯಗಳಲ್ಲಿ ಪುರುಷೈಶ್ವರ್ಯ, ಈರೀತಿಯಲ್ಲಿ ಹತ್ತುವಿಧವಾಗಿ ವ್ಯಕ್ತ ಪಡಿಸಿತು.

೧೭-೨೫. ಅನಂತರದಲ್ಲಿ ಅಥರ್ವಣವೇದವು ತನ್ನ ಸ್ವರೂಪವನ್ನು—ಗುಣಗಳಲ್ಲಿ ಆತ್ಮಸ್ವರೂಪವಾದ ನಿರ್ಗುಣ, ಮಹೇಶ್ವರನ ಮೂರ್ತಿಗಳಲ್ಲಿ ಸದಾಶಿವ, ಕ್ರಿಯೆಗಳಲ್ಲಿ ಅನುಗ್ರಹರೂಪವಾದ ನಿಷ್ಕ್ರಿಯೆ, ಲೋಕಗಳಲ್ಲಿ

ತದೂರ್ಧ್ವಮುನ್ಮನಾ ಲೋಕಾತ್ಸೋಮಲೋಕಮಲೌಕಿಕಂ ।
ಸೋಮಸ್ಸಹೋಮಯಾ ಯತ್ರ ನಿತ್ಯಂ ನಿವಸತೀಶ್ವರಃ ॥ ೨೦ ॥

ತದೂರ್ಧ್ವಮುನ್ಮನಾ ಲೋಕ್ಯಾದ್ಯಂ ಪ್ರಾಪ್ತೋ ನ ನಿವರ್ತತೇ ।
ಶಾಂತಿಂ ಚ ಶಾಂತ್ಯತೀತಾಂ ಚ ವ್ಯಾಪಿಕಾಂ ವೈ ಕಲಾಸ್ವಪಿ ॥ ೨೧ ॥

ತತ್ಪುರುಷಂ ತಥೇಶಾನಂ ಬ್ರಹ್ಮ ಬ್ರಹ್ಮಸು ಪಂಚಸು ।
ಮೂರ್ಧಾನಮಪಿ ಲಿಂಗಸ್ಯ ನಾದಭಾಗೇಷ್ವನುತ್ತಮಂ ॥ ೨೨ ॥

ಯತ್ರಾವಾಹ್ಯ ಸಮಾರಾಧ್ಯಃ ಕೇವಲೋ ನಿಷ್ಕಲಃ ಶಿವಃ ।
ತತ್ತ್ವೇಷ್ವಪಿ ತದಾ ಬಿಂದೋರ್ನಾದಾಚ್ಛಕ್ತೇಸ್ತತಃ ಪರಾತ್ ॥ ೨೩ ॥

ತಸ್ಮಾದಪಿ ಪರಂ ತತ್ತ್ವಮತತ್ತ್ವಂ ಪರಮಾರ್ಥತಃ ।
ಕಾರಣೇಷು ತ್ರಯಾತೀತಾನ್ಮಾಯಾವಿಕ್ಷೋಭಕಾರಣಾತ್ । ॥ ೨೪ ॥

ಅನಂತಾಚ್ಛುದ್ಧವಿದ್ಯಾಯಾಃ ಪರಸ್ಮಾಚ್ಚ ಮಹೇಶ್ವರಾತ್ ।
ಸರ್ವವಿದ್ಯೇಶ್ವರಾಧೀಶಾನ್ನ ಪರಾಚ್ಚ ಸದಾಶಿವಾತ್ ॥ ೨೫ ॥

---

ವಾಕ್ಯಗಳಿಂದಲೂ ಮನಸ್ಸಿನಿಂದಲೂ ಊಹಿಸಲಸಾಧ್ಯವಾದ ಉನ್ಮನೀಲೋಕಕ್ಕಿಂತಲೂ ಮೇಲುಭಾಗದಲ್ಲಿದ್ದು ಪ್ರಕೃತಿಸಂಬಂಧವಿಲ್ಲದ ಮತ್ತು ಉಮಾದೇವೀಸಹಿತನಾದ ಈಶ್ವರನು ಯಾವಾಗಲೂ ವಾಸಮಾಡುವ ಸೋಮಲೋಕ, ಕಲೆಗಳಲ್ಲಿ ಸರ್ವವ್ಯಾಪಿಯಾದ ಶಾಂತಿ ಮತ್ತು ಶಾಂತ್ಯತೀತವೆಂಬ ಕಲೆಗಳು, ಪಂಚಬ್ರಹ್ಮಮೂರ್ತಿಗಳಲ್ಲಿ ತತ್ಪುರುಷ ಮತ್ತು ಈಶಾನಮೂರ್ತಿಗಳು, ಲಿಂಗಭಾಗದಲ್ಲಿ ಶ್ರೇಷ್ಠವಾದ ನಾದೋತ್ಪತ್ತಿಗೆ ನೆಲೆಯಾದ ಶಿರಸ್ಸು,–ಈ ಶಿರಸ್ಸಿನಲ್ಲಿ ಬಿಂದುನಾದಶಕ್ತಿಗಳಿಗಿಂತಲೂ ಉತ್ಕೃಷ್ಟನಾದ ನಿಷ್ಕಲನಾದ ಶಿವನನ್ನು ಪೂಜಿಸುವರು—ತತ್ತ್ವಗಳಲ್ಲಿ ಪರತತ್ತ್ವ–ಇದು ಪರಮಾರ್ಥವಾಗಿ ಅತತ್ತ್ವವು–ಕಾರಣಗಳಲ್ಲಿ ಪರಮಕಾರಣನಾದ ಸದಾಶಿವ-ಈ ಸದಾಶಿವನು, ಗುಣತ್ರಯಾತ್ಮಕವಾದ ಪ್ರಕೃತಿಯನ್ನೂ ಸೃಷ್ಟಿಕಾರ್ಯಕ್ಕಾಗಿ ಕ್ಷೋಭೆಗೊಳಿಸುವವನಾದುದರಿಂದ ಗುಣತ್ರಯಾತೀತನು. ಆದ್ಯಂತಗಳಿಲ್ಲದವನು. ಸರ್ವವಿದ್ಯೇಶ್ವರನು. ಇವನಿಗಿಂತ ಶ್ರೇಷ್ಠವಾದ ವಸ್ತುವು ಇಲ್ಲವೇ ಇಲ್ಲ.

ಸರ್ವಮಂತ್ರತನೋರ್ದೇವಾಚ್ಛಕ್ತಿತ್ರಯಸಮನ್ವಿತಾತ್ ।
ಪಂಚವಕ್ತ್ರಾದ್ದಶಭುಜಾತ್ಸಾಕ್ಷಾತ್ಸಕಲನಿಷ್ಕಲಾತ್ ॥ ೨೬ ॥

ತಸ್ಮಾದಪಿ ಪರಾದ್ಬಿಂದೋರರ್ಧೇಂದೋಶ್ಚ ತತಃ ಪರಾತ್ ।
ತತಃ ಪರಾನ್ನಿಶಾಧೀಶಾನ್ನಾದಾಖ್ಯಾಚ್ಚ ತತಃ ಪರಾತ್ ॥ ೨೭ ॥

ತತಃ ಪರಾತ್ಸುಷುಮ್ನೇಶಾದ್ಬ್ರಹ್ಮರಂಧ್ರೇಶ್ವರಾದಪಿ ।
ತತಃ ಪರಸ್ಮಾಚ್ಛಕ್ತೇಶ್ಚ ಪರಸ್ಮಾಚ್ಛಿವತತ್ತ್ವತಃ ॥ ೨೮ ॥

ಪರಮಂ ಕಾರಣಂ ಸಾಕ್ಷಾತ್ಸ್ವಯಂ ನಿಷ್ಕಾರಣಂ ಶಿವಂ ।
ಕಾರಣಾನಾಂ ಚ ಧಾತಾರಂ ಧ್ಯಾತಾರಂ ಧ್ಯೇಯಮವ್ಯಯಂ ॥ ೨೯ ॥

ಪರಮಾಕಾಶಮಧ್ಯಸ್ಥಂ ಪರಮಾತ್ಮೋಪರಿ ಸ್ಥಿತಂ ।
ಸರ್ವೈಶ್ವರ್ಯೇಣ ಸಂಪನ್ನಂ ಸರ್ವೇಶ್ವರಮನೀಶ್ವರಂ ॥ ೩೦ ॥

---

೨೬–೨೯. ಈ ಸದಾಶಿವನು ಸರ್ವಮಂತ್ರಗಳ ಸ್ವರೂಪನು. ಇಚ್ಛಾ, ಜ್ಞಾನ, ಕ್ರಿಯಾರೂಪವಾದ ಮೂರು ಶಕ್ತಿಗಳಿಂದ ಕೂಡಿದವನು. ಐದು ಮುಖವೂ ಹತ್ತು ತೋಳುಗಳೂ ಇವನಿಗಿರುವುವು. ಸಕಲ ಮತ್ತು ನಿಷ್ಕಲ ಸ್ವರೂಪನೂ, ಬಿಂದುವಿಗಿಂತ ಉತ್ತಮವಾದ ಅರ್ಧೇಂದು, ಅದಕ್ಕಿಂತ ಕ್ರಮ ವಾಗಿ ಶ್ರೇಷ್ಠವಾದ ಚಂದ್ರ, ನಾದ, ಸುಷುಮ್ನೇಶ, ಬ್ರಹ್ಮರಂಧ್ರೇಶ್ವರ, ಶಕ್ತಿ, ಶಿವ ತತ್ತ್ವ ಇವುಗಳ ಸ್ವರೂಪನೂ ಆಗಿರುವನು. ಸಮಸ್ತ ವಸ್ತುಗಳಿಗೂ ಇವನು ಪರಮಕಾರಣನು. ಇವನಿಗೆ ಮಾತ್ರ ಕಾರಣವಸ್ತುವು ಯಾವುದೂ ಇರುವುದಿಲ್ಲ. ಧ್ಯಾನ, ಧ್ಯಾತೃ, ಧ್ಯೇಯ ಇವುಗಳು ಸ್ವರೂಪನು. ನಾಶರಹಿತನು.

೩೦–೩೩. ಪರಮಾಕಾಶದ ನಡುವೆ ಎಲ್ಲವನ್ನೂ ಮೀರಿರುವ ಪರಮಾತ್ಮತತ್ತ್ವವು ಸಮಸ್ತ ಐಶ್ವರ್ಯಗಳಿಂದ ಕೂಡಿ ಸಮಸ್ತಕ್ಕೂ ಅಧಿಪತಿಯಾಗಿರುವುದು. ತನಗಿಂತ ಮೇಲಾದವರಿಲ್ಲ. ಇದಕ್ಕೆ ಮಾಯಾ ಸಂಬಂಧವೂ ಅಶುದ್ಧವೂ, ಮಾನವ ಸಂಬಂಧವೂ, ತ್ಯಾಜ್ಯವೂ ಆದ ದೋಷಗಳೊಂದೂ ಇಲ್ಲ.

ಐಶ್ವರ್ಯಾಚ್ಚಾಪಿ ಮಾಯೇಯಾದಶುದ್ಧಾನ್ಮಾನುಷಾದಿಕಾತ್ ।
ಅಪರಾಚ್ಚ ಪರಾತ್ತ್ಯಾಜ್ಯಾದಧಿಶುದ್ಧಾಧ್ವಗೋಚರಾತ್ ॥ ೩೧ ॥

ತತ್ಪರಾಚ್ಛುದ್ಧವಿದ್ಯಾದ್ಯಾದುನ್ಮನಾಂತಾತ್ಪರಾತ್ಪರಾತ್ ।
ಪರಮಂ ಪರಮೈಶ್ವರ್ಯಮುನ್ಮದಾದ್ಯಮನಾದಿ ಚ ॥ ೩೨ ॥

ಅಪಾರಮಪರಾಧೀನಂ ನಿರಸ್ತಾತಿಶಯಂ ಸ್ಥಿರಂ ।
ಇತ್ಥಮರ್ಥೈರ್ದಶವಿಧೈರಿಯಮಾಥರ್ವಣೀ ಶ್ರುತಿಃ ॥ ೩೩ ॥

ಯಸ್ಮಾದ್ಗರೀಯಸೀ ತಸ್ಮಾದ್ವಿಶ್ವಂ ವ್ಯಾಪ್ತಮಥರ್ವಣಾತ್ ।
ಋಗ್ವೇದಃ ಪುನರಾಹೇದಂ ಜಾಗ್ರದ್ರೂಪಂ ಮಯೋಚ್ಯತೇ ॥ ೩೪ ॥

ಯೇನಾಹಮಾತ್ಮತತ್ತ್ವಸ್ಯ ನಿತ್ಯಮಸ್ಯಾಭಿಧಾಯಕಃ ।
ಯಜುರ್ವೇದೋಽವದತ್ತದ್ವತ್ಸ್ವಪ್ನಾವಸ್ಥಾ ಮಯೋಚ್ಯತೇ ॥ ೩೫ ॥

ಭೋಗ್ಯಾತ್ಮನಾ ಪರಿಣತಾ ವಿದ್ಯಾ ವೇದ್ಯಾ ಯತೋ ಮಯಿ ।
ಸಾಮ ಚಾಹ ಸುಷುಪ್ತ್ಯಾಖ್ಯಮೇವ ಸರ್ವಂ ಮಯೋಚ್ಯತೇ ॥ ೩೬ ॥

---

ಶುದ್ಧವಿದ್ಯೆ ಮೊದಲಾಗಿ ಉನ್ಮನಾವಸ್ಥೆಯೇ ಕೊನೆಯಾಗಿರುವದು. ಅನಾದಿಯೂ ಅನಂತವೂ, ಪರಾಧೀನವಲ್ಲದುದೂ ಆದುದರಿಂದ ಯಾವ ಅತಿಶಯವೂ ಇಲ್ಲದ ಶಾಶ್ವತವಾದ ಸ್ವರೂಪದಿಂದಿರುವುದು. ಈರೀತಿಯಾದ ಹತ್ತುಬಗೆಯಾದ ಅರ್ಥಗಳಿಂದ ಅಥರ್ವಣವೇದವು ಕೂಡಿರುವುದು.

೩೪-೩೬. ವೇದಗಳಲ್ಲಿ ಅಥರ್ವಣವೇದವು ದೊಡ್ಡದಾದುದರಿಂದ ಆ ವೇದದಿಂದಲೇ ಪ್ರಪಂಚವೆಲ್ಲವೂ ತುಂಬಿರುವುದು. ಋಗ್ವೇದವು ಆತ್ಮತತ್ತ್ವವನ್ನು ಯಾವಾಗಲೂ ಹೇಳುವುದರಿಂದ ಅದು ಪರಮಾತ್ಮನಾದ ಶಿವನ ಜಾಗ್ರದವಸ್ಥೆಯು, ಸುಖಾನುಭವಸ್ವರೂಪವಾದ ವಿದ್ಯೆಯನ್ನು ತಿಳಿಸುವುದರಿಂದ ಯಜುರ್ವೇದವು ಸ್ವಪ್ನಾವಸ್ಥೆಯು. ಸಾಮವೇದವು ಸುಷುಪ್ತ್ಯವಸ್ಥಾಸ್ವರೂಪವಾದುದು.

**ಮಮಾರ್ಥೇನ ಶಿವೇನೇದಂ ತಾಮಸೇನಾಭಿಧೀಯತೇ ।**
**ಅಥರ್ವಾಹ ತುರೀಯಾಖ್ಯಂ ತುರೀಯಾತೀತಮೇವ ಚ ॥ ೩೭ ॥**

**ಮಯಾ ವಿಧೀಯತೇ ತಸ್ಮಾದಧ್ವಾತೀತಪದೋಽಸ್ಮ್ಯಹಂ ।**
**ಅಧ್ವಾತ್ಮಕಂ ತು ತ್ರಿತಯಂ ಶಿವವಿದ್ಯಾತ್ಮಸಂಜ್ಞಿತಂ ॥ ೩೮ ॥**

**ತತ್ರೈಗುಣ್ಯಂ ತ್ರಯೀಸಾಧ್ಯಂ ಸಂಶೋಧ್ಯಂ ಚ ಪದೈಷಿಣಾ ।**
**ಅಧ್ವಾತೀತಂ ತುರೀಯಾಖ್ಯಂ ನಿರ್ವಾಣಂ ಪರಮಂ ಪದಂ ॥ ೩೯ ॥**

**ತದತೀತಂ ಚ ನೈರ್ಗುಣ್ಯಾದಧ್ವನೋಽಸ್ಯ ವಿಶೋಧಕಂ ।**
**ದ್ವಯೋಃ ಪ್ರಮಾಪಕೋ ನಾದೋ ನಾದಾಂತಶ್ಚ ಮದಾತ್ಮಕಃ ॥ ೪೦ ॥**

**ತಸ್ಮಾನ್ಮಮಾರ್ಥಸ್ವಾತಂತ್ರ್ಯಾತ್ಪ್ರಧಾನಃ ಪರಮೇಶ್ವರಃ ।**
**ಯದಸ್ತಿ ವಸ್ತು ತತ್ಸರ್ವಂ ಗುಣಪ್ರಾಧಾನ್ಯಯೋಗತಃ ॥ ೪೧ ॥**

---

೩೭-೩೮. ಅಹಂ ಎಂಬ ಅಹಂಕಾರತತ್ತ್ವದಿಂದ ಕೂಡಿದ ತಾಮಸ ಗುಣಪ್ರಧಾನನಾದ ಶಿವನ ಸುಷುಪ್ತ್ಯವಸ್ಥಾಸ್ವರೂಪವಾದುದೇ ಸಾಮವೇದವು. ತುರೀಯ ಮತ್ತು ತುರೀಯಾತೀತ ಅವಸ್ಥಾಸ್ವರೂಪವಾಗಿ ಶಿವ, ವಿದ್ಯಾ, ಆತ್ಮ ಎಂಬ ಮೂರು ಅಧ್ವಗಳಿಗೆ ಅತೀತವಾದುದಾಗಿರುವುದು.

೩೯-೪೦. ಪರಮಾತ್ಮಸ್ಥಾನವನ್ನಪೇಕ್ಷಿಸುವವರು, ಋಗ್ಯಜುಸ್ಸಾಮಗಳೆಂಬ ಮೂರು ವೇದಗಳಿಂದ ಸಾಧ್ಯವಾದ ತ್ರಿಗುಣಾತ್ಮಕವಾದ, ಸುಖಸ್ವರೂಪ ಶೋಧನೆಯಿಂದ ಅಧ್ವಾತೀತವಾದ ತುರೀಯವೆಂಬ ಮೋಕ್ಷರೂಪಪರಮಪದವನ್ನು ಪಡೆದು ನಿರ್ಗುಣದಿಂದ ಅಧ್ವಶುದ್ಧಿಯನ್ನು ಪಡೆದು ಸ್ವಸ್ವರೂಪವನ್ನು ಪ್ರಕಾಶಪಡಿಸುವ ನಾದಾಂತವಾದ ಆತ್ಮಸ್ಥಿತಿಯನ್ನು ಪಡೆಯಬೇಕು.

೪೧-೪೨. ಆದುದರಿಂದ ಅಹಂಬ್ರಹ್ಮಾಸ್ಮಿ ಎಂಬ ಅರ್ಥಸ್ವಾತಂತ್ರ್ಯದಿಂದ ಪರಮೇಶ್ವರನು ಮುಖ್ಯನಾಗಿರುವನು. ಗುಣಪ್ರಧಾನತೆಯ ಸಂಬಂಧದಿಂದ ಲೋಕದಲ್ಲಿರುವ ಸಮಸ್ತ ವಸ್ತುಗಳೂ, ಪ್ರಣವಾರ್ಥಸ್ವರೂಪಗಳಾಗಿರು

ಸಮಸ್ತಂ ವ್ಯಸ್ತಮಪಿ ಚ ಪ್ರಣವಾರ್ಥಂ ಪ್ರಚಕ್ಷತೇ ।
ಸರ್ವಾರ್ಥವಾಚಕಂ ತಸ್ಮಾದೇಕಂ ಬ್ರಹ್ಮೈತದಕ್ಷರಂ ॥ ೪೨ ॥

ತೇನೋಮಿತಿ ಜಗತ್ಕೃತ್ಸ್ನಂ ಕುರುತೇ ಪ್ರಥಮಂ ಶಿವಃ ।
ಶಿವೋ ಹಿ ಪ್ರಣವೋ ಹ್ಯೇಷ ಪ್ರಣವೋ ಹಿ ಶಿವಃ ಸ್ಮೃತಃ ॥ ೪೩ ॥

ವಾಚ್ಯವಾಚಕಯೋರ್ಭೇದೋ ನಾತ್ಯಂತಂ ವಿದ್ಯತೇ ಯತಃ ।
ಚಿಂತಯಾ ರಹಿತೋ ರುದ್ರೋ ವಾಚೋ ಯನ್ಮನಸಾ ಸಹ ॥ ೪೪ ॥

ಅಪ್ರಾಪ್ಯ ತನ್ನಿವರ್ತಂತೇ ವಾಚ್ಯಸ್ತ್ವೇಕಾಕ್ಷರೇಣ ಸಃ ।
ಏಕಾಕ್ಷರಾದಕಾರಾಖ್ಯಾದಾತ್ಮಾ ಬ್ರಹ್ಮಾಭಿಧೀಯತೇ ॥ ೪೫ ॥

ಏಕಾಕ್ಷರಾದುಕಾಖ್ಯಾದ್ದ್ವಿಧಾ ವಿಷ್ಣುರುದೀರ್ಯತೇ ।
ಏಕಾಕ್ಷರಾನ್ಮಕಾರಾಖ್ಯಾಚ್ಛಿವೋ ರುದ್ರ ಉದಾಹೃತಃ ॥ ೪೬ ॥

---

ವುವು. ಈ ಸಮಸ್ತ ವಸ್ತುಗಳಿಗೂ ವಾಚಕವಾದ ಪ್ರಣವಸ್ವರೂಪವಾದ ಒಂದಕ್ಷರವೇ ನಾಶರಹಿತವಾದ ಪರಬ್ರಹ್ಮತತ್ತ್ವವಾಗಿರುವುದು.

೪೩. ಆ ಕಾರಣದಿಂದ ಶಿವನು ಓಂಕಾರರೂಪಶಬ್ದದಿಂದ ಸಮಸ್ತ ಜಗತ್ತನ್ನೂ ಮೊದಲು ಸೃಷ್ಟಿಸುವನು. ಶಿವನೇ ಪ್ರಣವಸ್ವರೂಪನು. ಪ್ರಣವವೇ ಶಿವಸ್ವರೂಪವಾದುದು. ಶಬ್ದಕ್ಕೂ, ಅರ್ಥಕ್ಕೂ ಅತ್ಯಂತ ಭೇದವಿರುವುದಿಲ್ಲ.

೪೪-೪೬. ರುದ್ರನು ಮನಸ್ಸಿನ ವೃತ್ತಿರೂಪವಾದ ಚಿಂತೆಯಿಲ್ಲದವನು. ಆದುದರಿಂದ ಮನಸ್ಸಿನಿಂದ ಕೂಡಿದ ಮಾತುಗಳು ಏಕಾಕ್ಷರವಾಚ್ಯನಾದ ಅವನನ್ನು ಹೊಂದದೆ ಹಿಂತಿರುಗುವುವು. (ಅಂದರೆ ಮಾತುಗಳಿಂದ ಶಿವನ ಸ್ವರೂಪವನ್ನು ತಿಳಿಸಲು ಸಾಧ್ಯವಿಲ್ಲವೆಂದು ಅಭಿಪ್ರಾಯ) ಮೊದಲಿನ ಒಂದೇ ಅಕ್ಷರವಾದ ಅಕಾರವು ಆತ್ಮಸ್ವರೂಪನಾದ ಬ್ರಹ್ಮನನ್ನು ಹೇಳುವುದು. ಒಂದೇ ಅಕ್ಷರವಾದ ಉಕಾರವು ವಿಷ್ಣುವನ್ನು ಎರಡು ವಿಧವಾಗಿ ಹೇಳುವುದು. ಒಂದೇ ಅಕ್ಷರವಾದ ಮಕಾರವು ಶಿವನಾದ ರುದ್ರನನ್ನು ಹೇಳುವುದು.

**ದಕ್ಷಿಣಾಂಗಾನ್ಮಹೇಶಸ್ಯ ಜಾತೋ ಬ್ರಹ್ಮಾತ್ಮಸಂಜ್ಞಿಕಃ ।**
**ವಾಮಾಂಗಾದಭವದ್ವಿಷ್ಣುಸ್ತತೋ ವಿದ್ಯೇತಿ ಸಂಜ್ಞಿತಃ ॥ ೪೭ ॥**

**ಹೃದಯಾನ್ನೀಲರುದ್ರೋಽಭೂಚ್ಛಿವಸ್ಯ ಶಿವಸಂಜ್ಞಕಃ**
**ಸೃಷ್ಟೇಃ ಪ್ರವರ್ತಕೋ ಬ್ರಹ್ಮಾ ಸ್ಥಿತೇರ್ವಿಷ್ಣುರ್ವಿಮೋಹಕಃ ॥ ೪೮ ॥**

**ಸಂಹಾರಸ್ಯ ತಥಾ ರುದ್ರಸ್ತಯೋರ್ನಿತ್ಯಂ ನಿಯಾಮಕಃ ॥ ೪೯ ॥**

**ತಸ್ಮಾತ್ತ್ರಯಸ್ತೇ ಕಥ್ಯಂತೇ ಜಗತಃ ಕಾರಣಾನಿ ಚ ।**
**ಕಾರಣತ್ರಯಹೇತುಶ್ಚ ಶಿವಃ ಪರಮಕಾರಣಂ ॥ ೫೦ ॥**

**ಅರ್ಥಮೇತಮವಿಜ್ಞಾಯ ರಜಸಾ ಬದ್ಧವೈರಯೋಃ ।**
**ಯುವಯೋಃ ಪ್ರತಿಬೋಧಾಯ ಮಧ್ಯೇ ಲಿಂಗಮುಪಸ್ಥಿತಂ ॥ ೫೧ ॥**

**ಏವಮೋಮಿತಿ ಮಾಂ ಪ್ರಾಹುರ್ಯದಿಹೋಕ್ತಮಥರ್ವಣಾ ।**
**ಋಚೋ ಯಜೂಂಷಿ ಸಾಮಾನಿ ಶಾಖಾಶ್ಚಾನ್ಯಾಃ ಸಹಸ್ರಶಃ ॥ ೫೨ ॥**

---

೪೭-೪೯. ಪ್ರಣವಸ್ವರೂಪನಾದ ಮಹೇಶ್ವರನ ಬಲಭಾಗದಿಂದ ಆತ್ಮಸ್ವರೂಪನಾದ ಬ್ರಹ್ಮನು ಹುಟ್ಟಿದನು. ಎಡಭಾಗದಿಂದ ವಿದ್ಯಾಸ್ವರೂಪನಾದ ವಿಷ್ಣುವು ಹುಟ್ಟಿದನು. ಹೃದಯದಿಂದ ಶಿವನೆಂಬ ನೀಲರುದ್ರನು ಹುಟ್ಟಿದನು. ಬ್ರಹ್ಮನು ಸೃಷ್ಟಿ ಕೆಲಸಕ್ಕೆ ನಿಂತನು. ವಿಷ್ಣುವು ಪ್ರಾಣಿಗಳಿಗೆ ಅಜ್ಞಾನವನ್ನುಂಟುಮಾಡುತ್ತ ಸ್ಥಿತಿಯ ಕೆಲಸಕ್ಕೆ ನಿಂತನು. ರುದ್ರನು ಇವರಿಬ್ಬರಿಗೂ ಕಾರ್ಯವನ್ನು ನಿಯಮಿಸುವವನಾಗಿ ಸಂಹಾರಕಾರ್ಯಕ್ಕೆ ನಿಂತನು.

೫೦. ಆದುದರಿಂದ ಈ ಮೂವರೂ ಪ್ರಪಂಚಕ್ಕೆ ಕಾರಣರು ಎಂಬುದಾಗಿ ಹೇಳುವರು. ಈ ಮೂರು ಕಾರಣಗಳಿಗೂ ಶಿವನೇ ಮುಖ್ಯಕಾರಣನು.

೫೧-೫೨. ಈ ಅರ್ಥವನ್ನು ತಿಳಿಯದೆ ರಜೋಗುಣದಿಂದ ದ್ವೇಷವನ್ನು ಹೊಂದಿದ ನಿಮ್ಮ ತಿಳುವಳಿಕೆಗಾಗಿ ನಿಮ್ಮನಡುವೆ ಜ್ವಾಲಾಲಿಂಗವು ವ್ಯಕ್ತವಾಯಿತು. ಈರೀತಿಯಲ್ಲಿ ಓಂಕಾರದಿಂದಲೇ ಹುಟ್ಟಿದ ಋಗ್ಯಜುಸ್ಸಾಮಾಥರ್ವಣ ವೇದಗಳೂ, ಇವುಗಳ ಶಾಖೆಗಳನೇಕವೂ ನನ್ನನ್ನೇ ಹೇಳುವುವು.

ವೇದೇಷ್ವೇವಂ ಸ್ವಯಂ ವಕ್ತ್ರೈರ್ವ್ಯಕ್ತಮಿತ್ಯವದತ್ಸ್ವಪಿ ।
ಸ್ವಪ್ನಾನುಭೂತಮಿವ ತತ್ತಾಭ್ಯಾಂ ನಾಧ್ಯವಸೀಯತೇ ॥ ೫೩ ॥

ತಯೋಸ್ತತ್ರ ಪ್ರಬೋಧಾಯ ತಮೋಽಪನಯನಾಯ ಚ ।
ಲಿಂಗೇಽಪಿ ಮುದ್ರಿತಂ ಸರ್ವಂ ಯಥಾ ವೇದೈರುದಾಹೃತಂ ॥ ೫೪ ॥

ತದ್ದೃಷ್ಟ್ವಾ ಮುದ್ರಿತಂ ಲಿಂಗೇ ಪ್ರಸಾದಾಲ್ಲಿಂಗಿನಸ್ತದಾ ।
ಪ್ರಶಾಂತಮನಸೌ ದೇವೌ ಪ್ರಬುದ್ಧೌ ಸಂಬಭೂವತುಃ ॥ ೫೫ ॥

ಉತ್ಪತ್ತಿಂ ವಿಲಯಂ ಚೈವ ಯಾಥಾತ್ಮ್ಯಂ ಚ ಷಡಧ್ವನಾಂ ।
ತತಃ ಪರತರಂ ಧಾಮ ಧಾಮವಂತಂ ಚ ಪೂರುಷಂ ॥ ೫೬ ॥

ನಿರುತ್ತರತರಂ ಬ್ರಹ್ಮ ನಿಷ್ಕಲಂ ಶಿವಮೀಶ್ವರಂ ।
ಪಶುಪಾಶಮಯಸ್ಯಾಸ್ಯ ಪ್ರಪಂಚಸ್ಯ ಸದಾ ಪತಿಂ ॥ ೫೭ ॥

---

೫೩. ಹೀಗೆಂದು ವೇದಗಳು ತಮ್ಮ ಬಾಯಿಯಿಂದಲೇ ತಿಳಿಯುವಂತೆ ಹೇಳುತ್ತಿದ್ದರೂ, ಸ್ವಪ್ನದಲ್ಲಿ ಕಂಡಂತೆ ಆಗಿ ಅದನ್ನು ವಿಷ್ಣು, ಬ್ರಹ್ಮರು ತಿಳಿಯಲಿಲ್ಲ.

೫೪–೫೫. ಆ ಸಂದರ್ಭದಲ್ಲಿ ಅವರಿಬ್ಬರ ಅಜ್ಞಾನವನ್ನು ನಾಶಮಾಡಿ ತಿಳಿವಳಿಕೆಯನ್ನುಂಟುಮಾಡುವುದಕ್ಕಾಗಿ ಆ ಲಿಂಗದಲ್ಲಿ ವೇದಗಳಲ್ಲಿ ಹೇಳಿದುದೆಲ್ಲವೂ, ಮುದ್ರೆಯೊತ್ತಿದಂತೆ ಸ್ಪಷ್ಟವಾಗಿ ವ್ಯಕ್ತವಾಯಿತು. ಜ್ವಾಲಾಲಿಂಗ ಸ್ವರೂಪನಾದ ಪರಶಿವನ ಅನುಗ್ರಹದಿಂದ ವಿಷ್ಣು ಬ್ರಹ್ಮರು ಆ ಲಿಂಗದಲ್ಲಿ ಮುದ್ರಿತವಾದುದನ್ನು ನೋಡಿ ಶಾಂತವಾದ ಮನಸ್ಸುಳ್ಳವರಾಗಿ ಜ್ಞಾನಿಗಳಾಗಳಾದರು.

೫೬–೬೧. ಆ ವಿಷ್ಣುಬ್ರಹ್ಮರು ಪ್ರಪಂಚದ ಉತ್ಪತ್ತಿ ನಾಶಗಳನ್ನೂ, ಷಡಧ್ವತತ್ತ್ವವನ್ನೂ ಅತ್ಯಂತಶ್ರೇಷ್ಠವಾದ ಪ್ರಕಾಶವನ್ನೂ, ಆ ಪ್ರಕಾಶವುಳ್ಳ ಪುರುಷನನ್ನೂ, ನಿರ್ವಿಕಾರವೂ, ನಿಶ್ಶಬ್ದವೂ, ಮಂಗಳಕರವೂ ಆದ ಬ್ರಹ್ಮಸ್ವರೂಪವನ್ನೂ, ಪಶುಪಾಶಗಳಿಂದ ತುಂಬಿದ ಈ ಪ್ರಪಂಚಕ್ಕೆ ಪತಿಯಾದ ವಿರೂಪಾಕ್ಷ

ಅಕುತೋಭಯಮತ್ಯಂತಮವೃದ್ಧಿಕ್ಷಯಮವ್ಯಯಂ ।
ಬಾಹ್ಯಮಾಭ್ಯಂತರಂ ವ್ಯಾಪ್ತಂ ಬಾಹ್ಯಾಭ್ಯಂತರವರ್ಜಿತಂ ॥ ೫೮ ॥

ನಿರಸ್ತಾತಿಶಯಂ ಶಶ್ವದ್ವಿಶ್ವಲೋಕವಿಲಕ್ಷಣಂ ।
ಅಲಕ್ಷಣಮನಿರ್ದೇಶ್ಯಮವಾಙ್ಮನಸಗೋಚರಂ ॥ ೫೯ ॥

ಪ್ರಕಾಶೈಕರಸಂ ಶಾಂತಂ ಪ್ರಸನ್ನಂ ಸತತೋದಿತಂ ।
ಸರ್ವಕಲ್ಯಾಣನಿಲಯಂ ಶಕ್ತ್ಯಾ ತಾದೃಶಯಾನ್ವಿತಂ ॥ ೬೦ ॥

ಜ್ಞಾತ್ವಾ ದೇವಂ ವಿರೂಪಾಕ್ಷಂ ಬ್ರಹ್ಮನಾರಾಯಣೌ ತದಾ ।
ರಚಯಿತ್ವಾಂಜಲಿಂ ಮೂರ್ಧ್ನಿ ಭೀತೌ ತೌ ವಾಚಮೂಚತುಃ ॥ ೬೧ ॥

॥ ಬ್ರಹ್ಮೋವಾಚ ॥

ಅಜ್ಞೋ ವಾಹಮಭಿಜ್ಞೋ ವಾ ತ್ವಯಾದೌ ದೇವ ನಿರ್ಮಿತಃ ।
ಈದೃಶೀಂ ಭ್ರಾಂತಿಮಾಪನ್ನ ಇತಿ ಕೋऽತ್ರಾಪರಾಧ್ಯತಿ ॥ ೬೨ ॥

---

ನನ್ನೂ ತಿಳಿದುಕೊಂಡರು. ಆ ದೇವನು ಯಾವ ಭಯವೂ ಇಲ್ಲದವನು. ವೃದ್ಧಿಕ್ಷಯರಹಿತನು. ಎಲ್ಲಾ ವಸ್ತುಗಳ ಹೊರಗೂ ಒಳಗೂ ವ್ಯಾಪಿಸಿ ತನಗೆ ಹೊರಗೊಳಗೆಂಬ ಭೇದವಿಲ್ಲದವನು. ಯಾವ ಅತಿಶಯವೂ ಇಲ್ಲದುದರಿಂದ ಪ್ರಪಂಚಕ್ಕಿಂತ ವಿಲಕ್ಷಣವಾದವನು. ಮಾತಿಗೂ ಮನಸ್ಸಿಗೂ ನಿಲುಕದವನು. ಶಾಂತನೂ, ಪರಿಶುದ್ಧನೂ, ಪ್ರಕಾಶಸ್ವರೂಪನೂ ಆಗಿ, ಯಾವಾಗಲೂ ಸ್ವಯಂ ಪ್ರಕಾಶಿಸುತ್ತ ಸಮಸ್ತ ಮಂಗಳಗಳಿಗೂ ಆಶ್ರಯನೂ ಇದೇ ವಿಧವಾದ ಶಕ್ತಿಯಿಂದ ಕೂಡಿದವನೂ ಆಗಿರುವನು. ಇಂತಹ ದೇವದೇವನಾದ ವಿರೂಪಾಕ್ಷನನ್ನು ತಿಳಿದು ಬ್ರಹ್ಮನಾರಾಯಣರಿಬ್ಬರೂ ಭಯದಿಂದ ತಲೆಯ ಮೇಲೆ ಕೈಜೋಡಿಸಿಕೊಂಡು ಹೇಳಿದರು.

೬೨-೬೪. ಬ್ರಹ್ಮನು ಹೇಳಿದನು—ಎಲೈ ದೇವನೇ, ನಾನು ಜ್ಞಾನಿಯೋ ಅಜ್ಞಾನಿಯೋ ಮೊದಲು ನೀನೇ ನನ್ನನ್ನು ಸೃಷ್ಟಿಸಿದೆ. ಈ ವಿಧವಾದ ಭ್ರಾಂತಿಯು ನನಗೆ ಬಂದರೆ ಇದರ ತಪ್ಪು ಯಾರದು? ನನಗೆ ಅಜ್ಞಾನವಿದ್ದರೆ

ಆಸ್ತಾಂ ಮಮೇದಮಜ್ಞಾನಂ ತ್ವಯಿ ಸನ್ನಿಹಿತೇ ಪ್ರಭೋ ।
ನಿರ್ಭಯಃ ಕೋಽಭಿಭಾಷೇತ ಕೃತ್ಯಂ ಸ್ವಸ್ಯ ಪರಸ್ಯ ವಾ ॥ ೬೩ ॥

ಆವಯೋರ್ದೇವದೇವಸ್ಯ ವಿವಾದೋಽಪಿ ಹಿ ಶೋಭನಃ ।
ಪಾದಪ್ರಣಾಮಫಲದೋ ನಾಥಸ್ಯ ಭವತೋ ಯತಃ ॥ ೬೪ ॥

॥ ವಿಷ್ಣುರುವಾಚ ॥

ಸ್ತೋತುಂ ದೇವ ನ ವಾಗಸ್ತಿ ಮಹಿಮ್ನಃ ಸದೃಶೀ ತವ ।
ಪ್ರಭೋರಗ್ರೇ ವಿಧೇಯಾನಾಂ ತೂಷ್ಣೀಂಭಾವೋ ವ್ಯತಿಕ್ರಮಃ ॥ ೬೫ ॥

ಕಿಮತ್ರ ಸಂಘಟೇತ್ಕೃತ್ಯಮಿತ್ಯೇವಾವಸರೋಚಿತಂ ।
ಅಜಾನನ್ನಪಿ ಯತ್ಕಿಂಚಿತ್ಪ್ರಲಪ್ಯ ತ್ವಾಂ ನತೋಽಸ್ಮ್ಯಹಂ ॥ ೬೬ ॥

ಕಾರಣತ್ವಂ ತ್ವಯಾ ದತ್ತಂ ವಿಸ್ಮೃತಂ ತವ ಮಾಯಯಾ ।
ಮೋಹಿತೋಽಹಂಕೃತಶ್ಚಾಪಿ ಪುನರೇವಾಸ್ಮಿ ಶಾಸಿತಃ ॥ ೬೭ ॥

---

ಇರಲಿ. ಸ್ವಾಮಿಯಾದ ನೀನು ಸಮೀಪದಲ್ಲಿರುವಾಗ ತನ್ನ, ಮತ್ತು ಮತ್ತೊಬ್ಬನ ದೋಷವನ್ನು ಭಯವಿಲ್ಲದೆ ಯಾವನು ತಾನೇ ಹೇಳುವನು? ನಮ್ಮಿಬ್ಬರ ಕಲಹವು ಎಲ್ಲರಿಗೂ ಸ್ವಾಮಿಯೂ ದೇವತೆಗಳಿಗೆಲ್ಲಾ ದೇವನೂ ಆದ ನಿನ್ನ ಪಾದಕ್ಕೆ ನಮಸ್ಕಾರಮಾಡುವ ಫಲವನ್ನು ಒದಗಿಸಿಕೊಟ್ಟಿತು. ಆದುದರಿಂದ ಆ ಕಲಹವು ನಮಗೆ ಮಂಗಳಕರವಾಗಿಯೇ ಪರಿಣಮಿಸಿತು.

೬೫-೬೬. ಬಳಿಕ ವಿಷ್ಣುವು ಹೇಳಿದನು—ಎಲೈ ದೇವನೇ, ನಿನ್ನನ್ನು ಸ್ತೋತ್ರಮಾಡಲು ನಿನ್ನ ಮಹಿಮೆಗೆ ಸಮಾನವಾದ ಮಾತನಾಡುವ ಶಕ್ತಿಯು ನನಗಿಲ್ಲ. ಸ್ವಾಮಿಯ ಎದುರಿಗೆ ಸೇವಕರು ಸುಮ್ಮನಿರುವುದೂ ಒಂದು ದೋಷವಾಗುವುದು. ಈ ಸಂದರ್ಭದಲ್ಲಿ ಏನುಮಾಡಬೇಕೆಂಬ ಸಮಯೋಚಿತ ಕೃತ್ಯವನ್ನರಿಯದಿದ್ದರೂ ಕೆಲವು ಮಾತುಹೇಳಿ ನಿನಗೆ ನಮಸ್ಕರಿಸುವೆನು.

೬೭-೬೯. ನೀನು ನನಗೆ ಪ್ರಪಂಚಕಾರಣತ್ವವನ್ನು ಕೊಟ್ಟಿರುವೆ. ನಿನ್ನ ಮಾಯೆಯಿಂದ ನಾನು ಅದನ್ನು ಮರೆತೆನು. ಅಜ್ಞಾನದಿಂದ ಅಹಂಕಾರ

ವಿಜ್ಞಾಪಿತೈಃ ಕಿಂ ಬಹುಭಿರ್ಭೀತೋಽಸ್ಮಿ ಭೃಶಮೀಶ್ವರ ।
ಯತೋಽಹಮುಪರಿಚ್ಛೇದ್ಯಂ ತ್ವಾಂ ಪರಿಚ್ಛೇತ್ತುಮುದ್ಯತಃ ॥ ೬೮ ॥

ತ್ವಾಮುಶಂತಿ ಮಹಾದೇವಂ ಭೀತಾನಾಮಾರ್ತಿನಾಶನಂ ।
ಅತೋ ವ್ಯತಿಕ್ರಮಂ ಮೇಽದ್ಯ ಕ್ಷಂತುಮರ್ಹಸಿ ಶಂಕರ ॥ ೬೯ ॥

ಇತಿ ವಿಜ್ಞಾಪಿತಸ್ತಾಭ್ಯಾಮೀಶ್ವರಾಭ್ಯಾಂ ಮಹೇಶ್ವರಃ ।
ಪ್ರೀತೋಽನುಗೃಹ್ಯ ತೌ ದೇವೌ ಸ್ಮಿತಪೂರ್ವಮಭಾಷತ ॥ ೭೦ ॥

॥ ಈಶ್ವರ ಉವಾಚ ॥

ವತ್ಸ ವತ್ಸ ವಿಧೇ ವಿಷ್ಣೋ ಮಾಯಯಾ ಮಮ ಮೋಹಿತೌ ।
ಯುವಾಂ ಪ್ರಭುತ್ವೇಽಹಂಕೃತ್ಯ ಬದ್ಧವೈರೌ ಪರಸ್ಪರಂ ॥ ೭೧ ॥

---

ವನ್ನು ಹೊಂದಿದ ನನ್ನನ್ನು ನೀನು ಮತ್ತೆ ನಿಯಮನಮಾಡಿದೆ. ಎಲೈ ಸ್ವಾಮಿಯೇ, ಹೆಚ್ಚು ಹೇಳಿಕೊಳ್ಳುವುದರಿಂದೇನು ? ನಾನು ಬಹಳ ಭಯವನ್ನು ಹೊಂದಿರುವೆನು. ಅಳತೆಗೆ ಸಿಕ್ಕದ ನಿನ್ನನ್ನು ಅಳತೆಮಾಡಿ ನಿಷ್ಕರ್ಷಿಸಲು ಪ್ರಯತ್ನಮಾಡಿದೆನು. ಭಯಗೊಂಡವರ ದುಃಖವನ್ನು ನಿವಾರಿಸುವ ಮಹಾ ದೇವನಾದ ನಿನ್ನನ್ನು ಎಲ್ಲರೂ ಶರಣುಹೊಂದುವರು. ಆ ಕಾರಣದಿಂದ ಸುಖ ಕರನಾದ ನೀನು ನನ್ನ ಅಪರಾಧವನ್ನು ಕ್ಷಮಿಸಬೇಕು.

೭೦. ಹೀಗೆಂದು ಆ ಬ್ರಹ್ಮವಿಷ್ಣುಗಳು ವಿಜ್ಞಾಪನೆ ಮಾಡಿಕೊಳ್ಳಲು ಅದನ್ನು ಕೇಳಿ ಮಹೇಶ್ವರನು ಸಂತುಷ್ಟನಾಗಿ ಅವರಿಬ್ಬರಿಗೂ ಅನುಗ್ರಹವನ್ನು ಮಾಡಿ ನಗುತ್ತ ಇಂತೆಂದನು.

೭೧-೭೨. ಈಶ್ವರನು ಹೇಳಿದನು—ಎಲೈ ಬಾಲಕರಾದ ವಿಷ್ಣುಬ್ರಹ್ಮರೇ, ನೀವಿಬ್ಬರೂ ನನ್ನ ಮಾಯೆಯಿಂದ ಮೋಹಿತರಾಗಿ ಪ್ರಭುತ್ವವಿಷಯದಲ್ಲಿ ಅಹಂ ಕಾರಪಡುತ್ತ ಒಬ್ಬರಮೇಲೊಬ್ಬರು ದ್ವೇಷದಿಂದ ಜಗಳಮಾಡುವವರೆಗೂ ವಾದ

ವಿವಾದಂ ಯುದ್ಧಪರ್ಯಂತಂ ಕೃತ್ವಾ ನೋಪರತೌ ಕಿಲ ।
ತತಶ್ಛಿನ್ನಾ ಪ್ರಜಾಸೃಷ್ಟಿರ್ಜಗತ್ಕಾರಣಭೂತಯೋಃ ॥ ೭೨ ॥

ಅಜ್ಞಾನಮಾನಪ್ರಭವಾದ್ವೈಮತ್ಯಾದ್ಯುವಯೋರಪಿ ।
ತನ್ನಿವರ್ತಯಿತುಂ ಯುಷ್ಮದ್ದರ್ಪನೋಹೌ ಮಯೈವ ತು ॥ ೭೩ ॥

ಏವಂ ನಿವಾರಿತಾವದ್ಯ ಲಿಂಗಾವಿರ್ಭಾವಲೀಲಯಾ ।
ತಸ್ಮಾದ್ಭೂಯೋ ವಿವಾದಂ ಚ ವ್ರೀಡಾಂ ಚೋತ್ಸೃಜ್ಯ ಕೃತ್ಸ್ನಶಃ ॥ ೭೪ ॥

ಯಥಾ ಸ್ವಂ ಕರ್ಮ ಕುರ್ಯಾತಾಂ ಭವಂತೌ ವೀತಮತ್ಸರೌ ।
ಪುರಾ ಮಮಾಜ್ಞಯಾ ಸಾರ್ಧಂ ಸಮಸ್ತಜ್ಞಾನಸಂಹಿತಾಃ ॥ ೭೫ ॥

ಯುವಾಭ್ಯಾಂ ಹಿ ಮಯಾ ದತ್ತಾ ಕಾರಣತ್ವಪ್ರಸಿದ್ಧಯೇ ।
ಮಂತ್ರರತ್ನಂ ಚ ಸೂತ್ರಾಖ್ಯಂ ಪಂಚಾಕ್ಷರಮಯಂ ಪರಂ ॥ ೭೬ ॥

---

ಮಾಡಿ ಸುಮ್ಮನಾಗಲಿಲ್ಲ. ಪ್ರಪಂಚಸೃಷ್ಟಿಗೆ ಕಾರಣರಾದ ನಿಮ್ಮಿಬ್ಬರ ಯುದ್ಧದಿಂದ ಪ್ರಜಾಸೃಷ್ಟಿಯು ನಿಂತುಹೋಯಿತು.

೭೩-೭೪. ಅಜ್ಞಾನ ಮತ್ತು ಅಹಂಕಾರಗಳಿಂದ ಹುಟ್ಟಿದ ದುರ್ಬುದ್ಧಿಯಿಂದ ನಿಮ್ಮಿಬ್ಬರಿಗೂ ಹುಟ್ಟಿದ ಯುದ್ಧವನ್ನು ನಿವಾರಣೆಮಾಡಬೇಕೆಂದು ನಿಮ್ಮ ಅಹಂಕಾರ ಮತ್ತು ಅಜ್ಞಾನಗಳನ್ನು ಈಗ ಈರೀತಿಯಲ್ಲಿ ಲಿಂಗಾವಿರ್ಭಾವರೀತಿಯಿಂದ ನಿವಾರಣೆ ಮಾಡಿರುವೆನು. ಆದುದರಿಂದ ಇನ್ನು ಮುಂದೆ ನೀವು ಪರಸ್ಪರ ವಿವಾದವನ್ನೂ ನಾಚಿಕೆಯನ್ನೂ ಸಂಪೂರ್ಣವಾಗಿ ಬಿಟ್ಟು ಮಾತ್ಸರ್ಯವಿಲ್ಲದವರಾಗಿ ನಿಮ್ಮನಿಮ್ಮ ಕಾರ್ಯಗಳನ್ನು ಮಾಡಿರಿ.

೭೫-೭೭. ಹಿಂದೆ ನನ್ನ ಆಜ್ಞೆಯೊಡನೆ ಸಮಸ್ತ ಜ್ಞಾನಗಳಿಂದ ಕೂಡಿದ ಮಂತ್ರಶ್ರೇಷ್ಠವಾದ ಪಂಚಾಕ್ಷರಮಂತ್ರವನ್ನು ಸೃಷ್ಟಿರಕ್ಷಣರೂಪಕಾರ್ಯಕ್ಕೆ ಕಾರಣರಾದ ನಿಮ್ಮ ಪ್ರಸಿದ್ಧಿಗಾಗಿ ನಾನು ಕೊಟ್ಟಿರುವೆನು. ನಾನು ಉಪದೇಶಮಾಡಿದ ಆ ಅಂಶಗಳನ್ನು ನೀವಿಬ್ಬರೂ ಈಗ ಮರೆತಿರುವಿರಿ. ಮತ್ತೆ ಜ್ಞಾನಪೂರ್ವಕವಾಗಿ ಹಿಂದಿನಂತೆ ಆ ಮಂತ್ರವನ್ನು ಉಪದೇಶಮಾಡಿಕೊಡು

ಮಯೋಪದಿಷ್ಟಂ ಸರ್ವಂ ತದ್ಯುವಯೋರದ್ಯ ವಿಸ್ಮೃತಂ ।
ದದಾಮಿ ಚ ಪುನಸ್ಸರ್ವಂ ಯಥಾಪೂರ್ವಂ ಮಮಾಜ್ಞಯಾ ॥ ೭೭ ॥

ಯತೋ ವಿನಾ ಯುವಾಂ ತೇನ ನ ಕ್ಷಮೌ ಸೃಷ್ಟಿರಕ್ಷಣೇ ।
ಏವಮುಕ್ತ್ವಾ ಮಹಾದೇವೋ ನಾರಾಯಣಪಿತಾಮಹೌ ॥ ೭೮ ॥

ಮಂತ್ರರಾಜಂ ದದೌ ತಾಭ್ಯಾಂ ಜ್ಞಾನಸಂಹಿತಯಾ ಸಹ ।
ತೌ ಲಬ್ಧ್ವಾ ಮಹತೀಂ ದಿವ್ಯಾಮಾಜ್ಞಾಂ ಮಾಹೇಶ್ವರೀಂ ಪರಾಂ ॥ ೭೯ ॥

ಮಹಾರ್ಥಂ ಮಂತ್ರರತ್ನಂ ಚ ತಥೈವ ಸಕಲಾಃ ಕಲಾಃ ।
ದಂಡವತ್ಪ್ರಣಿತಂ ಕೃತ್ವಾ ದೇವದೇವಸ್ಯ ಪಾದಯೋಃ ॥ ೮೦ ॥

ಅತಿಷ್ಠತಾಂ ವೀತಭಯಾವಾನಂದಸ್ತಿಮಿತೌ ತದಾ ।
ಏತಸ್ಮಿನಂತರೇ ಚಿತ್ರಮಿಂದ್ರಜಾಲವದೈಶ್ವರಂ ॥ ೮೧ ॥

ಲಿಂಗಂ ಕ್ವಾಪಿ ತಿರೋಭೂತಂ ನ ತಾಭ್ಯಾಮುಪಲಭ್ಯತೇ ।
ತತೋ ವಿಲಪ್ಯ ಹಾಹೇತಿ ಸದ್ಯಃ ಪ್ರಣಯಭಂಗತಃ ॥ ೮೨ ॥

---

ವೆನು. ಆ ಮಂತ್ರಶಕ್ತಿಯಿಲ್ಲದಿದ್ದರೆ ನೀವಿಬ್ಬರೂ ಸೃಷ್ಟಿರಕ್ಷಣೆಯ ಕೆಲಸದಲ್ಲಿ ಶಕ್ತರಾಗಲಾರಿರಿ.

೭೮. ಮಹಾದೇವನು ನಾರಾಯಣ ಬ್ರಹ್ಮರಿಗೆ ಹೀಗೆಂದು ಹೇಳಿ ಅವರಿಗೆ ಜ್ಞಾನದಿಂದಕೂಡಿದ ಪಂಚಾಕ್ಷರಮಂತ್ರವನ್ನು ಉಪದೇಶಮಾಡಿದನು.

೭೯-೮೦. ಅವರಿಬ್ಬರೂ ಮಹಾಮಹಿಮೆಯಿಂದ ಕೂಡಿದ ಶ್ರೇಷ್ಠವಾದ ಮಹೇಶ್ವರನ ಆಜ್ಞೆಯನ್ನೂ, ವಿಶೇಷಾರ್ಥಗಳಿಂದ ಕೂಡಿದ ಮಂತ್ರಶ್ರೇಷ್ಠವಾದ ಪಂಚಾಕ್ಷರಮಂತ್ರವನ್ನೂ, ಹಾಗೆಯೇ ಸಮಸ್ತ ವಿದ್ಯೆಗಳನ್ನೂ ಪಡೆದು ಆ ದೇವಶ್ರೇಷ್ಠನ ಪಾದಗಳಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಭಯರಹಿತರಾಗಿ ಅತ್ಯಂತ ಸಂತೋಷದಿಂದ ಸ್ಥಿರವಾಗಿ ನಿಂತುಕೊಂಡರು.

೮೧-೮೩. ಈ ಸಮಯದಲ್ಲಿ ಆಶ್ಚರ್ಯಕರವಾದ, ಈಶ್ವರ ಸಂಬಂಧವಾದ ಜ್ವಾಲಾಲಿಂಗವು ಇಂದ್ರಜಾಲದಂತೆ ಅಲ್ಲಿಯೇ ಅದೃಶ್ಯವಾಯಿತು. ವಿಷ್ಣು ಬ್ರಹ್ಮರಿಗೂ ಕಾಣಿಸಲಿಲ್ಲ. ಆಮೇಲೆ ಅವರಿಬ್ಬರೂ ಆಕಾಲಕ್ಕೆ ತಮಗೆ

ಕಿಮಸತ್ಯಮಿದಂ ವೃತ್ತಮಿತಿ ಚೋಕ್ತ್ವಾ ಪರಸ್ಪರಂ ।
ಅಚಿಂತ್ಯವೈಭವಂ ಶಂಭೋರ್ವಿಚಿಂತ್ಯ ಚ ಗತವ್ಯಥೌ ॥ ೮೩ ॥

ಅಭ್ಯುಪೇತ್ಯ ಪರಾಂ ಮೈತ್ರೀಮಾಲಿಂಗ್ಯ ಚ ಪರಸ್ಪರಂ ।
ಜಗದ್ವ್ಯಾಪಾರಮುದ್ದಿಶ್ಯ ಜಗ್ಮತುರ್ದೇವಪುಂಗವೌ ॥ ೮೪ ॥

ತತಃ ಪ್ರಭೃತಿ ಶಕ್ರಾದ್ಯಾಃ ಸರ್ವ ಏವ ಸುರಾಸುರಾಃ ।
ಋಷಯಶ್ಚ ನರಾ ನಾಗಾಃ ನಾರ್ಯಶ್ಚಾಪಿ ವಿಧಾನತಃ ।
ಲಿಂಗಪ್ರತಿಷ್ಠಾಂ ಕುರ್ವಂತಿ ಲಿಂಗೇ ತಂ ಪೂಜಯಂತಿ ಚ ॥ ೮೫ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-
ಮುತ್ತರಭಾಗೇ ಹರಿವಿಧಿಮೋಹನಿವಾರಣಂ ನಾಮ
ಪಂಚತ್ರಿಂಶೋಽಧ್ಯಾಯಃ

ಉಂಟಾದ ಪ್ರೀತಿಯ ಭಂಗಕ್ಕಾಗಿ ಹಾ ಎಂಬುದಾಗಿ ದುಃಖಪಟ್ಟು ಇದುವರೆಗೆ ನಡೆದುದು ಸತ್ಯವೋ, ಅಸತ್ಯವೋ ಎಂದು ಒಬ್ಬರಿಗೊಬ್ಬರು ಮಾತನಾಡುತ್ತ ಶಿವನ ಊಹಿಸಲಾಗದ ಮಹಿಮೆಯನ್ನು ಯೋಚಿಸಿ ತಮ್ಮ ದುಃಖವನ್ನು ಕಳೆದುಕೊಂಡರು.

೮೪. ಬ್ರಹ್ಮನಾರಾಯಣರು ಪರಸ್ಪರ ಸ್ನೇಹಭಾವದಿಂದ ಒಬ್ಬರನ್ನೊಬ್ಬರು ಆಲಂಗಿಸಿಕೊಂಡು ಸೃಷ್ಟಿರಕ್ಷಣರೂಪವಾದ ವ್ಯವಹಾರವನ್ನು ನಡೆಸಲು ಹೊರಟುಹೋದರು.

೮೫. ಅದುಮೊದಲುಗೊಂಡು ದೇವೇಂದ್ರನೇ ಮೊದಲಾದ ಸಮಸ್ತ ದೇವತೆಗಳೂ, ರಾಕ್ಷಸರರೂ, ಋಷಿಗಳೂ, ಮನುಜರೂ, ನಾಗರೂ, ಸ್ತ್ರೀಯರೂ ವಿಧಿಗನುಸಾರವಾಗಿ ಲಿಂಗಪ್ರತಿಷ್ಠೆಯನ್ನು ಮಾಡಿ ಆ ಲಿಂಗದಲ್ಲಿ ಶಿವನನ್ನು ಪೂಜಿಸುವರು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯವೀಯಸಂಹಿತೆಯ ಉತ್ತರ
ಭಾಗದಲ್ಲಿ ವಿಷ್ಣುಬ್ರಹ್ಮಮೋಹನಿವಾರಣವೆಂಬ ಮೂವತ್ತೈದನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ಷಟ್ತ್ರಿಂಶೋಽಧ್ಯಾಯಃ

---

॥ ಶ್ರೀ ಕೃಷ್ಣ ಉವಾಚ ॥

ಭಗವನ್ ಶ್ರೋತುಮಿಚ್ಛಾಮಿ ಪ್ರತಿಷ್ಠಾವಿಧಿಮುತ್ತಮಾಂ ।
ಲಿಂಗಸ್ಯಾಪಿ ಚ ಬೇರಸ್ಯ ಶಿವೇನ ವಿಹಿತಂ ಯಥಾ ॥ ೧ ॥

॥ ಉಪಮನ್ಯುರುವಾಚ ॥

ಅನಾತ್ಮಪ್ರತಿಕೂಲೇ ತು ದಿವಸೇ ಶುಕ್ಲಪಕ್ಷಕೇ ।
ಶಿವಶಾಸ್ತ್ರೋಕ್ತಮಾರ್ಗೇಣ ಕುರ್ಯಾಲ್ಲಿಂಗಂ ಪ್ರಮಾಣವತ್ ॥ ೨ ॥

---

### ಮೂವತ್ತಾರನೆಯ ಅಧ್ಯಾಯವು.

೧. ಶ್ರೀಕೃಷ್ಣನು ಕೇಳುವನು:—ಮಹಾಮಹಿಮನಾದ ಉಪಮನ್ಯು ಮುನಿಯೇ, ಶಿವನು ವಿಧಿಸಿದಂತೆ ಲಿಂಗ ಅಥವ ಮೂರ್ತಿಯ ಪ್ರತಿಷ್ಠಾವಿಧಿಯನ್ನು ಕೇಳಬೇಕೆಂದಿರುವೆನು. ದಯವಿಟ್ಟು ಹೇಳಬೇಕು ಎನ್ನಲು,

೨. ಉಪಮನ್ಯುವು ಹೇಳುವನು—ಲಿಂಗ ಅಥವಾ ಮೂರ್ತಿಯನ್ನು ಪ್ರತಿಷ್ಠೆಮಾಡುವ ಮನುಷ್ಯನು, ಜ್ಯೋತಿಶ್ಶಾಸ್ತ್ರಾನುಸಾರವಾಗಿ ಶುಕ್ಲಪಕ್ಷದಲ್ಲಿ ತನಗೆ ವಿರೋಧವಿಲ್ಲದ ದಿವಸದಲ್ಲಿ ಶಿವಶಾಸ್ತ್ರೋಕ್ತರೀತಿಯಿಂದ ಅಳತೆಗೆ ಸರಿಯಾದ ಲಿಂಗವನ್ನು ಮಾಡಿಸಬೇಕು.

ಸ್ವೀಕೃತ್ಯಾಥ ಶುಭಸ್ಥಾನಂ ಭೂಪರೀಕ್ಷಾಂ ವಿಧಾಯ ಚ ।
ದಶೋಪಚಾರಾನ್ಕುರ್ವೀತ ಲಕ್ಷಣೋದ್ಧಾರಪೂರ್ವಕಾನ್ ॥ ೩ ॥

ತೇಷಾಂ ದಶೋಪಚಾರಾಣಾಂ ಪೂರ್ವಂ ಪೂಜ್ಯ ವಿನಾಯಕಂ ।
ಸ್ಥಾನಶುದ್ಧ್ಯಾದಿಕಂ ಕೃತ್ವಾ ಲಿಂಗಂ ಸ್ನಾನಾಲಯಂ ನಯೇತ್ ॥ ೪ ॥

ಶಲಾಕಯಾ ಕಾಂಚನಯಾ ಕುಂಕುಮಾದಿರಸಾಕ್ತಯಾ ।
ಲಕ್ಷಿತಂ ಲಕ್ಷಣಂ ಶಿಲ್ಪಶಾಸ್ತ್ರೇಣ ವಿಲಿಖೇತ್ತತಃ ॥ ೫ ॥

ಅಷ್ಟಮೃತ್ಸಲಿಲೈರ್ವಾಥ ಪಂಚಮೃತ್ಸಲಿಲೈಸ್ತಥಾ ।
ಲಿಂಗಂ ಪಿಂಡಿಕಯಾ ಸಾರ್ಧಂ ಪಂಚಗವ್ಯೈಶ್ಚ ಶೋಧಯೇತ್ ॥ ೬ ॥

ಸವೇದಿಕಂ ಸಮಭ್ಯರ್ಚ್ಯ ದಿವ್ಯಾದ್ಯಂ ತು ಜಲಾಶಯಂ ।
ನೀತ್ವಾಧಿವಾಸಯೇತ್ತತ್ರ ಲಿಂಗಂ ಪಿಂಡಿಕಯಾ ಸಹ ॥ ೭ ॥

---

೩. ಲಿಂಗಪ್ರತಿಷ್ಠೆಗಾಗಿ ಶುಭವಾದ ಸ್ಥಳವನ್ನು ಗೊತ್ತುಮಾಡಿ ಭೂಮಿಯನ್ನು ಪರೀಕ್ಷಿಸಿ ಲಿಂಗಕ್ಕೆ ಲಕ್ಷಣೋದ್ಧಾರವನ್ನು ಮಾಡಿ ದಶೋಪಚಾರಗಳಿಂದ ಪೂಜಿಸಬೇಕು.

೪. ಹತ್ತು ಉಪಚಾರಗಳಿಂದ ಪೂಜಿಸುವುದಕ್ಕಿಂತ ಮುಂಚೆಯೇ ವಿನಾಯಕನನ್ನು ಪೂಜಿಸಿ ಪ್ರತಿಷ್ಠಾಸ್ಥಾನವನ್ನು ಶುದ್ಧಿಮಾಡಿ ಲಿಂಗವನ್ನು ಸ್ನಾನದ ಮನೆಗೆ ಕರೆದುಕೊಂಡು ಹೋಗಬೇಕು.

೫. ಚಿನ್ನದ ಸಲಾಕಿಯಿಂದ ಕುಂಕುಮಕೇಸರಿಯ ರಸವನ್ನು ಅದ್ದಿಕ್ಕೊಂಡು ಶಿಲ್ಪಶಾಸ್ತ್ರದಲ್ಲಿ ಹೇಳಿದ ಲಕ್ಷಣಾನುಸಾರವಾಗಿ ಲಿಂಗಲಕ್ಷಣವನ್ನು ಅದರಲ್ಲಿ ಬರೆಯಬೇಕು.

೬. ಆಮೇಲೆ ಎಂಟುಬಗೆಯ ಅಥವಾ ಐದುಬಗೆಯ ಮಣ್ಣಿನ ನೀರಿನಿಂದಲೂ, ಪಂಚಗವ್ಯದಿಂದಲೂ ಲಿಂಗವನ್ನು ಪೀಠದೊಡನೆ ಶುದ್ಧಿಮಾಡಬೇಕು.

೭. ಪೀಠಸಹಿತವಾದ ಲಿಂಗವನ್ನು ಪೂಜಿಸಿ ದೇವನಿರ್ಮಿತವಾದ ನದೀ ಸರೋವರ ಮುಂತಾದ ಜಲಾಶಯಗಳಿಗೆ ತೆಗೆದುಕೊಂಡುಹೋಗಿ ಪೀಠದೊಡನೆ ಲಿಂಗವನ್ನು ಜಲಾಧಿವಾಸಮಾಡಿಸಬೇಕು.

ಅಧಿವಾಸಾಲಯೇ ಶುದ್ಧೇ ಸರ್ವಶೋಭಾಸಮನ್ವಿತೇ ।
ಸತೋರಣೇ ಸಾವರಣೇ ದರ್ಭಮಾಲಾಸಮಾವೃತೇ ॥ ೮ ॥

ದಿಗ್ಗಜಾಷ್ಟಕಸಂಪನ್ನೇ ದಿಕ್ಪಾಲಾಷ್ಟಘಟಾನ್ವಿತೇ ।
ಅಷ್ಟಮಂಗಳಕೈರ್ಯುಕ್ತೇ ಕೃತದಿಕ್ಪಾಲಕಾರ್ಚಿತೇ ॥ ೯ ॥

ತೈಜಸಂ ದಾರವಂ ವಾಪಿ ಕೃತ್ವಾ ಪದ್ಮಾಸನಾಂಕಿತಂ ।
ವಿನ್ಯಸೇನ್ಮಧ್ಯತಸ್ತತ್ರ ವಿಪುಲಂ ಪೀಠಕಾಲಯಂ ॥ ೧೦ ॥

ದ್ವಾರಪಾಲಾನ್ಸಮಭ್ಯರ್ಚ್ಯ ಭದ್ರಾದೀಂಶ್ಚತುರಃ ಕ್ರಮಾತ್ ।
ಸುಭದ್ರಶ್ಚ ವಿಭದ್ರಶ್ಚ ಸುನಂದಶ್ಚ ವಿದಂನಕಃ ॥ ೧೧ ॥

ಸ್ನಾಪಯಿತ್ವಾ ಸಮಭ್ಯರ್ಚ್ಯ ಲಿಂಗಂ ವೇದಿಕಯಾ ಸಹ ।
ಸಕೂರ್ಚಾಭ್ಯಾಂ ತು ವಸ್ತ್ರಾಭ್ಯಾಂ ಸಮಾವೇಷ್ಟ್ಯ ಸಮಂತತಃ ॥ ೧೨ ॥

---

೮-೧೦. ಅಥವಾ ಸ್ಥಲಾಧಿವಾಸಾದಿಗಳನ್ನು ಮಾಡುವುದಕ್ಕಾಗಿ ಒಂದು ಅಧಿವಾಸಾಲಯವನ್ನು ಗೊತ್ತುಮಾಡಿ ಅದನ್ನು ಶುದ್ಧಮಾಡಿ ಅಲಂಕರಿಸಿ ತೋರಣಗಳನ್ನೂ, ಆವರಣಗಳನ್ನೂ, ದರ್ಭೆಗಳ ಸಮೂಹವನ್ನೂ, ಅಲಂಕಾರಕ್ಕಾಗಿ ಕಟ್ಟಿ, ಸುತ್ತಲೂ ಅಷ್ಟದಿಗ್ಗಜಗಳನ್ನೂ ಅಷ್ಟದಿಕ್ಪಾಲಕರ ಪೂಜಾರ್ಥವಾದ ಎಂಟು ಕಲಶಗಳನ್ನೂ ಇಟ್ಟು, ಅಷ್ಟಮಂಗಳದ್ರವ್ಯಗಳನ್ನು ಸಿದ್ಧಪಡಿಸಿ, ಅಷ್ಟದಿಕ್ಪಾಲಕರನ್ನು ಪೂಜಿಸಿ ಲೋಹದ ಅಥವಾ ಮರದ ಪದ್ಮದ ಗುರುತನ್ನು ಮಾಡಿದ ಆಸನವನ್ನು ಮಧ್ಯದಲ್ಲಿರಿಸಬೇಕು. ಆ ಆಸನವು ವಿಸ್ತಾರವಾದುದಾಗಿರಬೇಕು.

೧೧-೧೨. ಆಮೇಲೆ ಕ್ರಮವಾಗಿ ಸುಭದ್ರ, ವಿಭದ್ರ, ಸುನಂದ, ವಿನಂದ, ಎಂಬ ನಾಲ್ವರು ದ್ವಾರಪಾಲಕರನ್ನು ಪೂಜಿಸಿ, ಲಿಂಗವನ್ನು ಪೀಠಸಹಿತವಾಗಿ ಸ್ನಾನಮಾಡಿಸಿ ಪೂಜಿಸಿ, ಕೂರ್ಚಸಹಿತವಾದ ಎರಡು ವಸ್ತ್ರಗಳಿಂದ ಸುತ್ತಿ ಮೆಲ್ಲಗೆ ನೀರಿನೊಳಗಿರುವ ಪೀಠದಮೇಲೆ ಮಲಗಿಸಬೇಕು.

ಪ್ರಾಪಯ್ಯ ಶನಕೈಸ್ತ್ರೋಯಂ ಪೀಠಿಕೋಪರಿ ಶಾಯಯೇತ್ ।
ಪ್ರಾಕ್ಛಿರಸ್ಕಮಧಸ್ಸೂತ್ರಂ ಪಿಂಡಿಕಾಂ ಚಾಸ್ಯ ಪಶ್ಚಿಮೇ ॥ ೧೩ ॥

ಸರ್ವಮಂಗಲಸಂಯುಕ್ತಂ ಲಿಂಗಂ ತತ್ರಾಧಿವಾಸಯೇತ್ ।
ಪಂಚರಾತ್ರಂ ತ್ರಿರಾತ್ರಂ ವಾಪ್ಯೇಕರಾತ್ರಮಥಾಪಿ ವಾ ॥ ೧೪ ॥

ವಿಸೃಜ್ಯ ಪೂಜಿತಂ ತತ್ರ ಶೋಧಯಿತ್ವಾ ಚ ಪೂರ್ವವತ್ ।
ಸಂಪೂಜ್ಯೋತ್ಸರ್ವಮಾರ್ಗೇಣ ಶಯನಾಲಯಮಾನಯೇತ್ ॥ ೧೫ ॥

ತತ್ರಾಪಿ ಶಯನಸ್ಥಾನಂ ಕುರ್ಯಾನ್ಮಂಡಲಮಧ್ಯತಃ ।
ಶುದ್ಧೈರ್ಜಲೈಃ ಸ್ನಾಪಯಿತ್ವಾ ಲಿಂಗಮಭ್ಯರ್ಚಯೇತ್ಕ್ರಮಾತ್ ॥ ೧೬ ॥

ಐಶಾನ್ಯಾಂ ಪದ್ಮಮಾಲಿಖ್ಯ ಶುದ್ಧಲಿಪ್ತೇ ಮಹೀತಲೇ ।
ಶಿವಕುಂಭಂ ಶೋಧಯಿತ್ವಾ ತತ್ರಾವಾಹ್ಯ ಶಿವಂ ಯಜೇತ್ ॥ ೧೭ ॥

ವೇದಿಮಧ್ಯಂ ಸಿತಂ ಪದ್ಮಂ ಪರಿಕಲ್ಪ್ಯ ವಿಧಾನತಃ ।
ತಸ್ಯ ಪಶ್ಚಿಮತಶ್ಚಾಪಿ ಚಂಡಿಕಾಪದ್ಮಮಾಲಿಖೇತ್ ॥ ೧೮ ॥

---

೧೩-೧೫. ಜಲಾಧಿವಾಸಮಾಡಿಸುವಾಗ ಲಿಂಗದ ತಲೆಯು ಪೂರ್ವ ದಿಕ್ಕಿಗೂ, ಸೋಮಸೂತ್ರವು ಭೂಮಿಯಕಡಗೂ, ಪೀಠವು ಪಶ್ಚಿಮಕ್ಕೂ ಇರುವಂತೆ ಮಲಗಿಸಿ ಸಮಸ್ತ ಮಂಗಳಗಳಿಂದಕೂಡಿ ಐದು, ಮೂರು ಅಥವಾ ಒಂದು ರಾತ್ರಿಯಾದರೂ ಅಧಿವಾಸಮಾಡಿಸಿದಮೇಲೆ ಲಿಂಗವನ್ನು ತೊಳೆದು ಪೂಜಿಸಿ ಉತ್ಸವದಿಂದ ಶಯನದಮನೆಗೆ ಕರೆದುಕೊಂಡು ಬರಬೇಕು.

೧೬. ಅಲ್ಲಿಯೂ ಮಂಡಲದ ನಡುವೆ ಶಯನಸ್ಥಾನವನ್ನು ಮಾಡಿ ಲಿಂಗವನ್ನು ಶುದ್ಧವಾದ ನೀರಿನಿಂದ ಸ್ನಾನಮಾಡಿಸಿ ಕ್ರಮವಾಗಿ ಪೂಜಿಸಬೇಕು.

೧೭-೧೮. ಈಶಾನ್ಯದಿಕ್ಕಿನಲ್ಲಿ ಶುದ್ಧವಾಗಿ ಸಾರಿಸಿದ ಭೂಮಿಯಮೇಲೆ ಕಮಲವನ್ನು ಬರೆದು ಅಲ್ಲಿ ಶಿವಕಲಶವನ್ನಿಟ್ಟು ಆ ಕಲಶದಲ್ಲಿ ಶಿವನನ್ನು ಪೂಜಿಸಿ, ಜಗಲಿಯ ನಡುವೆ ಬಿಳಿಯಪದ್ಮವನ್ನು ಕಲ್ಪಿಸಿ ಅದರ ಪಶ್ಚಿಮದಿಕ್ಕಿನಲ್ಲಿ ಚಂಡಿಕಾಪದ್ಮವನ್ನು ಬರೆಯಬೇಕು.

ಕ್ಷೌಮಾದ್ಯೈರ್ವಾಹತೈರ್ವಸ್ತ್ರೈಃ ಪುಷ್ಪೈರ್ದರ್ಭೈರಥಾಪಿ ವಾ ।
ಪ್ರಕಲ್ಪ್ಯ ಶಯನಂ ತಸ್ಮಿನ್ಹೇಮಪುಷ್ಪಂ ವಿನಿಕ್ಷಿಪೇತ್ ॥ ೧೯ ॥

ತತ್ರ ಲಿಂಗಂ ಸಮಾನೀಯ ಸರ್ವಮಂಗಳನಿಃಸ್ವನೈಃ ।
ರಕ್ತೇನ ವಸ್ತ್ರಯುಗ್ಮೇನ ಸಕೂರ್ಚೇನ ಸಮಂತತಃ ॥ ೨೦ ॥

ಸಹ ಪಿಂಡಿಕಯಾವೇಷ್ಟ್ಯ ಶಾಯಯೇಚ್ಚ ಯಥಾ ಪುರಾ ।
ಪುರಸ್ತಾತ್ಪದ್ಮಮಾಲಿಖ್ಯ ತದ್ದಲೇಷು ಯಥಾಕ್ರಮಂ ॥ ೨೧ ॥

ವಿದ್ಯೇಶಕಲಶಾನ್ನ್ಯಸ್ಯೇನ್ಮಧ್ಯೇ ಶೈವೀಂ ಚ ವರ್ಧನೀಂ ।
ಪರೀತ್ಯ ಪದ್ಮತ್ರಿತಯಂ ಜುಹುಯುರ್ದ್ವಿಜಸತ್ತಮಾಃ ॥ ೨೨ ॥

ತೇ ಚಾಷ್ಟಮೂರ್ತಯಃ ಕಲ್ಪ್ಯಾಃ ಪೂರ್ವಾದಿಪರಿತಃ ಸ್ಥಿತಾಃ ।
ಚತ್ವಾರಶ್ಚಾಥವಾ ದಿಕ್ಷು ಸ್ವಧ್ಯೇತಾರಸ್ಸಜಾಪಕಾಃ ॥ ೨೩ ॥

---

೧೯-೨೦. ರೇಷ್ಮೆಯೇ ಮುಂತಾದ ಹೊಸ ವಸ್ತ್ರಗಳಿಂದಾಗಲಿ, ಹೂಗಳು ಮತ್ತು ದರ್ಭೆಗಳಿಂದಾಗಲಿ, ಹಾಸಿಗೆಯನ್ನು ನಿರ್ಮಿಸಿ ಅದರಮೇಲೆ ಸುವರ್ಣ ಪುಷ್ಪವನ್ನು ಹಾಕಬೇಕು. ಅಲ್ಲಿಗೆ ಮಂಗಳವಾದ್ಯಸಹಿತವಾಗಿ ಲಿಂಗವನ್ನು ತಂದು ಕೆಂಪು ಬಣ್ಣದ ಎರಡು ವಸ್ತ್ರಗಳಿಂದ ದರ್ಭೆಯ ಕೂರ್ಚಸಹಿತವಾಗಿ ಪೀಠದೊಡನೆ ಕೂಡಿದ ಲಿಂಗವನ್ನು ಸುತ್ತಲೂ ಸುತ್ತಿಕಟ್ಟಿ ಹಿಂದಿನಂತೆ ಮಲಗಿಸಬೇಕು.

೨೧-೨೨. ಮುಂಭಾಗದಲ್ಲಿ ಅಷ್ಟದಳ ಪದ್ಮವನ್ನು ಬರೆದು ಅದರ ದಳಗಳಲ್ಲಿ ಕ್ರಮವಾಗಿ ವಿದ್ಯೇಶಕಲಶಗಳನ್ನಿಟ್ಟು ನಡುವೆ ಶಿವನ ಅಭಿಷೇಕದ ಧಾರಾಪಾತ್ರೆಯನ್ನಿಟ್ಟು ಬಳಿಕ ಬ್ರಾಹ್ಮಣರು ಮೂರು ಪದ್ಮಗಳನ್ನೂ ಪ್ರದಕ್ಷಿಣೆ ಮಾಡಿ ಹೋಮವನ್ನು ಮಾಡಬೇಕು.

೨೩-೨೪. ಹೋಮಮಾಡುವ ಬ್ರಾಹ್ಮಣರು ಪೂರ್ವಾದಿಯಾಗಿ ಎಂಟು ದಿಕ್ಕುಗಳಿಗೆ ಎಂಟು ಜನವಿರಬೇಕು. ಅಥವಾ ನಾಲ್ಕು ದಿಕ್ಕುಗಳಿಗೆ ನಾಲ್ಕು ಜನರಾದರೂ ಇದ್ದು ಚೆನ್ನಾಗಿ ವೇದಾಧ್ಯಯನವನ್ನುಮಾಡಿ ಮಂತ್ರಜಪಮಾಡಲು ಶಕ್ತರಾದವರಾಗಿರಬೇಕು. ಬ್ರಹ್ಮನೇ ಮೊದಲಾದ ನಾಲ್ಕು ಮೂರ್ತಿಗಳಿಂದು

ಜುಹುಯುಸ್ತೇ ವಿರಿಂಚ್ಯಾದ್ಯಾಶ್ಚತಸ್ರೋ ಮೂರ್ತಯಃ ಸ್ಮೃತಾಃ ।
ದೇಶಿಕಃ ಪ್ರಥಮಂ ತೇಷಾಮೈಶಾನ್ಯಾಂ ಪಶ್ಚಿಮೇಽಥವಾ ॥ ೨೪ ॥

ಪ್ರಧಾನಹೋಮಂ ಕುರ್ವೀತ ಸಪ್ತದ್ರವ್ಯೈರ್ಯಥಾಕ್ರಮಂ ।
ಆಚಾರ್ಯಾತ್ಪಾದಮರ್ಧಂ ವಾ ಜುಹುಯುಶ್ಚಾಪರೇ ದ್ವಿಜಾಃ ॥ ೨೫ ॥

ಪ್ರಧಾನಮೇಕಮೇವಾತ್ರ ಜುಹುಯಾದಥವಾ ಗುರುಃ ।
ಪೂರ್ವಂ ಪೂರ್ಣಾಹುತಿಂ ಹುತ್ವಾ ಘೃತೇನಾಷ್ಟೋತ್ತರಂ ಶತಂ ॥ ೨೬ ॥

ಮೂರ್ಧ್ನಿ ಮೂಲೇನ ಲಿಂಗಸ್ಯ ಶಿವಹಸ್ತಂ ಪ್ರವಿನ್ಯಸೇತ್ ।
ಶತಮರ್ಧಂ ತದರ್ಧಂ ವಾ ಕ್ರಮಾದ್ದ್ರವ್ಯೈಶ್ಚ ಸಪ್ತಭಿಃ ॥ ೨೭ ॥

ಹುತ್ವಾ ಹುತ್ವಾ ಸ್ಪೃಶೇಲ್ಲಿಂಗಂ ವೇದಿಕಾಂ ಚ ಪುನಃ ಪುನಃ ।
ಪೂರ್ಣಾಹುತಿಂ ತತೋ ಹುತ್ವಾ ಕ್ರಮಾದ್ದದ್ಯಾಚ್ಚ ದಕ್ಷಿಣಾಂ ॥ ೨೮ ॥

---

ಅವರು ಪ್ರಸಿದ್ಧರಾಗಿರುವರು. ಅವರಲ್ಲಿ ಮೊದಲನೆಯವನಾದ ಗುರುವು ಈಶಾನ್ಯ ದಿಕ್ಕಿನಲ್ಲಿ ಅಥವಾ ಪಶ್ಚಿಮದಿಕ್ಕಿನಲ್ಲಿದ್ದು ಹೋಮಕ್ಕೆ ವಿಧಿಸಿದ ಏಳು ದ್ರವ್ಯಗಳಿಂದ ಕ್ರಮವಾಗಿ ಪ್ರಧಾನ ಹೋಮವನ್ನು ಮಾಡಬೇಕು.

೨೫-೨೬. ಗುರುವು ಮಾಡಿದ ಹೋಮಸಂಖ್ಯೆಯ ಕಾಲುಭಾಗವನ್ನೋ, ಅರ್ಧಭಾಗವನ್ನೋ ಮಿಕ್ಕ ಬ್ರಾಹ್ಮಣರು ಹೋಮಮಾಡಬೇಕು. ಗುರುವು ಪ್ರಧಾನ ಹೋಮ ಒಂದನ್ನೇ ಮಾಡಬಹುದು. ಮೊದಲು ತುಪ್ಪದಿಂದ ನೂರೆಂಟು ಹೋಮಗಳನ್ನು ಮಾಡಿ ಮೂಲಮಂತ್ರದಿಂದ ಲಿಂಗದ ನೆತ್ತಿಯ ಮೇಲೆ ಶಿವಹಸ್ತವನ್ನು ಇಡಬೇಕು.

೨೭-೨೮. ಕ್ರಮವಾಗಿ ಏಳು ಹೋಮದ್ರವ್ಯಗಳಿಂದಲೂ, ನೂರು, ಐವತ್ತು ಅಥವಾ ಇಪ್ಪತ್ತೈದು ಹೋಮಗಳನ್ನು ಮಾಡಿಮಾಡಿ ಕ್ರಮವಾಗಿ ಋತ್ವಿಕ್ಕುಗಳಿಗೆ ದಕ್ಷಿಣೆಯನ್ನು ಕೊಡಬೇಕು. ಪೀಠಸಹಿತವಾದ ಲಿಂಗವನ್ನು ಸ್ಪರ್ಶಮಾಡಬೇಕು. ಆಮೇಲೆ ಪೂರ್ಣಾಹುತಿ ಹೋಮವನ್ನು ಮಾಡಿ ಕ್ರಮವಾಗಿ ಋತ್ವಿಕ್ಕುಗಳಿಗೆ ದಕ್ಷಿಣೆಯನ್ನು ಕೊಡಬೇಕು.

ಆಚಾರ್ಯಾತ್ಪಾದಮರ್ಧಂ ವಾ ಹೋತ್ರ್ಯಾಣಾಂ ಸ್ಥಪತೇರಪಿ ।
ತದರ್ಧಂ ದೇಯಮನ್ಯೇಭ್ಯಃ ಸದಸ್ಯೇಭ್ಯಶ್ಚ ಭಕ್ತಿತಃ ॥ ೨೯ ॥

ತತಃ ಶ್ವಭ್ರೇ ವೃಷಂ ಹೈಮಂ ಕೂರ್ಚಂ ವಾಪಿ ನಿವೇಶ್ಯ ಚ ।
ಮೃದಂಭಸಾ ಪಂಚಗವ್ಯೈಃ ಪುನಃ ಶುದ್ಧಜಲೇನ ಚ ॥ ೩೦ ॥

ಶೋಧಿತಾಂ ಚಂದನಾಲಿಪ್ತಾಂ ಶ್ವಭ್ರೇ ಬ್ರಹ್ಮಶಿಲಾಂ ಕ್ಷಿಪೇತ್ ।
ಕರನ್ಯಾಸಂ ತತಃ ಕೃತ್ವಾ ನವಭಿಃ ಶಕ್ತಿನಾಮಭಿಃ ॥ ೩೧ ॥

ಹರಿತಾಲಾದಿಧಾತೂಂಶ್ಚ ಬೀಜಗಂಧೌಷಧೈರಪಿ ।
ಶಿವಶಾಸ್ತ್ರೋಕ್ತವಿಧಿನಾ ಕ್ಷಿಪೇದ್ಬ್ರಹ್ಮಶಿಲೋಪರಿ ॥ ೩೨ ॥

ಪ್ರತಿಲಿಂಗಂ ತು ಸಂಸ್ಥಾಪ್ಯ ಕ್ಷೀರಂ ವೃಕ್ಷಸಮುದ್ಭವಂ ।
ಸ್ಥಿತಂ ಬುದ್ಧ್ವಾ ತದುತ್ಸೃಜ್ಯ ಲಿಂಗಂ ಬ್ರಹ್ಮಶಿಲೋಪರಿ ॥ ೩೩ ॥

---

೨೯. ಗುರುವಿಗೆ ಕೊಟ್ಟ ದಕ್ಷಿಣೆಯ ಅರ್ಧವನ್ನೋ ಕಾಲುಭಾಗವನ್ನೋ ಋತ್ವಿಕ್ಕುಗಳಿಗೆ ಕೊಡಬೇಕು. ಮಿಕ್ಕ ಸದಸ್ಯರಿಗೆ ಶಕ್ತ್ಯನುಸಾರವಾಗಿ ಋತ್ವಿಕ್ಕುಗಳಿಗೆ ಕೊಟ್ಟ ದಕ್ಷಿಣೆಯ ಅರ್ಧಭಾಗವನ್ನು ಕೊಡಬೇಕು.

೩೦. ಆಮೇಲೆ ಹಳ್ಳದಲ್ಲಿ ಚಿನ್ನದ ಬಸವನನ್ನೋ ದರ್ಭೆಯ ಕುರ್ಚಯನ್ನೋ ಇಟ್ಟು, ಮಣ್ಣಿನ ನೀರು, ಪಂಚಗವ್ಯ, ಮತ್ತೆ ಶುದ್ಧವಾದ ನೀರು ಇವುಗಳಿಂದ ಸ್ನಾನಮಾಡಿಸಿ, ಗಂಧವನ್ನು ಬಳಿದ ಬ್ರಹ್ಮಶಿಲೆಯನ್ನು ಆ ಗುಂಡಿಯಲ್ಲಿ ಹಾಕಬೇಕು.

೩೧–೩೨. ಆಮೇಲೆ ಒಂಭತ್ತು ಶಕ್ತಿದೇವತಾನಾಮಗಳಿಂದ ಕರನ್ಯಾಸವನ್ನು ಮಾಡಿ ಹರಿತಾಲವೇ ಮುಂತಾದ ಧಾತುಗಳನ್ನೂ, ಬೀಜಗಳು, ಸುಗಂಧಗಳು, ಔಷಧಗಳು ಇವುಗಳನ್ನೂ ಶಿವಾಗಮಶಾಸ್ತ್ರದಲ್ಲಿ ಹೇಳಿರುವ ಮೇರೆಗೆ ಆ ಬ್ರಹ್ಮಶಿಲೆಯಮೇಲೆ ಹಾಕಬೇಕು.

೩೩. ಆಲ ಮುಂತಾದ ಹಾಲುಬರುವಮರದ ಹಾಲನ್ನು ಲಿಂಗ ಮತ್ತು ಬ್ರಹ್ಮಶಿಲೆಯಮೇಲಕ್ಕೆ ಹಾಕಿ ಸ್ನಾನಮಾಡಿಸಿ ಪಂಚಾಕ್ಷರ ಮಂತ್ರದಿಂದ

ಪ್ರಾಗುದಕ್ಪ್ರವರಾಂ ಕಿಂಚಿತ್ಸ್ಥಾಪಯೇನ್ಮೂಲವಿದ್ಯಯಾ ।
ಪಿಂಡಿಕಾಂ ಚಾಥ ಸಂಯೋಜ್ಯ ಶಾಕ್ತಂ ಮೂಲಮನುಸ್ಮರನ್ ॥ ೩೪ ॥

ಬಂಧನಂ ಬಂಧಕದ್ರವ್ಯೈಃ ಕೃತ್ವಾ ಸ್ಥಾನಂ ವಿಶೋಧ್ಯ ಚ ।
ದತ್ವಾ ಚಾರ್ಘ್ಯಂ ಚ ಪುಷ್ಪಾಣಿ ಕುರ್ಯಾರ್ಜವನಿಕಾಂ ಪುನಃ ॥ ೩೫ ॥

ಯಥಾಯೋಗ್ಯಂ ನಿಷೇಕಾದಿ ಲಿಂಗಸ್ಯ ಪುರತಸ್ತದಾ ।
ಆನೀಯ ಶಯನಸ್ಥಾನಾತ್ಕಲಶಾನ್ವಿನ್ಯಸೇತ್ಕ್ರಮಾತ್ ॥ ೩೬ ॥

ಮಹಾಪೂಜಾಮಥಾರಭ್ಯ ಸಂಪೂಜ್ಯ ಕಲಶಾನ್ದಶ ।
ಶಿವಮಂತ್ರಮನುಸ್ಮೃತ್ಯ ಶಿವಕುಂಭಜಲಾಂತರೇ ॥ ೩೭ ॥

ಅಂಗುಷ್ಠಾನಾಮಿಕಾಯೋಗಾದಾದಾಯ ತನುಮೀರಯೇತ್ ।
ನ್ಯಸೇದೀಶಾನಭಾಗಸ್ಯ ಮಧ್ಯೇ ಲಿಂಗಸ್ಯ ಮಂತ್ರವಿತ್ ॥ ೩೮ ॥

---

ಲಿಂಗವನ್ನು ಬ್ರಹ್ಮಶಿಲೆಯಮೇಲೆ ಪೂರ್ವಕ್ಕೂ, ಉತ್ತರಕ್ಕೂ ಹೆಚ್ಚುಕಡಿಮೆ ಹೋಗದಂತೆ ಮಾಡಿ ಸ್ಥಾಪನೆಯನ್ನು ಮಾಡಬೇಕು.

೩೪-೩೫. ಆಮೇಲೆ ಶಕ್ತಿಮಂತ್ರವನ್ನು ಜಪಿಸುತ್ತಾ ಲಿಂಗಪೀಠವನ್ನು ಅದಕ್ಕೆ ಸೇರಿಸಿ ಬಂಧಕದ್ರವ್ಯಗಳಿಂದ ಅಷ್ಟಬಂಧನೆಯನ್ನು ಹಾಕಬೇಕು. ಬಳಿಕ ಪ್ರತಿಷ್ಠಾ ಸ್ಥಾನವನ್ನು ಶೋಧನೆ ಮಾಡಿ ಅರ್ಘ್ಯವನ್ನೂ ಹೂಗಳನ್ನೂ ಕೊಟ್ಟು ಮತ್ತೆ ತೆರೆಯನ್ನು ಹಾಕಬೇಕು.

೩೬. ಆಗ ಯೋಗ್ಯತೆಯನ್ನನುಸರಿಸಿ ಅಭಿಷೇಕಮಾಡಬೇಕಾದ ವಸ್ತುಗಳನ್ನೂ, ಕಲಶಗಳನ್ನೂ ಶಯನಸ್ಥಾನದಿಂದ ತಂದು ಲಿಂಗದ ಎದುರಿಗೆ ಕ್ರಮವಾಗಿಡಬೇಕು.

೩೭-೩೮. ಆಮೇಲೆ ಮಹಾಪೂಜೆಯನ್ನು ಪ್ರಾರಂಭಿಸಿ ಹತ್ತು ಕಲಶಗಳನ್ನು ಪೂಜಿಸಿ ಶಿವಪಂಚಾಕ್ಷರಮಂತ್ರದಿಂದ ಶಿವಕಲಶದ ನೀರಿನಲ್ಲಿ ಹೆಬ್ಬೆರಳನ್ನೂ, ಅನಾಮಿಕದ ಬೆರಳನ್ನೂ, ಸೇರಿಸಿ ಆ ನೀರನ್ನು ತೆಗೆದುಕೊಂಡು ಲಿಂಗದ ಈಶಾನ್ಯಭಾಗದ ನಡುವೆ ಮೂಲಮಂತ್ರದಿಂದಿಡಬೇಕು.

ಶಕ್ತಿಂ ನ್ಯಸೇತ್ತಥಾ ವಿದ್ಯಾಂ ವಿದ್ಯೇಶಾಂಶ್ಚ ಯಥಾಕ್ರಮಂ ।
ಲಿಂಗಮೂಲೇ ಶಿವಜಲೈಸ್ತತೋ ಲಿಂಗಂ ನಿಷೇಚಯೇತ್ ॥ ೩೯ ॥

ವರ್ಧನ್ಯಾಂ ಪಿಂಡಿಕಾಂ ಲಿಂಗಂ ವಿದ್ಯೇಶಕಲಶೈಃ ಪುನಃ ।
ಅಭಿಷಿಚ್ಯಾಸನಂ ಪಶ್ಚಾದಾಧಾರಾದ್ಯಂ ಪ್ರಕಲ್ಪಯೇತ್ ॥ ೪೦ ॥

ಕೃತ್ವಾ ಪಂಚಕಲಾನ್ಯಾಸಂ ದೀಪ್ತಂ ಲಿಂಗಮನುಸ್ಮರೇತ್ ।
ಆವಾಹಯೇಚ್ಛಿವೌ ಸಾಕ್ಷಾತ್ಪ್ರಾಂಜಲಿಃ ಪ್ರಾಗುದಙ್ಮುಖಃ ॥ ೪೧ ॥

ವೃಷಾಧಿರಾಜಮಾರುಹ್ಯ ವಿಮಾನಂ ವಾ ನಭಸ್ಥಲಾತ್ ।
ಅಲಂಕೃತಂ ಸಹಾಯಾಂತಂ ದೇವ್ಯಾ ದೇವಮನುಸ್ಮರನ್ ।
ಸರ್ವಾಭರಣಶೋಭಾಢ್ಯಂ ಸರ್ವಮಂಗಲನಿಃಸ್ವನೈಃ ॥ ೪೨ ॥

---

೩೯. ಹಾಗೆಯೇ ದೇವೀಮಂತ್ರ ವಿದ್ಯೆಯಿಂದ ಶಕ್ತಿಯನ್ನೂ, ಕ್ರಮವಾಗಿ ವಿದ್ಯೇಶಾದಿಗಳನ್ನೂ, ಲಿಂಗದ ಬುಡದಲ್ಲಿ ಇಡಬೇಕು. ಆಮೇಲೆ ಶುದ್ಧವಾದ ಮಂತ್ರಪೂತವಾದ ಕಲಶೋದಕಗಳಿಂದ ಲಿಂಗಕ್ಕೆ ಅಭಿಷೇಕವನ್ನು ಮಾಡಬೇಕು.

೪೦. ಧಾರಾಪಾತ್ರೆಯಿಂದ ಲಿಂಗವನ್ನೂ, ಲಿಂಗಪೀಠವನ್ನೂ ಅಭಿಷೇಕ ಮಾಡಿ ಮತ್ತೆ ವಿದ್ಯೇಶಾದಿ ಕಲಶೋದಕಗಳಿಂದ ಅಭಿಷೇಕವನ್ನು ಮಾಡಬೇಕು. ತರುವಾಯ ಆಧಾರಶಕ್ತಿಯೇ ಮುಂತಾದ ಮಂತ್ರಗಳಿಂದ ಆಸನವನ್ನು ಕಲ್ಪಿಸಬೇಕು.

೪೧. ಲಿಂಗಕ್ಕೆ ಪಂಚಕಲಾನ್ಯಾಸವನ್ನು ಮಾಡಿ ಪ್ರಕಾಶರೂಪವಾದ ಲಿಂಗವನ್ನು ಧ್ಯಾನಮಾಡುತ್ತ ಪೂರ್ವ ಅಥವಾ ಉತ್ತರದಿಕ್ಕಿಗೆ ಅಭಿಮುಖವಾಗಿ ಕೈಜೋಡಿಸಿಕೊಂಡು ಸಾಕ್ಷಾತ್ ಶಿವದಂಪತಿಗಳನ್ನು ಲಿಂಗದಲ್ಲಿ ಆವಾಹನೆಯನ್ನು ಮಾಡಬೇಕು.

೪೨-೪೩. ಆವಾಹನೆಯ ಕ್ರಮವೇನೆಂದರೆ—ಅಲಂಕಾರಮಾಡಿಕೊಂಡು ದೇವಿಯೊಡನೆ ವೃಷಭವನ್ನೋ ಅಥವಾ ವಿಮಾನವನ್ನೋ ಏರಿ ಆಕಾಶದಿಂದ ಬರುತ್ತಿರುವಂತೆ ದೇವನನ್ನು ಸ್ಮರಿಸಬೇಕು. ಆ ದೇವನು ಸಮಸ್ತ ಆಭರಣಗಳ

ಬ್ರಹ್ಮವಿಷ್ಣುಮಹೇಶಾರ್ಕಶಕ್ರಾದ್ಯೈರ್ದೇವದಾನವೈಃ ।
ಆನಂದಕ್ಲಿನ್ನಸರ್ವಾಂಗೈರ್ವಿನ್ಯಸ್ತಾಂಜಲಿಮಸ್ತಕೈಃ ॥ ೪೩ ॥

ಸ್ತುವದ್ಭಿರೇವ ನೃತ್ಯದ್ಭಿರ್ನಮದ್ಭಿರಭಿತೋ ವೃತೇ ।
ತತಃ ಪಂಚೋಪಚಾರಾಂಶ್ಚ ಕೃತ್ವಾ ಪೂಜಾಂ ಸಮಾಪಯೇತ್ ॥ ೪೪ ॥

ನಾತಃ ಪರತರಃ ಕಶ್ಚಿದ್ವಿಧಿಃ ಪಂಚೋಪಚಾರಕಾತ್ ।
ಪ್ರತಿಷ್ಠಾಂ ಲಿಂಗವತ್ಕುರ್ಯಾತ್ಪ್ರತಿಮಾಸ್ವಪಿ ಸರ್ವತಃ ॥ ೪೫ ॥

ಲಕ್ಷಣೋದ್ಧಾರಸಮಯೇ ಕಾರ್ಯಂ ನಯನಮೋಚನಂ ।
ಜಲಾಧಿವಾಸೇ ಶಯನೇ ಶಾಯಯೇತ್ತಾಸ್ತ್ವಧೋಮುಖೀಂ ॥ ೪೬ ॥

ಕುಂಭೋದಕಶಾಯಿತಾಂ ಮಂತ್ರೈರ್ಹೃದಿ ತಾಂ ಸನ್ನಿಯೋಜಯೇತ್ ।
ಕೃತಾಲಯಾಂ ಪರಾಮಾಹುಃ ಪ್ರತಿಷ್ಠಾಮಕೃತಾಲಯಾತ್ ॥ ೪೭ ॥

---

ಕಾಂತಿಯಿಂದ ಕೂಡಿ ಸಮಸ್ತ ಮಂಗಳವಾದ್ಯಗಳ ಧ್ವನಿಯೊಡನೆ, ಬ್ರಹ್ಮ, ವಿಷ್ಣು, ಮಹೇಶ್ವರ, ಸೂರ್ಯ, ದೇವೇಂದ್ರನೇ ಮೊದಲಾದ ಸಮಸ್ತ ದೇವತೆಗಳೂ, ದಾನವರೂ, ತಲೆಯಮೇಲೆ ಕೈಜೋಡಿಸಿಕೊಂಡು ಆನಂದದಿಂದುಂಟಾದ ಕಣ್ಣೀರಿನಿಂದ ಶರೀರವೆಲ್ಲ ನೆನೆಯುತ್ತಿರಲು ಕೆಲವರು ಸ್ತೋತ್ರಮಾಡುತ್ತಲೂ, ಕೆಲವರು ನೃತ್ಯಮಾಡುತ್ತಲೂ, ಕೆಲವರು ಸುತ್ತಲೂ ನೆರೆದು ಬರುತ್ತಿರುವಂತೆ ಧ್ಯಾನ ಮಾಡಬೇಕು.

೪೪. ಆಮೇಲೆ ಪಂಚೋಪಚಾರ ಪೂಜೆಯನ್ನು ಮಾಡಿ ಪೂಜಾಕಾರ್ಯವನ್ನು ಪೂರ್ಣಮಾಡಬೇಕು. ಪಂಚೋಪಚಾರ ಪೂಜೆಗಿಂತ ಉತ್ತಮವಾದ ಪೂಜಾವಿಧಿಯು ಮತ್ತೊಂದಿಲ್ಲ.

೪೫-೪೬. ಮೂರ್ತಿಪ್ರತಿಮಾದಿಗಳನ್ನೂ, ಲಿಂಗಪ್ರತಿಷ್ಠೆಯಂತೆಯೇ ಪ್ರತಿಷ್ಠೆಮಾಡಬೇಕು. ಲಕ್ಷಣೋದ್ಧಾರವನ್ನು ಮಾಡುವಾಗ ನೇತ್ರೋನ್ಮೀಲನ ಕಾರ್ಯವನ್ನು ಮಾಡಬೇಕು. ಜಲಾಧಿವಾಸ ಮತ್ತು ಶಯನಕಾಲಗಳಲ್ಲಿ ಮೂರ್ತಿಪ್ರತಿಮೆಗಳ ಮುಖವನ್ನು ಕೆಳಗೆಮಾಡಿ ಮಲಗಿಸಬೇಕು.

೪೭-೪೮. ಕುಂಭೋದಕಗಳನ್ನು ಮೂರ್ತಿಯ ಹೃದಯಪ್ರದೇಶದಲ್ಲಿ ಸ್ಪರ್ಶಮಾಡಿಸಬೇಕು. ಮೊದಲು ಆಲಯವನ್ನು ಕಟ್ಟಿಸಿ, ಅದರಲ್ಲಿ ಲಿಂಗ

**ಶಕ್ತ್ಯಾ ಕೃತಾಲಯಃ ಪಶ್ಚಾತ್ಪ್ರತಿಷ್ಠಾವಿಧಿಮಾಚರೇತ್ ।**
**ಅಶಕ್ತಶ್ಚೇತ್ಪ್ರತಿಷ್ಠಾಪ್ಯ ಲಿಂಗಂ ಬೇರಮಥಾಪಿ ವಾ ॥ ೪೮ ॥**

**ಶಕ್ತೇರನುಗಣಂ ಪಶ್ಚಾತ್ಪ್ರಕುರ್ವೀತ ಶಿವಾಲಯಂ ।**
**ಗೃಹಾರ್ಚಾಂ ಚ ಪುನರ್ವಕ್ಷ್ಯೇ ಪ್ರತಿಷ್ಠಾವಿಧಿಮುತ್ತಮಂ ॥ ೪೯ ॥**

**ಕೃತ್ವಾ ಕನೀಯಸಂ ಬೇರಂ ಲಿಂಗಂ ವಾ ಲಕ್ಷಣಾನ್ವಿತಂ ।**
**ಅಯನೇ ಚೋತ್ತರೇ ಪ್ರಾಪ್ತೇ ಶುಕ್ಲಪಕ್ಷೇ ಶುಭೇ ದಿನೇ ॥ ೫೦ ॥**

**ವೇದೀಂ ಕೃತ್ವಾ ಶುಭೇ ದೇಶೇ ತತ್ರಾಬ್ಜಂ ಪೂರ್ವವಲ್ಲಿಖೇತ್ ।**
**ವಿಕೀರ್ಯ ಪತ್ರಪುಷ್ಪಾದ್ಯೈರ್ಮಧ್ಯೇ ಕುಂಭಂ ನಿಧಾಯ ಚ ॥ ೫೧ ॥**

**ಪರಿತಸ್ತಸ್ಯ ಚತುರಃ ಕಲಶಾನ್ದಿಕ್ಷು ವಿನ್ಯಸೇತ್ ।**
**ಪಂಚ ಬ್ರಹ್ಮಾಣಿ ತದ್ಬೀಜೈಸ್ತೇಷು ಪಂಚಸು ಪಂಚಭಿಃ ॥ ೫೨ ॥**

---

ಮೂರ್ತಿಗಳನ್ನು ಪ್ರತಿಷ್ಠಿಸುವುದು ಉತ್ತಮವಾದುದು. ಶಕ್ತನಾದವನು ಇವನ್ನು ಮಾಡಬಹುದು. ಅಶಕ್ತನಾದವನು ಲಿಂಗಮೂರ್ತಿಗಳನ್ನು ಪ್ರತಿಷ್ಠೆ ಮಾಡಿದಮೇಲೆ ತನ್ನ ಶಕ್ತಿಗೆ ಅನುಸಾರವಾಗಿ ಶಿವಾಲಯವನ್ನು ನಿರ್ಮಿಸ ಬಹುದು.

೪೯–೫೦. ಇನ್ನುಮುಂದೆ ಮನೆಯಲ್ಲಿ ಮಾಡುವ ಪೂಜಾವಿಷಯದಲ್ಲಿ ಪ್ರತಿಮಾದಿಗಳ ಪ್ರತಿಷ್ಠಾವಿಧಿಯನ್ನು ಹೇಳುವೆನು. ಮನೆಯಲ್ಲಿ ಪೂಜೆಮಾಡಲು ಚಿಕ್ಕದಾಗಿರುವ ಸಲಕ್ಷಣವಾದ ಮೂರ್ತಿಯನ್ನೋ ಲಿಂಗವನ್ನೋ ಮಾಡಿಸಿ ಉತ್ತರಾಯಣದಲ್ಲಿ ಶುಕ್ಲಪಕ್ಷದ ಶುಭದಿನದಲ್ಲಿ ಶುದ್ಧಪ್ರದೇಶದಲ್ಲಿ ಜಗಲಿಯನ್ನು ಮಾಡಿಸಿ ಆ ಪ್ರದೇಶದಲ್ಲಿ ಹಿಂದೆ ಹೇಳಿದಂತೆ ಕಮಲವನ್ನು ಬರೆಯಬೇಕು.

೫೧–೫೩. ಪತ್ರ ಪುಷ್ಪಾದಿಗಳನ್ನು ಹರಡಿ ನಡುವೆ ಒಂದು ಕಲಶವನ್ನಿಟ್ಟು ಅದರ ಸುತ್ತಲೂ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಕಲಶಗಳನ್ನಿಡಬೇಕು. ಆ ಐದು ಕಲಶಗಳಲ್ಲಿ ಬೀಜಮಂತ್ರಗಳಿಂದ ಪಂಚಬ್ರಹ್ಮರನ್ನು ಆವಾಹನೆಮಾಡಿ ಪೂಜಿಸಿ ಮುದ್ರಾದಿಗಳನ್ನು ತೋರಿಸಿ ರಕ್ಷಣೆಮಾಡಿ, ಹಿಂದೆ ಹೇಳಿದಂತೆ ಮಣ್ಣಿನ

ನ್ಯಸ್ಯ ಸಂಪೂಜ್ಯ ಮುದ್ರಾದಿ ದರ್ಶಯಿತ್ವಾಭಿರಕ್ಷ್ಯ ಚ ।
ವಿಶೋಧ್ಯ ಲಿಂಗಂ ಬೇರಂ ವಾ ಮೃತ್ತೋಯಾದ್ಯೈರ್ಯಥಾ ಪುರಾ ॥ ೫೩ ॥

ಸ್ಥಾಪಯೇತ್ಪುಷ್ಪಸಂಛನ್ನಮುತ್ತರಸ್ಥೇ ವರಾಸನೇ ।
ನಿಧಾಯ ಪುಷ್ಪಂ ಶಿರಸಿ ಪ್ರೋಕ್ಷಯೇತ್ಪ್ರೋಕ್ಷಣೇಜಲೈಃ ॥ ೫೪ ॥

ಸಮಭ್ಯರ್ಚ್ಯ ಪುನಃ ಪುಷ್ಪೈರ್ಜಯಶಬ್ದಾದಿಪೂರ್ವಕಂ ।
ಕುಂಭೈರೀಶಾನವಿದ್ಯಾಂತೈಃ ಸ್ನಾಪಯೇನ್ಮೂಲವಿದ್ಯಯಾ ॥ ೫೫ ॥

ತತಃ ಪಂಚಕಲಾನ್ಯಾಸಂ ಕೃತ್ವಾ ಪೂಜಾಂ ಚ ಪೂರ್ವವತ್ ।
ನಿತ್ಯಮಾರಾಧಯೇತ್ತತ್ರ ದೇವ್ಯಾ ದೇವಂ ತ್ರಿಲೋಚನಂ ॥ ೫೬ ॥

ಏಕಮೇವಾಥವಾ ಕುಂಭಂ ಮೂರ್ತಿಮಂತ್ರಸಮನ್ವಿತಂ ।
ನ್ಯಸ್ಯ ಪದ್ಮಾಂತರೇ ಸರ್ವಂ ಶೇಷಂ ಪೂರ್ವವದಾಚರೇತ್ ॥ ೫೭ ॥

---

ನೀರು ಮೊದಲಾದುವುಗಳಿಂದ ಲಿಂಗವನ್ನೋ ಮೂರ್ತಿಯನ್ನೋ ತೊಳೆದು ಉತ್ತರದಿಕ್ಕಿನಲ್ಲಿರುವ ಶ್ರೇಷ್ಠವಾದ ಪೀಠದಮೇಲೆ ಹೂಗಳಿಂದಲಂಕರಿಸಿ ಸ್ಥಾಪಿಸಬೇಕು.

೫೪-೫೫. ಆ ದೇವಮೂರ್ತಿಯ ಅಥವಾ ಲಿಂಗದ ಶಿರಸ್ಸಿನಲ್ಲಿ ಪುಷ್ಪವನ್ನಿಟ್ಟು ಪ್ರೋಕ್ಷಣಪಾತ್ರೆಯಲ್ಲಿರುವ ನೀರಿನಿಂದ ಪ್ರೋಕ್ಷಿಸಿ ಪುನಃ ಹೂಗಳಿಂದ ಪೂಜಿಸಿ ಜಯಶಬ್ದಗಳೊಡನೆ ಈಶಾನಕಲಶವೇ ಮೊದಲಾದ ಕಲಶಗಳ ನೀರಿನಿಂದ ಪಂಚಾಕ್ಷರ ಮಂತ್ರಜಪ ಮಾಡುತ್ತಾ ಸ್ನಾನಮಾಡಿಸಬೇಕು.

೫೬. ಆಮೇಲೆ ಪಂಚಕಲಾನ್ಯಾಸವನ್ನು ಮಾಡಿ ಹಿಂದಿನಂತೆ ಪೂಜೆಯನ್ನು ಮಾಡಿ, ದೇವೀಸಹಿತನಾದ ಮೂರು ಕಣ್ಣುಗಳುಳ್ಳ ಶಿವನನ್ನು ಪ್ರತಿದಿನವೂ ಪೂಜಿಸಬೇಕು.

೫೭. ಅಥವಾ ಒಂದೇ ಕಲಶವನ್ನಿಟ್ಟು ಪಂಚಬ್ರಹ್ಮಮಂತ್ರಗಳಿಂದ ಅದನ್ನು ಅಭಿಮಂತ್ರಿಸಿ ಪದ್ಮಮಧ್ಯದಲ್ಲಿ ಮಿಕ್ಕ ಪೂಜಾದ್ರವ್ಯಗಳನ್ನಿಟ್ಟುಕೊಂಡು ಹಿಂದಿನಂತೆ ಉಳಿದ ಪೂಜೆಯನ್ನು ಮಾಡಬಹುದು.

**ಅತ್ಯಂತೋಪಹತಂ ಲಿಂಗಂ ವಿಶೋಧ್ಯ ಸ್ಥಾಪಯೇತ್ಪುನಃ ।**
**ಸಂಪ್ರೋಕ್ಷಯೇದುಪಹತಂ ಮನಾಗುಪಹತಂ ಯಜೇತ್ ॥ ೫೮ ॥**

**ಲಿಂಗಾನಿ ಬಾಣಸಂಜ್ಞಾನಿ ಸ್ಥಾಪನೀಯಾನಿ ವಾ ನ ವಾ ।**
**ತಾನಿ ಪೂರ್ವಂ ಶಿವೇನೈವ ಸಂಸ್ಕೃತಾನಿ ಯತಸ್ತತಃ ॥ ೫೯ ॥**

**ಶೇಷಾಣಿ ಸ್ಥಾಪನೀಯಾನಿ ಯಾನಿ ದೃಷ್ಟಾನಿ ಬಾಣವತ್ ।**
**ಸ್ವಯಮುದ್ಭೂತಲಿಂಗೇ ಚ ದಿವ್ಯೇ ಚಾರ್ಷೇ ತಥೈವ ಚ ॥ ೬೦ ॥**

**ಅಪೀಠೇ ಪೀಠಮಾವೇಶ್ಯ ಕೃತ್ವಾ ಸಂಪ್ರೋಕ್ಷಣಂ ವಿಧಿಂ ।**
**ಯಜೇತ್ತತ್ರ ಶಿವಂ ತೇಷಾಂ ಪ್ರತಿಷ್ಠಾ ನ ವಿಧೀಯತೇ ॥ ೬೧ ॥**

**ದಗ್ಧಂ ಶ್ಲಥಂ ಕ್ಷತಾಂಗಂ ಚ ಕ್ಷಿಪೇಲ್ಲಿಂಗಂ ಜಲಾಶಯೇ ।**
**ಸಂಧಾನಯೋಗ್ಯಂ ಸಂಧಾಯ ಪ್ರತಿಷ್ಠಾವಿಧಿಮಾಚರೇತ್ ॥ ೬೨ ॥**

---

೫೮. ಲಿಂಗದ ಅಷ್ಟಬಂಧನಗಳೆಲ್ಲ ಬಿಟ್ಟುಹೋಗಿ ಹೆಚ್ಚು ಸಡಿಲವಾಗಿದ್ದರೆ ಅದನ್ನು ಶೋಧಿಸಿ ಮತ್ತೆ ಅದನ್ನು ಸ್ಥಾಪಿಸಬೇಕು. ಸ್ವಲ್ಪಮಟ್ಟಿಗೆ ವಿಕಾರವಾಗಿದ್ದರೆ ಸಂಪ್ರೋಕ್ಷಣೆ ಎಂಬ ಕರ್ಮವನ್ನು ಮಾಡಿ ಪೂಜೆಮಾಡಬೇಕು.

೫೯. ಬಾಣಲಿಂಗವೆಂಬ ಹೆಸರಿನ ಲಿಂಗಗಳು ಹಿಂದೆಯೇ ಶಿವನಿಂದ ಸಂಸ್ಕಾರವನ್ನು ಪಡೆದುವುಗಳು. ಆದುದರಿಂದ ಅವುಗಳನ್ನು ಇಷ್ಟವಿದ್ದಲ್ಲಿ ಸ್ಥಾಪಿಸಬಹುದು. ಇಲ್ಲದಿದ್ದಲ್ಲಿ ಹಾಗೆಯೇ ಪೂಜಿಸಬಹುದು.

೬೦-೬೧. ಬಾಣಲಿಂಗದಂತೆ ಕಾಣುವ ಮಿಕ್ಕಲಿಂಗಗಳನ್ನು ಸ್ಥಾಪಿಸಬೇಕು. ಸ್ವಯಂ ಉದ್ಭವವಾದ ಲಿಂಗದಲ್ಲಿಯೂ, ದೇವತೆಗಳೂ ಋಷಿಗಳೂ ಪೂಜಿಸಿದ ಲಿಂಗಗಳಲ್ಲಿಯೂ, ಪೀಠವಿಲ್ಲದುವುಗಳಿಗೆ ಪೀಠವನ್ನು ಜೋಡಿಸಿ ಸಂಪ್ರೋಕ್ಷಣೆಯನ್ನು ಮಾಡಿ ಅದರಲ್ಲಿ ಶಿವನನ್ನು ಪೂಜಿಸಬೇಕು. ಅವುಗಳನ್ನು ಪ್ರತಿಷ್ಠೆಮಾಡಬೇಕಾದುದಿಲ್ಲ.

೬೨. ಸುಟ್ಟುಹೋದ ಲಿಂಗಗಳು, ಅವಯವಗಳು ಕಳಚಿಹೋದ ಲಿಂಗಗಳು, ಅಂಗಗಳು ಮುರಿದ ಲಿಂಗಗಳು ಇವುಗಳನ್ನು ಕೆರೆ, ಕೊಳ, ನದಿ ಮುಂತಾ

**ಬೇರಾದ್ವಾ ವಿಕಲಾಲ್ಲಿಂಗಾದ್ದೇವಪೂಜಾಪುರಸ್ಸರಂ ।**
**ಉದ್ವಾಸ್ಯ ಹೃದಿ ಸಂಧಾನಂ ತ್ಯಾಗಂ ವಾ ಯುಕ್ತಮಾಚರೇತ್ ॥ ೬೩ ॥**

**ಏಕಾಹಪೂಜಾವಿಹತೌ ಕುರ್ಯಾದ್ದ್ವಿಗುಣಮರ್ಚನಂ ।**
**ದ್ವಿರಾತ್ರೇ ಚ ಮಹಾಪೂಜಾಂ ಸಂಪ್ರೋಕ್ಷಣಮತಃ ಪರಂ ॥ ೬೪ ॥**

**ಮಾಸಾದೂರ್ಧ್ವಮನೇಕಾಹಂ ಪೂಜಾ ಯದಿ ವಿಹನ್ಯತೇ ।**
**ಪ್ರತಿಷ್ಠಾ ಪ್ರೋಚ್ಯತೇ ಕೈಶ್ಚಿತ್ಕೈಶ್ಚಿತ್ಸಂಪ್ರೋಕ್ಷಣಕ್ರಮಃ ॥ ೬೫ ॥**

**ಸಂಪ್ರೋಕ್ಷಣೇ ತು ಲಿಂಗಾದೇರ್ದೇವಮುದ್ವಾಸ್ಯ ಪೂರ್ವವತ್ ।**
**ಅಷ್ಟಪಂಚಕ್ರಮೇಣೈವ ಸ್ನಾಪಯಿತ್ವಾ ಮೃದಂಭಸಾ ॥ ೬೬ ॥**

ಮಡುವುಗಳಲ್ಲಿ ಹಾಕಿಬಿಡಬೇಕು. ಅವಯುವಗಳನ್ನು ಜೋಡಿಸುವುದಕ್ಕೆ ಅನುಕೂಲವಾದುವುಗಳನ್ನು ಜೋಡಿಸಿ ಪ್ರತಿಷ್ಠೆಯನ್ನು ಮಾಡಬೇಕು.

೬೩. ಮೂರ್ತಿಯಾಗಲಿ, ಲಿಂಗವಾಗಲಿ ಭಿನ್ನವಾದರೆ ದೇವಪೂಜೆಯನ್ನು ಮಾಡಿ ಆ ಲಿಂಗಮೂರ್ತಿಗಳಿಂದ ದೇವನನ್ನು ಉದ್ವಾಸನೆಮಾಡಿ ಬಳಿಕ ಸಂಧಾನವನ್ನೋ ತ್ಯಾಗವನ್ನೋ ಯಾವುದು ಯುಕ್ತವೋ ಅದನ್ನು ಮಾಡಬಹುದು.

೬೪. ಲಿಂಗಮೂರ್ತಿಗಳಿಗೆ ಒಂದುದಿನ ಪೂಜೆಯನ್ನು ಮಾಡದೆ ಬಿಟ್ಟರೆ ಮಾರನೆಯದಿನ ಎರಡರಷ್ಟು ಪೂಜೆಯನ್ನು ಮಾಡಬೇಕು. ಎರಡುದಿನ ಬಿಟ್ಟರೆ ಮಹಾಪೂಜೆಯನ್ನು ಮಾಡಬೇಕು. ಹೆಚ್ಚುದಿನಗಳು ಬಿಟ್ಟರೆ ಸಂಪ್ರೋಕ್ಷಣೆಯನ್ನು ಮಾಡಬೇಕು.

೬೫. ಒಂದು ತಿಂಗಳಿಗಿಂತ ಹೆಚ್ಚುದಿನಗಳು ಪೂಜೆಯಿಲ್ಲದಿದ್ದರೆ ಲಿಂಗಗಳಿಗೆ ಕೆಲವರು ಪ್ರತಿಷ್ಠೆಮಾಡಿ ಪೂಜಿಸಬೇಕೆನ್ನುವರು. ಮತ್ತೆ ಕೆಲವರು ಸಂಪ್ರೋಕ್ಷಣೆಯ ಕ್ರಮವನ್ನೇ ಹೇಳುವರು.

೬೬-೬೭. ಲಿಂಗಾದಿಗಳಿಗೆ ಸಂಪ್ರೋಕ್ಷಣೆಯನ್ನು ಮಾಡಬೇಕಾದರೆ ಹಿಂದಿನಂತೆ ದೇವನನ್ನು ಉದ್ವಾಸನೆ ಮಾಡಿ ಎಂಟು ಅಥವಾ ಐದಾವೃತ್ತಿ ಮಣ್ಣುಗಳ ನೀರಿನಿಂದ ಸ್ನಾನವನ್ನು ಮಾಡಿಸಿ, ಪಂಚಗವ್ಯಗಳಿಂದ ಸ್ನಾನ

ಗವಾಂ ರಸೈಶ್ಚ ಸಂಸ್ನಾಪ್ಯ ದರ್ಭತೋಯೈರ್ವಿಶೋಧ್ಯ ಚ ।
ಪ್ರೋಕ್ಷಯೇತ್ಪ್ರೋಕ್ಷಣೀತೋಯೈರ್ಮೂಲೇನಾಷ್ಟೋತ್ತರಂ ಶತಂ ॥ ೬೭ ॥

ಸಪುಷ್ಪಂ ಸಕುಶಂ ಪಾಣಿಂ ನ್ಯಸ್ಯ ಲಿಂಗಸ್ಯ ಮಸ್ತಕೇ ।
ಪಂಚವಾರಂ ಜಪೇನ್ಮೂಲಮಷ್ಟೋತ್ತರಶತಂ ತತಃ ॥ ೬೮ ॥

ತತೋ ಮೂಲೇನ ಮೂರ್ಧಾದಿಪೀಠಾಂತಂ ಸಂಸ್ಪೃಶೇದಪಿ ।
ಪೂಜಾಂ ಚ ಮಹತೀಂ ಕುರ್ಯಾದ್ದೇವಮಾವಾಹ್ಯ ಪೂರ್ವವತ್ ॥ ೬೯ ॥

ಅಲಬ್ಧೇ ಸ್ಥಾಪಿತೇ ಲಿಂಗೇ ಶಿವಸ್ಥಾನೇ ಜಲೇಽಥ ವಾ ।
ವಹ್ನೌ ರವೌ ತಥಾ ವ್ಯೋಮ್ನಿ ಭಗವಂತಂ ಶಿವಂ ಯಜೇತ್ ॥ ೭೦ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-
ಮುತ್ತರಭಾಗೇ ಪ್ರತಿಷ್ಠಾವಿಧಿವರ್ಣನಂ ನಾಮ
ಷಟ್ತ್ರಿಂಶೋಽಧ್ಯಾಯಃ

---

ಮಾಡಿಸಿ, ದರ್ಭೆಯ ನೀರಿನಿಂದ ಶುದ್ಧಿಮಾಡಿ ಪ್ರೋಕ್ಷಣಪಾತ್ರೆಯಲ್ಲಿರುವ ನೀರಿನಿಂದ ಪಂಚಾಕ್ಷರಮೂಲಮಂತ್ರಜಪವನ್ನು ನೂರೆಂಟುಬಾರಿ ಮಾಡುತ್ತ ನೂರೆಂಟುಬಾರಿ ಪ್ರೋಕ್ಷಿಸಬೇಕು.

೬೮. ಲಿಂಗದ ಶಿರಸ್ಸಿನಲ್ಲಿ ಹೂ ಮತ್ತು ದರ್ಭೆಗಳಿಂದ ಕೂಡಿದ ಕೈಯನ್ನಿಟ್ಟು ಪಂಚಾಕ್ಷರಮಂತ್ರವನ್ನು ಐದಾವರ್ತಿ ಜಪಿಸಿ, ಬಳಿಕ ನೂರೆಂಟು ಜಪವನ್ನು ಮಾಡಬೇಕು.

೬೯. ಆ ಬಳಿಕ ಶಿರಸ್ಸಿನಿಂದ ಪೀಠಾಂತವಾಗಿ ಮೂಲಮಂತ್ರೋಚ್ಚಾರಣೆಯನ್ನು ಮಾಡುತ್ತ ಸ್ಪರ್ಶಮಾಡಿ ಹಿಂದಿನಂತೆ ದೇವನನ್ನು ಆವಾಹನೆ ಮಾಡಿ ಮಹಾಪೂಜೆಯನ್ನು ಮಾಡಬೇಕು.

೭೦. ಪ್ರತಿಷ್ಠೆಮಾಡಿದ ಲಿಂಗವು ದೊರೆಯದಿದ್ದರೆ, ಶಿವಕ್ಷೇತ್ರಗಳಲ್ಲಿಯಾಗಲಿ, ನೀರಿನಲ್ಲಿಯಾಗಲಿ ಅಗ್ನಿ, ಸೂರ್ಯ, ಆಕಾಶ ಇವುಗಳಲ್ಲಿಯಾಗಲಿ ಮಹಾಮಹಿಮನಾದ ಶಿವನನ್ನು ಪೂಜಿಸಬೇಕು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯವೀಯಸಂಹಿತೆಯ ಉತ್ತರ
ಭಾಗದಲ್ಲಿ ಪ್ರತಿಷ್ಠಾವಿಧಿವರ್ಣನವೆಂಬ ಮೂವತ್ತಾರನೆಯ
ಅಧ್ಯಾಯವು ಮುಗಿದುದು.

ಶ್ರೀಃ

॥ ಓಂ. ನಮಃ ಶಿವಾಯ ॥

---

# ಅಥ ಶ್ರೀ ಶಿವ ಮಹಾ ಪುರಾಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ಸಪ್ತತ್ರಿಂಶೋಽಧ್ಯಾಯಃ



॥ ಶ್ರೀ ಕೃಷ್ಣ ಉವಾಚ ॥

**ಜ್ಞಾನೇ ಕ್ರಿಯಾಯಾಂ ಚರ್ಯಾಯಾಂ ಸಾರಮುದ್ಧೃತ್ಯ ಸಂಗ್ರಹಾತ್ ।**
**ಉಕ್ತಂ ಭಗವತಾ ಸರ್ವಂ ಶ್ರುತಂ ಶ್ರುತಿಸಮಂ ಮಯಾ ॥ ೧ ॥**

**ಇದಾನೀಂ ಶ್ರೋತುಮಿಚ್ಛಾಮಿ ಯೋಗಂ ಪರಮದುರ್ಲಭಂ ।**
**ಸಾಧಿಕಾರಂ ಚ ಸಾಂಗಂ ಚ ಸವಿಧಂ ಸಪ್ರಯೋಜನಂ ॥ ೨ ॥**

---

### ಮೂವತ್ತೇಳನೆಯ ಅಧ್ಯಾಯವು

೧-೨. ಶ್ರೀ ಕೃಷ್ಣನು ಕೇಳಿದನು:—ಜ್ಞಾನಕ್ರಿಯಾಚರ್ಯಗಳ ಸಾರವನ್ನು ತೆಗೆದು ಸಂಗ್ರಹವಾಗಿ ವೇದಸಮ್ಮತವಾದ ಸಮಸ್ತಧರ್ಮಗಳನ್ನೂ ನಿನ್ನ ಮುಖದಿಂದ ಕೇಳಿದೆನು. ಇನ್ನು ಮುಂದೆ ದುರ್ಲಭವಾದ ಯೋಗಶಾಸ್ತ್ರವನ್ನು ಅಂಗಸಹಿತವಾಗಿಯೂ, ಅಧಿಕಾರಿ, ವಿಧಿ, ಪ್ರಯೋಜನ ಇವುಗಳಿಂದ ಸಹಿತವಾಗಿ ವಿಸ್ತಾರವಾಗಿ ಕೇಳಬೇಕೆಂದು ಅಪೇಕ್ಷಿಸುವೆನು.

**ಯದ್ಯಸ್ತಿ ಮರಣಂ ಪೂರ್ವಂ ಯೋಗಾದ್ಯನುಪಮರ್ದತಃ ।**
**ಸದ್ಯಃ ಸಾಧಯಿತುಂ ಶಕ್ಯಂ ಯೇನ ಸ್ಯಾನ್ನಾತ್ಮಹಾ ನರಃ ॥ ೩ ॥**

**ತಚ್ಚ ತತ್ಕಾರಣಂ ಚೈವ ತತ್ಕಾಲಕರಣಾನಿ ಚ ।**
**ತದ್ಭೇದತಾರತಮ್ಯಂ ಚ ವಕ್ತುಮರ್ಹಸಿ ತತ್ತ್ವತಃ ॥ ೪ ॥**

**॥ ಉಪಮನ್ಯುರುವಾಚ ॥**

**ಸ್ಥಾನೇ ಪೃಷ್ಟಂ ತ್ವಯಾ ಕೃಷ್ಣ ಸರ್ವಪ್ರಶ್ನಾರ್ಥವೇದಿನಾ ।**
**ತತಃ ಕ್ರಮೇಣ ತತ್ಸರ್ವಂ ವಕ್ಷ್ಯೇ ಶೃಣು ಸಮಾಹಿತಃ ॥ ೫ ॥**

**ನಿರುದ್ಧವೃತ್ತ್ಯಂತರಸ್ಯ ಶಿವೇ ಚಿತ್ತಸ್ಯ ನಿಶ್ಚಲಾ ।**
**ಯಾ ವೃತ್ತಿಃ ಸಾ ಸಮಾಸೇನ ಯೋಗಃ ಸ ಖಲು ಪಂಚಧಾ ॥ ೬ ॥**

---

೩-೪. ಯೋಗಾದಿಗಳ ಅಭ್ಯಾಸವಿಲ್ಲದೆ ಮುಂಚಿತವಾಗಿಯೇ ಮನುಜನಿಗ ಮರಣವು ಪ್ರಾಪ್ತವಾದರೆ ಅವನಿಗೆ ಆತ್ಮಸ್ವರೂಪಹಾನಿಯಾಗದಂತೆ ಆ ಕಾಲದಲ್ಲಿ ಸಾಧನಮಾಡಿ ಫಲಹೊಂದಲು ಬೇಕಾದುದನ್ನೂ, ಅದಕ್ಕೆ ಅವಶ್ಯಕವಾದ ಕಾರಣವನ್ನೂ, ಆ ಕಾಲದಲ್ಲಿ ಮಾಡಬೇಕಾದುವನ್ನೂ, ಆ ಯೋಗಭೇದಗಳನ್ನೂ, ಅವುಗಳೊಂದೊಂದಕ್ಕೆ ಇರುವ ತಾರತಮ್ಯಗಳನ್ನೂ ನನಗೆ ಹೇಳು, ಎಂದನು.

೫. ಉಪಮನ್ಯುವು ಹೇಳಿದನು:—ಎಲೈ ಕೃಷ್ಣನೇ, ನೀನು ಕೇಳಿದ ಪ್ರಶ್ನೆಯು ಸಮಸ್ತ ಪ್ರಶ್ನಾಭಿಪ್ರಾಯಗಳನ್ನೂ ತಿಳಿದ ನಿನಗೆ ಯುಕ್ತವಾದುದಾಗಿರುವುದು. ಕ್ರಮವಾಗಿ ಎಲ್ಲ ಪ್ರಶ್ನೆಗಳಿಗೂ ಉತ್ತರವನ್ನು ಹೇಳುವೆನು, ಮನಸ್ಸಿಟ್ಟು ಕೇಳು.

೬. ಮನುಷ್ಯನು ತನ್ನ ಮನಸ್ಸಿನಲ್ಲಿ ಬೇರೆ ವೃತ್ತಿಗಳನ್ನೆಲ್ಲ ತಡೆದು ಶಿವನಲ್ಲಿ ಮನಸ್ಸನ್ನು ನೆಲೆಗೊಳಿಸಿ ಆ ಶಿವಸ್ವರೂಪವೃತ್ತಿಯೊಂದು ಮಾತ್ರ ಸ್ಥಿರವಾಗಿ ಇದ್ದರೆ ಅದೇ ಯೋಗವೆನಿಸುವುದು. ಅದು ಐದು ವಿಧವಾಗಿರುವುದು.

**ಮಂತ್ರಯೋಗಃ ಸ್ಪರ್ಶಯೋಗೋ ಭಾವಯೋಗಸ್ತಥಾಪರಃ**
**ಅಭಾವಯೋಗಃ ಸರ್ವೇಭ್ಯೋ ಮಹಾಯೋಗಃ ಪರೋ ಮತಃ ॥ ೭ ॥**

**ಮಂತ್ರಾಭ್ಯಾಸವಶೇನೈವ ಮಂತ್ರವಾಚ್ಯಾರ್ಥಗೋಚರಃ ।**
**ಅವ್ಯಾಕ್ಷೇಪಾ ಮನೋವೃತ್ತಿರ್ಮಂತ್ರಯೋಗ ಉದಾಹೃತಃ ॥ ೮ ॥**

**ಪ್ರಾಣಾಯಮಮುಖಾ ಸೈವ ಸ್ಪರ್ಶಯೋಗೋಽಭಿಧೀಯತೇ ।**
**ಸ ಮಂತ್ರಸ್ಪರ್ಶನಿರ್ಮುಕ್ತೋ ಭಾವಯೋಗಃ ಪ್ರಕೀರ್ತಿತಃ ॥ ೯ ॥**

**ವಿಲೀನಾವಯವಂ ವಿಶ್ವಂ ರೂಪಂ ಸಂಭಾವ್ಯತೇ ಯತಃ ।**
**ಅಭಾವಯೋಗಃ ಸಂಪ್ರೋಕ್ತೋಽನಾಭಾಸಾದ್ವಸ್ತುನಃ ಸತಃ ॥ ೧೦ ॥**

**ಶಿವಸ್ವಭಾವ ಏವೈಕಶ್ಚಿಂತ್ಯತೇ ನಿರುಪಾಧಿಕಃ ।**
**ಯಥಾ ಶೈವಮನೋವೃತ್ತಿರ್ಮಹಾಯೋಗ ಇಹೋಚ್ಯತೇ ॥ ೧೧ ॥**

೭. ಮಂತ್ರಯೋಗ, ಸ್ಪರ್ಶಯೋಗ, ಭಾವಯೋಗ, ಅಭಾವಯೋಗ, ಮಹಾಯೋಗ, ಎಂದು ಐದು ಯೋಗಗಳು.

೮. ಮಂತ್ರವನ್ನು ಅನೇಕಬಾರಿ ಉಚ್ಚರಿಸುವುದರಿಂದ ಮಂತ್ರಾರ್ಥಕ್ಕೆ ವಿರುದ್ಧವಲ್ಲದ ಮನೋವೃತ್ತಿಯಿಂದ ಕೂಡಿರುವುದು ಮಂತ್ರಯೋಗವೆನಿಸುವುದು

೯. ಮಂತ್ರಯೋಗವು ಪ್ರಾಣಾಯಾಮದಿಂದ ಕೂಡಿದರೆ ಸ್ಪರ್ಶಯೋಗ ವಾಗುವುದು.

೧೦. ಮಂತ್ರಸ್ಪರ್ಶಯೋಗವನ್ನು ಬಿಟ್ಟು ಪರಮಾತ್ಮನಲ್ಲಿ ಅವಯವ ಗಳೊಡನೆ ವಿಲೀನವಾಗಿರುವ ಪ್ರಪಂಚವನ್ನು ರೂಪಗಳಿಂದ ಕೂಡಿಮದಾಗಿ ಭಾವಿಸುವುದು ಭಾವಯೋಗವು.

೧೧. ಸದ್ವಸ್ತುವು ಭಾವಿಸದೆ ಇರುವುದೇ ಅಭಾವಯೋಗವು. ಯಾವ ಗುಣಗಳೂ ತೋರದೆ ಶಿವಸ್ವರೂಪವೊಂದೇ ಮನಸ್ಸಿಗೆ ತೋರುತ್ತ ಶಿವಸಂಬಂಧ ವಾದ ಮನೋವ್ಯಕ್ತಿಯೇ ಇರುತ್ತಿದ್ದರೆ ಅದು ಮಹಾಯೋಗವೆಸಿಸುವುದು.

ದೃಷ್ಟೇ ತಥಾನುಶ್ರವಿಕೇ ವಿರಕ್ತಂ ವಿಷಯೇ ಮನಃ ।
ಯಸ್ಯ ತಸ್ಯಾಧಿಕಾರೋಽಸ್ತಿ ಯೋಗೇ ನಾನ್ಯಸ್ಯ ಕಸ್ಯಚಿತ್ ॥ ೧೨ ॥

ವಿಷಯದ್ವಯದೋಷಾಣಾಂ ಗುಣಾನಾಮೀಶ್ವರಸ್ಯ ಚ ।
ದರ್ಶನಾದೇವ ಸತತಂ ವಿರಕ್ತಂ ಜಾಯತೇ ಮನಃ । ॥ ೧೩ ॥

ಅಷ್ಟಾಂಗೋ ವಾ ಷಡಂಗೋ ವಾ ಸರ್ವಯೋಗಃ ಸಮಾಸತಃ ।
ಯಮಶ್ಚ ನಿಯಮಶ್ಚೈವ ಸ್ವಸ್ತಿಕಾದ್ಯಂ ತಥಾಸನಂ । ॥ ೧೪ ॥

ಪ್ರಾಣಾಯಾಮಃ ಪ್ರತ್ಯಾಹಾರೋ ಧಾರಣಾ ಧ್ಯಾನಮೇವ ಚ ।
ಸಮಾಧಿರಿತಿ ಯೋಗಾಂಗಾನ್ಯಷ್ಟಾವುಕ್ತಾನಿ ಸೂರಿಭಿಃ ॥ ೧೫ ॥

ಆಸನಂ ಪ್ರಾಣಸಂರೋಧಃ ಪ್ರತ್ಯಾಹಾರೋಽಥ ಧಾರಣಾ ।
ಧ್ಯಾನಂ ಸಮಾಧಿರ್ಯೋಗಸ್ಯ ಷಡಂಗಾನಿ ಸಮಾಸತಃ ॥ ೧೬ ॥

ಪೃಥಗ್ಲಕ್ಷಣಮೇತೇಷಾಂ ಶಿವಶಾಸ್ತ್ರೇ ಸಮೀರಿತಂ ।
ಶಿವಾಗಮೇಷು ಚಾನ್ಯೇಷು ವಿಶೇಷಾತ್ಕಾಮಿಕಾದಿಷು ॥ ೧೭ ॥

---

೧೨. ನೋಡಿದ ಮತ್ತು ಕೇಳಿದ ವಸ್ತುಗಳ ವಿಷಯದಲ್ಲಿ ಯಾವನ ಮನಸ್ಸು, ವೈರಾಗ್ಯವುಳ್ಳದಾಗುವುದೋ ಅವನಿಗೆ ಯೋಗಾಭ್ಯಾಸದಲ್ಲಿ ಅಧಿಕಾರ ವಿರುವುದು. ಮತ್ತೊಬ್ಬರಿಗೆ ಇಲ್ಲ.

೧೩. ನೋಡಿದ ಮತ್ತು ಕೇಳಿದ ಎರಡು ವಸ್ತುರೂಪವಿಷಯಗಳ ದೋಷಗಳನ್ನೂ ಈಶ್ವರಗುಣಗಳನ್ನೂ, ಯಾವಾಗಲೂ ನೋಡುತ್ತಿರುವುದರಿಂದ ಮನಸ್ಸು ವೈರಾಗ್ಯವನ್ನು ಪಡೆವುದು.

೧೪-೧೬. ಎಲ್ಲಾ ಯೋಗಗಳೂ, ಅಷ್ಟಾಂಗ ಅಥವಾ ಷಡಂಗಗಳಲ್ಲಿ ಸೇರಿಕೊಂಡಿರುವುವು. ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ, ಸಮಾಧಿ ಎಂಬಿವು ಎಂಟಂಗಗಳು. ಯಮನಿಯಮಗಳನ್ನು ಬಿಟ್ಟ ಮಿಕ್ಕ ಆರು ಷಡಂಗಯೋಗಗಳು.

೧೭. ಇವುಗಳಿಗೆಲ್ಲ ಬೇರೆಬೇರೆ ಲಕ್ಷಣಗಳನ್ನು ಶಿವಶಾಸ್ತ್ರ, ಶಿವಾಗಮ, ಕಾಮಿಕಾದಿತಂತ್ರಶಾಸ್ತ್ರ, ಯೋಗಶಾಸ್ತ್ರ ಕೆಲವು ಪುರಾಣಗಳು ಇವುಗಳಲ್ಲಿ ಹೇಳಿರುವುದು.

ಯೋಗಶಾಸ್ತ್ರೇಷ್ವಪಿ ತಥಾ ಪುರಾಣೇಷ್ವಪಿ ಕೇಷು ಚ ।
ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಾಽಪರಿಗ್ರಹಃ ।
ಯಮ ಇತ್ಯುಚ್ಯತೇ ಸದ್ಭಿಃ ಪಂಚಾವಯವಯೋಗತಃ ॥ ೧೮ ॥

ಶೌಚಂ ತುಷ್ಟಿಸ್ತಪಶ್ಚೈವ ಜಪಃ ಪ್ರಣಿಧಿರೇವ ಚ ।
ಇತಿ ಪಂಚಪ್ರಭೇದಸ್ಸ್ಯಾನ್ನಿಯಮಃ ಸ್ವಾಂಶಭೇದತಃ ॥ ೧೯ ॥

ಸ್ವಸ್ತಿಕಂ ಪದ್ಮಮರ್ಧೇಂದುಂ ವೀರಂ ಯೋಗಂ ಪ್ರಸಾಧಿತಂ ।
ಪರ್ಯಂಕಂ ಚ ಯಥೇಷ್ಟಂ ಚ ಪ್ರೋಕ್ತಮಾಸನಮಷ್ಟಧಾ ॥ ೨೦ ॥

ಪ್ರಾಣಃ ಸ್ವದೇಹಜೋ ವಾಯುಸ್ತಸ್ಯಾಯಾಮೋ ನಿರೋಧನಂ ।
ತದ್ರೇಚಕಂ ಪೂರಕಂ ಚ ಕುಂಭಕಂ ಚ ತ್ರಿಧೋಚ್ಯತೇ ॥ ೨೧ ॥

ನಾಸಿಕಾಪುಟಮಂಗುಲ್ಯಾ ಪೀಡ್ಯೈಕಮಪರೇಣ ತು ।
ಔದರಂ ರೇಚಯೇದ್ವಾಯುಂ ತಥಾಯಂ ರೇಚಕಃ ಸ್ಮೃತಃ ॥ ೨೨ ॥

---

೧೮. ಪ್ರಾಣಹಿಂಸೆ ಮಾಡದಿರುವುದು. ನಿಜವನ್ನು ಹೇಳುವುದು. ಕಳ್ಳತನಮಾಡದಿರುವುದು. ಸ್ತ್ರೀಸಂಗವಿಲ್ಲದಿರುವುದು. ದಾನಗಳನ್ನು ಗ್ರಹಿಸದಿರುವುದು. ಈ ಐದೂ ಯಮವೆನಿಸುವುವು.

೧೯. ಶುಚಿತ್ವ, ತುಷ್ಟಿ, ತಪಸ್ಸು, ಜಪ, ಏಕಾಗ್ರಚಿತ್ತತೆ ಈ ಐದೂ ನಿಯಮಗಳೆನಿಸುವುವು.

೨೦. ಸ್ವಸ್ತಿಕ, ಪದ್ಮ, ಮರ್ಧೇಂದು, ವೀರ, ಯೋಗ, ಪ್ರಸಾಧಿತ ಪರ್ಯಂಕ, ಯಥೇಷ್ಟ ಎಂದು ಎಂಟು ವಿಧವಾದ ಆಸನಗಳು.

೨೧. ತನ್ನ ದೇಹದಲ್ಲಿರುವ ಗಾಳಿಯನ್ನೇ ಪ್ರಾಣವೆಂದು ಕರೆವರು. ಆ ಗಾಳಿಯನ್ನು ಗೊತ್ತಾದ ಸ್ಥಳದಲ್ಲಿ ತಡೆದು ನಿಲ್ಲಿಸುವುದೇ ಪ್ರಾಣಾಯಾಮವೆನಿಸುವುದು. ಅದು ರೇಚಕ, ಪೂರಕ, ಕುಂಭಕವೆಂದು ಮೂರು ಬಗೆಯಾಗಿರುವುದು.

೨೨-೨೪. ಒಂದು ಮೂಗಿನ ರಂಧ್ರವನ್ನು ಬೆರಳಿನಿಂದ ಮುಚ್ಚಿ ಮತ್ತೊಂದು ರಂಧ್ರದಿಂದ ಶರೀರದೊಳಗಿನ ಗಾಳಿಯನ್ನು ಹೊರಕ್ಕೆ ಬಿಟ್ಟರೆ

**ಬಾಹ್ಯೇನ ಮರುತಾ ದೇಹಂ ದೃತಿವತ್ಪರಿಪೂರಯೇತ್ ।**
**ನಾಸಾಪುಟೇನಾಪರೇಣ ಪೂರಣಾತ್ಪೂರಕಂ ಮತಂ ॥ ೨೩ ॥**

**ನ ಮುಂಚತಿ ನ ಗೃಹ್ಣಾತಿ ವಾಯುಮಂತರ್ಬಹಿಃ ಸ್ಥಿತಂ ।**
**ಸಂಪೂರ್ಣಂ ಕುಂಭವತ್ತಿಷ್ಠೇದಚಲಃ ಸ ತು ಕುಂಭಕಃ ॥ ೨೪ ॥**

**ರೇಚಕಾದ್ಯಂ ತ್ರಯಮಿದಂ ನ ದ್ರುತಂ ನ ವಿಲಂಬಿತಂ ।**
**ತದ್ಯತಃ ಕ್ರಮಯೋಗೇನ ತ್ವಭ್ಯಸೇದ್ಯೋಗಸಾಧಕಃ ॥ ೨೫ ॥**

**ರೇಚಕಾದಿಷು ಯೋಽಭ್ಯಾಸೋ ನಾಡೀಶೋಧನಪೂರ್ವಕಃ ।**
**ಸ್ವೇಚ್ಛೋತ್ಕ್ರಮಣಪರ್ಯಂತಃ ಪ್ರೋಕ್ತೋ ಯೋಗಾನುಶಾಸನೇ ॥ ೨೬ ॥**

**ಕನ್ಯಕಾದಿಕ್ರಮವಶಾತ್ಪ್ರಾಣಾಯಾಮನಿರೋಧನಂ ।**
**ತಚ್ಚತುರ್ಧೋಪದಿಷ್ಟಂ ಸ್ಯಾನ್ಮಾತ್ರಾಗುಣವಿಭಾಗತಃ ॥ ೨೭ ॥**

---

ಅದು ರೇಚಕವೆನಿಸುವುದು. ಹಾಗೆಯೇ ಹೊರಗಿನ ಗಾಳಿಯನ್ನು ಮತ್ತೊಂದು ಮೂಗಿನ ರಂಧ್ರದಿಂದ ತಿದಿಗೆ ಗಾಳಿಯನ್ನು ತುಂಬುವಂತೆ ದೇಹದೊಳಕ್ಕೆ ತುಂಬಿದರೆ ಅದು ಪೂರಕವೆನಿಸುವುದು. ಗಾಳಿಯನ್ನು ಹೊರಗಡೆಗೆ ಬಿಡದೆಯೂ, ಒಳಗಡೆಗೆ ತುಂಬದೆಯೂ, ನೀರಿನಿಂದ ತುಂಬಿದ ಕುಂಭದಂತೆ ಗಾಳಿಯು ಚಲಿಸದಂತೆ ಶರೀರದೊಳಗೆ ತುಂಬಿಕೊಂಡಿರುವುದು ಕುಂಭಕವೆನಿಸುವುದು.

೨೫-೨೬. ರೇಚಕಾದಿ ಮೂರು ಪ್ರಾಣಾಯಾಮಗಳನ್ನು ಅತಿ ವೇಗವಾಗಿಯೂ, ಅತಿ ನಿಧಾನವಾಗಿಯೂ ಮಾಡದೆ ಒಂದು ಗೊತ್ತಾದ ಕ್ರಮದಿಂದ ಸಾಧಕನಾದವನು ಅಭ್ಯಾಸಮಾಡಬೇಕು. ರೇಚಕಾದಿ ಪ್ರಾಣಾಯಾಮಾಭ್ಯಾಸವನ್ನು ನಾಡೀಶುದ್ಧಿಮೊದಲುಗೊಂಡು ಇಚ್ಛಾಮರಣಪರ್ಯಂತವಾಗಿ ಯೋಗಶಾಸ್ತ್ರದಲ್ಲಿ ಹೇಳಿರುವುದು.

೨೭-೨೯. ಪ್ರಾಣಾಯಾಮವು ಮಾತ್ರಾಕಾಲವನ್ನನುಸರಿಸಿ ನಾಲ್ಕು ಬಗೆಯಾಗಿರುವುದು. ಹನ್ನೆರಡುಮಾತ್ರಾಕಾಲದವರೆಗೆ ಪ್ರಾಣಾಯಾಮವು ಕನ್ಯಕವೆನಿಸುವುದು. ಇಪ್ಪತ್ತನಾಲ್ಕು ಮಾತ್ರೆಗಳವರೆಗೆ ಮಧ್ಯಮವೆನಿಸುವುದು. ಮೂವತ್ತಾರು ಮಾತ್ರಾಕಾಲದವರೆಗೆ ಉತ್ತಮವೆನಿಸುವುದು. ಶರೀರದಲ್ಲಿ

ಕನ್ಯಕಸ್ತು ಚತುರ್ಧಾ ಸ್ಯಾತ್ಸ ಚ ದ್ವಾದಶಮಾತ್ರಕಃ ।
ಮಧ್ಯಮಸ್ತು ದ್ವಿರುದ್ಘಾತಶ್ಚತುರ್ವಿಂಶತಿಮಾತ್ರಕಃ ॥ ೨೮ ॥

ಉತ್ತಮಸ್ತು ತ್ರಿರುದ್ಘಾತಃ ಷಟ್ತ್ರಿಂಶನ್ಮಾತ್ರಕಃ ಪರಃ ।
ಸ್ವೇದಕಂಪಾದಿಜನಕಃ ಪ್ರಾಣಾಯಾಮಸ್ತದುತ್ತರಃ ॥ ೨೯ ॥

ಆನಂದೋದ್ಭವರೋಮಾಂಚನೇತ್ರಾಶ್ರೂಣಾಂ ವಿಮೋಚನಂ ।
ಜಲ್ಪಭ್ರಮಣಮೂರ್ಚ್ಛಾದ್ಯಂ ಜಾಯತೇ ಯೋಗಿನಃ ಪರಂ ॥ ೩೦ ॥

ಜಾನುಂ ಪ್ರದಕ್ಷಿಣೀಕೃತ್ಯ ನ ದ್ರುತಂ ನ ವಿಲಂಬಿತಂ ।
ಅಂಗುಲೀಸ್ಫೋಟನಂ ಕುರ್ಯಾತ್ಸಾ ಮಾತ್ರೇತಿ ಪ್ರಕೀರ್ತಿತಾ ॥ ೩೧ ॥

ಮಾತ್ರಾ ಕ್ರಮೇಣ ವಿಜ್ಞೇಯಾಶ್ಚೋದ್ಘಾತಕ್ರಮಯೋಗತಃ ।
ನಾಡೀವಿಶುದ್ಧಿಪೂರ್ವಂ ತು ಪ್ರಾಣಾಯಾಮಂ ಸಮಾಚರೇತ್ ॥ ೩೨ ॥

ಅಗರ್ಭಶ್ಚ ಸಗರ್ಭಶ್ಚ ಪ್ರಾಣಾಯಾಮೋ ದ್ವಿಧಾ ಸ್ಮೃತಃ ।
ಜಪಂ ಧ್ಯಾನಂ ವಿನಾಽಗರ್ಭಃ ಸಗರ್ಭಸ್ತತ್ಸಮನ್ವಯಾತ್ ॥ ೩೩ ॥

---

ಬೆವರನ್ನೂ ಕಂಪವನ್ನೂ ಉಂಟುಮಾಡುವ ಪ್ರಾಣಾಯಾಮವು ನಾಲ್ಕನೆಯದು.

೩೦. ಯೋಗಿಗೆ ಯೋಗಾಭ್ಯಾಸಕಾಲದಲ್ಲಿ ಆನಂದವೂ, ರೋಮಾಂಚವೂ, ಕಣ್ಣೀರೂ, ವಿಶೇಷ ಮಾತನಾಡುವಿಕೆಯೂ, ಭ್ರಾಂತಿಯೂ, ಮೂರ್ಛೆ ಮುಂತಾದುವುಗಳೂ ಉಂಟಾಗುವುವು.

೩೧. ಅತಿವೇಗವನ್ನೂ, ಅತಿಸಾವಕಾಶವನ್ನೂ ಮಾಡದೆ ಮಂಡಿಯನ್ನು ಸುತ್ತಿಸಿ ಬೆರಳಿನಿಂದ ಚುಟಿಕಿಯನ್ನು ಹಾಕುವುದಕ್ಕೆ ಎಷ್ಟುಕಾಲ ಬೇಕಾಗುವುದೋ ಅಷ್ಟುಕಾಲವನ್ನು ಮಾತ್ರೆಯೆಂದು ಹೇಳುವರು.

೩೨. ಮಾತ್ರಾಕ್ರಮದಿಂದಲೂ, ಉದ್ಘಾತಕ್ರಮದಿಂದಲೂ ನಾಡೀಶುದ್ಧಿಪೂರ್ವಕವಾಗಿ ಪ್ರಾಣಾಯಾಮವನ್ನು ಅಭ್ಯಾಸಮಾಡಬೇಕು.

೩೩-೩೪. ಪ್ರಾಣಾಯಾಮದಲ್ಲಿ ಅಗರ್ಭ, ಸಗರ್ಭವೆಂದು ಎರಡು ಬಗೆಯಿರುವುದು. ಮಂತ್ರಜಪವೂ, ಧ್ಯಾನವೂ ಇಲ್ಲದ ಪ್ರಾಣಾಯಾಮವು ಅಗ

**ಅಗರ್ಭಾದ್ಗರ್ಭಸಂಯುಕ್ತಃ ಪ್ರಾಣಾಯಾಮಃ ಶತಾಧಿಕಃ ।**
**ತಸ್ಮಾತ್ಸಗರ್ಭಂ ಕುರ್ವಂತಿ ಯೋಗಿನಃ ಪ್ರಾಣಸಂಯಮಂ ॥ ೩೪ ॥**

**ಪ್ರಾಣಸ್ಯ ವಿಜಯಾದೇವ ಜೀಯಂತೇ ದೇಹವಾಯವಃ ।**
**ಪ್ರಾಣೋಽಪಾನಸ್ಸಮಾನಶ್ಚ ಹ್ಯುದಾನೋ ವ್ಯಾನ ಏವ ಚ ॥ ೩೫ ॥**

**ನಾಗಃ ಕೂರ್ಮಶ್ಚ ಕೃಕರೋ ದೇವದತ್ತೋ ಧನಂಜಯಃ ।**
**ಪ್ರಯಾಣಂ ಕುರುತೇ ಯಸ್ಮಾತ್ತಸ್ಮಾತ್ಪ್ರಾಣೋಽಭಿಧೀಯತೇ ॥ ೩೬ ॥**

**ಅಪಾನ್ನಯತ್ಯಪಾನಾಖ್ಯೋ ಯದಾಹಾರಾದಿ ಭುಜ್ಯತೇ ।**
**ವ್ಯಾನೋ ವ್ಯಾನಶಯತ್ಯಂಗಾನ್ಯಶೇಷಾಣಿ ವಿವರ್ಧಯನ್ ॥ ೩೭ ॥**

**ಉದ್ವೇಜಯತಿ ಮರ್ಮಾಣೀತ್ಯುದಾನೋ ವಾಯುರೀರಿತಃ ।**
**ಸಮಂ ನಯತಿ ಸರ್ವಾಂಗಂ ಸಮಾನಸ್ತೇನ ಗೀಯತೇ ॥ ೩೮ ॥**

---

ರ್ಭವು. ಅವುಗಳಿಂದ ಕೂಡಿದುದು ಸಗರ್ಭವು. ಅಗರ್ಭಕ್ಕಿಂತ ಸಗರ್ಭ ಪ್ರಾಣಾಯಾಮವು ನೂರರಷ್ಟು ಫಲದಾಯಕವಾದುದು. ಆದುದರಿಂದ ಯೋಗಿಗಳು ಸಗರ್ಭಪ್ರಾಣಾಯಾಮವನ್ನೇ ಮಾಡುವರು.

೩೫-೩೬. ಪ್ರಾಣಾಯಾಮವೊಂದನ್ನು ಜಯಿಸಿದರೆ ದೇಹದ ಸಮಸ್ತ ವಾಯುಗಳನ್ನೂ ಜಯಿಸಿದಂತಾಗುವುದು. ಪ್ರಾಣ, ಅಪಾನ, ಸಮಾನ, ಉದಾನ, ವ್ಯಾನ ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ ಎಂದು ಹತ್ತು ಪ್ರಾಣವಾಯುಗಳಿರುವುವು. ಅಂತ್ಯಕಾಲದಲ್ಲಿ ಶರೀರವನ್ನು ಬಿಟ್ಟು ಪ್ರಯಾಣಮಾಡುವುದರಿಂದ ಪ್ರಾಣವೆಂದು ಪ್ರಾಣವಾಯುವಿಗೆ ಹೆಸರು.

೩೭-೩೮. ಆಹಾರವಾಗಿ ಉಪಯೋಗಿಸಿದ ಅನ್ನ ನೀರುಗಳನ್ನು ಶರೀರದ ಕೆಳಭಾಗಕ್ಕೆ ತೆಗೆದುಕೊಂಡು ಹೋಗುವ ವಾಯುವು ಅಪಾನವೆಂದು ಹೆಸರನ್ನು ಹೊಂದಿದೆ. ಅಂಗಗಳನ್ನು ಅಭಿವೃದ್ಧಿಪಡಿಸಿ ಹೆಚ್ಚಿಸುವ ವಾಯುವು ವ್ಯಾನವೆನಿಸುವುದು. ಅಪಾಯಸ್ಥಾನಗಳನ್ನು ಅಥವಾ ಗೋಪ್ಯವಾದ ಅವಯವಗಳನ್ನು ಉದ್ವೇಗಗೊಳಿಸುವುದು ಉದಾನವಾಯುವು. ಸಮಸ್ತ ಅವಯವಗಳ ಸ್ಥಿತಿಗಳನ್ನೂ ಒಂದೇ ಸಮನಾಗಿಟ್ಟುಕೊಂಡಿರುವುದು ಸಮಾನವಾಯುವು.

ಉದ್ಗಾರೇ ನಾಗ ಆಖ್ಯಾತಃ ಕೂರ್ಮ ಉನ್ಮೀಲನೇ ಸ್ಥಿತಃ ।
ಕೃಕರಃ ಕ್ಷುವಥೌ ಜ್ಞೇಯೋ ದೇವದತ್ತೋ ವಿಜೃಂಭಣೇ ॥ ೩೯ ॥

ನ ಜಹಾತಿ ಮೃತಂ ಚಾಪಿ ಸರ್ವವ್ಯಾಪೀ ಧನಂಜಯಃ ।
ಕ್ರಮೇಣಾಭ್ಯಸ್ಯಮಾನೋಽಯಂ ಪ್ರಾಣಾಯಾಮಃ ಪ್ರಮಾಣವಾನ್ ೪೦ ॥

ನಿರ್ದಹತ್ಯಖಿಲಂ ದೋಷಂ ಕರ್ತುರ್ದೇಹಂ ಚ ರಕ್ಷತಿ ।
ಪ್ರಾಣೇ ತು ವಿಜಿತೇ ಸಮ್ಯಕ್ತಚ್ಚಿಹ್ನಾನ್ಯುಪಲಕ್ಷಯೇತ್ ॥ ೪೧ ॥

ವಿಣ್ಮೂತ್ರಶ್ಲೇಷ್ಮಣಾಂ ತಾವದಲ್ಪಭಾವಃ ಪ್ರಜಾಯತೇ ।
ಬಹುಭೋಜನಸಾಮರ್ಥ್ಯಂ ಚಿರಾದುಚ್ಛ್ವಸನಂ ತಥಾ ॥ ೪೨ ॥

ಲಘುತ್ವಂ ಶೀಘ್ರಗಾಮಿತ್ವಮುತ್ಸಾಹಃ ಸ್ವರಸೌಷ್ಠವಂ ।
ಸರ್ವರೋಗಕ್ಷಯಶ್ಚೈವ ಬಲಂ ತೇಜಃ ಸುರೂಪತಃ ॥ ೪೩ ॥

---

೩೯. ವಾಂತಿಯನ್ನು ಮಾಡುವುದಕ್ಕೆ ಅನುಕೂಲವಾದ ವಾಯುವಿಗೆ ನಾಗವಾಯುವೆಂದೂ, ಕಣ್ಣುರೆಪ್ಪೆಯನ್ನು ತೆರೆಯುವ ವಾಯುವಿಗೆ ಕೂರ್ಮವೆಂದೂ, ಶೀನನ್ನುಂಟುಮಾಡುವ ವಾಯುವಿಗೆ ಕೃಕರವೆಂದೂ, ಆಕಳಿಕೆಯನ್ನುಂಟುಮಾಡುವ ವಾಯುವಿಗೆ ದೇವದತ್ತವೆಂದೂ ಹೆಸರಿರುವುದು. ಶರೀರವನ್ನೆಲ್ಲಾ ವ್ಯಾಪಿಸಿರುವ ಧನಂಜಯವಾಯುವು ಪ್ರಾಣಿಯ ಶರೀರದಲ್ಲಿ ಜೀವವಿಲ್ಲದಿದ್ದರೂ ಆ ಶರೀರವನ್ನು ಬಿಡುವುದಿಲ್ಲ.

೪೦-೪೨. ಒಂದು ಅಳತೆಯಿಂದ ಕ್ರಮವಾಗಿ ಪ್ರಾಣಾಯಾಮವನ್ನು ಅಭ್ಯಾಸಮಾಡಿದರೆ ಅದು ಯೋಗಿಯ ಸಮಸ್ತ ಪಾಪಗಳನ್ನೂ ನಾಶಮಾಡಿ, ಅವನ ಶರೀರವನ್ನು ಕಾಪಾಡುವುದು. ಪ್ರಾಣಜಯವುಂಟಾದರೆ ಕೆಲವು ಗುರುತುಗಳು ಕಂಡುಬರುವುವು. ಅವಾವುವೆಂದರೆ ಶರೀರದಲ್ಲಿ ಮಲ, ಮೂತ್ರ, ಶ್ಲೇಷ್ಮಗಳು ಅತ್ಯಲ್ಪವಾಗಿ ಉತ್ಪತ್ತಿಯಾಗುವುವು. ಹೆಚ್ಚಾಗಿ ಭೋಜನಮಾಡುವ ಶಕ್ತಿಯೂ ಬಹಳ ಕಾಲಕ್ಕೊಂದುಸಲ ಉಸಿರುಬಿಡುವ ಸಾಮರ್ಥ್ಯವೂ ಉಂಟಾಗುವುದು.

೪೩-೪೪. ಶರೀರದಲ್ಲಿ ಚಟುವಟಿಕೆಯೂ, ವೇಗವಾಗಿ ನಡೆಯುವ ಶಕ್ತಿಯೂ, ಯಾವ ಕೆಲಸಮಾಡುವುದಕ್ಕೂ ಉತ್ಸಾಹವೂ, ಸ್ಪಷ್ಟವಾದ ಕಂಠ

ಧೃತಿರ್ಮೇಧಾ ಯುವತ್ವಂ ಚ ಸ್ಥಿರತಾ ಚ ಪ್ರಸನ್ನತಾ ।
ತಪಾಂಸಿ ಪಾಪಕ್ಷಯತಾ ಯಜ್ಞದಾನವ್ರತಾದಯಃ ॥ ೪೪ ॥

ಪ್ರಾಣಾಯಾಮಸ್ಯ ತಸ್ಯೈತೇ ಕಲಾಂ ನಾರ್ಹಂತಿ ಷೋಡಶೀಂ ।
ಇಂದ್ರಿಯಾಣಿ ಪ್ರಸಕ್ತಾನಿ ಯಥಾಸ್ವಂ ವಿಷಯೇಷ್ವಿಹ ॥ ೪೫ ॥

ಆಹೃತ್ಯ ಯನ್ನಿಗೃಹ್ಣಾತಿ ಸ ಪ್ರತ್ಯಾಹಾರ ಉಚ್ಯತೇ ।
ಮನಃ ಪೂರ್ವಾಣೀಂದ್ರಿಯಾಣಿ ಸ್ವರ್ಗಂ ನರಕಮೇವ ಚ ॥ ೪೬ ॥

ನಿಗೃಹೀತನಿಸೃಷ್ಟಾನಿ ಸ್ವರ್ಗಾಯ ನರಕಾಯ ಚ ।
ತಸ್ಮಾತ್ಸುಖಾರ್ಥೀ ಮತಿಮಾನ್ ಜ್ಞಾನವೈರಾಗ್ಯಮಾಸ್ಥಿತಃ ॥ ೪೭ ॥

---

ಧ್ವನಿಯೂ, ಸಮಸ್ತರೋಗನಾಶವೂ, ಬಲವೂ, ತೇಜಸ್ಸೂ, ಒಳ್ಳೆಯ ರೂಪವೂ ಉಂಟಾಗುವುವು. ಧೈರ್ಯವೂ ಬುದ್ಧಿಯಲ್ಲಿ ಜ್ಞಾಪಕಶಕ್ತಿಯೂ, ಯೌವನವೂ ಸ್ಥಿರಬುದ್ಧಿಯೂ, ಸಂತೋಷದಿಂದ ಕೂಡಿದ ಮನಸ್ಸೂ ಉಂಟಾಗುವುದು. ಪಾಪಗಳನ್ನು ನಾಶಮಾಡತಕ್ಕ ತಪಸ್ಸೂ, ಯಜ್ಞಗಳೂ, ವ್ರತಗಳೂ ಇವೆಲ್ಲವೂ ಪ್ರಾಣಾಯಾಮದ ಹದಿನಾರನೆಯ ಒಂದು ಭಾಗಕ್ಕೆ ಸಮವಾಗಲಾರವು.

೪೫. ಇಂದ್ರಿಯಗಳು ತಮ್ಮತಮ್ಮ ವಿಷಯಗಳಲ್ಲಿ ಪ್ರಸಕ್ತವಾಗಿರಲು ಆ ವಿಷಯಗಳಿಂದ ಇಂದ್ರಿಯಗಳನ್ನು ಹಿಂದಕ್ಕೆ ತಿರುಗಿಸಿ, ವಿಷಯಗಳ ಕಡೆಗೆ ಹೋಗದಂತೆ ತಡೆಯುವುದೇ ಪ್ರತ್ಯಾಹಾರವೆನಿಸುವುದು.

೪೬-೪೭. ಮನಸ್ಸಿನಿಂದ ಕೂಡಿದ ಇಂದ್ರಿಯಗಳೇ ಸ್ವರ್ಗನರಕಗಳಾಗಿರುವುವು. ಇಂದ್ರಿಯಗಳನ್ನು ನಿಗ್ರಹಿಸಿದರೆ ಸ್ವರ್ಗಫಲವನ್ನೂ, ನಿಗ್ರಹಿಸದೆ ಬಿಟ್ಟರೆ ನರಕಫಲವನ್ನೂ ಕೊಡುವುವು. ಆದುದರಿಂದ ಸುಖವನ್ನಪೇಕ್ಷಿಸುವ ಬುದ್ಧಿವಂತನಾದ ಮನುಷ್ಯನು ಜ್ಞಾನವೈರಾಗ್ಯಗಳಿಂದ ಕೂಡಿ ಇಂದ್ರಿಯಗಳೆಂಬ ಕುದುರೆಗಳನ್ನು ಬೇಗನೆ ನಿಗ್ರಹಿಸಿ, ಜೀವಸ್ವರೂಪನಾದ ತನ್ನನ್ನು ಆತ್ಮಸ್ವರೂಪನನ್ನಾಗಿ ಮಾಡಿಕೊಳ್ಳಬೇಕು.

ಇಂದ್ರಿಯಾಣ್ಯಾನ್ನಿಗೃಹ್ಯಾಶು ಸ್ವಾತ್ಮನಾತ್ಮಾನಮುದ್ಧರೇತ್ ।
ಧಾರಣಾ ನಾಮ ಚಿತ್ತಸ್ಯ ಸ್ಥಾನಬಂಧಸ್ಸಮಾಸತಃ ॥ ೪೮ ॥

ಸ್ಥಾನಂ ಚ ಶಿವ ಏವೈಕೋ ನಾನ್ಯದ್ದೋಷತ್ರಯಂ ಯತಃ ।
ಕಾಲಂ ಕಂ ಚಾವಧೀಕೃತ್ಯ ಸ್ಥಾನೇऽವಸ್ಥಾಪಿತಂ ಮನಃ ॥ ೪೯ ॥

ನ ತು ಪ್ರಚ್ಯವತೇ ಲಕ್ಷ್ಯಾದ್ಧಾರಣಾ ಸ್ಯಾನ್ನ ಚಾನ್ಯಥಾ ।
ಮನಸಃ ಪ್ರಥಮಂ ಸ್ಥೈರ್ಯಂ ಧಾರಣಾತಃ ಪ್ರಜಾಯತೇ ॥ ೫೦ ॥

ತಸ್ಮಾದ್ಧೀರಂ ಮನಃ ಕುರ್ಯಾದ್ಧಾರಣಾಭ್ಯಾಸಯೋಗತಃ ।
ಧ್ಯೈ ಚಿಂತಾಯಾಂ ಸ್ಮೃತೋ ಧಾತುಃ ಶಿವಚಿಂತಾ ಮುಹುರ್ಮುಹುಃ ೫೧

ಅವ್ಯಾಕ್ಷಿಪ್ತೇನ ಮನಸಾ ಧ್ಯಾನಂ ನಾಮ ತದುಚ್ಯತೇ ।
ಧ್ಯೇಯಾವಸ್ಥಿತಚಿತ್ತಸ್ಯ ಸದೃಶಃ ಪ್ರತ್ಯಯಶ್ಚ ಯಃ ॥ ೫೨ ॥

---

೪೮-೪೯. ಮನಸ್ಸನ್ನು ಒಂದೆಡೆಯಲ್ಲಿ ಸಿಲ್ಲಿಸುವುದು ಧಾರಣಾ ಎನ್ನಿಸುವುದು. ಆ ಮನಸ್ಸನ್ನು ಸಿಲ್ಲಿಸುವ ಸ್ಥಳವು ಶಿವನಲ್ಲಿ ಹೊರತು ಮತ್ತೊಂದರಲ್ಲಿ ಅಲ್ಲ. ಕೆಲವುಕಾಲವನ್ನು ಗೊತ್ತುಮಾಡಿಕೊಂಡು ಮನಸ್ಸನ್ನು ಶಿವನಲ್ಲಿ ಇಟ್ಟು ಆ ಕಾಲದಲ್ಲಿ ಮನಸ್ಸು ತನ್ನ ಗುರಿಯನ್ನು ಬಿಡದೆ ನೆಲೆಸಿದ್ದರೆ ಅದೇ ಧಾರಣೆಯಾಗುವುದು. ಬೇರೆಯಾಮುದಲ್ಲ.

೫೦. ಧಾರಣೆಯಿಂದ ಮನಸ್ಸಿಗೆ ಸ್ಥೈರ್ಯವುಂಟಾಗುವುದು. ಆಕಾರಣದಿಂದ ಧಾರಣಾರೂಪವಾದ ಅಭ್ಯಾಸಯೋಗದಿಂದ ಮನಸ್ಸನ್ನು ಧೈರ್ಯಗುಣವುಳ್ಳದುದನ್ನಾಗಿ ಮಾಡಿಕೊಳ್ಳಬೇಕು.

೫೧. ಮನಸ್ಸಿಗೆ ಬೇರೊಂದು ಚಿಂತೆಯು ಬರದೆ ಪುನಃಪುನಃ ಶಿವನ ಚಿಂತೆಯು ಬರುತ್ತಿದ್ದರೆ ಅದನ್ನೇ ಧ್ಯಾನವೆಂದು ಕರೆಯುವರು.

೫೨. ಮನಸ್ಸು ಧ್ಯಾನಮಾಡಬೇಕಾದ ವಸ್ತುವಿಷಯದಲ್ಲಿ ನೆಲೆಸಿ ಬೇರೊಂದು ವಸ್ತುವಿಷಯವು ಮನಸ್ಸಿಗೆ ಬರದಿರುವ ಪ್ರವಾಹರೂಪವಾದ ಮನಸ್ಸಿನ ಏಕಾಗ್ರತೆಯೇ ಧ್ಯಾನವೆನಿಸುವುದು.

ಪ್ರತ್ಯಯಾಂತರನಿರ್ಮುಕ್ತಪ್ರವಾಹೋ ಧ್ಯಾನಮುಚ್ಯತೇ ।
ಸರ್ವಮನ್ಯತ್ಪರಿತ್ಯಜ್ಯ ಶಿವ ಏವ ಶಿವಂಕರಃ ॥ ೫೩ ॥

ಪರೋ ಧ್ಯೇಯೋಽಧಿದೇವೇಶಃ ಸಮಾಪ್ತಾಥರ್ವಣೀ ಶ್ರುತಿಃ ।
ತಥಾ ಶಿವಾ ಪರಾ ಧ್ಯೇಯಾ ಸರ್ವಭೂತಗತಾ ಶಿವಾ ॥ ೫೪ ॥

ತೌ ಶ್ರುತೌ ಸ್ಮೃತಿಶಾಸ್ತ್ರೇಭ್ಯಃ ಸರ್ವಗೌ ಸರ್ವದೋದಿತಾ ।
ಸರ್ವಜ್ಞೌ ಸತತಂ ಧ್ಯೇಯೌ ನಾನಾರೂಪವಿಭೇದತಃ ॥ ೫೫ ॥

ವಿಮುಕ್ತಿಃ ಪ್ರತ್ಯಯಃ ಪೂರ್ವಃ ಪ್ರತ್ಯಯಶ್ಚಾಣಿಮಾದಿಕಂ ।
ಇತ್ಯೇತದ್ದ್ವಿವಿಧಂ ಜ್ಞೇಯಂ ಧ್ಯಾನಸ್ಯಾಸ್ಯ ಪ್ರಯೋಜನಂ ॥ ೫೬ ॥

ಧ್ಯಾತಾ ಧ್ಯಾನಂ ತಥಾ ಧ್ಯೇಯಂ ಯಚ್ಚ ಧ್ಯಾನಪ್ರಯೋಜನಂ ।
ಏತಚ್ಚತುಷ್ಟಯಂ ಜ್ಞಾತ್ವಾ ಯೋಗಂ ಯುಂಜೀತ ಯೋಗವಿತ್ ॥ ೫೭ ॥

---

೫೩-೫೫. ಶಿವನೇ ಮಂಗಳಸ್ವರೂಪನು. ಶುಭವನ್ನುಂಟುಮಾಡುವವನು. ಅವನೇ ಶ್ರೇಷ್ಠನು. ಆದುದರಿಂದ ಇತರವಾದ ಎಲ್ಲವನ್ನೂ ಬಿಟ್ಟು ಅವನನ್ನೇ ಧ್ಯಾನಮಾಡಬೇಕೆಂದು ಅಥರ್ವಣೋಪನಿಷತ್ತಿನಲ್ಲಿ ಹೇಳಿರುವುದು. ಹಾಗೆಯೇ ಶಿವೆಯು ಶ್ರೇಷ್ಠಳು. ಅವಳನ್ನೂ ಧ್ಯಾನಮಾಡಬೇಕು. ಶಿವದಂಪತಿಗಳು ಸರ್ವಜ್ಞರಾಗಿ ಯಾವಾಗಲೂ ನಾನಾರೂಪದಿಂದ ಸರ್ವಗತರಾಗಿ ಇರುವುದರಿಂದ ಅವರನ್ನೇ ಧ್ಯಾನಮಾಡಬೇಕೆಂದು ಶ್ರುತಿಸ್ಮೃತಿಗಳಲ್ಲಿಯೂ, ಸಮಸ್ತ ಶಾಸ್ತ್ರಗಳಲ್ಲಿಯೂ ಹೇಳಿರುವುದು.

೫೬. ಧ್ಯಾನಕ್ಕೆ ಮೋಕ್ಷವೂ, ಅಣಿಮಾದಿಸಿದ್ಧಿಗಳೂ ಇವೆರಡೂ ಪ್ರಯೋಜನಗಳು.

೫೭. ಯೋಗಶಾಸ್ತ್ರವನ್ನು ತಿಳಿದವನು ಧ್ಯಾನಮಾಡತಕ್ಕವನು, ಧ್ಯಾನ ಧ್ಯಾನಕ್ಕೆ ವಿಷಯವಾದ ವಸ್ತು, ಧ್ಯಾನಕ್ಕೆ ಪ್ರಯೋಜನ, ಈ ನಾಲ್ಕರ ಸ್ವರೂಪವನ್ನು ತಿಳಿದು ಯೋಗಾಭ್ಯಾಸವನ್ನು ಮಾಡಬೇಕು.

**ಜ್ಞಾನವೈರಾಗ್ಯಸಂಪನ್ನಃ ಶ್ರದ್ಧಧಾನಃ ಕ್ಷಮಾನ್ವಿತಃ ।**
**ನಿರ್ಮಮಶ್ಚ ಸದೋತ್ಸಾಹೀ ಧ್ಯಾತೇತ್ಥಂ ಪುರುಷಃ ಸ್ಮೃತಃ ॥ ೫೮ ॥**

**ಜಪಾಚ್ಛ್ರಾಂತಃ ಪುನರ್ಧ್ಯಾಯೇದ್ಧ್ಯಾನಾಚ್ಛ್ರಾಂತಃ ಪುನರ್ಜಪೇತ್ ।**
**ಜಪಧ್ಯಾನಾಭಿಯುಕ್ತಸ್ಯ ಕ್ಷಿಪ್ರಂ ಯೋಗಃ ಪ್ರಸಿಧ್ಯತಿ ॥ ೫೯ ॥**

**ಧಾರಣಾ ದ್ವಾದಶಾಯಾಮಾ ಧ್ಯಾನಂ ದ್ವಾದಶಧಾರಣಂ ।**
**ಧ್ಯಾನದ್ವಾದಶಕಂ ಯಾವತ್ಸಮಾಧಿರಭಿಧೀಯತೇ ॥ ೬೦ ॥**

**ಸಮಾಧಿರ್ನಾಮ ಯೋಗಾಂಗಮಂತಿಮಂ ಪರಿಕೀರ್ತಿತಂ ।**
**ಸಮಾಧಿನಾ ಚ ಸರ್ವತ್ರ ಪ್ರಜ್ಞಾಲೋಕಃ ಪ್ರವರ್ತತೇ ॥ ೬೧ ॥**

---

೫೮. ಜ್ಞಾನವೈರಾಗ್ಯಗಳಿಂದ ಕೂಡಿದವನೂ, ವೇದಶಾಸ್ತ್ರಾದಿಗಳಲ್ಲಿ ನಂಬಿಕೆಯುಳ್ಳವನೂ, ಸಹನಶಕ್ತಿಯುಳ್ಳವನೂ, ನಾನು ನನ್ನದು ಎಂಬ ಅಭಿಮಾನವಿಲ್ಲದವನೂ, ಉತ್ಸಾಹಸಂಪನ್ನನೂ ಆದ ಮನುಷ್ಯನೇ ಧ್ಯಾನಯೋಗ್ಯನೆನಿಸುವನು.

೫೯. ಜಪಮಾಡಿ ಆಯಾಸವಾದರೆ ಧ್ಯಾನವನ್ನೂ, ಧ್ಯಾನಮಾಡಿ ಆಯಾಸ ಅಥವಾ ಬೇಸರವಾದರೆ ಜಪವನ್ನೂ ಪುನಃಪುನಃ ಮಾಡುತ್ತಿರಬೇಕು. ಹೀಗೆ ಜಪಧ್ಯಾನಗಳೆರಡನ್ನೂ ಮಾಡುವ ಮನುಷ್ಯನಿಗೆ ಬೇಗನೆ ಯೋಗಸಿದ್ಧಿಯಾಗುವುದು.

೬೦. ಧಾರಣೆಯ ಹನ್ನೆರಡರಷ್ಟು ಕಾಲವು ಒಂದು ಧ್ಯಾನಕ್ಕೆ ಬೇಕಾಗುವುದು. ಧ್ಯಾನದ ಹನ್ನೆಡರಷ್ಟು ಕಾಲವು ಒಂದು ಸಮಾಧಿಗೆ ಬೇಕಾಗುವುದು.

೬೧. ಸಮಾಧಿಯೇ ಯೋಗಾಂಗಗಳಲ್ಲಿ ಕೊನೆಯದು. ಸಮಾಧಿಯಿಂದ ಜ್ಞಾನಪ್ರಕಾಶವು ಎಲ್ಲೆಡೆಯಲ್ಲಿಯೂ ಹರಡುವುದು.

ಯದರ್ಥಮಾತ್ರನಿರ್ಭಾಸಂ ಸ್ತಿಮಿತೋದಧಿವತ್ಸ್ಥಿತಂ ।
ಸ್ವರೂಪಶೂನ್ಯವದ್ಧ್ಯಾನಂ ಸಮಾಧಿರಭಿಧೀಯತೇ ॥ ೬೨ ॥

ಧ್ಯೇಯೇ ಮನಃ ಸಮಾವೇಶ್ಯ ಪಶ್ಯೇದಪಿ ಚ ಸುಸ್ಥಿರಂ ।
ನಿರ್ವಾಣಾನಲವದ್ಯೋಗೀ ಸಮಾಧಿಸ್ಥಃ ಪ್ರಗೀಯತೇ ॥ ೬೩ ॥

ನ ಶೃಣೋತಿ ನ ಚಾಘ್ರಾತಿ ನ ಜಲ್ಪತಿ ನ ಪಶ್ಯತಿ ।
ನ ಚ ಸ್ಪರ್ಶಂ ವಿಜಾನಾತಿ ನ ಸಂಕಲ್ಪಯತೇ ಮನಃ ॥ ೬೪ ॥

ನ ಚಾಭಿಮನ್ಯತೇ ಕಿಂಚಿದ್ಬುಧ್ಯತೇ ನ ಚ ಕಾಷ್ಠವತ್ ।
ಏವಂ ಶಿವೇ ವಿಲೀನಾತ್ಮಾ ಸಮಾಧಿಸ್ಥ ಇಹೋಚ್ಯತೇ ॥ ೬೫ ॥

ಯಥಾ ದೀಪೋ ನಿವಾತಸ್ಥಃ ಸ್ಪಂದತೇ ನ ಕದಾಚನ ।
ತಥಾ ಸಮಾಧಿನಿಷ್ಠೋಽಪಿ ತಸ್ಮಾನ್ನ ವಿಚಲೇತ್ಸುಧೀಃ ॥ ೬೬ ॥

---

೬೨. ಚಲಿಸದಿರುವ ಸಮುದ್ರದಂತೆ ಶಾಂತವಾದ ತನ್ನ ಮನಸ್ಸಿನಲ್ಲಿ ಸ್ವಸ್ವರೂಪವಿಲ್ಲದಂತೆ ತೋರಿ ಧ್ಯಾನಗೋಚರವಸ್ತುಮಾತ್ರ ಚೆನ್ನಾಗಿ ಪ್ರಕಾಶಿಸುತ್ತಿದ್ದರೆ ಅದನ್ನೇ ಸಮಾಧಿಯೆನ್ನುವರು.

೬೩. ಧ್ಯಾನಮಾಡಬೇಕಾದ ವಸ್ತುವಿನಲ್ಲಿ ಮನಸ್ಸನ್ನಿಟ್ಟು ಸ್ಥಿರವಾಗಿ ಅದನ್ನೇ ನೋಡುತ್ತ ಶಾಂತವಾದ ಅಗ್ನಿಯಂತಿರುವ ಯೋಗಿಯನ್ನು ಸಮಾಧಿಯಲ್ಲಿರತಕ್ಕವನೆನ್ನುವರು.

೬೪-೬೫. ಸಮಾಧಿಯಲ್ಲಿರುವ ಯೋಗಿಯು ಕಿವಿಯಿಂದ ಕೇಳುವುದಿಲ್ಲ. ಮೂಗಿನಿಂದ ವಾಸನೆಯನ್ನು ಗ್ರಹಿಸುವುದಿಲ್ಲ. ಬಾಯಲ್ಲಿ ಮಾತನಾಡುವುದಿಲ್ಲ. ಕಣ್ಣಿನಿಂದ ನೋಡುವುದಿಲ್ಲ. ಚರ್ಮದಿಂದ ಶೀತೋಷ್ಣಗಳನ್ನೂ ತಿಳಿಯುವುದಿಲ್ಲ. ಮನಸ್ಸಿನಲ್ಲಿ ಸಂಕಲ್ಪವನ್ನೂ ಮಾಡುವುದಿಲ್ಲ. ನಾನು ನನ್ನದು ಎಂಬ ಅಭಿಮಾನವೂ ಅವನಿಗಿರುವುದಿಲ್ಲ. ಹೀಗೆ ತನ್ನ ಮನಸ್ಸನ್ನು ಶಿವನಲ್ಲಿಯೇ ವಿಲೀನಮಾಡಿಬಿಟ್ಟರೆ ಅಂಥವನನ್ನೇ ಸಮಾಧಿಯಲ್ಲಿರುವವನೆಂದು ಹೇಳುವರು.

೬೬. ಗಾಳಿಯಿಲ್ಲದ ಪ್ರದೇಶದಲ್ಲಿರುವ ದೀಪವು ಹೇಗೆ ಚಲಿಸುವುದಿಲ್ಲವೋ ಹಾಗೆ ಸಮಾಧಿಯಲ್ಲಿರುವವನು ಧ್ಯಾನಗೋಚರವಸ್ತುವಿಷಯದಲ್ಲಿ ಏಕಾಗ್ರತೆಯನ್ನು ಬಿಟ್ಟು ಚಲಿಸುವುದಿಲ್ಲ.

ಏವಮಭ್ಯಸತಶ್ಚಾರಂ ಯೋಗಿನೋ ಯೋಗಮುತ್ತಮಂ ।
ತದಂತರಾಯಾ ನಶ್ಯಂತಿ ವಿಘ್ನಾಃ ಸರ್ವೇ ಶನೈಃ ಶನೈಃ ॥ ೬೭ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-
ಮುತ್ತರಭಾಗೇ ವಾಯುಮಿಶೇಯರ್ಷಿಸಂವಾದೇ
ಯೋಗಗತಿವರ್ಣನಂ ನಾಮ ಸಪ್ತತ್ರಿಂಶೋಽಧ್ಯಾಯಃ



---

೬೭. ಹೀಗೆ ಯೋಗಿಗಳು ಉತ್ತಮವಾದ ಯೋಗವನ್ನು ಅಭ್ಯಾಸ ಮಾಡುತ್ತಿದ್ದರೆ ಅದಕ್ಕೆ ಬರುವ ಅನೇಕ ವಿಘ್ನಗಳು ಮೆಲ್ಲಮೆಲ್ಲಗೆ ನಾಶವಾಗುತ್ತ ಬಂದು ಬೇಗನೆ ಯೋಗಸಿದ್ಧಿಯಾಗುವುದು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯುವೀಯಸಂಹಿತೆಯ ಉತ್ತರ
ಭಾಗದಲ್ಲಿ ಯೋಗಗತಿವರ್ಣನವೆಂಬ ಮೂವತ್ತೇಳನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ಅಷ್ಟಾತ್ರಿಂಶೋಽಧ್ಯಾಯಃ

॥ ಉಪಮನ್ಯುರುವಾಚ ॥

ಆಲಸ್ಯಂ ವ್ಯಾಧಯಸ್ತೀವ್ರಾಃ ಪ್ರಮಾದಃ ಸ್ಥಾನಸಂಶಯಃ ।
ಅನವಸ್ಥಿತಚಿತ್ತತ್ತ್ವಮಶ್ರದ್ಧಾ ಭ್ರಾಂತಿದರ್ಶನಂ ॥ ೧ ॥

ದುಃಖಾನಿ ದೌರ್ಮನಸ್ಯಂ ಚ ವಿಷಯೇಷು ಚ ಲೋಲತಾ ।
ದಶೈತೇ ಯುಂಜತಾಂ ಪುಂಸಾಮಂತರಾಯಾಃ ಪ್ರಕೀರ್ತಿತಾಃ ॥ ೨ ॥

ಆಲಸ್ಯಮಲಸತ್ತ್ವಂ ತು ಯೋಗಿನಾಂ ದೇಹಚೇತಸೋಃ ।
ಧಾತುವೈಷಮ್ಯಜಾ ದೋಷಾ ವ್ಯಾಧಯಃ ಕರ್ಮದೋಷಜಾಃ ॥ ೩ ॥

---

## ಮೂವತ್ತೆಂಟನೆಯ ಅಧ್ಯಾಯವು

೧–೨. ಉಪಮನ್ಯುವು ಹೇಳಿದನು—ಯೋಗಾಭ್ಯಾಸವನ್ನು ಮಾಡುವ ಮನುಜರಿಗೆ ಆಲಸ್ಯ, ವ್ಯಾಧಿ, ಪ್ರಮಾದ, ಸ್ಥಾನಸಂಶಯ, ಅನವಸ್ಥಿತಚಿತ್ತ, ಅಶ್ರದ್ಧೆ, ಭ್ರಾಂತಿದರ್ಶನ, ದುಃಖ, ದೌರ್ಮನಸ್ಯ ವಿಷಯಾಸಕ್ತಿ ಎಂಬ ಹತ್ತು ವಿಘ್ನಗಳು ಪ್ರಾಪ್ತವಾಗುವುವು.

೩. ಯೋಗಿಯ ದೇಹಕ್ಕೂ ಮನಸ್ಸಿಗೂ ಆಗುವ ಬೇಸರವೇ ಆಲಸ್ಯವೆನಿಸುವುದು. ಕರ್ಮದೋಷಗಳಿಂದಾದ ಶರೀರ ಧಾತುಗಳ ವ್ಯತ್ಯಾಸವೇ ವ್ಯಾಧಿಗಳೆನಿಸುವುವು.

ಪ್ರಮಾದೋ ನಾಮ ಯೋಗಸ್ಯ ಸಾಧನಾ ನಾಮ ಭಾವನಾ ।
ಇದಂ ವೇತ್ಯುಭಯಾಕ್ರಾಂತಂ ವಿಜ್ಞಾನಂ ಸ್ಥಾನಸಂಶಯಃ ॥ ೪ ॥

ಅಪ್ರತಿಷ್ಠಾ ಹಿ ಮನಸಸ್ತ್ವನವಸ್ಥಿತಿರುಚ್ಯತೇ ।
ಅಶ್ರದ್ಧಾ ಭಾವರಹಿತಾ ವೃತ್ತಿರ್ವೈ ಯೋಗವರ್ತ್ಮನಿ ॥ ೫ ॥

ವಿಪರ್ಯಸ್ತಾ ಮತಿರ್ಯಾ ಸಾ ಭ್ರಾಂತಿರಿತ್ಯಭಿಧೀಯತೇ ।
ದುಃಖಮಜ್ಞಾನಜಂ ಪುಂಸಾಂ ಚಿತ್ತಸ್ಯಾಧ್ಯಾತ್ಮಿಕಂ ವಿದುಃ ॥ ೬ ॥

ಆಧಿಭೌತಿಕಮಂಗೋತ್ಥಂ ಯಚ್ಚ ದುಃಖಂ ಪುರಾಕೃತೈಃ ।
ಆಧಿದೈವಿಕಮಾಖ್ಯಾತಮಶನ್ಯಸ್ತ್ರವಿಷಾದಿಕಂ ॥ ೭ ॥

ಇಚ್ಛಾವಿಘಾತಜಂ ಕ್ಷೋಭಂ ದೌರ್ಮನಸ್ಯಂ ಪ್ರಚಕ್ಷತೇ ।
ವಿಷಯೇಷು ವಿಚಿತ್ರೇಷು ವಿಭ್ರಮಸ್ತತ್ರ ಲೋಲತಾ ॥ ೮ ॥

---

೪-೫. ಭಾವನೆಯೆಂಬ ಯೋಗಸಾಧನೆಯನ್ನು ಪ್ರಮಾದವೆಂದು ಕರೆವರು. ಇದೋ ಅಥವಾ ಅದೋ ಎಂಬ ಎರಡು ವಿಧವಾದ ತಿಳಿವಳಿಕೆಯಿಂದ ಕೂಡಿದ ಸ್ಥಿತಿಯನ್ನು ಸ್ಥಾನಸಂಶಯವೆಂದು ಹೇಳುವರು. ಮನಸ್ಸು ಒಂದು ನೆಲೆಯಲ್ಲಿ ನಿಲ್ಲದಿರುವುದು ಅನವಸ್ಥಿತಚಿತ್ತವೆನಿಸುವುದು. ಯೋಗಮಾರ್ಗದಲ್ಲಿ ಮನಸ್ಸಿಲ್ಲದ ಸ್ಥಿತಿಯನ್ನು ಅಶ್ರದ್ಧೆಯೆಂದು ಕರೆವರು.

೬-೭. ವ್ಯತ್ಯಸ್ತವಾದ ಬುದ್ಧಿಯೇ ಭ್ರಾಂತಿಯೆನಿಸುವುದು. ಅಜ್ಞಾನದಿಂದುಂಟಾದ ಮನೋವೃತ್ತಿಯೇ ಆಧ್ಯಾತ್ಮಿಕ ದುಃಖವು. ಪೂರ್ವಜನ್ಮದ ಕರ್ಮಫಲಗಳಿಂದಾದ ಶರೀರದಲ್ಲಿ ಹುಟ್ಟಿದ ದುಃಖವು ಆಧಿಭೌತಿಕವೆನಿಸುವುದು. ಸಿಡಿಲು, ಅಸ್ತ್ರಗಳು ವಿಷಾದಿಗಳಿಂದುಂಟಾದ ದುಃಖವು ಆಧಿದೈವಿಕವೆನಿಸುವುದು.

೮. ತನ್ನ ಅಪೇಕ್ಷೆಯಂತೆ ನಡೆಯದಿದ್ದುದರಿಂದುಂಟಾದ ಮನಸ್ಸಿನ ಸ್ಥಿತಿಯೇ ದೌರ್ಮನಸ್ಯವೆನಿಸುವುದು. ವಿಚಿತ್ರವಾದ ವಿಷಯಗಳಲ್ಲಿ ಆಶೆಯೇ ವಿಷಯಾಸಕ್ತಿಯೆನಿಸುವುದು.

**ಶಾಂತೇಷ್ವೇತೇಷು ವಿಘ್ನೇಷು ಯೋಗಾಸಕ್ತಸ್ಯ ಯೋಗಿನಃ ।**
**ಉಪಸರ್ಗಾಃ ಪ್ರವರ್ತಂತೇ ದಿವ್ಯಾಸ್ತೇ ಸಿದ್ಧಿಸೂಚಕಾಃ ॥ ೯ ॥**

**ಪ್ರತಿಭಾ ಶ್ರವಣಂ ವಾರ್ತಾ ದರ್ಶನಾಸ್ವಾದವೇದನಾಃ ।**
**ಉಪಸರ್ಗಾಃ ಷಡಿತ್ಯೇತೇ ವ್ಯಯೇ ಯೋಗಸ್ಯ ಸಿದ್ಧಯಃ ॥ ೧೦ ॥**

**ಸೂಕ್ಷ್ಮೇ ವ್ಯವಹಿತೇಽತೀತೇ ವಿಪ್ರಕೃಷ್ಟೇ ತ್ವನಾಗತೇ ।**
**ಪ್ರತಿಭಾ ಕಥ್ಯತೇ ಯೋಽರ್ಥೇ ಪ್ರತಿಭಾಸೋ ಯಥಾತಥಂ ॥ ೧೧ ॥**

**ಶ್ರವಣಂ ಸರ್ವಶಬ್ದಾನಾಂ ಶ್ರವಣೇ ಚಾಪ್ರಯತ್ನತಃ ।**
**ವಾರ್ತಾ ವಾರ್ತಾಸು ವಿಜ್ಞಾನಂ ಸರ್ವೇಷಾಮೇವ ದೇಹಿನಾಂ ॥ ೧೨ ॥**

**ದರ್ಶನಂ ನಾಮ ದಿವ್ಯಾನಾಂ ದರ್ಶನಂ ಚಾಪ್ರಯತ್ನತಃ ।**
**ತಥಾಸ್ವಾದಶ್ಚ ದಿವ್ಯೇಷು ರಸೇಷ್ವಾಸ್ವಾದ ಉಚ್ಯತೇ ॥ ೧೩ ॥**

---

೯. ಈ ವಿಘ್ನಗಳು ಶಾಂತವಾದರೆ ಯೋಗದಲ್ಲಿ ಆಸಕ್ತನಾದ ಯೋಗಿಗೆ ಸಿದ್ಧಿಗಳನ್ನು ಸೂಚಿಸುವ ಯೋಗಪ್ರತಿಬಂಧಕಗಳುಂಟಾಗುವುವು.

೧೦. ಪ್ರತಿಭಾ, ಶ್ರವಣ, ವಾರ್ತಾ, ದರ್ಶನ, ಆಸ್ವಾದ, ವೇದನ ಎಂಬ ಆರು ಸಿದ್ಧಿಗಳು ಯೋಗಶಕ್ತಿಯಿಂದುಂಟಾಗಿ ಆ ಯೋಗಶಕ್ತಿಯನ್ನು ನಾಶ ಮಾಡುವ ಉಪಸರ್ಗಗಳೆನಿಸುವುವು.

೧೧. ಅತ್ಯಂತ ಸೂಕ್ಷ್ಮವಾದ ಮತ್ತೊಂದು ವಿಷಯದಿಂದ ಬೇರೆಯಾದ, ಹಿಂದೆ ಕಳೆದುಹೋದ, ಅತ್ಯಂತ ಸಮೀಪವಾದ, ಇನ್ನೂ ಪ್ರಾಪ್ತವಾಗದೆ ಮುಂದೆ ಪ್ರಾಪ್ತವಾಗತಕ್ಕ, ವಿಷಯಗಳ ಜ್ಞಾನವುಂಟಾಗುವಿಕೆಯು ಪ್ರತಿಭೆ ಎನಿಸುವುದು.

೧೨-೧೩. ಪ್ರಯತ್ನವಿಲ್ಲದೆ ಸಮಸ್ತಶಬ್ದಗಳೂ ಕೇಳುವ ಶಕ್ತಿಯುಂಟಾದರೆ ಶ್ರವಣಸಿದ್ಧಿಯು. ಸಮಸ್ತ ಪ್ರಾಣಿಗಳ ಭಾಷೆಗಳನ್ನೂ ತಿಳಿಯುವದು ವಾರ್ತಾಸಿದ್ಧಿಯು. ಪ್ರಯತ್ನವಿಲ್ಲದೆ ದೇವಯೋಗ್ಯವಾದ ವಸ್ತುಗಳು ಕಣ್ಣಿಗೆ ಕಾಣಿಸುಸುವುದು ದರ್ಶನಸಿದ್ಧಿಯು. ಹಾಗೆಯೇ ದೇವಯೋಗ್ಯವಾದ ರಸಗಳ ರುಚಿ

ಸ್ಪರ್ಶನಾಧಿಗಮಸ್ತದ್ವದ್ವೇದನಾ ನಾಮ ವಿಶ್ರುತಾ ।
ಗಂಧಾದೀನಾಂ ಚ ದಿವ್ಯಾನಾಮಾಬ್ರಹ್ಮಭುವನಾಧಿಪಾಃ ॥ ೧೪ ॥

ಸಂತಿಷ್ಠಂತೇ ಚ ರತ್ನಾನಿ ಪ್ರಯಚ್ಛಂತಿ ಬಹೂನಿ ಚ ।
ಸ್ವಚ್ಛಂದಮಧುರಾ ವಾಣೀ ವಿವಿಧಾ ಸ್ಯಾತ್ಪ್ರವರ್ತತೇ ॥ ೧೫ ॥

ರಸಾಯನಾನಿ ಸರ್ವಾಣಿ ದಿವ್ಯಾಶ್ಚೌಷಧಯಸ್ತಥಾ ।
ಸಿಧ್ಯಂತಿ ಪ್ರಣಿಪತ್ಯೈನಂ ದಿಶಂತಿ ಸುರಯೋಷಿತಃ ॥ ೧೬ ॥

ಯೋಗಸಿದ್ಧ್ಯೈಕದೇಶೇಽಪಿ ದೃಷ್ಟೇ ಮೋಕ್ಷೇ ಭವೇನ್ಮತಿಃ ।
ದೃಷ್ಟಮೇತನ್ಮಯಾ ಯದ್ವತ್ತದ್ವನ್ಮೋಕ್ಷೋ ಭವೇದಿತಿ ॥ ೧೭ ॥

ಕೃಶತಾ ಸ್ಥೂಲತಾ ಬಾಲ್ಯಂ ವಾರ್ಧಕ್ಯಂ ಚೈವ ಯೌವನಂ ।
ನಾನಾಜಾತಿಸ್ವರೂಪಂ ಚ ಚತುರ್ಣಾಂ ದೇಹಧಾರಣಂ ॥ ೧೮ ॥

---

ಯನ್ನು ತಿಳಿವುದು ಆಸ್ವಾದಸಿದ್ಧಿಯು. ಅದರಂತೆ ದೇವಯೋಗ್ಯವಾದ ಸುಖ ಸ್ಪರ್ಶವನ್ನು ತಿಳಿವುದೇ ವೇದನಾಸಿದ್ಧಿಯು.

೧೪-೧೬. ಯೋಗಸಿದ್ಧನಿಗೆ ದೇವಯೋಗ್ಯವಾದ ಸುಗಂಧಾದಿ ವಸ್ತುಗಳ ಅನುಭವವು ಉಂಟಾಗುವುದು. ಬ್ರಹ್ಮಲೋಕದ ಪರ್ಯಂತವಾಗಿರುವ ಸಮಸ್ತ ಲೋಕಾಧಿಪತಿಗಳೂ ಸಿದ್ಧನ ಆಜ್ಞೆಯನ್ನು ನಡೆಸುವರು ಮತ್ತು ಅನೇಕ ರತ್ನ ಗಳನ್ನು ತಂದು ಕೊಡುವರು. ಬಗೆಬಗೆಯ ಮನೋಹರವಾದ ಮಾತುಗಳು ಅವನ ಬಾಯಿಯಿಂದ ಬರುವುವು. ಸಮಸ್ತ ರಸಾಯನಗಳೂ ದಿವ್ಯವಾದ ಔಷಧಿ ಗಳೂ ಇವನಿಗೆ ಸಿದ್ಧಿಸುವುವು. ದೇವಸ್ತ್ರೀಯರು ಯೋಗಸಿದ್ಧನಿಗೆ ನಮಸ್ಕರಿಸಿ ಅವನ ಅಪ್ಪಣೆಯನ್ನು ನಡೆಸುವರು.

೧೭. ಯೋಗಿಗೆ ಯೋಗಸಿದ್ಧಿಯು ಸ್ವಲ್ಪ ಉಂಟಾದರೂ, ಮೋಕ್ಷವನ್ನು ಪಡೆ ಯಬೇಕೆಂಬ ಬುದ್ಧಿಯುಂಟಾಗುವುದು. ಯೋಗಸಿದ್ಧಿಯಂತೆಯೇ ಮೋಕ್ಷವೂ ಪ್ರಾಪ್ತವಾಗುವುದೆಂಬ ನಂಬಿಕೆಯುಂಟಾಗುವುದು.

೧೮-೧೯. ಭೂಸಂಬಂಧವಾದ ಯೋಗಸಿದ್ಧಿಯು ಪೈಶಾಚಸಿದ್ಧಿಯೆನಿಸು ವುದು. ಈ ಸಿದ್ಧಿಯಲ್ಲಿ ಯೋಗಿಗೆ ತನ್ನ ಶರೀರವನ್ನು ಕೃಶವಾಗಿಯೂ, ಸ್ಥೂಲ

ಪಾರ್ಥಿವಾಂಶಂ ವಿನಾ ನಿತ್ಯಂ ಸುರಭಿರ್ಗಂಧಸಂಗ್ರಹಃ ।
ಏವಮಷ್ಟಗುಣಂ ಪ್ರಾಹುಃ ಪೈಶಾಚಂ ಪಾರ್ಥಿವಂ ಪದಂ ॥ ೧೯ ॥

ಜಲೇ ನಿವಸನಂ ಚೈವ ಭೂಮ್ಯಾಮೇವಂ ವಿನಿರ್ಗಮಃ ।
ಇಚ್ಛೇಚ್ಛಕ್ತಃ ಸ್ವಯಂ ಪಾತುಂ ಸಮುದ್ರಮಪಿ ನಾತುರಃ ॥ ೨೦ ॥

ಯತ್ರೇಚ್ಛತಿ ಜಗತ್ಯಸ್ಮಿಂಸ್ತತ್ರೈವ ಜಲದರ್ಶನಂ ।
ವಿನಾ ಕುಂಭಾದಿಕಂ ಪಾಣೌ ಜಲಸಂಚಯಧಾರಣಂ ॥ ೨೧ ॥

ಯದ್ವಸ್ತು ವಿರಸಂ ಚಾಪಿ ಭೋಕ್ತುಮಿಚ್ಛತಿ ತತ್ಕ್ಷಣಾತ್
ರಸಾದಿಕಂ ಭವೇಚ್ಚಾನ್ಯತ್ತ್ರಯಾಣಾಂ ದೇಹಧಾರಣಂ ॥ ೨೨ ॥

ನಿರ್ವ್ರಣತ್ವಂ ಶರೀರಸ್ಯ ಪಾರ್ಥಿವೈಶ್ಚ ಸಮನ್ವಿತಂ ।
ತದಿದಂ ಷೋಡಶಗುಣಮಾಪ್ಯಮೈಶ್ವರ್ಯಮದ್ಭುತಂ ॥ ೨೩ ॥

---

ವಾಗಿಯೂ, ಬಾಲಕನಂತೆಯೂ, ಮುದುಕನಂತೆಯೂ, ಪ್ರಾಯದವನಂತೆಯೂ, ಬೇರೆಬೇರೆ ಜಾತಿಯವರಂತೆಯೂ, ಮಾಡಿಕೊಳ್ಳುವುದು, ಭೂಮಿಯ ಅಂಶವನ್ನು ಬಿಟ್ಟು ಮಿಕ್ಕ ನಾಲ್ಕು ಭೂತಗಳಿಂದಲೇ ದೇಹವನ್ನು ಧರಿಸಿರುವುದು, ಯಾವಾಗಲೂ ತನ್ನ ಶರೀರವನ್ನು ಸುಗಂಧವಾಗಿಟ್ಟುಕೊಂಡಿರುವುದು, ಈ ಎಂಟು ಗುಣಗಳುಂಟಾಗಿರುವುವು.

೨೦–೨೩. ಜಲಸಂಬಂಧವಾದ ಯೋಗಸಿದ್ಧಿಯು ಅಪ್ ಸಂಬಂಧವಾದ ಐಶ್ವರ್ಯವೆನಿಸುವುದು. ಈ ಸಿದ್ಧಿಯುಳ್ಳ ಯೋಗಿಯು ಭೂಮಿಯಲ್ಲಿರುವಂತೆ ನೀರಿನಲ್ಲಿಯೂ ವಾಸಮಾಡುವನು. ಮತ್ತು ಸಂಚರಿಸುವನು. ಬಾಯಾರಿಕೆಯಿಲ್ಲದಿದ್ದರೂ ಮನಸ್ಸುಮಾಡಿದರೆ ಸಮುದ್ರವನ್ನೂ ಕುಡಿದುಬಿಡುವಶಕ್ತಿಯೂ ಬರುವುದು. ತನ್ನ ಇಷ್ಟಬಂದೆಡೆಯಲ್ಲಿ ನೀರನ್ನುಂಟುಮಾಡಬಲ್ಲನು. ಕೈಯ್ಯಲ್ಲಿ ಯಾವ ಪಾತ್ರೆಯೂ ಇಲ್ಲದೆ ನೀರನ್ನು ತರಬಲ್ಲನು. ನೀರಸವಾದ ವಸ್ತುವಾದರೂ ಅನುಭವಿಸುವ ಸಮಯದಲ್ಲಿ ಅವನಿಗೆ ಅದು ರಸವತ್ತಾದ ವಸ್ತುವಾಗುವುದು. ತೇಜಸ್ಸು, ವಾಯು, ಆಕಾಶ ಈ ಮೂರು ಭೂತಗಳಿಂದಲೇ ದೇಹಧಾರಣೆಯನ್ನು ಮಾಡಿಕೊಂಡಿರಬಲ್ಲನು. ಶರೀರದಲ್ಲಿ ಯಾವ ಗಾಯವಾಗಲಿ

ಶರೀರಾದಗ್ನಿನಿರ್ಮಾಣಂ ತತ್ತಾಪಭಯವರ್ಜನಂ ।
ಶಕ್ತಿರ್ಜಗದಿದಂ ದಗ್ಧುಂ ಯದೀಚ್ಛೇದಪ್ರಯತ್ನತಃ ॥ ೨೪ ॥

ಸ್ಥಾಪನಂ ವಾನಲಸ್ಯಾಪ್ಸು ಪಾಣೌ ಪಾವಕಧಾರಣಂ ।
ದಗ್ಧೇ ಸರ್ಗೇ ಯಥಾ ಪೂರ್ವಂ ಮುಖೇ ಚಾನ್ನಾದಿಪಾಚನಂ ।
ದ್ವಾಭ್ಯಾಂ ದೇಹವಿನಿರ್ಮಾಣಮಾಪ್ಯೈಶ್ವರ್ಯಸಮನ್ವಿತಂ ॥ ೨೫ ॥

ಏತಚ್ಚತುರ್ವಿಂಶತಿಧಾ ತೈಜಸಂ ಪರಿಚಕ್ಷತೇ ।
ಮನೋಜವತ್ವಂ ಭೂತಾನಾಂ ಕ್ಷಣಾದಂತಃಪ್ರವೇಶನಂ ॥ ೨೬ ॥

ಪರ್ವತಾದಿಮಹಾಭಾರಧಾರಣಂ ಚಾಪ್ರಯತ್ನತಃ ।
ಗುರುತ್ವಂ ಚ ಲಘುತ್ವಂ ಚ ಪ್ರಾಣಾವನಿಲಧಾರಣಂ ॥ ೨೭ ॥

---

ಇಲ್ಲದಿರುವುದು. ಈ ಎಂಟುಗುಣವೂ ಭೂಸಂಬಂಧವಾದ ಎಂಟು ಗುಣವೂ ಸೇರಿ ಹದಿನಾರು ಗುಣಗಳು ಅಪ್ಸಂಬಂಧವಾದ ಐಶ್ವರ್ಯಕ್ಕೆ ಸೇರಿದುವುಗಳು.

೨೪-೨೫. ತನ್ನ ಶರೀರದಿಂದ ಬೆಂಕಿಯನ್ನು ಹುಟ್ಟಿಸುವುದು, ತನಗೆ ಬೆಂಕಿಯಬಿಸಿಯು ತಗುಲದಿರುವುದು, ಮನಸ್ಸು ಮಾಡಿದರೆ ಯಾವ ಪ್ರಯತ್ನವೂ ಇಲ್ಲದೆ ಈ ಲೋಕವನ್ನು ಸುಡುವ ಶಕ್ತಿಯು, ನೀರಿನಲ್ಲಿ ಬೆಂಕಿಯನ್ನಿಡುವುದು, ಕೈಯ್ಯಲ್ಲಿ ಬೆಂಕಿಯನ್ನು ಹಿಡಿಯುವುದು, ಸುಟ್ಟುಹೋದ ಪ್ರಪಂಚವನ್ನು ಮೊದಲಿದ್ದಂತೆ ಮಾಡುವುದು. ವಾಯು ಮತ್ತು ಆಕಾಶ ಈ ಎರಡು ಭೂತಗಳಿಂದಲೇ ಶರೀರವನ್ನು ಧರಿಸುವುದು, ಈ ಎಂಟು ಗುಣಗಳೊಡನೆ ಹಿಂದಿನ ಹದಿನಾರು ಗುಣಗಳು ಕೂಡಿ ಒಟ್ಟು ಇಪ್ಪತ್ತನಾಲ್ಕು ಗುಣಗಳು ತೇಜಸ್ಸಿದ್ಧಿಸಂಬಂಧವಾದುವುಗಳು.

೨೬-೨೭. ಮನೋವೇಗವು, ಒಂದು ಕ್ಷಣದೊಳಗಾಗಿ ಪ್ರಾಣಿಗಳ ಶರೀರದೊಳಕ್ಕೆ ಪ್ರವೇಶಿಸುವುದು, ಅಂದರೆ ಪರಕಾಯಪ್ರವೇಶವು, ಪ್ರಯತ್ನವಿಲ್ಲದೆ ಭಾರವಾದ ಪರ್ವತಾದಿಗಳನ್ನು ಹೊರುವ ಶಕ್ತಿಯು, ಶರೀರವನ್ನು ಭಾರವಾಗಿಯೂ, ಹಗುರವಾಗಿಯೂ ಮಾಡಿಕೊಳ್ಳುವುದು, ಕೈಯ್ಯಲ್ಲಿಯೇ ಗಾಳಿಯನ್ನು ಹಿಡಿಯುವುದು, ಬೆರಳಿನ ತುದಿಯಿಂದ ಭೂಮಿಯನ್ನಲ್ಲಾಡಿಸುವುದು,

ಅಂಗುಲ್ಯಗ್ರನಿಪಾತಾದ್ಯೈರ್ಭೂಮೇರಪಿ ಚ ಕಂಪನಂ ।
ಏಕೇನ ದೇಹನಿಷ್ಪತ್ತಿರ್ಯುಕ್ತಂ ಭೋಗ್ಯೈಶ್ಚ ತೈಜಸೈಃ । ॥ ೨೮ ॥

ದ್ವಾತ್ರಿಂಶದ್ಗುಣಮೈಶ್ವರ್ಯಂ ಮಾರುತಂ ಕವಯೋ ವಿದುಃ ।
ಛಾಯಾಹೀನವಿನಿಷ್ಪತ್ತಿರಿಂದ್ರಿಯಾಣಾಮದರ್ಶನಂ ॥ ೨೯ ॥

ಖೇಚರತ್ವಂ ಯಥಾಕಾಮಮಿಂದ್ರಿಯಾರ್ಥಸಮನ್ವಯಃ ।
ಆಕಾಶಲಂಘನಂ ಚೈವ ಸ್ವದೇಹೇ ತನ್ನಿವೇಶನಂ ॥ ೩೦ ॥

ಆಕಾಶಪಿಂಡೀಕರಣಮಶರೀರತ್ವಮೇವ ಚ ।
ಅನಿಲೈಶ್ವರ್ಯಸಂಯುಕ್ತಂ ಚತ್ವಾರಿಂಶದ್ಗುಣಂ ಮಹತ್ ॥ ೩೧ ॥

ಐಂದ್ರಮೈಶ್ವರ್ಯಮಾಖ್ಯಾತಮಾಂಬರಂ ತತ್ಪ್ರಚಕ್ಷತೇ ।
ಯಥಾಕಾಮೋಪಲಬ್ಧಿಶ್ಚ ಯಥಾಕಾಮವಿನಿರ್ಗಮಃ ॥ ೩೨ ॥

---

(ಅಲ್ಲಾಡಿಸುವ ಶಕ್ತಿಯು) ಆಕಾಶತತ್ತ್ವ ಒಂದರಿಂದಲೇ ಶರೀರಧಾರಣೆಯು, ಈ ಎಂಟು ಗುಣಗಳೊಡನೆ ತೇಜಸ್ಸಿನ ಐಶ್ವರ್ಯಗುಣಗಳಿಂದ ಕೂಡಿ ಒಟ್ಟು ಮೂವತ್ತೆರಡು ಗುಣಗಳು ವಾಯುಸಂಬಂಧವಾದ ಸಿದ್ಧಿಯೆನಿಸುವುವು.

೨೯-೩೧. ಶರೀರಕ್ಕೆ ನೆರಳಿಲ್ಲದಿರುವುದು, ಇಂದ್ರಿಯಗಳು ಕಾಣದಿರುವುದು, ಇಷ್ಟಬಂದಾಗ ಆಕಾಶಸಂಚಾರಶಕ್ತಿಯು, ಇಷ್ಟಬಂದಾಗ ಇಂದ್ರಿಯಗಳಿಂದ ವಿಷಯಗಳನ್ನನುಭವಿಸುವುದು, ಆಕಾಶದಲ್ಲಿ ಹಾರುವುದು, ತನ್ನ ಶರೀರದೊಳಗೆ ಆಕಾಶವನ್ನಡಗಿಸುವುದು, ಆಕಾಶವನ್ನು ಸಂಕೋಚಮಾಡುವುದು, ಶರೀರವಿಲ್ಲದಿರುವುದು, ಹಿಂದಿನ ಅನಿಲೈಶ್ವರ್ಯದಿಂದ ಕೂಡಿ ನಲವತ್ತು ಗುಣಗಳು ಐಂದ್ರೈಶ್ವರ್ಯ ಅಥವಾ ಆಕಾಶತತ್ತ್ವಸಿದ್ಧಿಯುಳ್ಳ ಯೋಗಿಯ ಗುಣಗಳು.

೩೨-೩೮. ತನ್ನಿಷ್ಟಬಂದಂತೆ ಬರುವುದು, ಹೊರಟುಹೋಗುವುದು, ಎಲ್ಲವನ್ನೂ ತಿರಸ್ಕಾರಬುದ್ಧಿಯಿಂದ ನೋಡುವುದು, ಗೋಪ್ಯವಾದ ವಸ್ತುವನ್ನೂ ತಿಳಿವುದು, ಕಾರ್ಯಕ್ಕನುಕೂಲವಾದ ರೂಪವನ್ನು ಧರಿಸುವುದು,

ಸರ್ವಸ್ಯಾಭಿಭವಶ್ಚೈವ ಸರ್ವಗುಹ್ಯಾರ್ಥದರ್ಶನಂ ।
ಕರ್ಮಾನುರೂಪನಿರ್ಮಾಣಂ ವಶಿತ್ವಂ ಪ್ರಿಯದರ್ಶನಂ ॥ ೩೩ ॥

ಸಂಸಾರದರ್ಶನಂ ಚೈವ ಭೋಗ್ಯೈರೈಂದ್ರೈಸ್ಸಮನ್ವಿತಂ ।
ಏತಚ್ಚಾಂದ್ರಮಸೈಶ್ವರ್ಯಂ ಮಾನಸಂ ಗುಣತೋಽಧಿಕಂ ॥ ೩೪ ॥

ಛೇದನಂ ತಾಡನಂ ಚೈವ ಬಂಧನಂ ಮೋಚನಂ ತಥಾ ।
ಗ್ರಹಣಂ ಸರ್ವಭೂತಾನಾಂ ಸಂಸಾರವಶವರ್ತಿನಾಂ ॥ ೩೫ ॥

ಪ್ರಸಾದಶ್ಚಾಪಿ ಸರ್ವೇಷಾಂ ಮೃತ್ಯುಕಾಲಜಯಸ್ತಥಾ ।
ಅಭಿಮಾನಿಕಮೈಶ್ವರ್ಯಂ ಪ್ರಾಜಾಪತ್ಯಂ ಪ್ರಚಕ್ಷತೇ ॥ ೩೬ ॥

ಏತಚ್ಚಾಂದ್ರಮಸೈರ್ಭೋಗ್ಯೈಃ ಷಟ್ಪಂಚಾಶದ್ಗುಣಂ ಮಹತ್ ।
ಸರ್ಗಃ ಸಂಕಲ್ಪಮಾತ್ರೇಣ ತ್ರಾಣಂ ಸಂಹರಣಂ ತಥಾ ॥ ೩೭ ॥

---

ಎಲ್ಲವನ್ನೂ ತನ್ನಧೀನಮಾಡಿಕೊಳ್ಳುವುದು, ಎಲ್ಲವನ್ನೂ ಪ್ರೀತಿಯಿಂದ ಕಾಣುವುದು, ಜನನಮರಣಗಳನ್ನು ತಿಳಿಯುವುದು, ಹಿಂದಿನ ಐಂದ್ರೈಶ್ವರ್ಯಗಳಿಂದ ಕೂಡಿ ನಲವತ್ತೆಂಟು ಗುಣಗಳಿಂದ ಕೂಡಿದ ಮಾನಸರೂಪವಾದ ಈ ಸಿದ್ಧಿಯು ಚಾಂದ್ರಮಸೈಶ್ವರ್ಯ ಅಥವಾ ಪ್ರಾಜಾಪತ್ಯೈಶ್ವರ್ಯವೆನಿಸುವುದು.

೩೫-೩೬. ಸಂಸಾರಾಧೀನರಾದ ಸಮಸ್ತಪ್ರಾಣಿಗಳನ್ನೂ ಅನುಗ್ರಹಿಸುವುದು, ಇಷ್ಟಬಂದರೆ ಕತ್ತರಿಸುವುದು, ಹೊಡೆಯುವುದು, ಕಟ್ಟುವುದು, ಬಿಡುವುದು, ಹಿಡಿಯುವುದು, ಮೃತ್ಯುವನ್ನೂ ಕಾಲವನ್ನೂ ಜಯಿಸುವುದು, ಈ ಶಕ್ತಿಗಳು ಹಿಂದಿನ ಚಾಂದ್ರಮಸೈಶ್ವರ್ಯಗಳಿಂದ ಕೂಡಿ ಐವತ್ತಾರು ಗುಣಗಳುಳ್ಳದ್ದಾಗಿ ಅಭಿಮಾನಿಕೈಶ್ವರ್ಯ ಅಥವಾ ಪ್ರಾಜಾಪತ್ಯೈಶ್ವರ್ಯವೆನಿಸುವುದು.

೩೭-೩೯. ಸಂಕಲ್ಪಮಾತ್ರದಿಂದಲೇ ಸೃಷ್ಟಿ ಸ್ಥಿತಿ ಸಂಹಾರಗಳನ್ನು ಮಾಡುವುದು, ಎಲ್ಲ ಪ್ರಾಣಿಗಳಮೇಲೆಯೂ ತನ್ನಧಿಕಾರವನ್ನಿಟ್ಟುಕೊಂಡು ಅವುಗಳ ಮನಸ್ಸನ್ನು ನಡೆಸುವುದು, ಅಸಮಾನವಾದ ಬೇರೊಂದು ಜಗತ್ತನ್ನು

ಸ್ವಾಧಿಕಾರಶ್ಚ ಸರ್ವೇಷಾಂ ಭೂತಚಿತ್ತಪ್ರವರ್ತನಂ ।
ಅಸಾದೃಶ್ಯಂ ಚ ಸರ್ವಸ್ಯ ನಿರ್ಮಾಣಂ ಜಗತಃ ಪೃಥಕ್ ॥ ೩೮ ॥

ಶುಭಾಶುಭಸ್ಯ ಕರಣಂ ಪ್ರಾಜಾಪತ್ಯೈಶ್ಚ ಸಂಯುತಂ ।
ಚತುಷ್ಷಷ್ಟಿಗುಣಂ ಬ್ರಾಹ್ಮಮೈಶ್ವರ್ಯಂ ಚ ಪ್ರಚಕ್ಷತೇ ॥ ೩೯ ॥

ಬೌದ್ಧಾದಸ್ಮಾತ್ಪರಂ ಗೌಣಮೈಶ್ವರ್ಯಂ ಪ್ರಾಕೃತಂ ವಿದುಃ ।
ವೈಷ್ಣವಂ ತತ್ಸಮಾಖ್ಯಾತಂ ತಸ್ಯೈವ ಭುವನಸ್ಥಿತಿಃ ।
ಬ್ರಹ್ಮಣಾ ತತ್ಪದಂ ಸರ್ವಂ ವಕ್ತುಮನ್ಯೈರ್ನ ಶಕ್ಯತೇ ॥ ೪೦ ॥

ತತ್ಪೌರುಷಂ ಚ ಗೌಣಂ ಚ ಗಾಣೇಶಂ ಪದಮೈಶ್ವರಂ ।
ವಿಷ್ಣುನಾ ತತ್ಪದಂ ಕಿಂಚಿಜ್ಜ್ಞಾತುಮನ್ಯೈರ್ನ ಶಕ್ಯತೇ ॥ ೪೧ ॥

ವಿಜ್ಞಾನಸಿದ್ಧಯಶ್ಚೈವ ಸರ್ವಾ ಏವೌಪಸರ್ಗಿಕಾಃ ।
ನಿರೋದ್ಧವ್ಯಾಃ ಪ್ರಯತ್ನೇನ ವೈರಾಗ್ಯೇಣ ಪರೇಣ ತು ॥ ೪೨ ॥

---

ನಿರ್ಮಿಸುವುದು, ಶುಭಾಶುಭಗಳನ್ನುಂಟುಮಾಡುವುದು, ಪ್ರಾಜಾಪತ್ಯೈಶ್ವರ್ಯ ದಿಂದ ಕೂಡಿ ಅರವತ್ತುನಾಲ್ಕು ಗುಣಗಳುಳ್ಳುದು ಬ್ರಾಹ್ಮೈಶ್ವರ್ಯವೆನಿಸುವುದು.

೪೦. ಮೇಲೆ ಹೇಳಿದ ಬುದ್ಧಿಸಂಬಂಧವಾದ ಐಶ್ವರ್ಯಗಳಿಗಿಂತಲೂ, ಉತ್ತಮವಾದ ಗುಣಸಂಬಂಧವಾದ ಪ್ರಾಕೃತೈಶ್ವರ್ಯವು ವೈಷ್ಣವೈಶ್ವರ್ಯವೆನಿಸು ವುದು. ಇದರಿಂದಲೇ ಜಗತ್ತು ನಿಂತಿರುವುದು. ಈ ವೈಷ್ಣವೈಶ್ವರ್ಯವು ಬ್ರಹ್ಮನಲ್ಲದೆ ಮಿಕ್ಕವರಿಂದ ಹೇಳಲು ಸಾಧ್ಯವಾದುದಲ್ಲ.

೪೧. ಇದಕ್ಕಿಂತಲೂ ಉತ್ತಮವಾದ ತ್ರಿಗುಣಸಂಬಂಧವಾದ ಪುರುಷೈ ಶ್ವರ್ಯವೇ ಗುಣೈಶ್ವರ್ಯವು. ವಿಷ್ಣುವು ಐಶ್ವರ್ಯವನ್ನು ಸ್ವಲ್ಪಮಟ್ಟಿಗೆ ತಿಳಿಯ ಬಲ್ಲನು. ಇತರರು ಇದನ್ನು ತಿಳಿಯಲಾರರು.

೪೨. ವಿಜ್ಞಾನಸಿದ್ಧಿಯನ್ನುಂಟುಮಾಡುವ ಈ ಸಮಸ್ತಯೋಗಸಿದ್ಧಿ ಗಳೂ ಮೋಕ್ಷಕ್ಕೆ ವಿಘ್ನಕಾರಿಗಳು. ಇವುಗಳನ್ನು ಉತ್ತಮವಾದ ವೈರಾಗ್ಯ ದಿಂದ ಪ್ರಯತ್ನಪೂರ್ವಕವಾಗಿ ತಡೆಯಬೇಕು.

ಪ್ರತಿಭಾಸೇಷ್ವಶುದ್ಧೇಷು ಗುಣೇಷ್ವಾಸಕ್ತಚೇತಸಃ ।
ನ ಸಿದ್ಧ್ಯೇತ್ಪರಮೈಶ್ವರ್ಯಮಭಯಂ ಸಾರ್ವಕಾಮಿಕಂ ॥ ೪೩ ॥

ತಸ್ಮಾದ್ಗುಣಾಂಶ್ಚ ಭೋಗಾಂಶ್ಚ ದೇವಾಸುರಮಹೀಭೃತಾಂ ।
ತೃಣವದ್ಯಸ್ತ್ಯಜೇತ್ತಸ್ಯ ಯೋಗಸಿದ್ಧಿಃ ಪರಾ ಭವೇತ್ ॥ ೪೪ ॥

ಅಥವಾನುಗ್ರಹೇಚ್ಛಾಯಾಂ ಜಗತೋ ವಿಚರೇನ್ಮುನಿಃ ।
ಯಥಾಕಾಮಂ ಗುಣಾನ್ಭೋಗಾನ್ಭುಕ್ತ್ವಾ ಮುಕ್ತಿಂ ಪ್ರಯಾಸ್ಯತಿ ॥ ೪೫ ॥

ಅಥ ಪ್ರಯೋಗಂ ಯೋಗಸ್ಯ ವಕ್ಷ್ಯೇ ಶೃಣು ಸಮಾಹಿತಃ ।
ಶುಭೇ ಕಾಲೇ ಶುಭೇ ದೇಶೇ ಶಿವಕ್ಷೇತ್ರಾದಿಕೇ ಪುನಃ ॥ ೪೬ ॥

ವಿಜನೇ ಜಂತುರಹಿತೇ ನಿಶ್ಶಬ್ದೇ ಬಾಧವರ್ಜಿತೇ ।
ಸುಪ್ರಲಿಪ್ತೇ ಸ್ಥಲೇ ಸೌಮ್ಯೇ ಗಂಧಧೂಪಾದಿವಾಸಿತೇ ।
ಮುಕ್ತಪುಷ್ಪಸಮಾಕೀರ್ಣೇ ವಿತಾನಾದಿವಿಚಿತ್ರಿತೇ ॥ ೪೭ ॥

---

೪೩. ಭ್ರಾಂತಿಸ್ವರೂಪವೂ, ಅಶುದ್ಧವೂ ಆದ ಸಿದ್ಧಿರೂಪವಾದ ಗುಣಗಳಲ್ಲಿ ಆಸಕ್ತನಾದ ಮನುಷ್ಯರಿಗೆ ಎಲ್ಲರೂ ಇಷ್ಟಪಡುವ, ಭಯರಹಿತವಾದ, ಅತ್ಯಂತ ಸುಖೈಶ್ವರ್ಯರೂಪವಾದ ಮೋಕ್ಷವು ಸಿದ್ಧಿಸುವುದಿಲ್ಲ.

೪೪. ಆದುದರಿಂದ ದೇವತೆಗಳ, ಅಸುರರ ಮತ್ತು ರಾಜಗುಣಗಳನ್ನೂ ಸುಖಾನುಭವಗಣನ್ನೂ, ಹುಲ್ಲಿನಂತೆ ಯಾರು ತ್ಯಾಗಮಾಡುವರೋ, ಅವರಿಗೆ ಉತ್ತಮವಾದ ಯೋಗಸಿದ್ಧಿರೂಪವಾದ ಮೋಕ್ಷವುಂಟಾಗುವುದು.

೪೫. ಅಥವಾ ಅಂತಹ ಸಿದ್ಧನು ಮೌನವಾಗಿ ಲೋಕದ ಜನರಿಗೆ ಅನುಗ್ರಹಮಾಡುವುದರಿಂದ ಅವರ ದುಃಖಗಳನ್ನು ನಿವಾರಣೆಮಾಡಬೇಕೆಂಬ ಅಪೇಕ್ಷೆಯಿಂದ ಸಂಚರಿಸುತ್ತಲಿರುವನು. ಅವನು ತನ್ನ ಇಷ್ಟಾನುಸಾರವಾಗಿ ಗುಣಗಳನ್ನೂ, ಭೋಗಗಳನ್ನೂ, ಅನುಭವಿಸಿ ಕೊನೆಗೆ ಮುಕ್ತಿಯನ್ನು ಹೊಂದುವನು.

೪೬–೪೭. ಇಲ್ಲಿಂದ ಮುಂದೆ ಯೋಗಾಭ್ಯಾಸವಿಧಿಯನ್ನು ಹೇಳುವೆನು. ಏಕಾಗ್ರಚಿತ್ತದಿಂದ ಕೇಳು. ಶುಭವಾದ ಕಾಲದಲ್ಲಿ ಮಂಗಳಕರವಾದ ಶಿವಕ್ಷೇತ್ರಾದಿಗಳಲ್ಲಿ ಜನರ ಗದ್ದಲವಿಲ್ಲದೆ ದುಷ್ಟಪ್ರಾಣಿಗಳ ಸಂಚಾರವಿಲ್ಲದೆ ನಿಶ್ಶಬ್ದವಾದ, ಯಾವ ತೊಂದರೆಯೂ ಇಲ್ಲದ ಪ್ರದೇಶದಲ್ಲಿ ನೆಲವನ್ನು ಗೋಮಯದಿಂದ

ಕುಶಪುಷ್ಪಸಮಿತ್ತೋಯಫಲಮೂಲಸಮನ್ವಿತೇ ।
ನಾಗ್ನ್ಯಭ್ಯಾಶೇ ಜಲಾಭ್ಯಾಶೇ ಶುಷ್ಕಪರ್ಣಚಯೇಽಪಿ ವಾ ॥ ೪೮ ॥

ನ ದಂಶಮಶಕಾಕೀರ್ಣೇ ಸರ್ಪಶ್ವಾಪದಸಂಕುಲೇ ।
ನ ಚ ದುಷ್ಟಮೃಗಾಕೀರ್ಣೇ ನ ಭಯೇ ದುರ್ಜನಾವೃತೇ ॥ ೪೯ ॥

ಶ್ಮಶಾನೇ ಚೈತ್ಯವಲ್ಮೀಕೇ ಜೀರ್ಣಾಗಾರೇ ಚತುಷ್ಪಥೇ ।
ನದೀನದಸಮುದ್ರಾಣಾಂ ತೀರೇ ರಥ್ಯಾಂತರೇಽಪಿ ವಾ ॥ ೫೦ ॥

ನ ಜೀರ್ಣೋದ್ಯಾನಗೋಷ್ಠಾದೌ ನಾನಿಷ್ಟೇ ನ ಚ ನಿಂದಿತೇ ।
ನಾಜೀರ್ಣಾಮ್ಲರಸೋದ್ಗಾರೇ ನ ಚ ವಿಣ್ಮೂತ್ರದೂಷಿತೇ ॥ ೫೧ ॥

ನ ಚ್ಛರ್ದ್ಯಾಮಾತಿಸಾರೇ ವಾ ನಾತಿಭುಕ್ತೌ ಶ್ರಮಾನ್ವಿತೇ ।
ನ ಚಾತಿಚಿಂತಾಕುಲಿತೋ ನ ಚಾತಿಕ್ಷುತ್ಪಿಪಾಸಿತಃ ॥ ೫೨ ॥

---

ಸಾರಿಸಿ ಅಲ್ಲಿ ಗಂಧವ ಹೊಗೆಯನ್ನು ಹಾಕಿ ಹೂಗಳನ್ನು ಹರಡಿ ಮೇಲ್ಕಟ್ಟು ಗಳಿಂದಲಂಕರಿಸಿ ದರ್ಭೆ, ಹೂ, ಸಮಿತ್ತು, ನೀರು, ಹಣ್ಣುಗಳು, ಗೆಡ್ಡೆಗೆಣಸು ಗಳಿಂದ ತುಂಬಿದ ಪ್ರದೇಶದಲ್ಲಿ ಯೋಗಾಭ್ಯಾಸವನ್ನು ಮಾಡಬೇಕು.

೪೮-೫೦. ಬೆಂಕಿ, ನೀರು, ಒಣಗಿದೆಲೆಗಳು ಇವುಗಳ ಸಮೀಪದಲ್ಲಿಯೂ ಸೊಳ್ಳೆ, ನೊಣ, ಹಾವು, ಕ್ರೂರಮೃಗಗಳು, ದುರ್ಜನರು ಇವರುಗಳಿರುವ ಸ್ಥಳ ದಲ್ಲಿಯೂ, ಭಯವುಳ್ಳ ಸ್ಥಳ, ಶ್ಮಶಾನ, ಹುತ್ತ, ದೇವಾಲಯ, ಹಳೆಯಮನೆ, ನಾಲ್ಕುಬೀದಿಗಳು ಕೂಡುವ ಸ್ಥಳ, ನದಿ, ಸಮುದ್ರಗಳ ತೀರ, ತಿರುಗಾಡುವ ದಾರಿ ಈ ಸ್ಥಳಗಳಲ್ಲಿಯೂ ಯೋಗಾಭ್ಯಾಸಮಾಡಬಾರದು.

೫೧-೫೨. ಹಳೆಯದಾದ ಉದ್ಯಾನವನದಲ್ಲಿಯೂ, ದನಗಳನ್ನುಕಟ್ಟುವ ಸ್ಥಳಗಳಲ್ಲಿಯೂ, ನಿಂದ್ಯವಾದ, ಅಶುಚಿಯಾದ ಸ್ಥಳಗಳಲ್ಲಿಯೂ, ಅಜೀರ್ಣದಿಂದ ವಾಂತಿಮಾಡಿದ ಮತ್ತು ಮೂತ್ರಪುರೀಷಗಳನ್ನು ವಿಸರ್ಜಿಸಿದ ಸ್ಥಳದಲ್ಲಿಯೂ, ಯೋಗಾಭ್ಯಾಸವನ್ನು ಮಾಡಬಾರದು. ಅತಿಸಾರವೆಂಬ ರೋಗಬಂದವನೂ, ಹೆಚ್ಚಾಗಿ ಊಟಮಾಡಿದವನೂ, ಶ್ರಮಪಟ್ಟು ಕೆಲಸಮಾಡಿದವನೂ, ಮನಸ್ಸಿನ ದುಃಖವುಳ್ಳವನೂ, ಹಸಿವು ಬಾಯಾರಿಕೆಗಳಿಂದ ಕೂಡಿದವನೂ, ತನ್ನ ಗುರುಗಳ ಕಾರ್ಯದಲ್ಲಿ ಆಸಕ್ತನಾದವನೂ ಯೋಗಾಭ್ಯಾಸವನ್ನೂ ಮಾಡಬಾರದು.

ನಾऽಪಿ ಸ್ವ ಗುರುಕರ್ಮಾದೌ ಪ್ರಸಕ್ತೋ ಯೋಗಮಾಚರೇತ್ ।
ಯುಕ್ತಾಹಾರವಿಹಾರಶ್ಚ ಯುಕ್ತಚೇಷ್ಟಶ್ಚ ಕರ್ಮಸು ॥ ೫೩ ॥

ಯುಕ್ತನಿದ್ರಾಪ್ರಬೋಧಶ್ಚ ಸರ್ವಾಯಾಸವಿವರ್ಜಿತಃ ।
ಆಸನಂ ಮೃದುಲಂ ರಮ್ಯಂ ವಿಪುಲಂ ಸುಸಮಂ ಶುಚಿ ॥ ೫೪ ॥

ಪದ್ಮಕಸ್ವಸ್ತಿಕಾದೀನಾಮಭ್ಯಸೇದಾಸನೇಷು ಚ ।
ಅಭಿವಂದ್ಯ ಸ್ವಗುರ್ವಂತಾನಭಿವಾದ್ಯಾನನುಕ್ರಮಾತ್! ॥ ೫೫ ॥

ಋಜುಗ್ರೀವಶಿರೋವಕ್ಷಾ ನಾತಿಷ್ಠೇಚ್ಛಿಷ್ಟಲೋಚನಃ ।
ಕಿಂಚಿದುನ್ನಮಿತಶಿರಾ ದಂತೈರ್ದಂತಾನ್ನ ಸಂಸ್ಪೃಶೇತ್ ॥ ೫೬ ॥

ದಂತಾಗ್ರಸಂಸ್ಥಿತಾಂ ಜಿಹ್ವಾಮಚಲಾಂ ಸನ್ನಿವೇಶ್ಯ ಚ ।
ಪಾರ್ಷ್ಣಿಭ್ಯಾಂ ವೃಷಣೌ ರಕ್ಷಂಸ್ತಥಾ ಪ್ರಜನನಂ ಪುನಃ ॥ ೫೭ ॥

ಊರ್ವೋರುಪರಿ ಸಂಸ್ಥಾಪ್ಯ ಬಾಹು ತಿರ್ಯಗಯತ್ನತಃ ।
ದಕ್ಷಿಣಂ ಕರಪೃಷ್ಠಂ ತು ನ್ಯಸ್ಯ ವಾಮತಲೋಪರಿ ॥ ೫೮ ॥

---

೫೩-೫೫. ಯೋಗಿಯು ಆಹಾರ, ವಿಹಾರ, ನಿದ್ರೆ, ಕೆಲಸಗಳು, ಎಚ್ಚರ ಇವುಗಳಲ್ಲಿ ತನ್ನ ಶರೀರಕ್ಕೆ ಎಷ್ಟುಬೇಕೋ ಅಷ್ಟನ್ನೇ ಉಪಯೋಗಿಸಿಕೊಂಡು, ಯಾವವಿಧವಾದ ಆಯಾಸವನ್ನೂ ಹೊಂದದೆ ಮೃದುವಾಗಿಯೂ, ಸುಂದರವಾಗಿ ಪರಿಶುದ್ಧವಾಗಿಯೂ, ವಿಸ್ತಾರವಾಗಿಯೂ ಇರುವ ಪೀಠದಲ್ಲಿ ಪದ್ಮಕ, ಸ್ವಸ್ತಿಕ ಮುಂತಾದ ಆಸನದಲ್ಲಿ ಕುಳಿತು ತನ್ನ ಗುರುವಿಗೆ ನಮಸ್ಕಾರಮಾಡಿ ಯೋಗ ವನ್ನು ಅಭ್ಯಾಸಮಾಡಬೇಕು.

೫೬-೫೮. ಯೋಗಿಯು ತನ್ನ ಕುತ್ತಿಗೆ ತಲೆ ಎದೆಗಳನ್ನು ಸರಳವಾಗಿ ಟ್ಟುಕೊಂಡು ಸ್ವಲ್ಪ ಮೇಲಕ್ಕೆ ತಲೆಯನ್ನೆತ್ತಿ ಕಣ್ಣುಗಳಿಂದ ಇತರವಸ್ತುಗಳನ್ನು ನೋಡದೆ ಮೂಗಿನ ತುದಿಯನ್ನೇ ನೋಡುತ್ತ ಹಲ್ಲುಗಳಿಗೆ ಹಲ್ಲುಗಳನ್ನು ಕೂಡಿ ಸದೆ ಹಲ್ಲುಗಳ ತುದಿಯಲ್ಲಿರುವ ನಾಲಗೆಯನ್ನು ಚಲಿಸದಂತೆಮಾಡಿ ಕಾಲು ಹಿಮ್ಮಡಿಗಳಿಂದ ವೃಷಣವನ್ನೂ ಪ್ರಜಾಪತಿಯನ್ನೂ ಒತ್ತಿಕೊಂಡು ತೊಡೆಗಳ ಮೇಲೆ ತೋಳುಗಳನ್ನು ಅಡ್ಡಲಾಗಿಟ್ಟು ಎಡದ ಅಂಗೈಮೇಲೆ ಬಲದ ಮುಂಗೈ ಯ್ಯನ್ನಿಟ್ಟು,

ಉನ್ನಾಮ್ಯ ಶನಕೈಃ ಪೃಷ್ಠಮುರೋ ವಿಷ್ಟಭ್ಯ ಚಾಗ್ರತಃ ।
ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥ ೫೯ ॥

ಸಂಭೃತಪ್ರಾಣಸಂಚಾರಃ ಪಾಷಾಣ ಇವ ನಿಶ್ಚಲಃ ।
ಸ್ವದೇಹಾಯತನಸ್ಯಾಂತರ್ವಿಚಿಂತ್ಯ ಶಿವಮಂಬಯಾ ॥ ೬೦ ॥

ಹೃತ್ಪದ್ಮಪೀಠಿಕಾಮಧ್ಯೇ ಧ್ಯಾನಯಜ್ಞೇನ ಪೂಜಯೇತ್ ।
ಮೂಲೇ ನಾಸಾಗ್ರತೋ ನಾಭೌ ಕಂಠೇ ವಾ ತಾಲುರಂಧ್ರಯೋಃ ॥ ೬೧ ॥

ಭ್ರೂಮಧ್ಯೇ ದ್ವಾರದೇಶೇ ವಾ ಲಲಾಟೇ ಮೂರ್ಧ್ನಿ ವಾ ಸ್ಮರೇತ್ ।
ಪರಿಕಲ್ಪ್ಯ ಯಥಾನ್ಯಾಯಂ ಶಿವಯೋಃ ಪರಮಾಸನಂ ॥ ೬೨ ॥

ತತ್ರ ಸಾವರಣಂ ವಾಪಿ ನಿರಾವರಣಮೇವ ವಾ ।
ದ್ವಿದಳೇ ಷೋಡಶಾರೇ ವಾ ದ್ವಾದಶಾರೇ ಯಥಾವಿಧಿ ॥ ೬೩ ॥

ದಶಾರೇ ವಾ ಷಡಸ್ರೇ ವಾ ಚತುರಸ್ರೇ ಶಿವಂ ಸ್ಮರೇತ್ ।
ಭ್ರುವೋರಂತರತಃ ಪದ್ಮಂ ದ್ವಿದಲಂ ತಡಿದುಜ್ಜ್ವಲಂ ॥ ೬೪ ॥

---

೫೯-೬೦. ಪೃಷ್ಠದೇಶವನ್ನು ಮೆಲ್ಲಗೆ ಮೇಲಕ್ಕೆತ್ತಿ ಬಗ್ಗಿಸಿ ಎದೆಯನ್ನು ಮುಂದಕ್ಕೆ ಚಾಚಿ ಮೂಗಿನ ತುದಿಯನ್ನು ನೋಡುತ್ತ ಪ್ರಾಣವಾಯುವಿನ ಸಂಚಾರವನ್ನು ತಡೆದು ಕಲ್ಲಿನಂತೆ ಚಲಿಸದೆ ತನ್ನ ಶರೀರದೊಳಗೆ ದೇವೀಸಹಿತನಾದ ಶಿವನನ್ನು ಹೃದಯಕಮಲದ ನಡುವೆ ಧ್ಯಾನರೂಪವಾದ ಯಜ್ಞದಿಂದ ಪೂಜಿಸಬೇಕು.

೬೧-೬೨. ಮೂಲಾಧಾರ, ನಾಸಿಕಾಗ್ರ, ನಾಭಿ, ಕಂಠ, ದವಡೆಗಳು, ಹುಬ್ಬುಗಳನಡುವೆ, ಹಣೆ, ನೆತ್ತಿ, ಈ ಸ್ಥಳಗಳಲ್ಲಿ ಒಂದೆಡೆಯಲ್ಲಿ ಶಿವದಂಪತಿಗಳಿಗೆ ಉತ್ತಮವಾದ ಪೀಠವನ್ನು ಕಲ್ಪಿಸಿ ಧ್ಯಾನಮಾಡಬೇಕು.

೬೩-೬೪. ಮೇಲೆ ಹೇಳಿದ ಪ್ರದೇಶಗಳಲ್ಲಿರುವ ದ್ವಿದಳ, ಷೋಡಶದಳ, ದ್ವಾದಶದಳ, ದಶದಳ, ಷಡ್ದಳ, ಚತುರಸ್ರ ಕಮಲಗಳ ನಡುವೆ ಆವರಣದೇವತಾಸಹಿತವಾಗಲಿ, ನಿರಾವರಣವಾಗಲಿ ಶಿವದಂಪತಿಗಳನ್ನು ಧ್ಯಾನಿಸಬೇಕು. ಭ್ರೂಮಧ್ಯದಲ್ಲಿರುವ ಕಮಲವು ಎರಡು ದಳಗಳುಳ್ಳುದಾಗಿ ಮಿಂಚಿನಂತೆ ಪ್ರಕಾಶಿಸುತ್ತಿರುವುದು.

ಭ್ರೂಮಧ್ಯಸ್ಥಾರವಿಂದಸ್ಯ ಕ್ರಮಾದ್ವೈ ದಕ್ಷಿಣೋತ್ತರೇ ।
ವಿದ್ಯುತ್ಸಮಾನವರ್ಣೇ ಚ ಪರ್ಣೇ ವರ್ಣಾವಸಾನಕೇ ॥ ೬೫ ॥

ಷೋಡಶಾರಸ್ಯ ಪತ್ರಾಣಿ ಸ್ವರಾಃ ಷೋಡಶ ತಾನಿ ವೈ ।
ಪೂರ್ವಾದೀನಿ ಕ್ರಮಾದೇತತ್ಪದ್ಮಂ ಕಂದಸ್ಯ ಮೂಲತಃ ॥ ೬೬ ॥

ಕಕಾರಾದಿಠಕಾರಾಂತಾ ವರ್ಣಾಃ ಪರ್ಣಾನ್ಯನುಕ್ರಮಾತ್ ।
ಭಾನುವರ್ಣಸ್ಯ ಪದ್ಮಸ್ಯ ಧ್ಯೇಯಂ ತದ್ಧೃದಯಾಂತರೇ ॥ ೬೭ ॥

ಗೋಕ್ಷೀರಧವಳಸ್ಯೋಕ್ತಾ ಡಾದಿಫಾಂತಾ ಯಥಾಕ್ರಮಂ ।
ಅಧೋ ದಲಸ್ಯಾಂಬುಜಸ್ಯ ಏತಸ್ಯ ಚ ದಲಾನಿ ಷಟ್ ॥ ೬೮ ॥

ವಿಧೂಮಾಂಗಾರವರ್ಣಸ್ಯ ವರ್ಣಾ ಬಾಹ್ಯಾಶ್ಚ ಲಾಂತಿಮಾಃ ।
ಮೂಲಾಧಾರಾರವಿಂದಸ್ಯ ಹೇಮಾಭಸ್ಯ ಯಥಾಕ್ರಮಂ ।
ವಕಾರಾದಿಸಕಾರಾಂತಾ ವರ್ಣಾಃ ಪರ್ಣಮಯಾಃ ಸ್ಥಿತಾಃ ॥ ೬೯ ॥

೬೫-೬೬. ಹುಬ್ಬುಗಳ ನಡುವೆ ಇರುವ ಕಮಲಕ್ಕೆ ಉತ್ತರ ದಕ್ಷಿಣವಲ್ಲಿ ಎರಡು ದಳಗಳು ಹಂ, ಕ್ಷಂ, ಎಂಬೆರಡಕ್ಷರಗಳಿಂದ ಕೂಡಿರುವುದು. ಹದಿನಾರು ದಳಗಳುಳ್ಳ ಕಮಲದಲ್ಲಿ ಹದಿನಾರು ಸ್ವರಾಕ್ಷರಗಳು ಪೂರ್ವಾದಿಯಾಗಿ ಇರುವುವು.

೬೭-೬೯. ಹನ್ನೆರಡು ದಳಗಳುಳ್ಳ ಕಮಲದ ದಳದಲ್ಲಿ ಕಕಾರಾದಿ ಠಕಾರಾಂತವಾಗಿ ಹನ್ನೆರಡಕ್ಷರಗಳಿರುವುವು. ಹತ್ತು ದಳಗಳಿರುವ ಕಮಲದಲ್ಲಿ ಡಕಾರಾದಿ ಫಕಾರಾಂತವಾಗಿ ಹತ್ತು ಅಕ್ಷರಗಳಿರುವುವು. ಆರು ದಳಗಳುಳ್ಳ ಕಮಲದಲ್ಲಿ ಬಕಾರಾದಿ ಲಕಾರಾಂತವಾಗಿ ಆರು ಅಕ್ಷರಗಳೂ, ನಾಲ್ಕು ದಳಗಳಿರುವ ಕಮಲದಳಗಳಲ್ಲಿ ವಕಾರಾದಿ ಸಕಾರಾಂತವಾಗಿ ನಾಲ್ಕು ಅಕ್ಷರಗಳೂ ಇರುವುವು.

**ಏತೇಷ್ವಥಾರವಿಂದೇಷು ಯತ್ರೈವಾಭಿರತಂ ಮನಃ ।**
**ತತ್ರೈವ ದೇವಂ ದೇವೀಂ ಚ ಚಿಂತಯೇದ್ಧೀರಯಾ ಧಿಯಾ ॥ ೭೦ ॥**

**ಅಂಗುಷ್ಠಮಾತ್ರಮಮಲಂ ದೀಪ್ಯಮಾನಂ ಸಮಂತತಃ ।**
**ಶುದ್ಧದೀಪಶಿಖಾಕಾರಂ ಸ್ವಶಕ್ತ್ಯಾ ಪೂರ್ಣಮಂಡಿತಂ ॥ ೭೧ ॥**

**ಇಂದುರೇಖಾಸಮಾಕಾರಂ ತಾರಾರೂಪಮಥಾಪಿ ವಾ ।**
**ನೀವಾರಶೂಕಸದೃಶಂ ಬಿಸಸೂತ್ರಾಭಮೇವ ವಾ ॥ ೭೨ ॥**

**ಕದಂಬಗೋಳಕಾಕಾರಂ ತುಷಾರಕಣಿಕೋಪಮಂ ।**
**ಕ್ಷಿತ್ಯಾದಿತತ್ತ್ವವಿಜಯಂ ಧ್ಯಾತಾ ಯದ್ಯಪಿ ವಾಂಛತಿ ॥ ೭೩ ॥**

**ತತ್ತತ್ತತ್ತ್ವಾಧಿಪಾಮೇವ ಮೂರ್ತಿಂ ಸ್ಥೂಲಾಂ ವಿಚಿಂತಯೇತ್ ।**
**ಸದಾಶಿವಾಂತಾ ಬ್ರಹ್ಮಾದ್ಯಾ ಭವಾದ್ಯಾಶ್ಚಾಷ್ಟಮೂರ್ತಯಃ ॥ ೭೪ ॥**

---

೭೦. ಈ ಶರೀರದಲ್ಲಿರುವ ಷಟ್ಚಕ್ರರೂಪವಾದ ಕಮಲಗಳಲ್ಲಿ ಯೋಗಿಯ ಮನಸ್ಸು ಎಲ್ಲಿ ಆಸಕ್ತವಾಗುವುದೋ ಅಲ್ಲಿಯೇ ಶಿವದಂಪತಿಗಳನ್ನು ಧೈರ್ಯವಾಗಿ ಧ್ಯಾನಿಸಬೇಕು.

೭೧–೭೩. ಹೆಬ್ಬೆರಳಿನ ಗಾತ್ರದಷ್ಟು ನಿರ್ಮಲವಾಗಿ ಪ್ರಕಾಶಿಸುವ ಪುರುಷನನ್ನೋ, ಪರಿಶುದ್ಧವಾದ ದೀಪದ ಶಿಖೆಯಂತಿರುವ ತನ್ನ ಸಂಪೂರ್ಣ ಶಕ್ತಿಯಿಂದಲಂಕೃತನಾದ ಪುರುಷನನ್ನೋ, ಚಂದ್ರಕಲೆ, ನಕ್ಷತ್ರರೂಪ, ಬತ್ತದ ಮುಳ್ಳಿನಂತಿರುವ ಸೂಕ್ಷ್ಮರೂಪ, ತಾವರೆಯ ದಂಟಿನ ದಾರದಂತಿರುವ ರೂಪ, ಕದಂಬವೃಕ್ಷದ ಗೋಲಕದಂತಿರುವ ರೂಪ, ಹಿಮದ ಕಿರಣದಂತಿರುವ ಸೂಕ್ಷ್ಮರೂಪ, ಇವುಗಳಲ್ಲೊಂದರ ರೂಪವನ್ನೋ ಧ್ಯಾನಿಸಬೇಕು. ಧ್ಯಾನಿಸುವ ಯೋಗಿಯು ಭೂತತತ್ತ್ವವೇ ಮೊದಲಾದ ತತ್ತ್ವಜಯವನ್ನಪೇಕ್ಷಿಸಿದರೆ ಆಯಾ ತತ್ತ್ವಾಧಿಪತಿಗಳ ಸ್ಥೂಲರೂಪವನ್ನೇ ಧ್ಯಾನಮಾಡಬೇಕು.

೭೪–೭೫. ಬ್ರಹ್ಮನೇ ಮೊದಲಾಗಿ ಸದಾಶಿವಾಂತವಾದ ಮೂರ್ತಿಗಳೂ, ಭವಾದಿಯಾದ ಎಂಟು ಮೂರ್ತಿಗಳೂ, ಶಿವನ ಸ್ಥೂಲಮೂರ್ತಿಗಳೆಂದು ಶಿವಶಾಸ್ತ್ರದಲ್ಲಿ ನಿಶ್ಚಯಮಾಡಿರುವರು. ಈ ಮೂರ್ತಿಗಳಲ್ಲಿ ಘೋರಮೂರ್ತಿಗಳೂ,

**ಶಿವಸ್ಯ ಮೂರ್ತಯಃ ಸ್ಥೂಲಾಃ ಶಿವಶಾಸ್ತ್ರೇ ವಿನಿಶ್ಚಿತಾಃ ।**
**ಘೋರಾ ಮಿಶ್ರಾಃ ಪ್ರಶಾಂತಾಶ್ಚ ಮೂರ್ತಯಸ್ತಾ ಮುನೀಶ್ವರೈಃ ॥ ೭೫ ॥**

**ಫಲಾಭಿಲಾಷರಹಿತೈಶ್ಚಿಂತ್ಯಾಶ್ಚಿಂತಾವಿಶಾರದೈಃ ।**
**ಘೋರಾಶ್ಚೇಚ್ಚಿಂತಿತಾಃ ಕುರ್ಯುಃ ಪಾಪರೋಗಪರಿಕ್ಷಯಂ ॥ ೭೬ ॥**

**ಚಿರೇಣ ಮಿಶ್ರೇ ಸೌಮ್ಯೇ ತು ನ ಸದ್ಯೋ ನ ಚಿರಾದಪಿ ।**
**ಸೌಮ್ಯೇ ಮುಕ್ತಿರ್ವಿಶೇಷೇಣ ಶಾಂತಿಃ ಪ್ರಜ್ಞಾ ಪ್ರಸಿದ್ಧ್ಯತಿ ॥ ೭೭ ॥**

**ಸಿದ್ಧ್ಯಂತಿ ಸಿದ್ಧಯಶ್ಚಾತ್ರ ಕ್ರಮಶೋ ನಾತ್ರ ಸಂಶಯಃ ॥ ೭೮ ॥**

**ಇತಿ ಶ್ರೀಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-ಮುತ್ತರಭಾಗೇ ಯೋಗಗತೌ ವಿಘ್ನೋತ್ಪತ್ತಿವರ್ಣನಂ ನಾಮ ಅಷ್ಟತ್ರಿಂಶೋಧ್ಯಾಯಃ**

---

ಶಾಂತಮೂರ್ತಿಗಳೂ, ವಿಶ್ವಮೂರ್ತಿಗಳೂ ಇರುವುವೆಂದು ಮುನೀಂದ್ರರು ಹೇಳುವರು. ಫಲಾಪೇಕ್ಷೆಯಿಲ್ಲದವರು ಈ ಮೂರ್ತಿಗಳನ್ನು ಧ್ಯಾನಮಾಡುವರು.

೭೬-೭೮. ಘೋರಮೂರ್ತಿಗಳನ್ನು ಧ್ಯಾನಮಾಡಿದರೆ ಅದರಿಂದ ಪಾಪಗಳೂ, ರೋಗಗಳೂ, ನಾಶವಾಗುವುವು. ಈ ಫಲವು ಬಹಳಕಾಲದಮೇಲೆ ಉಂಟಾಗುವುವು. ಮಿಶ್ರಮೂರ್ತಿಗಳೂ, ಸೌಮ್ಯಮೂರ್ತಿಗಳೂ, ಆ ಕ್ಷಣದಲ್ಲಾಗಲಿ, ಬಹಳಕಾಲದ ಮೇಲಾಗಲಿ, ಪಾಪಗಳನ್ನು ನಾಶಮಾಡಲಾರವು. ಸೌಮ್ಯಮೂರ್ತಿಧ್ಯಾನದಿಂದ ಶಾಂತಿಯೂ, ಜ್ಞಾನವೂ ಉಂಟಾಗಿ ವಿಶೇಷರೂಪದಿಂದಮೋಕ್ಷವೂ ಉಂಟಾಗುವುದು. ಈ ಸಂದರ್ಭದಲ್ಲಿ ಕ್ರಮವಾಗಿ ಸಿದ್ಧಿಗಳೂ ಸಿದ್ಧಿಸುವುದರಲ್ಲಿ ಸಂದೇಹವಿಲ್ಲ.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯವೀಯಸಂಹಿತೆಯ ಉತ್ತರಭಾಗದಲ್ಲಿ ಯೋಗಗತಿ ಮತ್ತು ವಿಘ್ನೋತ್ಪತ್ತಿವರ್ಣನವೆಂಬ ಮೂವತ್ತೆಂಟನೆಯ ಅಧ್ಯಾಯವು ಮುಗಿದುದು.

ಶ್ರೀಃ

॥ ಓಂ. ನಮಃ ಶಿವಾಯ ॥

---

# ಅಥ ಶ್ರೀ ಶಿವ ಮಹಾ ಪುರಾಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ಏಕೋನಚತ್ವಾರಿಂಶೋऽಧ್ಯಾಯಃ



॥ ಉಪಮನ್ಯುರುವಾಚ ॥

ಶ್ರೀಕಂಠನಾಥಂ ಸ್ಮರತಾಂ ಸದ್ಯಃ ಸರ್ವಾರ್ಥಸಿದ್ಧಯಃ ।
ಪ್ರಸಿಧ್ಯಂತೀತಿ ಮತ್ವೈಕೇ ತಂ ವೈ ಧ್ಯಾಯಂತಿ ಯೋಗಿನಃ ॥ ೧ ॥

ಸ್ಥಿತ್ಯರ್ಥಂ ಮನಸಃ ಕೇಚಿತ್ಸ್ಥೂಲಧ್ಯಾನಂ ಪ್ರಕುರ್ವತೇ ।
ಸ್ಥೂಲೇ ತು ನಿಶ್ಚಲಂ ಚೇತೋ ಭವೇತ್ಸೂಕ್ಷ್ಮೇತು ತತ್ಸ್ಥಿರಂ ॥ ೨ ॥

---

## ಮೂವತ್ತೊಂಭತ್ತನೆಯ ಅಧ್ಯಾಯವು

೧. ಉಪಮನ್ಯುವು ಹೇಳಿದನು:—ಸ್ವಾಮಿಯಾದ ಶ್ರೀಕಂಠೇಶ್ವರನನ್ನು ಸ್ಮರಿಸತಕ್ಕವರಿಗೆ ಆ ಕ್ಷಣದಲ್ಲಿಯೇ ಸಮಸ್ತವಾದ ಇಷ್ಟಾರ್ಥಸಿದ್ಧಿಗಳೂ ಉಂಟಾಗುವುವು, ಎಂಬುದಾಗಿ ಕೆಲವರು ಯೋಗಿಗಳು ಆ ದೇವನನ್ನೇ ಧ್ಯಾನಮಾಡುವರು.

೨. ಕೆಲವರು ಯೋಗಿಗಳು ಮನಸ್ಸಿನ ಏಕಾಗ್ರತೆಗಾಗಿ ಸ್ಥೂಲವಾದ ಮೂರ್ತಿಧ್ಯಾನವನ್ನು ಮಾಡುವರು. ಸ್ಥೂಲಮೂರ್ತಿಧ್ಯಾನದಿಂದ ಚಂಚಲವಾದ ಮನಸ್ಸು ಒಂದೆಡೆ ನಿಲ್ಲುವುದು. ಸೂಕ್ಷ್ಮವಸ್ತುಧ್ಯಾನದಿಂದ ಆ ಮನಸ್ಸು ಧ್ಯಾನದಲ್ಲಿ ಸ್ಥಿರವಾಗಿ ನಿಲ್ಲುವುದು.

ಶಿವೇ ತು ಚಿಂತಿತೇ ಸಾಕ್ಷಾತ್ಸರ್ವಾಃ ಸಿದ್ಧ್ಯಂತಿ ಸಿದ್ಧಯಃ ।
ಮೂರ್ತ್ಯಂತರೇಷು ಧ್ಯಾತೇಷು ಶಿವರೂಪಂ ವಿಚಿಂತಯೇತ್ ॥ ೩ ॥

ಲಕ್ಷಯೇನ್ಮನಸಃ ಸ್ಥೈರ್ಯಂ ತತ್ತದ್ಧ್ಯಾಯೇತ್ಪುನಃ ಪುನಃ ।
ಧ್ಯಾನಮಾದೌ ಸವಿಷಯಂ ತತೋ ನಿರ್ವಿಷಯಂ ಜಗುಃ ॥ ೪ ॥

ತತ್ರ ನಿರ್ವಿಷಯಂ ಧ್ಯಾನಂ ನಾಸ್ತೀತ್ಯೇವ ಸತಾಂ ಮತಂ ।
ಬುದ್ಧೇರ್ಹಿ ಸಂತತಿಃ ಕಾಚಿದ್ಧ್ಯಾನಮಿತ್ಯಭಿಧೀಯತೇ ॥ ೫ ॥

ತೇನ ನಿರ್ವಿಷಯಾ ಬುದ್ಧಿಃ ಕೇವಲೇಹ ಪ್ರವರ್ತತೇ ।
ತಸ್ಮಾತ್ಸವಿಷಯಂ ಧ್ಯಾನಂ ಬಾಲಾರ್ಕಕಿರಣಾಶ್ರಯಂ ॥ ೬ ॥

ಸೂಕ್ಷ್ಮಾಶ್ರಯಂ ನಿರ್ವಿಷಯಂ ನಾಪರಂ ಪರಮಾರ್ಥತಃ ।
ಯದ್ವಾ ಸವಿಷಯಂ ಧ್ಯಾನಂ ತತ್ಸಾಕಾರಸಮಾಶ್ರಯಂ ॥ ೭ ॥

---

೩. ಸಾಕ್ಷಾಚ್ಛಿವನನ್ನು ಧ್ಯಾನಮಾಡಿದರೆ ಸಮಸ್ತ ಇಷ್ಟಾರ್ಥಗಳೂ ಸಿದ್ಧಿಸುವುವು. ಆದುದರಿಂದ ಮನಸ್ಸಿನ ಏಕಾಗ್ರತೆಗೆ ಬೇರೆ ಮೂರ್ತಿಗಳನ್ನು ಧ್ಯಾನಿಸಿದರೂ, ಶಿವನ ಸ್ವರೂಪವನ್ನು ಅವಶ್ಯಕವಾಗಿ ಧ್ಯಾನಮಾಡಬೇಕು.

೪. ಧ್ಯಾನಾಭ್ಯಾಸವನ್ನು ಮಾಡುವ ಯೋಗಿಯು ತನ್ನ ಮನಸ್ಸಿನ ಸ್ಥಿರತೆಯನ್ನು ಗುರಿಯಾಗಿಟ್ಟುಕೊಂಡು ಮತ್ತೆಮತ್ತೆ ತನಗೆ ಬೇಕಾದ ಮೂರ್ತಿ ಧ್ಯಾನವನ್ನು ಮಾಡುತ್ತಿರಬೇಕು. ಧ್ಯಾನವು ಮೊದಲು ವಿಷಯಸಹಿತವಾಗಿರ ಬಹುದು ಆಮೇಲೆ ನಿರ್ವಿಷಯವಾದುದಾಗಿರಬೇಕು.

೫. ನಿರ್ವಿಷಯವಾದ ಧ್ಯಾನವೇಯಿಲ್ಲವೆಂದು ಸಜ್ಜನರು ಹೇಳುವರು. ಧಾರಾಕಾರವಾದ ಯಾವುದೋ ಒಂದು ಬುದ್ಧಿಯಪ್ರವಾಹರೂಪವಾದ ವೃತ್ತಿಯನ್ನು ಧ್ಯಾನವೆಂದು ಹೇಳುವರು.

೬-೭. ಆದುದರಿಂದ ಈ ಪ್ರವಾಹರೂಪ ಬುದ್ಧಿವೃತ್ತಿಯಲ್ಲಿ ನಿರ್ವಿಷಯವಾದ ಬುದ್ಧಿವೃತ್ತಿಮಾತ್ರವಿರುವುದು. ಆ ಕಾರಣದಿಂದ ಆಗತಾನೇ ಉದಯಿಸಿದ ಸೂರ್ಯಕಿರಣವನ್ನಾಶ್ರಯಿಸಿದ ಧ್ಯಾನವು ಸವಿಷಯಧ್ಯಾನವಾಗಿಯೂ, ಇದಕ್ಕಿಂತಲೂ ಸೂಕ್ಷ್ಮವಸ್ತುವನ್ನಾಶ್ರಯಿಸಿದ ಧ್ಯಾನವು ನಿರ್ವಿಷಯವಾದುದಾಗಿಯೂ,

ನಿರಾಕಾರಾತ್ಮಸಂವಿತ್ತಿರ್ಧ್ಯಾನಂ ನಿರ್ವಿಷಯಂ ಮತಂ ।
ನಿರ್ಬೀಜಂ ಚ ಸಬೀಜಂ ಚ ತದೇವ ಧ್ಯಾನಮುಚ್ಯತೇ ॥ ೮ ॥

ನಿರಾಕಾರಾಶ್ರಯತ್ವೇನ ಸಾಕಾರಾಶ್ರಯತಸ್ತಥಾ ।
ತಸ್ಮಾತ್ಸವಿಷಯಂ ಧ್ಯಾನಮಾದೌ ಕೃತ್ವಾ ಸಬೀಜಕಂ ॥ ೯ ॥

ಅಂತೇ ನಿರ್ವಿಷಯಂ ಕುರ್ಯಾನ್ನಿರ್ಬೀಜಂ ಸರ್ವಸಿದ್ಧಯೇ ।
ಪ್ರಾಣಾಯಾಮೇನ ಸಿಧ್ಯಂತಿ ದಿವ್ಯಾಃ ಶಾಂತ್ಯಾದಯಃ ಕ್ರಮಾತ್ ॥ ೧೦ ॥

ಶಾಂತಿಃ ಪ್ರಶಾಂತಿರ್ದೀಪ್ತಿಶ್ಚ ಪ್ರಸಾದಶ್ಚ ತತಃ ಪರಂ ।
ಶಮಃ ಸರ್ವಾಪದಾಂ ಚೈವ ಶಾಂತಿರಿತ್ಯಭಿಧೀಯತೇ ॥ ೧೧ ॥

ತಮಸೋಂತರ್ಬಹಿರ್ನಾಶಃ ಪ್ರಶಾಂತಿಃ ಪರಿಗೀಯತೇ ।
ಬಹಿರಂತಃ ಪ್ರಕಾಶೋ ಯೋ ದೀಪ್ತಿರಿತ್ಯಭಿಧೀಯತೇ ॥ ೧೨ ॥

ಇರುವುದು. ನಿಜವಾಗಿಯೂ ನಿರ್ವಿಷಯವಾದ ಧ್ಯಾನವೆಂಬುದು ಬೇರೆಯಾಗಿರುವುದಿಲ್ಲ. ಅಥವಾ ಒಂದು ಆಕಾರದಿಂದ ಕೂಡಿದ ವಸ್ತುವನ್ನಾಶ್ರಯಿಸಿದ ಧ್ಯಾನವು ಸವಿಷಯಧ್ಯಾನವೆಂದೂ, ಅದನ್ನೇ ಸಬೀಜಧ್ಯಾನವೆಂದೂ ಹೇಳುವರು. ನಿರಾಕಾರವಾದ ಆತ್ಮಜ್ಞಾನದ ಧ್ಯಾನವು ನಿರ್ವಿಷಯವೆಂದೂ, ಅದನ್ನೇ ನಿರ್ಬೀಜಧ್ಯಾನವೆಂದೂ ಹೇಳುವರು.

೯. ಆದುದರಿಂದ ವಿಷಯಸಹಿತವಾದ ಸಬೀಜಧ್ಯಾನವನ್ನು ಮೊದಲು ಅಭ್ಯಾಸಮಾಡಿ ಕೊನೆಯಲ್ಲಿನಿರ್ವಿಷಯವಾದ ನಿರ್ಬೀಜಧ್ಯಾನವನ್ನು ಮಾಡಬೇಕು. ಇದರಿಂದ ಸಮಸ್ತಇಷ್ಟಾರ್ಥಗಳೂ ಸಿದ್ಧಿಸುವುವು.

೧೦-೧೧. ಪ್ರಾಣಾಯಾಮಾಭ್ಯಾಸದಿಂದ ಶ್ರೇಷ್ಠವಾದ ಶ್ಯಾಂತಾದಿ ಗುಣಗಳು ಕ್ರಮವಾಗಿ ಸಿದ್ಧಿಸುವುವು. ಶಾಂತಿ, ಪ್ರಶಾಂತಿ, ದೀಪ್ತಿ, ಪ್ರಸಾದ ಇವುಗಳೇ ಆ ಗುಣಗಳು. ಸಮಸ್ತ ವಿಪತ್ತುಗಳೂ ನಾಶವಾಗುವುದೇ ಶಾಂತಿಯೆನಿಸುವುದು.

೧೨. ಹೊರಗಿನ ಮತ್ತು ಒಳಗಿನ ಅಜ್ಞಾನದ ನಾಶವೇ ಪ್ರಶಾಂತಿಯೆನಿಸುವುದು. ಹೊರಗೂ ಒಳಗೂ ಜ್ಞಾನಪ್ರಕಾಶವುಂಟಾಗುವುದೇ ದೀಪ್ತಿಯೆನಿಸುವುದು. ಬುದ್ಧಿಯ ಚಾಂಚಲ್ಯವಿಲ್ಲದಿರುವುದೇ ಪ್ರಸಾದವೆನಿಸುವುದು.

ಸ್ವಸ್ಥತಾ ಯಾ ತು ಸಾ ಬುದ್ಧೇಃ ಪ್ರಸಾದಃ ಪರಿಕೀರ್ತಿತಃ ।
ಕಾರಣಾನಿ ಚ ಸರ್ವಾಣಿ ಸ ಬಾಹ್ಯಾಭ್ಯಂತರಾಣಿ ಚ ॥ ೧೩ ॥

ಬುದ್ಧೇಃ ಪ್ರಸಾದತಃ ಕ್ಷಿಪ್ರಂ ಪ್ರಸನ್ನಾನಿ ಭವಂತ್ಯುತ ।
ಧ್ಯಾತಾ ಧ್ಯಾನಂ ತಥಾ ಧ್ಯೇಯಂ ಯದ್ವಾ ಧ್ಯಾನಪ್ರಯೋಜನಂ ॥ ೧೪ ॥

ಏತಚ್ಚತುಷ್ಟಯಂ ಜ್ಞಾತ್ವಾ ಧ್ಯಾತಾ ಧ್ಯಾನಂ ಸಮಾಚರೇತ್ ।
ಜ್ಞಾನವೈರಾಗ್ಯಸಂಪನ್ನೋ ನಿತ್ಯಮವ್ಯಗ್ರಮಾನಸಃ ॥ ೧೫ ॥

ಶ್ರದ್ಧಧಾನಃ ಪ್ರಸನ್ನಾತ್ಮಾ ಧ್ಯಾತಾ ಸದ್ಭಿರುದಾಹೃತಃ ।
ಧ್ಯೈ ಚಿಂತಾಯಾಂ ಸ್ಮೃತೌ ಧಾತುಃ ಶಿವಚಿಂತಾ ಮುಹುರ್ಮುಹುಃ ॥ ೧೬ ॥

ಯೋಗಾಭ್ಯಾಸಸ್ತಥಾಲ್ಪೋಽಪಿ ಯಥಾ ಪಾಪಂ ವಿನಾಶಯೇತ್ ।
ಧ್ಯಾಯತಃ ಕ್ಷಣಮಾತ್ರಂ ವಾ ಶ್ರದ್ಧಯಾ ಪರಮೇಶ್ವರಂ ॥ ೧೭ ॥

ಅವ್ಯಾಕ್ಷಿಪ್ತೇನ ಮನಸಾ ಧ್ಯಾನಮಿತ್ಯಭಿಧೀಯತೇ ॥ ೧೮ ॥

---

೧೩. ಹೊರಗಿನ ಮತ್ತು ಒಳಗಿನ ಈ ಸಮಸ್ತಕಾರಣಗಳೂ ಬುದ್ಧಿ ಪ್ರಸಾದದಿಂದ ಬೇಗನೆ ಫಲೋನ್ಮುಖವಾಗುವುದು.

೧೪. ಧ್ಯಾನಮಾಡತಕ್ಕವನು, ಧ್ಯಾನಸ್ವರೂಪ, ಧ್ಯಾನಕ್ಕೆ ವಿಷಯವಾದ ವಸ್ತು, ಧ್ಯಾನದ ಪ್ರಯೋಜನ ಈ ನಾಲ್ಕು ವಿಷಯದ ಸ್ವರೂಪವನ್ನು ಚೆನ್ನಾಗಿ ತಿಳಿದು ಧ್ಯಾನಮಾಡುವ ಮನುಷ್ಯನು ಧ್ಯಾನಾಭ್ಯಾಸವನ್ನು ಮಾಡಬೇಕು.

೧೫. ನಿತ್ಯಾನಿತ್ಯವಸ್ತು ವಿವೇಕರೂಪವಾದ ಜ್ಞಾನ, ಇಹಲೋಕ ಪರಲೋಕ ಸುಖಾನುಭವಗಳ ಆಸೆಯಿಲ್ಲದ ವೈರಾಗ್ಯ ಬುದ್ಧಿ, ಇವುಗಳಿಂದ ಕೂಡಿದ ವಿಕಲ್ಪವಾದ ಮನಸ್ಸಿನ ವೃತ್ತಿಯಿಲ್ಲದ, ವೇದಶಾಸ್ತ್ರಗಳಲ್ಲಿ ನಂಬಿಕೆಯುಳ್ಳ ಪರಿಶುದ್ಧಮನಸ್ಸುಳ್ಳವನೇ ಧ್ಯಾನಕ್ಕೆ ತಕ್ಕ ಮನುಷ್ಯನು.

೧೬-೧೮. ಧ್ಯೈ ಎಂಬ ಧಾತುವಿಗೆ ಆಲೋಚನೆಯೂ ಸ್ಮರಣೆಯೂ ಎಂದು ಅರ್ಥವಾಗುವುದು. ಮತ್ತೆಮತ್ತೆ ಶಿವನನ್ನು ಚಿಂತಿಸುತ್ತಿರುವುದೇ ಧ್ಯಾನವೆಂಬ ಶಬ್ದದ ಅರ್ಥವಾಗುವುದು. ಯೋಗಾಭ್ಯಾಸವು ಅಲ್ಪವಾದರೂ ಪಾಪಗಳನ್ನು ಹೇಗೆ ನಾಶಮಾಡುವುದೋ ಹಾಗೆ ಒಂದು ಕ್ಷಣಕಾಲವಾದರೂ ನಂಬಿಕೆಯಿಂದ ಪರಮೇಶ್ವರನನ್ನು ಏಕಾಗ್ರಚಿತ್ತದಿಂದ ಸ್ಮರಿಸುವುದೇ ಧ್ಯಾನವೆನಿಸುವುದು.

ಬುದ್ಧಿಪ್ರವಾಹರೂಪಸ್ಯ ಧ್ಯಾನಸ್ಯಾಸ್ಯಾವಲಂಬನಂ ।
ಧ್ಯೇಯಮಿತ್ಯುಚ್ಯತೇ ಸದ್ಭಿಸ್ತಚ್ಚ ಸಾಂಬಃ ಸ್ವಯಂ ಶಿವಃ ॥ ೧೯ ॥

ವಿಮುಕ್ತಿಪ್ರತ್ಯಯಂ ಪೂರ್ಣಮೈಶ್ವರ್ಯಂ ಚಾಣಿಮಾದಿಕಂ ।
ಶಿವಧ್ಯಾನಸ್ಯ ಪೂರ್ಣಸ್ಯ ಸಾಕ್ಷಾದುಕ್ತಂ ಪ್ರಯೋಜನಂ ॥ ೨೦ ॥

ಯಸ್ಮಾತ್ಸೌಖ್ಯಂ ಚ ಮೋಕ್ಷಂ ಚ ಧ್ಯಾನಾದುಭಯಮಾಪ್ನುಯಾತ್ ।
ತಸ್ಮಾತ್ಸರ್ವಂ ಪರಿತ್ಯಜ್ಯ ಧ್ಯಾನಯುಕ್ತೋ ಭವೇನ್ನರಃ ॥ ೨೧ ॥

ನಾಸ್ತಿ ಧ್ಯಾನಂ ವಿನಾ ಜ್ಞಾನಂ ನಾಸ್ತಿ ಧ್ಯಾನಮಯೋಗಿನಃ ।
ಧ್ಯಾನಂ ಜ್ಞಾನಂ ಚ ಯಸ್ಯಾಸ್ತಿ ತೀರ್ಣಸ್ತೇನ ಭವಾರ್ಣವಃ ॥ ೨೨ ॥

ಜ್ಞಾನಂ ಪ್ರಸನ್ನಮೇಕಾಗ್ರಮಶೇಷೋಪಾಧಿವರ್ಜಿತಂ ।
ಯೋಗಾಭ್ಯಾಸೇನ ಯುಕ್ತಸ್ಯ ಯೋಗಿನಸ್ತ್ವೇವ ಸಿಧ್ಯತಿ ॥ ೨೩ ॥

---

೧೯. ಬುದ್ಧಿಪ್ರವಾಹರೂಪವಾದ ಧ್ಯಾನಕ್ಕೆ ಆಶ್ರಯವಾದ ವಸ್ತುವೇ ಧ್ಯೇಯವೆನಿಸುವುದು. ಆ ಧ್ಯೇಯವಸ್ತುವು ದೇವೀಸಹಿತವಾದ ಶಿವನೇ ಆಗಿರುವನು.

೨೦. ಸಂಸಾರಸಂಬಂಧವಾದ ಸುಖದುಃಖಗಳ ಬಿಡುಗಡೆಯಾಗುವುದೆಂಬ ನಂಬಿಕೆಯ ಸ್ವರೂಪವಾದ ಸಂಪೂರ್ಣವಾದ ಐಶ್ವರ್ಯವೂ, ಅಣಿಮಾದಿ ಸಿದ್ಧಿಗಳೂ ಪೂರ್ಣವಾದ ಶಿವಧ್ಯಾನಕ್ಕೆ ಪ್ರಯೋಜನಗಳು.

೨೧. ಧ್ಯಾನದಿಂದಲೇ ಸೌಖ್ಯವನ್ನೂ, ಮೋಕ್ಷವನ್ನೂ, ಪಡೆಯುವುದರಿಂದ ಎಲ್ಲವನ್ನೂ ಬಿಟ್ಟು ಮನುಷ್ಯನು ಶಿವಧ್ಯಾನಾಸಕ್ತನಾಗಿರಬೇಕು.

೨೨. ಧ್ಯಾನವಿಲ್ಲದೆ ಜ್ಞಾನವಿರುವುದಿಲ್ಲ. ಯೋಗಿಯಲ್ಲದವನಿಗೆ ಧ್ಯಾನವಿರುವುದಿಲ್ಲ. ಧ್ಯಾನವೂ, ಜ್ಞಾನವೂ ಯಾರಿಗೆ ಇರುವುದೋ ಅವನು ಸಂಸಾರ ಸಮುದ್ರವನ್ನು ದಾಟಿದವನಾಗುವನು.

೨೩. ಇತರ ಉಪಾಧಿಗಳೊಂದೂ ಇಲ್ಲದ ಪರಿಶುದ್ಧವಾದ ಏಕಾಗ್ರಚಿತ್ತವನ್ನೇ ಜ್ಞಾನವೆಂದು ಹೇಳುವರು. ಈ ಜ್ಞಾನವು ಯೋಗಾಭ್ಯಾಸದಿಂದ ಕೂಡಿದ ಯೋಗಿಗೆ ಸಿದ್ಧಿಸುವುದು.

ಪ್ರಕ್ಷೀಣಾಶೇಷಪಾಪಾನಾಂ ಜ್ಞಾನೇ ಧ್ಯಾನೇ ಭವೇನ್ಮತಿಃ ।
ಪಾಪೋಪಹತಬುದ್ಧೀನಾಂ ತದ್ವಾರ್ತಾಪಿ ಸುದುರ್ಲಭಾ ॥ ೨೪ ॥

ಯಥಾ ವಹ್ನಿರ್ಮಹಾದೀಪ್ತಃ ಶುಷ್ಕಮಾರ್ದ್ರಂ ಚ ನಿರ್ದಹೇತ್ ।
ತಥಾ ಶುಭಾಶುಭಂ ಕರ್ಮ ಧ್ಯಾನಾಗ್ನಿರ್ದಹತೇ ಕ್ಷಣಾತ್ ॥ ೨೫ ॥

ಅತ್ಯಲ್ಪೋಽಪಿ ಯಥಾ ದೀಪಃ ಸುಮಹನ್ನಾಶಯೇತ್ತಮಃ ।
ಯೋಗಾಭ್ಯಾಸಸ್ತಥಾಲ್ಪೋಽಪಿ ಮಹಾಪಾಪಂ ವಿನಾಶಯೇತ್ ॥ ೨೬ ॥

ಧ್ಯಾಯತಃ ಕ್ಷಣಮಾತ್ರಂ ವಾ ಶ್ರದ್ಧಯಾ ಪರಮೇಶ್ವರಂ ।
ಯದ್ಭವೇತ್ಸುಮಹಚ್ಛ್ರೇಯಸ್ತಸ್ಯಾಂತೋ ನೈವ ವಿದ್ಯತೇ ॥ ೨೭ ॥

ನಾಸ್ತಿ ಧ್ಯಾನಸಮಂ ತೀರ್ಥಂ ನಾಸ್ತಿ ಧ್ಯಾನಸಮಂ ತಪಃ ।
ನಾಸ್ತಿ ಧ್ಯಾನಸಮೋ ಯಜ್ಞಸ್ತಸ್ಮಾದ್ಧ್ಯಾನಂ ಸಮಾಚರೇತ್ ॥ ೨೮ ॥

---

೨೪-೨೫. ಸಮಸ್ತ ಪಾಪಗಳನ್ನೂ ಕಳೆದುಕೊಂಡವರಿಗೆ ಧ್ಯಾನದಲ್ಲಿಯೂ, ಜ್ಞಾನವಿಷಯದಲ್ಲಿಯೂ, ಬುದ್ಧಿಯುಂಟಾಗುವುದು. ಪಾಪದಿಂದ ಕೂಡಿದ ಬುದ್ಧಿಯುಳ್ಳವರಿಗೆ ಧ್ಯಾನಜ್ಞಾನಗಳ ಮಾತೇ ರುಚಿಸುವುದಿಲ್ಲ. ಚೆನ್ನಾಗಿ ಉರಿಯುತ್ತಿರುವ ಬೆಂಕಿಯು ಒಣಗಿದ ಮತ್ತು ಹಸಿಯ ಕಟ್ಟಿಗೆಗಳನ್ನು ಸುಟ್ಟು ಬಿಡುವಂತೆ ಧ್ಯಾನವೆಂಬ ಅಗ್ನಿಯು ಶುಭಾಶುಭರೂಪವಾದ ಕರ್ಮಗಳನ್ನು ಕ್ಷಣದೊಳಗಾಗಿ ಸುಟ್ಟುಬಿಡುವುದು.

೨೬. ದೀಪವು ಅತ್ಯಂತ ಸಣ್ಣದಾದರೂ ವಿಶೇಷವಾದ ಕತ್ತಲೆಯನ್ನು ನಾಶಮಾಡುವುದು. ಹಾಗೆಯೇ ಯೋಗಾಭ್ಯಾಸವು ಸ್ವಲ್ಪವಾದರೂ ಮಹಾಪಾಪಗಳನ್ನು ನಾಶಮಾಡುವುದು.

೨೭-೨೮. ನಂಬಿಕೆಯಿಂದ ಒಂದು ಕ್ಷಣಕಾಲವಾದರೂ ಪರಮೇಶ್ವರನನ್ನು ಧ್ಯಾನಮಾಡತಕ್ಕವನಿಗೆ ಯಾವ ಶ್ರೇಯಸ್ಸುಂಟಾಗುವುದೋ ಅದಕ್ಕೆ ಕೊನೆಯೇ ಇರುವುದಿಲ್ಲ. ಧ್ಯಾನಕ್ಕೆ ಸಮಾನವಾದ ತೀರ್ಥಕ್ಷೇತ್ರಗಳಾಗಲಿ, ತಪಸ್ಸಾಗಲಿ, ಯಜ್ಞವಾಗಲಿ ಇರುವುದಿಲ್ಲ. ಆದುದರಿಂದ ಧ್ಯಾನವನ್ನೇ, ಅಭ್ಯಾಸಮಾಡಬೇಕು.

ತೀರ್ಥಾನಿ ತೋಯಪೂರ್ಣಾನಿ ದೇವಾನ್ಪಾಷಾಣಮೃಣ್ಮಯಾನ್ ।
ಯೋಗಿನೋ ನ ಪ್ರಪದ್ಯಂತೇ ಸ್ವಾತ್ಮಪ್ರತ್ಯಯಕಾರಣಾತ್ ॥ ೨೯ ॥
ಯೋಗಿನಾಂ ಚ ವಪುಃ ಸೂಕ್ಷ್ಮಂ ಭವೇತ್ಪ್ರತ್ಯಕ್ಷಮೈಶ್ವರಂ ।
ಯಥಾ ಸ್ಥೂಲಮಯುಕ್ತಾನಾಂ ಮೃತ್ಕಾಷ್ಠಾದ್ಯೈಃ ಪ್ರಕಲ್ಪಿತಂ ॥ ೩೦ ॥
ಯಥೇಹಾಂತಶ್ಚರಾ ರಾಜ್ಞಃ ಪ್ರಿಯಾಃ ಸ್ಯುರ್ನ ಬಹಿಶ್ಚರಾಃ ।
ತಥಾಂತರ್ಧ್ಯಾನನಿರತಾಃ ಪ್ರಿಯಾಃ ಶಂಭೋರ್ನ ಕರ್ಮಿಣಃ ॥ ೩೧ ॥
ಬಹಿಷ್ಕರಾ ಯಥಾ ಲೋಕೇ ನಾತೀವ ಫಲಭೋಗಿನಃ ।
ದೃಷ್ಟ್ವಾ ನರೇಂದ್ರಭವನೇ ತದ್ವದತ್ರಾಪಿ ಕರ್ಮಿಣಃ ॥ ೩೨ ॥
ಯದ್ಯಂತರಾ ವಿಪದ್ಯಂತೇ ಜ್ಞಾನಯೋಗಾರ್ಥಮುದ್ಯತಃ ।
ಯೋಗಸ್ಯೋದ್ಯೋಗಮಾತ್ರೇಣ ರುದ್ರಲೋಕಂ ಗಮಿಷ್ಯತಿ ॥ ೩೩ ॥

೨೯. ಯೋಗಿಗಳಿಗೆ ತಮ್ಮ ಜೀವಾತ್ಮವೇ ಪರಮಾತ್ಮವೆಂಬ ನಂಬಿಕೆಯಿರುವುದರಿಂದ ಅವರು ನೀರಿನಿಂದ ತುಂಬಿದ ತೀರ್ಥಗಳನ್ನೂ, ಕಲ್ಲು, ಮತ್ತು ಮಣ್ಣುಗಳಿಂದ ಮಾಡಿದ ದೇವಮೂರ್ತಿಯನ್ನೂ ಸೇವಿಸುವುದಿಲ್ಲ.

೩೦. ಯೋಗಿಗಳಲ್ಲದವರಿಗೆ ಮಣ್ಣು, ಮರ ಮುಂತಾದುವುಗಳಿಂದ ಮಾಡಿದ ಮೂರ್ತಿಗಳು ದೇವತೆಗಳೆಂದು ತಿಳಿದಿರುವಂತೆ ಯೋಗಿಗಳಿಗೆ ಸೂಕ್ಷ್ಮ ಶರೀರವಾದ ಮನಃಕಲ್ಪಿತವಾದ ಈಶ್ವರಮೂರ್ತಿಯೇ ಪ್ರತ್ಯಕ್ಷರೂಪವಾದ ವೇದಮೂರ್ತಿಯಾಗಿರುವುದು.

೩೧. ರಾಜನಿಗ ಅಂತಃಪುರದಲ್ಲಿ ಸಂಚಾರಮಾಡುವ ಆಳುಗಳು ಪ್ರೀತಿಪಾತ್ರರಾಗಿರುವಹಾಗೆ ಹೊರಗೆ ಸಂಚಾರಮಾಡುವ ಆಳುಗಳು ಪ್ರೀತಿಪಾತ್ರರಲ್ಲ. ಅದರಂತೆ ಮನಸ್ಸಿನಲ್ಲಿ ಧ್ಯಾನಮಾಡತಕ್ಕವರು ಶಿವನಿಗೆ ಪ್ರೀತಿಪಾತ್ರರಾಗುವಂತೆ ಕರ್ಮಮಾಡತಕ್ಕವರು ಪ್ರೀತಿಪಾತ್ರರಾಗುವುದಿಲ್ಲ.

೩೨. ರಾಜನ ಮನೆಯಲ್ಲಿ ಹೊರಗೆ ಕೆಲಸಮಾಡತಕ್ಕವರು ಹೆಚ್ಚು ಸುಖಾನುಭವವುಳ್ಳವರಲ್ಲದಿರುವಂತೆ ಕರ್ಮಿಗಳು ಹೆಚ್ಚು ಸುಖಾನುಭವವುಳ್ಳವರಲ್ಲ.

೩೩-೩೪. ಜ್ಞಾನಯೋಗಕ್ಕಾಗಿ ಪ್ರಯತ್ನಮಾಡಿದ ಮನುಷ್ಯನು ನಡುವೆ ಮರಣವನ್ನು ಹೊಂದಿದರೆ ಆ ಪ್ರಯತ್ನಮಾತ್ರರೂಪವಾದ ಫಲದಿಂದ

ಅನುಭೂಯ ಸುಖಂ ತತ್ರ ಸ ಜಾತೋ ಯೋಗಿನಃ ಕುಲೇ |
ಜ್ಞಾನಯೋಗಂ ಪುನರ್ಲಬ್ಧ್ವಾ ಸಂಸಾರಮತಿವರ್ತತೇ ॥ ೩೪ ॥

ಜಿಜ್ಞಾಸುರಪಿ ಯೋಗಸ್ಯ ಯಾ ಗತಿಂ ಲಭತೇ ನರಃ |
ನ ತಾಂ ಗತಿಮವಾಪ್ನೋತಿ ಸರ್ವೈರಪಿ ಮಹಾಮಖೈಃ ॥ ೩೫ ॥

ದ್ವಿಜಾನಾಂ ವೇದವಿದುಷಾಂ ಕೋಟಿಂ ಸಂಪೂಜ್ಯ ಯತ್ಫಲಂ |
ಭಿಕ್ಷಾಮಾತ್ರಪ್ರದಾನೇನ ತತ್ಫಲಂ ಶಿವಯೋಗಿನೇ ॥ ೩೬ ॥

ಯಜ್ಞಾಗ್ನಿಹೋತ್ರದಾನೇಷು ತೀರ್ಥಹೋಮೇಷು ಯತ್ಫಲಂ |
ಯೋಗಿನಾಮನ್ನದಾನೇನ ತತ್ಸಮಸ್ತಂ ಫಲಂ ಲಭೇತ್ ॥ ೩೭ ॥

ಯೇ ಚಾಪವಾದಂ ಕುರ್ವಂತಿ ವಿಮೂಢಾಃ ಶಿವಯೋಗಿನಾಂ |
ಶ್ರೋತೃಭಿಸ್ತೇ ಪ್ರಪದ್ಯಂತೇ ನರಕೇಷ್ವಾಮಹೀಕ್ಷಯಾತ್ ॥ ೩೮ ॥

---

ಅವನು ರುದ್ರಲೋಕಕ್ಕೆ ಹೋಗುವನು. ಅಲ್ಲಿ ಸುಖವನ್ನನುಭವಿಸಿ ಮತ್ತೆ ಯೋಗಿಗಳ ವಂಶದಲ್ಲಿ ಹುಟ್ಟಿ ಜ್ಞಾನಯೋಗವನ್ನು ಪಡೆದು ಸಂಸಾರದುಃಖದ ಬಿಡುಗಡೆಯನ್ನು ಹೊಂದುವನು.

೩೫. ಯೋಗಮಾರ್ಗವನ್ನು ತಿಳಿಯಬೇಕೆಂಬ ಅಪೇಕ್ಷೆಯುಳ್ಳವನಿಗೆ ಯಾವಗತಿಯುಂಟಾಗುವುದೋ ಅಂತಹ ಪದವಿಯನ್ನು ಸಮಸ್ತ ಮಹಾಯಜ್ಞಗಳನ್ನು ಮಾಡಿದವರೂ ಹೊಂದಲಾರರು.

೩೬-೩೭. ವೇದವನ್ನು ತಿಳಿದ ಒಂದು ಕೋಟಿ ಬ್ರಾಹ್ಮಣರನ್ನು ಪೂಜೆ ಮಾಡಿದರೆ ಯಾವಫಲವು ಬರುವುದೋ ಒಬ್ಬ ಶಿವಯೋಗಿಗೆ ಭಿಕ್ಷೆಯನ್ನು ಮಾತ್ರ ಹಾಕಿದರೆ ಅಷ್ಟೇ ಫಲವು ಬರುವುದು. ಯಜ್ಞಗಳು, ಅಗ್ನಿಹೋತ್ರ ದಾನ, ತೀರ್ಥಯಾತ್ರೆ, ಹೋಮ ಮುಂತಾದುವುಗಳಲ್ಲಿ ಎಷ್ಟು ಫಲವು ಬರುವುದೋ ಅಷ್ಟೇ ಫಲವು ಶಿವಯೋಗಿಯೊಬ್ಬನಿಗೆ ಅನ್ನದಾನಮಾಡಿದರೆ ಬರುವುದು.

೩೮. ಯಾವ ಮೂಢರು ಶಿವಯೋಗಿಗಳನ್ನು ಇಲ್ಲದ ದೋಷವನ್ನು ಆರೋಪಣೆಮಾಡಿ ನಿಂದಿಸುವರೋ ಆ ನಿಂದೆಯನ್ನು ಕೇಳಿದ ಜನರು ಈ ಭೂಮಿಯು ನಾಶವಾಗುವ ವರೆಗೂ ನರಕದಲ್ಲಿ ಇರುವರು. ಯೋಗಿಗಳ ಮೇಲಿನ

**ಸತಿ ಶ್ರೋತರಿ ವಕ್ತಾ ಸ್ಯಾದಪವಾದಸ್ಯ ಯೋಗಿನಾಂ ।**
**ತಸ್ಮಾಚ್ಛ್ರೋತಾ ಚ ಪಾಪೀಯಾನ್ ದಣ್ಡ್ಯಃ ಸುಮಹತಾಂ ಮತಃ ।**
**ಯೇ ಪುನಃ ಸತತಂ ಭಕ್ತ್ಯಾ ಭಜಂತಿ ಶಿವಯೋಗಿನಃ ॥ ೩೯ ॥**

**ತೇ ವಿದಂತಿ ಮಹಾಭೋಗಾನಂತೇ ಯೋಗಂ ಚ ಶಾಂಕರಂ ।**
**ಭೋಗಾರ್ಥಿಭಿರ್ನರೈಸ್ತಸ್ಮಾತ್ಸಂಪೂಜ್ಯಾಃ ಶಿವಯೋಗಿನಃ ॥ ೪೦ ॥**

**ಪ್ರತಿಶ್ರಯಾನ್ನಪಾನಾದ್ಯೈಃ ಶಯ್ಯಾಪ್ರಾವರಣಾದಿಭಿಃ !**
**ಯೋಗಧರ್ಮಃ ಸಸಾರತ್ವಾದಭೇದ್ಯಃ ಪಾಪಮುದ್ಗರೈಃ ॥ ೪೧ ॥**

**ವಜ್ರತಂಡುಲವಜ್ಜ್ಞೇಯಂ ತಥಾ ಪಾಪೇನ ಯೋಗಿನಃ ।**
**ನ ಲಿಪ್ಯಂತೇ ಚ ಪಾಪೌಘೈಃ ಪದ್ಮಪತ್ರಂ ಯಥಾಂಭಸಾ ॥ ೪೨ ॥**

**ಯಸ್ಮಿನ್ದೇಶೇ ವಸೇನ್ನಿತ್ಯಂ ಶಿವಯೋಗರತೋ ಮುನಿಃ ।**
**ಸೋಽಪಿ ದೇಶೋ ಭವೇತ್ಪೂತಃ ಸ ಪೂತ ಇತಿ ಕಿಂ ಪುನಃ ॥ ೪೩ ॥**

---

ಅಪವಾದವನ್ನು ಕೇಳುವವರಿದ್ದರೆ ಹೇಳುವವರಿರುವರು. ಆದುದರಿಂದ ಕೇಳುವವನೇ ಪಾಪಿಯು. ಅವನನ್ನೇ ದಂಡಿಸಬೇಕು.

೩೯-೪೦. ಯಾರು ಶಿವಯೋಗಿಗಳನ್ನು ಭಕ್ತಿಯಿಂದ ಸೇವಿಸುತ್ತಾರೆಯೋ ಅವರು ಮಹಾಸುಖವನ್ನು ಹೊಂದಿ ಕೊನೆಯಲ್ಲಿ ಶಿವಯೋಗವನ್ನು ಪಡೆಯುವರು. ಆ ಕಾರಣದಿಂದ ಸುಖಾನುಭವವನ್ನಪೇಕ್ಷಿಸುವ ಮನುಜರು ಶಿವಯೋಗಿಗಳನ್ನು ಆಶ್ರಯ, ಅನ್ನ, ನೀರು, ಹಾಸಿಗ, ವಸ್ತ್ರಾದಿಗಳು ಇವುಗಳನ್ನು ಕೊಡುವುದರ ಮೂಲಕವಾಗಿ ಪೂಜಿಸಬೇಕು.

೪೧-೪೨. ಯೋಗಧರ್ಮವು ಸಾರವಾದ ವಜ್ರದ ಅಕ್ಕಿಯಂತಿರುವುದರಿಂದ ಅದನ್ನು ಪಾಪವೆಂಬ ಒನಕೆಗಳಿಂದ ಕುಟ್ಟಿ ಪುಡಿಮಾಡಲು ಅಸಾಧ್ಯವಾದುದಾಗಿರುವುದು. ಆದುದರಿಂದ ಕಮಲದ ಎಲೆಗೆ ನೀರು ಅಂಟದಿರುವಂತೆ ಯೋಗಿಗಳನ್ನು ಪಾಪವು ಅಂಟಲಾರದು.

೪೩-೪೪. ಶಿವಯೋಗವನ್ನು ಅಭ್ಯಾಸಮಾಡುವ ಮುನಿಯು ಯಾವ ಪ್ರದೇಶದಲ್ಲಿರುವನೋ ಆ ಪ್ರದೇಶವೇ ಪರಿಶುದ್ಧವಾದುದಾಗುವುದು ಎಂದಮೇಲೆ

ತಸ್ಮಾತ್ಸರ್ವಂ ಪರಿತ್ಯಜ್ಯ ಕೃತಮನ್ಯದ್ವಿಚಕ್ಷಣಃ ।
ಸರ್ವದುಃಖಪ್ರಹಾಣಾಯ ಶಿವಯೋಗಂ ಸಮಭ್ಯಸೇತ್ ॥ ೪೪ ॥

ಸಿದ್ಧಯೋಗಫಲೋ ಯೋಗೀ ಲೋಕಾನಾಂ ಹಿತಕಾಮ್ಯಯಾ ।
ಭೋಗಾನ್ಭುಕ್ತ್ವಾ ಯಥಾಕಾಮಂ ವಿಹರೇದ್ವಾತ್ರ ವರ್ತತಾಂ ॥ ೪೫ ॥

ಅಥವಾ ಕ್ಷುದ್ರಮಿತ್ಯೇವ ಮತ್ವಾ ವೈಷಯಿಕಂ ಸುಖಂ ।
ತ್ಯಕ್ತ್ವಾ ವಿರಾಗಯೋಗೇನ ಸ್ವೇಚ್ಛಯಾ ಕರ್ಮ ಮುಚ್ಯತಾಂ ॥ ೪೬ ॥

ಯಸ್ತ್ವಾಸನ್ನಾಂ ಮೃತಿಂ ಮರ್ತ್ಯೋ ದೃಷ್ಟ್ವಾರಿಷ್ಟಂ ನ ಭೂಯಸಾ ।
ಸ ಯೋಗಾರಂಭನಿರತಃ ಶಿವಕ್ಷೇತ್ರಂ ಸಮಾಶ್ರಯೇತ್ ॥ ೪೭ ॥

ಸ ತತ್ರ ನಿವಸನ್ನೇವ ಯದಿ ಧೀರಮನಾ ನರಃ ।
ಪ್ರಾಣಾನ್ವಿನಾಪಿ ರೋಗಾದ್ಯೈಃ ಸ್ವಯಮೇವ ಪರಿತ್ಯಜೇತ್ ॥ ೪೮ ॥

---

ಆ ಯೋಗಿಯು ಪರಿಶುದ್ಧನೆಂಬುದನ್ನು ಹೇಳಬೇಕಾದುದೇ ಇಲ್ಲವು. ಆ ಕಾರಣ ದಿಂದ ಬುದ್ಧಿವಂತನಾದವನು ಇತರ ಎಲ್ಲಾ ಕೆಲಸಗಳನ್ನೂ ಬಿಟ್ಟು ಸಮಸ್ತ ದುಃಖನಾಶಕ್ಕಾಗಿ ಶಿವಯೋಗವನ್ನು ಚೆನ್ನಾಗಿ ಅಭ್ಯಾಸಮಾಡಬೇಕು.

೪೫–೪೬. ಯೋಗಫಲಸಿದ್ಧಿಯನ್ನು ಪಡೆಯುವ ಯೋಗಿಯು ತನ್ನಿಷ್ಟ ಬಂದಂತೆ ಸುಖಾನುಭವ ಮಾಡಿದಮೇಲೆ ಲೋಕಾನುಗ್ರಹಾರ್ಥವಾಗಿ ಲೋಕ ದಲ್ಲಿ ವಿಹರಿಸುತ್ತಿರಬಹುದು. ಅಥವಾ ವಿಷಯಸುಖಗಳು ಅಲ್ಪವಾದುವುಗಳೆಂದು ತಿಳಿದು ವೈರಾಗ್ಯದಿಂದ ಸರ್ವಕರ್ಮಸಂನ್ಯಾಸವನ್ನು ಮಾಡಿ ಮುಕ್ತಿಯನ್ನು ಹೊಂದಬಹುದು.

೪೭-೪೮. ಮನುಷ್ಯನು ತನಗೆ ಮರಣಕಾಲವು ಸಮೀಪಿಸಿತೆಂದು ಅನೇಕ ಅಪಶಕುನಗಳಿಂದ ತಿಳಿದು ಯೋಗಾಭ್ಯಾಸದಲ್ಲಿ ಆಸಕ್ತನಾಗಿ ಶಿವಕ್ಷೇತ್ರ ಗಳನ್ನು ಆಶ್ರಯಿಸಬೇಕು. ಅವನು ಅಲ್ಲಿಯೇ ವಾಸಮಾಡಿಕೊಂಡಿದ್ದು ಅತ್ಯಂತ ಧೈರ್ಯವಾದ ಮನಸ್ಸಿನಿಂದ ರೋಗಾದಿಗಳಿಲ್ಲದಿದ್ದರೂ ತಾನೇ ಯೋಗದಿಂದ ಪ್ರಾಣ ತ್ಯಾಗವನ್ನು ಮಾಡಬೇಕು,

ಕೃತ್ವಾಪ್ಯನಶನಂ ಚೈವ ಹುತ್ವಾ ಚಾಂಗಂ ಶಿವಾನಲೇ ।
ಕ್ಷಿಪ್ತ್ವಾ ವಾ ಶಿವತೀರ್ಥೇಷು ಸ್ವದೇಹಮವಗಾಹನಾತ್ ॥ ೪೯ ॥

ಶಿವಶಾಸ್ತ್ರೋಕ್ತವಿಧಿವತ್ಪ್ರಾಣಾನ್ಯಸ್ತು ಪರಿತ್ಯಜೇತ್ ।
ಸದ್ಯ ಏವ ವಿಮುಚ್ಯೇತ ನಾತ್ರ ಕಾರ್ಯಾ ವಿಚಾರಣಾ ॥ ೫೦ ॥

ರೋಗಾದ್ಯೈರ್ವಾಥ ವಿವಶಃ ಶಿವಕ್ಷೇತ್ರಂ ಸಮಾಶ್ರಿತಃ ।
ಮ್ರಿಯತೇ ಯದಿ ಸೋಽಪ್ಯೇವಂ ಮುಚ್ಯತೇ ನಾತ್ರ ಸಂಶಯಃ ॥ ೫೧ ॥

ಯಥಾ ಹಿ ಮರಣಂ ಶ್ರೇಷ್ಠಮುಶಂತ್ಯನಶನಾದಿಭಿಃ ।
ಶಾಸ್ತ್ರವಿಶ್ರಂಭಧೀರೇಣ ಮನಸಾ ಕ್ರಿಯತೇ ಯತಃ ॥ ೫೨ ॥

ಶಿವನಿಂದಾರತಂ ಹತ್ವಾ ಪೀಡಿತಃ ಸ್ವಯಮೇವ ವಾ ।
ಯಸ್ತ್ಯಜೇದ್ದುಸ್ತ್ಯಜಾನ್ಪ್ರಾಣಾನ್ನ ಸ ಭೂಯಃ ಪ್ರಜಾಯತೇ ॥ ೫೩ ॥

---

೪೯-೫೦. ಅನಶನವ್ರತದಿಂದ ಆಹಾರವನ್ನು ಬಿಡುವುದರಿಂದಲಾಗಲಿ, ಶಿವಾಗ್ನಿಯಲ್ಲಿ ಶರೀರವನ್ನು ಹೋಮಮಾಡುವುದರಿಂದಾಗಲಿ, ಶಿವತೀರ್ಥಗಳಲ್ಲಿ ಸ್ನಾನಮಾಡುವುದರಿಂದ ಶರೀರವನ್ನು ಅಲ್ಲಿಯೇ ಬಿಡುವುದರಿಂದಲಾಗಲಿ, ಶಿವ ಶಾಸ್ತ್ರೋಕ್ತವಾದ ವಿಧಿಯಂತೆ ಪ್ರಾಣತ್ಯಾಗವನ್ನು ಮಾಡಿದವನು ಆ ಕ್ಷಣ ದಲ್ಲಿಯೇ ಮುಕ್ತಿಯನ್ನು ಹೊಂದುವನೆಂಬ ವಿಷಯದಲ್ಲಿ ಸಂದೇಹವಿಲ್ಲ.

೫೧. ಶಿವಕ್ಷೇತ್ರವನ್ನಾಶ್ರಯಿಸಿದವನು ಶರೀರವನ್ನು ತನ್ನಧೀನದಲ್ಲಿಟ್ಟು ಕೊಳ್ಳದೆ ರೋಗಾದಿಗಳಿಗೆ ಅಧೀನನಾಗಿ ಮರಣಹೊಂದಿದರೆ ಅವನೂ ಮೋಕ್ಷ ಹೊಂದುವುದರಲ್ಲಿ ಸಂದೇಹವಿಲ್ಲ.

೫೨-೫೩. ಶಿವಶಾಸ್ತ್ರಗಳಲ್ಲಿ ನಂಬಿಕೆಯುಳ್ಳ ಮನುಷ್ಯನು ಧೈರ್ಯದಿಂದ ಅನಶನಾದಿವ್ರತಗಳಿಂದ ಮರಣ ಹೊಂದಿದರೂ, ಶಿವನಿಂದೆಯನ್ನು ಮಾಡಿದವ ನನ್ನು ಕೊಂದರೂ ತಾನು ಅಂಥವರ ಹಿಂಸೆಗೆ ಸಿಕ್ಕಿ ಪ್ರಾಣತ್ಯಾಗಮಾಡಿದರೂ ಅವನಿಗೆ ಪುನರ್ಜನ್ಮವಿರುವುದಿಲ್ಲ.

ಶಿವನಿಂದಾರತಂ ಹಂತುಮಶಕ್ತೋ ಯಃ ಸ್ವಯಂ ಮೃತಃ ।
ಸದ್ಯ ಏವ ಪ್ರಮುಚ್ಯೇತ ತ್ರಿಃಸಪ್ತಕುಲಸಂಯುತಃ ॥ ೫೪ ॥

ಶಿವಾರ್ಥೇ ಯಸ್ತ್ಯಜೇತ್ಪ್ರಾಣಾಞ್ಛಿವಭಕ್ತಾರ್ಥಮೇವ ವಾ ।
ನ ತೇನ ಸದೃಶಃ ಕಶ್ಚಿನ್ಮುಕ್ತಿಮಾರ್ಗಸ್ಥಿತೋ ನರಃ ॥ ೫೫ ॥

ತಸ್ಮಾಚ್ಛೀಘ್ರತರಾ ಮುಕ್ತಿಸ್ತಸ್ಯ ಸಂಸಾರಮಂಡಲಾತ್ ।
ಏತೇಷ್ವನ್ಯತಮೋಪಾಯಂ ಕಥಮಪ್ಯವಲಂಬ್ಯ ವಾ ॥ ೫೬ ॥

ಷಡಧ್ವಶುದ್ಧಿಂ ವಿಧಿವತ್ಪ್ರಾಪ್ತೋ ವಾ ಮ್ರಿಯತೇ ಯದಿ ।
ಪಶೂನಾಮಿವ ತಸ್ಯೇಹ ನ ಕುರ್ಯಾದೌರ್ಧ್ವದೇಹಿಕಂ ॥ ೫೭ ॥

ನೈವಾಶೌಚಂ ಪ್ರಪದ್ಯೇತ ತತ್ಪುತ್ರಾದಿರ್ವಿಶೇಷತಃ ।
ಖನೇದ್ವಾ ಭುವಿ ತದ್ದೇಹಂ ದಹೇದ್ವಾ ಶುಚಿನಾಗ್ನಿನಾ ॥ ೫೮ ॥

---

೫೪-೫೫. ಶಿವನಿಂದೆ ಮಾಡಿದವದನನ್ನು ಕೊಲ್ಲುವುದಕ್ಕೆ ಶಕ್ತಿಯಿಲ್ಲದೆ ತಾನೇ ಸತ್ತರೆ ಆ ಕ್ಷಣಪಲ್ಲಿಯೇ ಅವನ ಇಪ್ಪತ್ತೊಂದು ಕುಲದ ಪಿತೃಗಳೊಡನೆ ಅವನೂ ಮೋಕ್ಷವನ್ನು ಹೊಂದುವನು. ಶಿವನಿಗೋಸ್ಕರವಾಗಿಯಾಗಲಿ, ಶಿವಭಕ್ತರಿಗಾಗಿಯಾಗಲಿ ಪ್ರಾಣತ್ಯಾಗಮಾಡಿ ಮುಕ್ತಿಮಾರ್ಗದಲ್ಲಿರುವ ಮನುಷ್ಯನಿಗೆ ಸಮನಾದ ಮನುಷ್ಯನು ಮತ್ತೊಬ್ಬನಿರುವುದಿಲ್ಲ.

೫೬-೫೭. ಆದುದರಿಂದ ಅಂತಹ ಮನುಷ್ಯನಿಗೆ ಬೇಗನೆ ಸಂಸಾರ ದುಃಖದ ಬಿಡುಗಡೆಯಾಗುವುದು. ಮೇಲೆ ಹೇಳಿದ ಉಪಾಯಗಳಲ್ಲಿ ಒಂದನ್ನು ಹೇಗಾದರೂ ಆಶ್ರಯಿಸಿಯಾದರೂ, ವಿಧಿಗನುಸಾರವಾಗಿ ಷಡಧ್ವಶುದ್ಧಿಯನ್ನು ಮಾಡಿ ಕೊಂಡಾದರೂ ಮರಣಹೊಂದಿದರೆ ಅವನಿಗೆ ಪಶುಗಳಂತೆ ಉತ್ತರಕ್ರಿಯೆಗಳನ್ನು ಮಾಡಬೇಕಾಗಿಲ್ಲ. ಅವನ ಮಕ್ಕಳು ಮೊದಲಾದವರಿಗೆ ಅಶೌಚವೂ ಇರುವುದಿಲ್ಲ.

೫೮-೫೯. ಅವನ ಶರೀರವನ್ನು ಭೂಮಿಯಲ್ಲಿ ಹೂಳಬೇಕು. ಅಥವಾ ಪರಿಶುದ್ಧವಾದ ಅಗ್ನಿಯಿಂದ ಸುಡಬೇಕು. ಇಲ್ಲವೇ ಪರಿಶುದ್ಧವಾದ ನೀರಿನಲ್ಲಿ

ಸ್ನೇಹಾದ್ವಾಪ್ಯಶಿವಾಸ್ಸೇವ ತ್ಯಜೇದ್ವಾ ಕಾಷ್ಠಲೋಷ್ಟವತ್ ।
ಅಥೈನಮಪಿ ಚೋದ್ದಿಶ್ಯ ಕರ್ಮ ಚೇತ್ಕರ್ತುಮೀಪ್ಸಿತಂ　　॥ ೫೯ ॥

ಕಲ್ಯಾಣಮೇವ ಕುರ್ವೀತ ಶಕ್ತ್ಯಾ ಭಕ್ತಾಂಶ್ಚ ತರ್ಪಯೇತ್ ।
ಧನಂ ತಸ್ಯ ಭಜೇಚ್ಛೈವಃ ಶೈವೀ ಚೇತ್ತಸ್ಯ ಸಂತತಿಃ ।
ನಾಸ್ತಿ ಚೇತ್ತಚ್ಛಿವೇ ದದ್ಯಾನ್ನಾದದ್ಯಾತ್ಪಶುಸಂತತಿಃ　　॥ ೬೦ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-
ಮುತ್ತರಭಾಗೇ ಶೈವಯೋಗವರ್ಣನಂ ನಾಮೈ-
ಕೋನಚತ್ವಾರಿಂಶೋಽಧ್ಯಾಯಃ

---

ಹಾಕಬೇಕು. ಮಣ್ಣು, ಕಟ್ಟಿಗೆಗಳಂತೆ ಕಾಡಿನಲ್ಲಿ ಬಿಸುಡಬೇಕು. ಇಂತಹ ಮನುಷ್ಯನಿಗಾಗಿ ಉತ್ತರಕ್ರಿಯೆಗಳನ್ನು ಮಾಡಬೇಕೆಂದು ಅಪೇಕ್ಷಿಸಿವರೆ ಶುಭವಾದ ಕ್ರಿಯೆಗಳನ್ನೇ ಮಾಡಿ ಭಕ್ತಿಯಿಂದ ಶಿವಭಕ್ತರಿಗೆ ಸಂತೋಷವನ್ನುಂಟು ಮಾಡಬೇಕು.

೬೦. ಅವನ ವಂಶವು ಶಿವಭಕ್ತಿಯಿಂದ ಕೂಡಿಮುದಾದರೆ ಅವನ ಧನವನ್ನು ಅವರು ಅನುಭವಿಸಬಹುದು. ಅವನಿಗೆ ಸಂತತಿಯಿಲ್ಲವೆ ಹೋದರೆ ಶಿವಭಕ್ತನಾಗಲಿ, ಶಿವನ ಪೂಜಾದಿಗಳಿಗಾಗಲಿ, ಅವನ ಧನವನ್ನು ಉಪಯೋಗಿಸಬೇಕು. ಪಶುಸ್ವರೂಪರಾದ ಅಜ್ಞಾನಿಗಳಿಗೆ ಅದನ್ನು ಕೊಡಲಾಗದು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯವೀಯಸಂಹಿತೆಯ ಉತ್ತರ
ಭಾಗದಲ್ಲಿ ಶೈವಯೋಗವರ್ಣನವೆಂಬ ಮೂವತ್ತೊಂಭತ್ತನೆಯ
ಅಧ್ಯಾಯವು ಮುಗಿಮುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ಚತ್ವಾರಿಂಶೋಽಧ್ಯಾಯಃ

---

॥ ಸೂತ ಉವಾಚ ॥

ಇತಿ ಸ ವಿಜಿತಮನ್ಯೋರ್ಯಾದವೇನೋಪಮನ್ಯೋ-
ರಧಿಗತಮಭಿಧಾಯ ಜ್ಞಾನಯೋಗಂ ಮುನಿಭ್ಯಃ ।
ಪ್ರಣತಿಮುಪಗತೇಭ್ಯಸ್ತೇಭ್ಯ ಉದ್ಭಾವಿತಾತ್ಮಾ
ಸಪದಿ ವಿಯತಿ ವಾಯುಃ ಸಾಯಮಂತರ್ಹಿತೋಽಭೂತ್ ॥ ೧ ॥

---

## ನಲವತ್ತನೆಯ ಅಧ್ಯಾಯವು

೧. ಸೂತನು ಹೇಳಿದನು—ಈ ರೀತಿಯಲ್ಲಿ ಯದುವಂಶದಲ್ಲಿ ಹುಟ್ಟಿದ ಜಿತಕ್ರೋಧನಾದ ಕೃಷ್ಣನು ಉಪಮನ್ಯುಮುನಿಯಿಂದ ಸಂಪಾದಿಸಿದ ಜ್ಞಾನ ಯೋಗವನ್ನು, ವಾಯುದೇವನು ಮುನಿಗಳಿಗೆ ಹೇಳಿದನು. ಆ ಮುನಿಗಳು ವಾಯುದೇವನನ್ನು ನಮಸ್ಕಾರಮಾಡಿ, ಸ್ತೋತ್ರಮಾಡುತ್ತಿದ್ದರು. ಅಷ್ಟರಲ್ಲಿ ಸಂಧ್ಯಾಕಾಲ, ಪ್ರಾಪ್ತವಾಗಲು ವಾಯುದೇವನು ಆಕ್ಷಣದಲ್ಲಿಯೇ ಆಕಾಶದಲ್ಲಿ ಅಂತರ್ಧಾನನಾದನು.

ತತಃ ಪ್ರಭಾತಸಮಯೇ ನೈಮಿಷೀಯಾಸ್ತಪೋಧನಾಃ ।
ಸತ್ರಾಂತೇಽವಭೃಥಂ ಕರ್ತುಂ ಸರ್ವ ಏವ ಸಮುದ್ಯಯುಃ ॥ ೨ ॥

ತದಾ ಬ್ರಹ್ಮಸಮಾದೇಶಾದ್ದೇವೀ ಸಾಕ್ಷಾತ್ಸರಸ್ವತೀ ।
ಪ್ರಸನ್ನಾ ಸ್ವಾದುಸಲಿಲಾ ಪ್ರಾವರ್ತತ ನದೀ ಶುಭಾ ॥ ೩ ॥

ಸರಸ್ವತೀಂ ನದೀಂ ದೃಷ್ಟ್ವಾ ಮುನಯೋ ಹೃಷ್ಟಮಾನಸಾಃ ।
ಸಮಾಪ್ಯ ಸತ್ರಂ ಪ್ರಾರಬ್ಧಂ ಚಕ್ರುಸ್ತತ್ರಾವಗಾಹನಂ ॥ ೪ ॥

ಅಥ ಸಂತರ್ಪ್ಯ ದೇವಾದೀಂಸ್ತದೀಯೈಃ ಸಲಿಲೈಶ್ಶಿವೈಃ ।
ಸ್ಮರಂತಃ ಪೂರ್ವವೃತ್ತಾಂತಂ ಯಯುರ್ವಾರಾಣಸೀಂ ಪ್ರತಿ ॥ ೫ ॥

ತದಾ ತೇ ಹಿಮವತ್ಪಾದಾತ್ಪತಂತೀಂ ದಕ್ಷಿಣಾಮುಖೀಂ ।
ದೃಷ್ಟ್ವಾ ಭಾಗೀರಥೀಂ ತತ್ರ ಸ್ನಾತ್ವಾ ತತ್ತೀರತೋ ಯಯುಃ ॥ ೬ ॥

---

೨. ಆಮೇಲೆ ಪ್ರಾತಃಕಾಲದಲ್ಲಿ ನೈಮಿಶಾರಣ್ಯವಾಸಿಗಳಾದ ಮುನಿಗಳೆಲ್ಲರೂ ಸತ್ರಯಾಗದ ಕೊನೆಯಲ್ಲಿ ಅವಭೃಥವೆಂಬ ಮಂಗಳಸ್ನಾನವನ್ನು ಮಾಡಲುದ್ಯುಕ್ತರಾದರು.

೩. ಆಸಮಯಕ್ಕೆ ಸರಿಯಾಗಿ ಬ್ರಹ್ಮದೇವನ ಅಪ್ಪಣೆಯಿಂದ ಸಾಕ್ಷಾತ್ಸರಸ್ವತೀದೇವಿಯೇ ಪರಿಶುದ್ಧವಾಗಿಯೂ, ಸಿಹಿಯಾಗಿಯೂ ಇರುವ ನೀರಿನಿಂದ ಕೂಡಿದ ಶುಭವಾದ ನದೀರೂಪದಿಂದ ಅಲ್ಲಿಗೆ ಹರಿದುಬಂದಳು.

೪. ಮುನಿಗಳು ಸರಸ್ವತೀನದಿಯನ್ನು ಕಂಡು ಸಂತೋಷಚಿತ್ತವುಳ್ಳವರಾಗಿ ತಾವು ಪ್ರಾರಂಭಿಸಿದ ಯಜ್ಞವನ್ನು ಪೂರ್ಣಮಾಡಿ ಆ ನದಿಯಲ್ಲಿ ಸ್ನಾನವನ್ನು ಮಾಡಿದರು.

೫. ಆಮೇಲೆ ಮಂಗಳಕರವಾದ ಆ ಸರಸ್ವತೀನದಿಯ ನೀರಿನಿಂದ ದೇವಋಷಿಪಿತೃಗಳ ತರ್ಪಣವನ್ನು ಮಾಡಿ, ಹಿಂದೆ ವಾಯುದೇವನು ಹೇಳಿದ ಕಥೆಯನ್ನು ಜ್ಞಾಪಿಸಿಕೊಂಡು ಕಾಶೀಕ್ಷೇತ್ರಕ್ಕೆ ಪ್ರಯಾಣಮಾಡಿದರು.

೬-೮. ಆಗ ಅವರು ಪ್ರಯಾಣಮಾಡುತ್ತಾ ಹಿಮವತ್ಪರ್ವತದ ತಪ್ಪಲಿನಿಂದ ದಕ್ಷಿಣಾಭಿಮುಖವಾಗಿ ಹರಿಯುತ್ತಿರುವ ಭಾಗೀರಥೀನದಿಯನ್ನು ಕಂಡು

ತತೋ ವಾರಾಣಸೀಂ ಪ್ರಾಪ್ಯ ಮುದಿತಾಸ್ಸರ್ವ ಏವ ತೇ ।
ತದೋತ್ತರಪ್ರವಾಹಾಯಾಂ ಗಂಗಾಯಾಮವಗಾಹ್ಯ ಚ ॥ ೭ ॥

ಅವಿಮುಕ್ತೇಶ್ವರಂ ಲಿಂಗಂ ದೃಷ್ಟ್ವಾಭ್ಯರ್ಚ್ಯ ವಿಧಾನತಃ ।
ಪ್ರಯಾತುಮುದ್ಯತಾಸ್ತತ್ರ ದದೃಶುರ್ದಿವಿ ಭಾಸ್ಕರಂ ॥ ೮ ॥

ಸೂರ್ಯಕೋಟಿಪ್ರತೀಕಾಶಂ ತೇಜೋ ದಿವ್ಯಂ ಮಹಾದ್ಭುತಂ ।
ಆತ್ಮಪ್ರಭಾವಿತಾನೇನ ವ್ಯಾಪ್ತಸರ್ವದಿಗಂತರಂ ॥ ೯ ॥

ಅಥ ಪಾಶುಪತಾಃ ಸಿದ್ಧಾಃ ಭಸ್ಮಸಂಛನ್ನವಿಗ್ರಹಾಃ ।
ಮುನಯೋऽಭ್ಯೇತ್ಯ ಶತಶೋ ಲೀನಾಃ ಸ್ಯುಸ್ತತ್ರ ತೇಜಸಿ ॥ ೧೦ ॥

ತಥಾ ವಿಲೀಯಮಾನೇಷು ತಪಸ್ವಿಷು ಮಹಾತ್ಮಸು ।
ಸದ್ಯಸ್ತಿರೋದಧೇ ತೇಜಸ್ತದದ್ಭುತಮಿವಾಭವತ್ ॥ ೧೧ ॥

---

ಅದರಲ್ಲಿ ಸ್ನಾನಮಾಡಿ ಅದರ ದಡವನ್ನೇ ಅನುಸರಿಸಿ ಪ್ರಯಾಣಮಾಡಿ, ಕಾಶೀ ಕ್ಷೇತ್ರವನ್ನು ಸೇರಿದರು. ಅಲ್ಲಿ ಸಂತೋಷಚಿತ್ತರಾಗಿ ಉತ್ತರದಿಕ್ಕಿಗೆ ಹರಿಯುತ್ತಿರುವ ಗಂಗೆಯಲ್ಲಿ ಸ್ನಾನಮಾಡಿ ವಿಧ್ಯುಕ್ತವಾಗಿ ಅವಿಮುಕ್ತೇಶ್ವರನ ದರ್ಶನ ಪೂಜಾದಿಗಳನ್ನು ಮಾಡಿ, ಮುಂದಕ್ಕೆ ಪ್ರಯಾಣಮಾಡಲು ಸಿದ್ಧರಾದರು. ಆ ಸಮಯಕ್ಕೆ ಸರಿಯಾಗಿ ಅಂತರಿಕ್ಷದಲ್ಲಿ ಕೋಟಿಸೂರ್ಯರ ತೇಜಸ್ಸಿನಂತೆ ಪ್ರಕಾಶಮಾನವಾದ ಆಶ್ಚರ್ಯಕರವಾದ ತೇಜಸ್ಸನ್ನು ಕಂಡರು.

೯-೧೦. ಆ ತೇಜಸ್ಸು ಆತ್ಮತೇಜಸ್ಸಿನಂತೆ ಸಮಸ್ತದಿಗಂತಗಳಲ್ಲಿ ವ್ಯಾಪಿಸಿಕೊಂಡಿದ್ದಿತು- ಆಮೇಲೆ ಭಸ್ಮಧಾರಣೆಯಿಂದ ಶೋಭಿಸುತ್ತಿದ್ದ ನೂರಾರು ಜನ ಪಾಶುಪತವ್ರತಮಾಡಿದವರೂ, ಸಿದ್ಧರೂ, ಬಂದು ಆ ತೇಜಸ್ಸಿನಲ್ಲಿ ಲೀನವಾದರು.

೧೧. ಆ ಮಹಾತ್ಮರಾದ ತಪಸ್ವಿಗಳು ಹಾಗೆ ತೇಜಸ್ಸಿನಲ್ಲಿ ವಿಲೀನವಾಗುತ್ತಿರಲು ಆ ಕ್ಷಣದಲ್ಲಿಯೇ ಆ ತೇಜಸ್ಸು ಮರೆಯಾಗಿ ಹೋಯಿತು. ಇದು ಅತ್ಯಂತಾಶ್ಚರ್ಯಕರವಾಗಿ ಕಂಡಿತು.

ತದ್ದೃಷ್ಟ್ವಾ ಮಹದಾಶ್ಚರ್ಯಂ ನೈಮಿಷೀಯಾ ಮಹರ್ಷಯಃ ।
ಕಿಮೇತದಿತ್ಯಜಾನಂತೋ ಯಯುರ್ಬ್ರಹ್ಮವನಂ ಪ್ರತಿ　　॥ ೧೨ ॥

ಪ್ರಾಗೇವೈಷಾಂ ತು ಗಮನಾತ್ಪವನೋ ಲೋಕಪಾವನಃ ।
ದರ್ಶನಂ ನೈಮಿಷೀಯಾಣಾಂ ಸಂವಾದಸ್ತೈರ್ಮಹಾತ್ಮನಃ　　॥ ೧೩ ॥

ಶುದ್ಧಾಂ ಬುದ್ಧಿಂ ತತಸ್ತೇಷಾಂ ಸಾಂಬೇ ಸಾನುಚರೇ ಶಿವೇ ।
ಸಮಾಪ್ತಿಂ ಚಾಪಿ ಸತ್ರಸ್ಯ ದೀರ್ಘಪೂರ್ವಸ್ಯ ಸತ್ರಿಣಾಂ　　॥ ೧೪ ॥

ವಿಜ್ಞಾಪ್ಯ ಜಗತಾಂ ಧಾತ್ರೇ ಬ್ರಹ್ಮಣೇ ಬ್ರಹ್ಮಯೋನಯೇ ।
ಸಕಾರ್ಯೋ ತದನುಜ್ಞಾತೋ ಜಗಾಮ ಸ್ವಪುರಂ ಪ್ರತಿ　　॥ ೧೫ ॥

ಅಥ ಸ್ಥಾನಗತೋ ಬ್ರಹ್ಮಾ ತುಂಬುರೋರ್ನಾರದಸ್ಯ ಚ ।
ಪರಸ್ಪರಂ ಸ್ಪರ್ಧಿತಯೋರ್ಗಾನೇ ವಿವದಮಾನಯೋಃ　　॥ ೧೬ ॥

---

೧೨. ನೈಮಿಶಾರಣ್ಯದ ಮುನಿಗಳು ಅತ್ಯಂತಾಶ್ಚರ್ಯಕರವಾದ ಇದನ್ನು ಕಂಡು ಇದೇನೆಂಬುದನ್ನು ತಿಳಿಯದೇ ಬ್ರಹ್ಮವನಕ್ಕೆ ಪ್ರಯಾಣಮಾಡಿದರು.

೧೩–೧೫. ಈ ಮುನಿಗಳು ಹೋಗುವುದಕ್ಕಿಂತ ಮುಂಚಿತವಾಗಿಯೇ ಲೋಕವನ್ನೆಲ್ಲಾ ಪರಿಶುದ್ಧಿಮಾಡುವ ವಾಯುವು ಬ್ರಹ್ಮನ ಸಮೀಪಕ್ಕೆ ಹೋಗಿ ತಾನು ನೈಮಿಶಾರಣ್ಯಮುನಿಗಳನ್ನು ಕಂಡುದು, ಅವರೊಡನೆ ಮಾತನಾಡಿದುದು, ಅವರಿಗೆ ಅಂಬಾಸಹಿತನಾದ ಶಿವನಲ್ಲಿ ಶುದ್ಧವಾದ ಭಕ್ತಿಯುಂಟಾದುದು, ದೀರ್ಘಸತ್ರವೆಂಬ ಯಜ್ಞವು ಪೂರ್ತಿಯಾದುದು, ಇವೆಲ್ಲವನ್ನೂ ಸೃಷ್ಟಿಕರ್ತನಾದ ಆ ಬ್ರಹ್ಮನಿಗೆ ವಿಜ್ಞಾಪನೆಮಾಡಿ, ಅವನ ಅಪ್ಪಣೆಯನ್ನು ಪಡೆದು ತನ್ನ ರಾಜಧಾನಿಗೆ ಹೊರಟುಹೋಗಿದ್ದನು.

೧೬–೧೭. ಆಮೇಲೆ ಬ್ರಹ್ಮನು ಸಭಾಸ್ಥಾನದಲ್ಲಿ ಕುಳಿತು ತುಂಬುರು-ನಾರದರಿಗೆ ಗಾನ ವಿಷಯದಲ್ಲಿ ಪರಸ್ಪರ ಮೇಲಾಟವಾಗಲಾಗಿ ತಾನು ಮಧ್ಯಸ್ಥ

ತದುದ್ಭಾವಿತಗಾನೋತ್ಥರಸೈರ್ಮಾಧ್ಯಸ್ಥಮಾಚರನ್ ।
ಗಂಧರ್ವೈರಪ್ಸರೋಭಿಶ್ಚ ಸುಖಮಾಸ್ತೇ ನಿಷೇವಿತಃ ॥ ೧೭ ॥

ತದಾನವಸರಾದೇವ ದ್ವಾಃಸ್ಥೈರ್ದ್ವಾರಿ ನಿವಾರಿತಾಃ ।
ಮುನಯೋ ಬ್ರಹ್ಮಭವನಾದ್ಬಹಿಃ ಪಾರ್ಶ್ವಮುಪಾವಿಶನ್ ॥ ೧೮ ॥

ಅಥ ತುಂಬುರುಣಾ ಗಾನೇ ಸಮತಾಂ ಪ್ರಾಪ್ಯ ನಾರದಃ ।
ಸಾಹಚರ್ಯೇಽಪ್ಯನುಜ್ಞಾತೋ ಬ್ರಹ್ಮಣಾ ಪರಮೇಷ್ಠಿನಾ ॥ ೧೯ ॥

ತ್ಯಕ್ತ್ವಾ ಪರಸ್ಪರಸ್ಪರ್ಧಾಂ ಮೈತ್ರೀಂ ಚ ಪರಮಾಂ ಗತಃ ।
ಸಹ ತೇನಾಪ್ಸರೋಭಿಶ್ಚ ಗಂಧರ್ವೈಶ್ಚ ಸಮಾವೃತಃ ॥ ೨೦ ॥

ಉಪವೀಣಯಿತುಂ ದೇವಂ ನಕುಲೀಶ್ವರಮೀಶ್ವರಂ ।
ಭವನಾನ್ನಿರ್ಯಯೌ ಧಾತುರ್ಜಲದಾದಂಶುಮಾನಿವ ॥ ೨೧ ॥

---

ನಾಗಿ ಗಂಧರ್ವರಿಂದಲೂ, ಅಪ್ಸರರಿಂದಲೂ ಕೂಡಿ ಗಾನರಸವನ್ನು ಆಸ್ವಾದನೆ ಮಾಡುತ್ತಾ ಸುಖವಾಗಿ ಕುಳಿತಿದ್ದನು.

೧೮. ಆಗ ಸಮಯವಿಲ್ಲದುದರಿಂದ ದ್ವಾರಪಾಲಕರು ಮುನಿಗಳನ್ನು ತಡೆಯುತ್ತಿರಲು ಆ ಮುನಿಗಳು ಆ ಬ್ರಹ್ಮನ ಅರಮನೆಯ ಹೊರಭಾಗದಲ್ಲಿಯೇ ಕುಳಿತುಕೊಂಡರು.

೧೯. ಬಳಿಕ ತುಂಬುರುನಾರದರು ಗಾನದಲ್ಲಿ ಸಮಾನರೆಂದು ಬ್ರಹ್ಮನು ತೀರ್ಮಾನಮಾಡಿ ಇಬ್ಬರೂ ಸ್ನೇಹದಿಂದ ಜೊತೆಯಲ್ಲಿಯೇ ಇರಬೇಕೆಂದು ಅಪ್ಪಣೆಮಾಡಿದುದರಿಂದ ಇಬ್ಬರೂ ಮೇಲಾಟವನ್ನು ಬಿಟ್ಟು ಸ್ನೇಹಿತರಾಗಿದ್ದರು.

೨೦-೨೧. ನಾರದನು ತುಂಬುರುನೊಡನೆಯೂ, ಗಂಧರ್ವಾಪ್ಸರರಿಂದಲೂ, ಕೂಡಿ ದೇವದೇವನಾದ ನಕುಲೀಶ್ವರನನ್ನು ವೀಣಾಗಾನದಿಂದ ಸಂತೋಷಪಡಿಸಬೇಕೆಂದು ಮೇಘದಿಂದ ಸೂರ್ಯನು ಹೊರಕ್ಕೆ ಬಂದಂತೆ ಬ್ರಹ್ಮನಮನೆಯಿಂದ ಹೊರಕ್ಕೆ ಹೊರಟನು.

ತಂ ದೃಷ್ಟ್ವಾ ಷಟ್ಕುಲೀಯಾಸ್ತೇ ನಾರದಂ ಮುನಿಗೋವೃಷಂ ।
ಪ್ರಣಮ್ಯಾವಸರಂ ಶಂಭೋಃ ಪಪ್ರಚ್ಛುಃ ಪರಮಾದರಾತ್ ॥ ೨೨ ॥

ಸ ಚಾವಸರ ಏವಾಯಮಿತೋಂತರ್ಗಮ್ಯತಾಮಿತಿ ।
ವದನ್ನಯಾವನ್ಯಪರಸ್ತ್ವರಯಾ ಪರಯಾ ಯುತಃ ॥ ೨೩ ॥

ತತೋ ದ್ವಾರಿ ಸ್ಥಿತಾ ಯೇ ವೈ ಬ್ರಹ್ಮಣೇ ತಾನ್ನ್ಯವೇದಯತ್ ।
ತೇನ ತೇ ವಿವಿಶುರ್ವೇಶ್ಮ ಪಿಂಡೀಭೂಯಾಂಡಜನ್ಮನಃ ॥ ೨೪ ॥

ಪ್ರವಿಶ್ಯ ದೂರತೋ ದೇವಂ ಪ್ರಣಮ್ಯ ಭುವಿ ದಂಡವತ್ ।
ಸಮೀಪೇ ತದನುಜ್ಞಾತಾಃ ಪರಿವೃತ್ಯೋಪತಸ್ಥಿರೇ ॥ ೨೫ ॥

ತಾಂಸ್ತತ್ರಾವಸ್ಥಿತಾನ್ ದೃಷ್ಟ್ವಾ ಕುಶಲಂ ಕಮಲಾಸನಃ ।
ವೃತ್ತಾಂತಂ ವೋ ಮಯಾ ಜ್ಞಾತಂ ವಾಯುರೇವಾಹ ನೋ ಯತಃ॥ ೨೬ ॥

---

೨೨. ನೈಮಿಶಾರಣ್ಯದ (ಆರುವಂಶದ) ಋಷಿಗಳು ಮುನಿಗಳೆಂಬ ಗೋವುಗಳ ಗುಂಪಿಗೆ ವೃಷಭನಂತಿರುವ ನಾರದನನ್ನು ನೋಡಿ ನಮಸ್ಕಾರ ಮಾಡಿ ಬ್ರಹ್ಮನ ಸಮಯವೇನೆಂದು ಆದರದಿಂದ ಕೇಳಿದರು.

೨೩. ಆ ನಾರದನು ಇದೇ ಸಮಯವು. ಒಳಗೆ ಹೋಗಿರೆಂದು ಹೇಳಿ ಬೇರೆಕಡೆಯಲ್ಲಿ ಗಮನವಿದ್ದುದರಿಂದ ಆತುರನಾಗಿ ಹೊರಟುಹೋದನು.

೨೪-೨೫. ಆಮೇಲೆ ದ್ವಾರಪಾಲಕರು ಬ್ರಹ್ಮನಿಗೆ ಮುನಿಗಳು ಬಂದಿರುವುದನ್ನು ವಿಜ್ಞಾಪಿಸಲು ಅವನ ಅಪ್ಪಣೆಯಂತೆ ಆ ಮುನಿಗಳೆಲ್ಲರೂ ಗುಂಪಾಗಿ ಬ್ರಹ್ಮನ ಸಭೆಯನ್ನು ಪ್ರವೇಶಿಸಿ ದೂರದಲ್ಲಿಯೇ ನೆಲದಮೇಲೆ ಆ ದೇವನಿಗೆ ನಮಸ್ಕರಿಸಿ ಅವನಪ್ಪಣೆಯಿಂದ ಸಮೀಪಕ್ಕೆಹೋಗಿ ನಿಂತುಕೊಂಡರು.

೨೬-೩೦. ಬ್ರಹ್ಮನು ಅಲ್ಲಿ ನಿಂತಿದ್ದ ಮುನಿಗಳನ್ನು ಕಂಡು ಕುಶಲ ಪ್ರಶ್ನೆಯನ್ನು ಮಾಡಿ ನಿಮ್ಮ ವೃತ್ತಾಂತವೆಲ್ಲವನ್ನೂ ನಾನು ಆಗಲೇ ತಿಳಿದಿರುವೆನು. ವಾಯುದೇವನೇ ನನಗೆ ಹೇಳಿದನು. ಆ ವಾಯುದೇವನು ಅಂತ

ಭವದ್ಭಿಃ ಕಿಂ ಕೃತಂ ಪಶ್ಚಾನ್ಮಾರುತೇಽಂತರ್ಹಿತೇ ಸತಿ ।
ಇತ್ಯುಕ್ತವತಿ ದೇವೇಶೇ ಮುನಯೋಽವಭೃಥಾತ್ಪರಂ ॥ ೨೭ ॥

ಗಂಗಾತೀರ್ಥೇಽಸ್ಯ ಗಮನಂ ಯಾತ್ರಾಂ ವಾರಾಣಸೀಂ ಪ್ರತಿ ।
ದರ್ಶನಂ ತತ್ರ ಲಿಂಗಾನಾಂ ಸ್ಥಾಪಿತಾನಾಂ ಸುರೇಶ್ವರೈಃ ॥ ೨೮ ॥

ಅವಿಮುಕ್ತೇಶ್ವರಸ್ಯಾಪಿ ಲಿಂಗಸ್ಯಾಭ್ಯರ್ಚನಂ ಸಕೃತ್ ।
ಆಕಾಶೇ ಮಹತಸ್ತಸ್ಯ ತೇಜೋರಾಶೇಶ್ಚ ದರ್ಶನಂ ॥ ೨೯ ॥

ಮುನೀನಾಂ ವಿಲಯಂ ತತ್ರ ನಿರೋಧಂ ತೇಜಸಸ್ತತಃ ।
ಯಾಥಾತ್ಮ್ಯವೇದನಂ ತಸ್ಯ ಚಿಂತಿತಸ್ಯಾಪಿ ಚಾತ್ಮಭಿಃ ॥ ೩೦ ॥

ಸರ್ವಂ ಸವಿಸ್ತರಂ ತಸ್ಮೈ ಪ್ರಣಮ್ಯಾಹುರ್ಮುಹುರ್ಮುಹುಃ ।
ಮುನಿಭಿಃ ಕಥಿತಂ ಶ್ರುತ್ವಾ ವಿಶ್ವಕರ್ಮಾ ಚತುರ್ಮುಖಃ ॥ ೩೧ ॥

ಕಂಪಯಿತ್ವಾ ಶಿರಃ ಕಿಂಚಿತ್ಪ್ರಾಹ ಗಂಭೀರಯಾ ಗಿರಾ ।
ಪ್ರತ್ಯಾಸೀದತಿ ಯುಷ್ಮಾಕಂ ಸಿದ್ಧಿರಾಮುಷ್ಮಿಕೀ ಪರಾ ॥ ೩೨ ॥

---

ರ್ಧಾನನಾದಮೇಲೆ ನೀವೇನು ಮಾಡಿದಿರಿ? ಎಂದನು. ಮುನಿಗಳು—ಅವಭೃಥವಾದಮೇಲೆ ಗಂಗಾತೀರ್ಥಕ್ಕೆ ಬಂದುದು, ಕಾಶೀಯಾತ್ರೆ, ಅಲ್ಲಿ ದೇವತೆಗಳು ಪ್ರತಿಷ್ಠೆಮಾಡಿದ ಲಿಂಗಗಳ ದರ್ಶನ, ಅವಿಮುಕ್ತೇಶ್ವರನ ಪೂಜೆ, ಆಕಾಶದಲ್ಲಿ ತೇಜೋರಾಶಿಯ ದರ್ಶನ, ಅದರಲ್ಲಿ ಮುನಿಗಳ ವಿಲಯ, ಆಮೇಲೆ ತೇಜಸ್ಸಿನ ಅಂತರ್ಧಾನ, ಈ ವಿಚಾರದಲ್ಲಿ ತಮಗೆ ಬಂದ ಸಂದೇಹ, ತಮ್ಮ ಮನಸ್ಸಿನ ಆಲೋಚನೆಯಂತೆ ಬ್ರಹ್ಮನದರ್ಶನ, ಇವುಗಳೆಲ್ಲವನ್ನೂ, ವಿಸ್ತಾರವಾಗಿ ಆ ಬ್ರಹ್ಮನಿಗೆ ನಮಸ್ಕರಿಸುತ್ತ ಹೇಳಿದರು.

೩೧. ಪ್ರಪಂಚವನ್ನು ಸೃಷ್ಟಿಮಾಡಿದ ಚತುರ್ಮುಖಬ್ರಹ್ಮನು ಮುನಿಗಳು ಹೇಳಿದ್ದನ್ನು ಕೇಳಿ ತಲೆಯನ್ನು ತೂಗಿ ಗಂಭೀರವಾದ ಮಾತಿನಿಂದಿಂತೆಂದನು.

೩೨-೩೩. ಪರಲೋಕದ ಪರಾಸಿದ್ಧಿಯು ನಿಮಗೂ ಹತ್ತಿರದಲ್ಲಿಯೇ ಇರುವುದು. ನೀವು ದೀರ್ಘಸತ್ರವೆಂಬ ಯಜ್ಞದಿಂದ ಬಹಳಕಾಲ ಶಿವನನ್ನು

ಭವದ್ಭಿರ್ದೀರ್ಘಸತ್ರೇಣ ಚಿರಮಾರಾಧಿತಃ ಪ್ರಭುಃ ।
ಪ್ರಸಾದಾಭಿಮುಖೋ ಭೂತ ಇತಿ ಭೂತಾರ್ಥಸೂಚಿತಂ ॥ ೩೩ ॥

ವಾರಾಣಸ್ಯಾಂ ತು ಯುಷ್ಮಾಭಿರ್ಯದ್ದೃಷ್ಟಂ ದಿವಿ ದೀಪ್ತಿಮತ್ ।
ತಲ್ಲಿಂಗಸಂಜ್ಞಿತಂ ಸಾಕ್ಷಾತ್ತೇಜೋ ಮಾಹೇಶ್ವರಂ ಪರಂ ॥ ೩೪ ॥

ತತ್ರ ಲೀನಾಶ್ಚ ಮುನಯಃ ಶ್ರೌತಪಾಶುಪತವ್ರತಾಃ ।
ಮುಕ್ತಾ ಬಭೂವುಃ ಸ್ವಸ್ಥಾಶ್ಚ ನೈಷ್ಠಿಕಾ ದಗ್ಧಕಿಲ್ಬಿಷಾಃ ॥ ೩೫ ॥

ಪ್ರಾಪ್ಸ್ಯಾನೇನ ಯಥಾ ಮುಕ್ತಿರಚಿರಾದ್ಭವತಾಮಪಿ ।
ಸ ಚಾಯಮರ್ಥಃ ಸೂಚ್ಯೇತ ಯುಷ್ಮದ್ದೃಷ್ಟೇನ ತೇಜಸಾ ॥ ೩೬ ॥

ತತ್ರ ವಃ ಕಾಲ ಏವೈಷ ದೈವಾದುಪನತಃ ಸ್ವಯಂ ।
ಪ್ರಯಾತ ದಕ್ಷಿಣಂ ಮೇರೋಃ ಶಿಖರಂ ದೇವಸೇವಿತಂ ॥ ೩೭ ॥

ಸನತ್ಕುಮಾರೋ ಯತ್ರಾಸ್ತೇ ಮಮ ಪುತ್ರಃ ಪರೋ ಮುನಿಃ ।
ಪ್ರತೀಕ್ಷ್ಯಾಗಮನಂ ಸಾಕ್ಷಾದ್ಭೂತನಾಥಸ್ಯ ನಂದಿನಃ ॥ ೩೮ ॥

ಪೂಜಿಸಿದಿರಿ. ಆ ಶಿವನು ನಿಮಗೆ ಅನುಗ್ರಹಮಾಡಲು ಇಚ್ಛೆಯುಳ್ಳವನಾಗಿರುವನೆಂದು ಈಗ ನಡೆದ ಕಾರ್ಯದಿಂದ ಸೂಚಿತವಾಗಿರುವುದು.

೩೪–೩೫. ಕಾಶೀಕ್ಷೇತ್ರದಲ್ಲಿ ನೀವು ಆಕಾಶದಲ್ಲಿ ನೋಡಿದ ಪ್ರಕಾಶವಾದ ತೇಜಸ್ಸು ಸಾಕ್ಷಾತ್ಪರಮೇಶ್ವರನ ಲಿಂಗರೂಪವಾದ ಶ್ರೇಷ್ಠವಾದ ತೇಜಸ್ಸಾಗಿರುವುದು. ಅದರಲ್ಲಿ ವಿಲೀನರಾದ ಮುನಿಗಳು ವೇದೋಕ್ತವಾದ ಪಾಶುಪತವ್ರತವನ್ನು ಮಾಡಿ ಪಾಪಗಳನ್ನೆಲ್ಲ ಕಳೆದುಕೊಂಡು ಮುಕ್ತರಾದರು.

೩೬–೩೭. ಈ ತೇಜಸ್ಸನ್ನು ನೀವು ಕಂಡುದರಿಂದ ನಿಮಗೂ ಬೇಗನೆ ಮುಕ್ತಿಯಾಗುವುದೆಂದು ಸೂಚಿತವಾದಂತಾಯಿತು. ಈ ಸಂದರ್ಭದಲ್ಲಿ ನಿಮ್ಮ ಅದೃಷ್ಟದಿಂದ ಆ ಕಾಲವು ಈಗಲೇ ತಾನಾಗಿ ಪ್ರಾಪ್ತವಾಗಿರುವುದು. ನೀವು ಸಮಸ್ತದೇವತೆಗಳೂ ಸೇವಿಸುತ್ತಿರುವ ಮೇರುಪರ್ವತದ ದಕ್ಷಿಣದಿಕ್ಕಿನ ಶಿಖರಕ್ಕೆ ಪ್ರಯಾಣಮಾಡಿರಿ.

೩೮.೪೦. ಅಲ್ಲಿ ನನ್ನ ಮಾನಸ ಪುತ್ರನಾದ ಮಹಾಮುನಿಯಾದ ಸನತ್ಕುಮಾರನು ಭೂತಪತಿಯಾದ ನಂದಿಯ ಆಗಮನವನ್ನು ನಿರೀಕ್ಷಿಸುತ್ತಾ ಇರು

ಪುರಾ ಸನತ್ಕುಮಾರೋಽಪಿ ದೃಷ್ಟ್ವಾಪಿ ಪರಮೇಶ್ವರಂ ।
ಅಜ್ಞಾನಾತ್ಸರ್ವಯೋಗೀಂದ್ರಮಾನೀ ವಿನಯದೂಷಿತಃ ॥ ೩೯ ॥

ಅಭ್ಯುತ್ಥಾನಾದಿಕಂ ಯುಕ್ತಮಕುರ್ವನ್ನತಿನಿರ್ಭಯಃ ।
ತತೋಽಪರಾಧಾತ್ಕ್ರುದ್ಧೇನ ಮಹೋಷ್ಟ್ರೋ ನಂದಿನಾ ಕೃತಃ ॥ ೪೦ ॥

ಅಥ ಕಾಲೇನ ಮಹತಾ ತದರ್ಥೇ ಶೋಚತಾ ಮಯಾ ।
ಉಪಾಸ್ಯ ದೇವಂ ದೇವೀಂ ಚ ನಂದಿನಂ ಚಾನುನೀಯ ವೈ ॥ ೪೧ ॥

ಕಥಂಚಿದ್ದುಷ್ಟತಾ ತಸ್ಯ ಪ್ರಯತ್ನೇನ ನಿವಾರಿತಾ ।
ಪ್ರಾಪಿತೋ ಹಿ ಯಥಾಪೂರ್ವಂ ಸನತ್ಪೂರ್ವಾಂ ಕುಮಾರತಾಂ ॥ ೪೨ ॥

ತದಾಹ ಚ ಮಹಾದೇವಃ ಸ್ಮಯನ್ನಿವ ಗಣಾಧಿಪಂ ।
ಅವಜ್ಞಾಯ ಹಿ ಮಾಮೇವ ತಥಾಹಂಕೃತವಾನ್ಮುನಿಃ ॥ ೪೩ ॥

---

ವನು. ಹಿಂದೆ ಸನತ್ಕುಮಾರನು ತಾನೇ ಯೋಗಿಶ್ರೇಷ್ಠನೆಂಬ ಅಹಂಕಾರ ಧಿಂದ ಅಜ್ಞಾನಿಯಾಗಿ ವಿನಯವಿಲ್ಲದೆ ಪರಮೇಶ್ವರನನ್ನು ನೋಡಿದರೂ ನಿರ್ಭಯವಾಗಿ ಆ ದೇವನಿಗೆ ನಮಸ್ಕಾರಾಧಿಗಳನ್ನು ಮಾಡದೆ ಹೋಗಲು, ನಂದಿಯು ಕೋಪಗೊಂಡು ಅವನನ್ನು ದೊಡ್ಡ ಒಂಟೆಯನ್ನಾಗಿ ಮಾಡಿದನು.

೪೧-೪೨. ಬಹಳ ಕಾಲದವರೆಗೂ ಅದಕ್ಕೋಸ್ಕರವಾಗಿ ನಾನು ದುಃಖಪಡುತ್ತಿದ್ದು ದೇವೀಸಹಿತನಾದ ಶಿವನನ್ನು ಪೂಜಿಸಿ ನಂದಿಯನ್ನು ಸಂತೋಷಪಡಿಸಿ ಬಹಳ ಪ್ರಯತ್ನಪಟ್ಟು ಆ ಸನತ್ಕುಮಾರನ ದುರ್ದೆಸೆಯನ್ನು ನಿವಾರಣೆ ಮಾಡಿದೆನು. ಸನತ್ಕುಮಾರನು ಹಿಂದಿನರೂಪವನ್ನು ಪಡೆದನು.

೪೩. ಆಗ ಮಹಾದೇವನು ನಗುತ್ತ ಗಣಾಧಿಪನಾದ ನಂದಿಯನ್ನು ಕುರಿತು ಎಲೈ ನಂದಿಯೇ, ಈ ಸನತ್ಕುಮಾರನು ನನ್ನನ್ನೇ ತಿರಸ್ಕಾರಮಾಡಿ ಅಹಂಕಾರದಿಂದಿದ್ದನು. ಆದುದರಿಂದ ಪಾಪರಹಿತನಾದ ನೀನೇ ನನ್ನ ನಿಜವಾದ ಸ್ವರೂಪವನ್ನು ಅವನಿಗೆ ಹೇಳು.

ಅತಸ್ತ್ವಮೇವ ಯಾಥಾತ್ಮ್ಯಂ ಮಮಾಸ್ಮೈ ಕಥಯಾನಘ ।
ಬ್ರಹ್ಮಣಃ ಪೂರ್ವಜಃ ಪುತ್ರೋ ಮಾಂ ಮೂಢಮಿವ ಸಂಸ್ಮರೇತ್ ॥ ೪೪ ॥

ಮಯೈವ ಶಿಷ್ಯಸ್ತೇ ದತ್ತೋ ಮಮ ಜ್ಞಾನಪ್ರವರ್ತಕಃ ।
ಧರ್ಮಾಧ್ಯಕ್ಷಾಭಿಷೇಕಂ ಚ ತವ ನಿರ್ವರ್ತಯಿಷ್ಯತಿ ॥ ೪೫ ॥

ಸ ಏವಂ ವ್ಯಾಹೃತೋ ಭೂಯಃ ಸರ್ವಭೂತಗಣಾಗ್ರಣೀಃ ।
ಯತ್ಪುರಾಜ್ಞಾಪನಂ ಮೂರ್ಧ್ನಾ ಪ್ರಾತಃ ಪ್ರತಿಗೃಹೀತವಾನ್ ॥ ೪೬ ॥

ತಥಾ ಸನತ್ಕುಮಾರೋಽಪಿ ಮೇರೌ ಮದನುಶಾಸನಾತ್ ।
ಪ್ರಸಾದಾರ್ಥಂ ಗಣಸ್ಯಾಸ್ಯ ತಪಶ್ಚರತಿ ದುಶ್ಚರಂ ॥ ೪೭ ॥

ದ್ರಷ್ಟವ್ಯಶ್ಚೇತಿ ಯುಷ್ಮಾಭಿಃ ಪ್ರಾಗ್ಗಣೇಶಸಮಾಗಮಾತ್ ।
ತತ್ಪ್ರಸಾದಾರ್ಥಮಚಿರಾನ್ನಂದೀ ತತ್ರಾಗಮಿಷ್ಯತಿ ॥ ೪೮ ॥

---

೪೪–೪೫. ಬ್ರಹ್ಮನ ಮೊದಲನೆಯ ಮಗನಾದ ಈ ಸನತ್ಕುಮಾರನು ಮೂಢನಂತೆ ನನ್ನನ್ನು ಸ್ಮರಿಸುತ್ತಿರುವನು. ಆದುದರಿಂದ ನಾನೇ ಅವನನ್ನು ನಿನಗೆ ಶಿಷ್ಯನನ್ನಾಗಿ ಮಾಡಿರುವೆನು. ಅವನು ನನ್ನ ಸಂಬಂಧವಾದ ಜ್ಞಾನವನ್ನು ಲೋಕದಲ್ಲಿ ಹರಡುವನು. ನಿನಗೆ ಧರ್ಮಾಧ್ಯಕ್ಷಸ್ಥಾನದಲ್ಲಿ ಪಟ್ಟಾಭಿಷೇಕವನ್ನು ಮಾಡುವನು ಎಂದನು.

೪೬-೪೭. ಸರ್ವಭೂತಗಳಿಗೂ ಅಧಿಪತಿಯಾದ ನಂದಿಗೆ ಶಿವನು ಹೀಗೆ ಹೇಳುತ್ತಲು, ಆ ನಂಧಿಯು ಶಿವನ ಆಜ್ಞೆಯನ್ನು ಶಿರಸಾವಹಿಸಿದನು. ಸನತ್ಕುಮಾರನೂ ಕೂಡ ಮೇರು ಪರ್ವತದಲ್ಲಿ ನನ್ನ ಅಪ್ಪಣೆಯಂತೆ ಈ ನಂದಿಯ ಅನುಗ್ರಹಕ್ಕಾಗಿ ಕ್ರೂರವಾದ ತಪಸ್ಸನ್ನು ಮಾಡುತ್ತಿದ್ದನು.

೪೮. ಆ ಗಣೇಶ್ವರನಾದ ನಂದಿಯು ಬರುವುದಕ್ಕಿಂತ ಮುಂಚೆಯೇ ನೀವು ಸನತ್ಕುಮಾರನನ್ನು ನೋಡಬೇಕು. ಅವನಿಗೆ ಅನುಗ್ರಹಮಾಡುವುದಕ್ಕಾಗಿ ಬೇಗನೆ ನಂದಿಯೂ ಅಲ್ಲಿಗೆ ಬರುವನು.

**ಇತಿ ಸತ್ವರಮಾದಿಶ್ಯ ಪ್ರೇಷಿತಾ ವಿಶ್ವಯೋನಿನಾ ।**
**ಕುಮಾರಶಿಖರಂ ಮೇರೋರ್ದಕ್ಷಿಣಂ ಮುನಯೋ ಯಯುಃ ॥ ೪೯ ॥**

**ಇತಿ ಶ್ರೀಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯಸಂಹಿತಾಯಾ-
ಮುತ್ತರಭಾಗೇ ನೈಮಿಶರ್ಷಿಯಾತ್ರಾವರ್ಣನಂ ನಾಮ
ಚತ್ವಾರಿಂಶೋಽಧ್ಯಾಯಃ**

---

೪೯. ಹೀಗೆಂದು ಬ್ರಹ್ಮನು ಅಪ್ಪಣೆಮಾಡಿ ಆ ಋಷಿಗಳನ್ನು ಕಳುಹಿಸಿ ಕೊಟ್ಟನು. ಆ ಮುನಿಗಳು ಮೇರುಪರ್ವತದ ದಕ್ಷಿಣದಿಕ್ಕಿನಲ್ಲಿರುವ ಕುಮಾರ ಶಿಖರಕ್ಕೆ ಪ್ರಯಾಣಮಾಡಿದರು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯುವೀಯಸಂಹಿತೆಯ ಉತ್ತರ
ಭಾಗದಲ್ಲಿ ನೈಮಿಶಾರಣ್ಯನಿವಾಸಿಗಳಾದ ಋಷಿಗಳ ಯಾತ್ರಾವರ್ಣನೆ
ಯೆಂಬ ನಲವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮಹಾಪುರಾಣೇ

## ವಾಯವೀಯಸಂಹಿತಾಯಾಮುತ್ತರಭಾಗೇ

## ಏಕಚತ್ವಾರಿಂಶೋಽಧ್ಯಾಯಃ

---

॥ ಸೂತ ಉವಾಚ ॥

ತತ್ರ ಸ್ಕಂದಸರೋ ನಾಮ ಸರಸ್ಸಾಗರಸನ್ನಿಭಂ ।
ಅಮೃತಸ್ವಾದುಶಿಶಿರಸ್ವಚ್ಛಾಗಾಧಲಘೂದಕಂ ॥ ೧ ॥

ಸಮಂತತಃ ಸಂಘಟಿತಂ ಸ್ಫಟಿಕೋಪಲಸಂಚಯೈಃ ।
ಸರ್ವರ್ತುಕುಸುಮೈಃ ಫುಲ್ಲೈಶ್ಛಾದಿತಾಖಿಲದಿಙ್ಮುಖಂ ॥ ೨ ॥

---

## ನಲವತ್ತೊಂದನೆಯ ಅಧ್ಯಾಯವು

೧-೨. ಸೂತನು ಹೇಳಿದನು—ಆ ಕುಮಾರಶಿಖರದಲ್ಲಿ ಸ್ಕಂದಸರೋವರವೆಂಬ ಒಂದು ಸರೋವರುವಿರವುದು. ಅದು ಸಾಗರದಂತೆ ಅತಿ ವಿಸ್ತಾರವಾಗಿರುವುದು. ಅದರ ನೀರು ಅಮೃತದಂತೆ ರುಚಿಯಾಗಿಯೂ ತಣ್ಣಗೆ ಶುದ್ಧವಾಗಿಯೂ ಇರುವುದು. ಅದು ಬಹಳ ಆಳವಾಗಿರುವುದು. ನೀರು ತಿಳಿಯಾಗಿರುವುದು. ಇಂತಹ ಆ ಸರೋವರದ ಸುತ್ತಲೂ ಸ್ಫಟಿಕದ ಕಲ್ಲಿನಿಂದ ಮಾಡಿದ ಸೋಪಾನಗಳಿರುವುವು. ಅದರ ಎಲ್ಲ ದಿಕ್ಕುಗಳಲ್ಲಿಯೂ ಎಲ್ಲ ಋತುಗಳ ಹೂಗಳೂ ಅರಳಿ ಆ ದಿಕ್ಕುಗಳನ್ನು ಮರೆಮಾಡುತ್ತಿದ್ದವು.

ಶೈವಲೈರುತ್ಪಲೈಃ ಪದ್ಮೈಃ ಕುಮುದೈಸ್ತಾರಕೋಪಮೈಃ ।
ತರಂಗೈರಭ್ರಸಂಕಾಶೈರಾಕಾಶಮಿವ ಭೂಮಿಗಂ ॥ ೩ ॥

ಸುಖಾವತರಣಾರೋಹೈಃ ಸ್ಥಲೈರ್ನೀಲಶಿಲಾಮಯೈಃ ।
ಸೋಪಾನಮಾರ್ಗೈ ರುಚಿರೈಶ್ಶೋಭಮಾನಾಷ್ಟದಿಙ್ಮುಖಂ ॥ ೪ ॥

ತತ್ರಾವತೀರ್ಣೈಶ್ಚ ಯಥಾ ತತ್ರೋತ್ತೀರ್ಣೈಶ್ಚ ಭೂಯಸಾ ।
ಸ್ನಾತೈಃ ಸಿತೋಪವೀತೈಶ್ಚ ಶುಕ್ಲಕೌಪೀನವಲ್ಕಲೈಃ ॥ ೫ ॥

ಜಟಾಶಿಖಾಯುತೈರ್ಮುಂಡೈಸ್ತ್ರಿಪುಂಡ್ರಕೃತಮಂಡನೈಃ ।
ವಿರಾಗವಿವಶಸ್ಮೇರಮುಖೈರ್ಮುನಿಕುಮಾರಕೈಃ ॥ ೬ ॥

ಘಟೈಃ ಕಮಲಿನೀಪತ್ರಪುಟೈಶ್ಚ ಕಲಶೈಃ ಶಿವೈಃ ।
ಕಮಂಡಲುಭಿರನ್ಯೈಶ್ಚ ತಾದೃಶೈಃ ಕರಕಾದಿಭಿಃ ॥ ೭ ॥

---

೩-೪. ಆ ಸರೋವರದಲ್ಲಿ ಪಾಚಿಗಳೂ, ಬಿಳಿಯ ತಾವರೆಗಳೂ, ಕೆಂದಾವರೆಗಳೂ, ನೀಲಿಯ ಕಮಲಗಳೂ, ಅಲ್ಲಲ್ಲಿ ನಕ್ಷತ್ರಗಳಂತೆ ಹೊಳೆಯುತ್ತಿದ್ದುವು. ಮೇಘಗಳಂತೆ ದೊಡ್ಡದೊಡ್ಡ ಅಲೆಗಳು ಏಳುತ್ತಿದ್ದುವು. ಆಕಾಶವೇ ಭೂಮಿಯಲ್ಲಿರುವಂತೆ ಕಾಣುತ್ತಿದ್ದಿತು. ಆ ಸರೋವರಕ್ಕೆ ಸುಖವಾಗಿ ಇಳಿಯುವುದಕ್ಕೂ, ಹತ್ತುವುದಕ್ಕೂ ನೀಲಶಿಲೆಯ ಮೆಟ್ಟಲುಗಳು ಎಂಟು ದಿಕ್ಕುಗಳಲ್ಲಿಯೂ ಇದ್ದುವು.

೫-೬. ನಗುಮುಖದಿಂದ ಕೂಡಿದ ಅನೇಕ ಮುನಿಕುಮಾರರು ಅಲ್ಲಿ ಸ್ನಾನಮಾಡಿ ಬಿಳಿಯ ಯಜ್ಞೋಪವೀತಗಳನ್ನೂ, ಕೌಪೀನಗಳನ್ನೂ, ನಾರುಮಡಿಗಳನ್ನೂ ಧರಿಸಿ, ಜಟಾಧಾರಿಗಳಾಗಿ ಶಿಖೆಯನ್ನಿಟ್ಟುಕೊಂಡು, ಮುಂಡನ, ಮಾಡಿಕೊಂಡು, ಭಸ್ಮತ್ರಿಪುಂಡ್ರಗಳಿಂದಲಂಕರಿಸಿಕೊಂಡು, ಆ ಸರೋವರದ ಮೆಟ್ಟಲುಗಳನ್ನು ಹತ್ತುತ್ತಲೂ, ಇಳಿಯುತ್ತಲೂ ಇದ್ದರು.

೭-೮. ಆ ಮುನಿಕುಮಾರರು ಮಣ್ಣಿನ ಗಡಿಗೆಗಳಿಂದಲೂ, ಕಮಲದ ಎಲೆಗಳಿಂದಲೂ, ಮಂಗಳಕರವಾದ ಕಲಶಗಳಿಂದಲೂ, ಕಮಂಡಲಗಳಿಂದಲೂ

**ಆತ್ಮಾರ್ಥಂ ಚ ಪರಾರ್ಥಂ ಚ ದೇವತಾರ್ಥಂ ವಿಶೇಷತಃ ।**
**ಆನೀಯಮಾನಸಲಿಲಮಾತ್ರಪುಷ್ಪಂ ಚ ನಿತ್ಯಶಃ ॥ ೮ ॥**

**ಅಂತರ್ಜಲಶಿಲಾರೂಢೈರ್ನೀಚಾನಾಂ ಸ್ಪರ್ಶಶಂಕಯಾ ।**
**ಆಚಾರವದ್ಭಿರ್ಮುನಿಭಿಃ ಕೃತಭಸ್ಮಾಂಗಧೂಸರೈಃ ॥ ೯ ॥**

**ಇತಸ್ತತೋಽಪ್ಸು ಮಜ್ಜದ್ಭಿರಿಷ್ಟಶಿಷ್ಟೈಃ ಶಿಲಾಗತೈಃ ।**
**ತಿಲೈಶ್ಚ ಸಾಕ್ಷತೈಃ ಪುಷ್ಪೈಸ್ತ್ಯಕ್ತದರ್ಭಪವಿತ್ರಕೈಃ ॥ ೧೦ ॥**

**ದೇವಾದ್ಯನ್ಯೃಷಿಮುಧ್ಯಂ ಚ ನಿರ್ವರ್ತ್ಯ ಪಿತೃತರ್ಪಣಂ ।**
**ನಿವೇದಯೇದಭಿಜ್ಞೇಭ್ಯೋ ನಿತ್ಯಸ್ನಾನಗತಾನ್ ದ್ವಿಜಾನ್ ॥ ೧೧ ॥**

**ಸ್ಥಾನೇಸ್ಥಾನೇ ಕೃತಾನೇಕಬಲಿಪುಷ್ಪಸಮೀರಣೈಃ ।**
**ಸೌರಾರ್ಘ್ಯಪೂರ್ವಂ ಕುರ್ವದ್ಭಿಃ ಸ್ಥಂಡಿಲೇಽಭ್ಯರ್ಚನಾದಿಕಂ ॥ ೧೨ ॥**

---

ಇತರ ಗಿಂಡಿ ಮೊದಲಾದ ನೀರುತುಂಬುವ ಪಾತ್ರೆಗಳಿಂದಲೂ, ತಮಗಾಗಿಯೂ ಇತರರಿಗಾಗಿಯೂ, ದೇವತಾಪೂಜೆಗಾಗಿಯೂ, ನೀರನ್ನೂ, ಹೂಗಳನ್ನೂ ಯಾವಾಗಲೂ ತರುತ್ತಿರುವರು.

೯. ಕೆಲವರು ಆಚಾರಶೀಲರಾದ ಮುನಿಗಳು, ನೀಚರು ತಮ್ಮನ್ನು ಮುಟ್ಟುವರೆಂಬ ಸಂದೇಹದಿಂದ ನೀರಿನ ನಡುವೆ ಇರುವ ಕಲ್ಲು ಬಂಡೆಗಳಮೇಲೆ ಕುಳಿತು ಭಸ್ಮಧಾರಣೆಯನ್ನು ಮಾಡಿಕೊಳ್ಳುತ್ತಿದ್ದರು. ಅಲ್ಲಲ್ಲಿ ಕೆಲವರು ನೀರಿನಲ್ಲಿಳಿದು ಸ್ನಾನಮಾಡುತ್ತಿದ್ದರು. ಕೆಲವರು ಕಲ್ಲುಬಂಡೆಯಮೇಲೆ ಕುಳಿತ್ತಿದ್ದರು.

೧೦-೧೧. ಕೆಲವರು ಎಳ್ಳು, ಮಂತ್ರಾಕ್ಷತೆ, ದರ್ಭೆಯಪವಿತ್ರ ಇವುಗಳಿಂದ ದೇವಋಷಿಪಿತೃತರ್ಪಣಗಳನ್ನು ಮಾಡಿ ಇವುಗಳನ್ನು ನೀರಿನಲ್ಲಿ ಬಿಟ್ಟು ಪ್ರತಿದಿನವೂ ಸ್ನಾನಕ್ಕೆ ಬರತಕ್ಕ ಬ್ರಾಹ್ಮಣರ ವಿಷಯಗಳನ್ನು ಅಲ್ಲಿ ತಿಳಿದವರಿಗೆ ಹೇಳುತ್ತಾ ಅವರೊಡನೆ ಮಾತನಾಡುತ್ತಿದ್ದರು.

೧೨. ಕೆಲವರು ಅಲ್ಲಲ್ಲಿ ಬಲಿಗಳನ್ನು ಹಾಕಿ ಪುಷ್ಪಸಹಿತವಾಗಿ ಸೂರ್ಯನಿಗೆ ಅರ್ಘ್ಯವನ್ನು ಕೊಟ್ಟು, ನೆಲದಮೇಲೆ ಮಂಡಲಾದಿಗಳನ್ನು ಕಲ್ಪಿಸಿ ಅಲ್ಲಿಯೇ ಪೂಜಾದಿಗಳನ್ನು ಮಾಡುತ್ತಿದ್ದರು.

ಕ್ವಚಿನ್ನಿಮಜ್ಜದುನ್ಮಜ್ಜತ್ಪ್ರಸ್ರಸ್ತಗಜಯೂಥಪಂ ।
ಕ್ವಚಿಚ್ಚ ತೃಷಯಾಯಾತಮೃಗೀಮೃಗತುರಂಗಮಂ ॥ ೧೩ ॥

ಕ್ವಚಿತ್ಪೀತಜಲೋತ್ತೀರ್ಣಮಯೂರವರವಾರಣಂ ।
ಕ್ವಚಿತ್ಕೃತತಟಾಘಾತವೃಷಪ್ರತಿವೃಷೋಜ್ಜ್ವಲಂ ॥ ೧೪ ॥

ಕ್ವಚಿತ್ಕಾರಂಡವರವೈಃ ಕ್ವಚಿತ್ಸಾರಸಕೂಜಿತಃ ।
ಕ್ವಚಿಚ್ಚ ಕೋಕನಿನದೈಃ ಕ್ವಚಿದ್ಭ್ರಮರಗೀತಿಭಿಃ ॥ ೧೫ ॥

ಸ್ನಾನಪಾನಾದಿಕರಣೈಃ ಸ್ವಸಂಪದ್ದ್ರುಮಜೀವಿಭಿಃ ।
ಪ್ರಣಯಾತ್ಪ್ರಾಣಿಭಿಸ್ತೈಸ್ತೈರ್ಭಾಷಮಾಣಮಿವಾಸಕೃತ್ ॥ ೧೬ ॥

ಕೂಲಶಾಖಿಶಿಖಾಲೀನಕೋಕಿಲಾಕುಲಕೂಜಿತೈಃ ।
ಆತಪೋಪಹತಾನ್ಸರ್ವಾನ್ನಾಮಂತ್ರಯದಿವಾನಿಶಂ ॥ ೧೭ ॥

---

೧೩-೧೫. ಕೆಲವೆಡೆಗಳಲ್ಲಿ ಸಲಗನು ಸರೋವರದ ನೀರಿನಲ್ಲಿ ಮುಳುಗುತ್ತಲೂ, ಏಳುತ್ತಲೂ ಆಟವಾಡುತ್ತಿದ್ದಿತು. ಕೆಲವೆಡೆಗಳಲ್ಲಿ ಬಾಯಾರಿ ಬಂದ ಹೆಣ್ಣುಗಂಡು ಜಿಂಕೆಗಳೂ, ಕುದುರೆಗಳೂ, ನೀರು ಕುಡಿಯುತ್ತಿದ್ದುವು. ಕೆಲವೆಡೆಗಳಲ್ಲಿ ನವಿಲುಗಳೂ, ಆನೆಗಳೂ ನೀರನ್ನು ಕುಡಿದು ನೀರಿನಿಂದ ಮೇಲಕ್ಕೆ ಎದ್ದು ಬರುತ್ತಿದ್ದವು. ನೀರಿನ ದಡದಲ್ಲಿ ಗೂಳಿಗಳು ಒಂದರೊಡನೊಂದು ಹೋರಾಡುತ್ತಿದ್ದುವು. ಬಕಪಕ್ಷಿಗಳೂ, ಹಂಸಪಕ್ಷಿಗಳೂ, ಚಕ್ರವಾಕಗಳೂ, ದುಂಬಿಗಳೂ ಕೆಲವೆಡಗಳಲ್ಲಿ ಮನೋಹರವಾಗಿ ಧ್ವನಿಮಾಡುತ್ತಿದ್ದುವು.

೧೬-೧೭. ಆ ಸರೋವರದ ದಡದಲ್ಲಿರುವ ಮರಗಳಲ್ಲಿ ಜೀವಿಸುತ್ತಿರುವ ಪ್ರಾಣಿಗಳು ಆ ಸರೋವರದಲ್ಲಿ ಸ್ನಾನಪಾನಾದಿಗಳನ್ನು ಮಾಡಿ ಪ್ರೀತಿಯಿಂದ ಒಬ್ಬರೊಡನೊಬ್ಬರು ಮಾತನಾಡುವಂತೆ ಧ್ವನಿಮಾಡುತ್ತಿದ್ದವು. ದಡದ ಮರಗಳ ಕೊಂಬೆಯ ತುದಿಯಲ್ಲಿ ಅಡಗಿಕೊಂಡು ಕೋಗಿಲೆಗಳು ಕೂಗುತ್ತಿದ್ದುವು. ಅದನ್ನು ನೋಡಿದರೆ ಬಿಸಿಲಿನಿಂದ ಬಳಲಿದ ಜನರನ್ನೆಲ್ಲ ಕರೆಯುವಂತಿದ್ದಿತು.

ಉತ್ತರೇ ತಸ್ಯ ಸರಸಸ್ತೀರೇ ಕಲ್ಪತರೋರಧಃ ।
ವೇದ್ಯಾಂ ವಜ್ರಶಿಲಾಮಯ್ಯಾಂ ಮೃದುಲೇ ಮೃಗಚರ್ಮಣಿ ॥ ೧೮ ॥

ಸನತ್ಕುಮಾರಮಾಸೀನಂ ಶಶ್ವದ್ಬಾಲವಪುರ್ಧರಂ ।
ತತ್ಕಾಲಮಾತ್ರೋಪರತಂ ಸಮಾಧೇರಚಲಾತ್ಮನಃ ॥ ೧೯ ॥

ಉಪಾಸ್ಯಮಾನಂ ಮುನಿಭಿರ್ಯೋಗೀಂದ್ರೈರಪಿ ಪೂಜಿತಂ ।
ದದೃಶುರ್ನೈಮಿಷೇಯಾಸ್ತೇ ಪ್ರಣತಾಶ್ಚೋಪತಸ್ಥಿರೇ ॥ ೨೦ ॥

ಯಾವತ್ಪೃಷ್ಟವತೇ ತಸ್ಮೈ ಪ್ರೋಚುಃ ಸ್ವಾಗತಕಾರಣಂ ।
ತುಮುಲಃ ಶುಶ್ರುವೇ ತಾವದ್ದಿವಿ ದುಂದುಭಿನಿಸ್ವನಃ ॥ ೨೧ ॥

ದದೃಶೇ ತತ್ಕ್ಷಣೇ ತಸ್ಮಿನ್ವಿಮಾನಂ ಭಾನುಸನ್ನಿಭಂ ।
ಗಣೇಶ್ವರೈರಸಂಖ್ಯೇಯೈಃ ಸಂವೃತಂ ಚ ಸಮಂತತಃ ॥ ೨೨ ॥

---

೧೮-೨೦. ಆ ಸರೋವರದ ಉತ್ತರದಿಕ್ಕಿನ ದಡದಲ್ಲಿರುವ ಕಲ್ಪವೃಕ್ಷದ ಕೆಳಗೆ ವಜ್ರದ ಕಲ್ಲಿನ ಜಗುಲಿಯಮೇಲೆ ಹಾಸಿರುವ ಮೃದುವಾದ ಕೃಷ್ಣಾಜಿನದಲ್ಲಿ ಯಾವಾಗಲೂ ಬಾಲಕನಂತಿರುವ ಸನತ್ಕುಮಾರನು ಕುಳಿತಿದ್ದನು. ನೈಮಿಶಾರಣ್ಯವಾಸಿಗಳಾದ ಮುನಿಗಳು ಅಲ್ಲಿಗೆ ಬಂದ ಸಮಯದಲ್ಲಿಯೇ ಈ ಸನತ್ಕುಮಾರನು ಸಮಾಧಿಯಿಂದೆದ್ದು ಯೋಗಿಗಳಿಂದಲೂ ಮುನಿಗಳಿಂದಲೂ ಶುಶ್ರೂಷೆಯನ್ನು ಕೈಗೊಳ್ಳುತ್ತಿದ್ದನು. ನೈಮಿಶಾರಣ್ಯದ ಋಷಿಗಳು ಅವನನ್ನು ನೋಡಿ ನಮಸ್ಕರಿಸಿ ಸಮೀಪದಲ್ಲಿಯೇ ನಿಂತುಕೊಂಡರು.

೨೧-೨೨. ಸನತ್ಕುಮಾರನು ಆ ಮುನಿಗಳು ಬಂದುದಕ್ಕೆ ಕಾರಣವನ್ನು ಕೇಳುತ್ತಿರಲು ಆ ಸಮಯಕ್ಕೆ ಸರಿಯಾಗಿ ಆಕಾಶದಲ್ಲಿ ಅನೇಕ ನಗಾರಿಯ ಶಬ್ದಗಳು ಕೇಳಿಬಂದವು. ಆ ಕ್ಷಣದಲ್ಲಿಯೇ ಲೆಕ್ಕವಿಲ್ಲದಷ್ಟು ಗಣೇಶ್ವರರಿಂದ ಸೂರ್ಯನಿಗೆ ಸಮಾನವಾದ ಕಾಂತಿಯಿಂದ ಬೆಳಗುತ್ತಿದ್ದ ಒಂದು ದಿವ್ಯ ವಿಮಾನವು ಅಲ್ಲಿ ಗೋಚರವಾಯಿತು.

ಅಪ್ಸರೋಗಣಸಂಕೀರ್ಣಂ ರುದ್ರಕನ್ಯಾಭಿರಾವೃತಂ ।
ಮೃದಂಗಮುರಜೋದ್ಘುಷ್ಟಂ ವೇಣುವೀಣಾರವಾನ್ವಿತಂ ॥ ೨೩ ॥

ಚಿತ್ರರತ್ನವಿತಾನಾಢ್ಯಂ ಮುಕ್ತಾದಾಮವಿರಾಜಿತಂ ।
ಮುನಿಭಿಃ ಸಿದ್ಧಗಂಧರ್ವೈರ್ಯಕ್ಷಚಾರಣಕಿನ್ನರೈಃ ॥ ೨೪ ॥

ನೃತ್ಯದ್ಭಿಶ್ಚೈವ ಗಾಯದ್ಭಿರ್ವಾದಯದ್ಭಿಶ್ಚ ಸಂವೃತಂ ।
ವೀರಗೋವೃಷಚಿಹ್ನೇನ ವಿದ್ರುಮದ್ರುಮಯಷ್ಟಿನಾ ॥ ೨೫ ॥

ಕೃತಗೋಪುರಸತ್ಕಾರಂ ಕೇತುನಾ ನಾನ್ಯಹೇತುನಾ ।
ತಸ್ಯ ಮಧ್ಯೇ ವಿಮಾನಸ್ಯ ಚಾಮರದ್ವಿತಯಾಂತರೇ ॥ ೨೬ ॥

ಛತ್ರಸ್ಯ ಮಣಿದಂಡಸ್ಯ ಚಂದ್ರಸ್ಯೇವ ಶುಚೇರಧಃ ।
ದಿವ್ಯಸಿಂಹಾಸನಾರೂಢಂ ದೇವ್ಯಾ ಸುಯಶಯಾ ಸಹ ॥ ೨೭ ॥

---

೨೩-೨೪. ಆ ವಿಮಾನವು ಅಪ್ಸರಸ್ತ್ರೀಯರಿಂದಲೂ, ರುದ್ರಕನ್ಯೆಯರಿಂದಲೂ ತುಂಬಿದ್ದಿತು. ಮದ್ದಲೆ, ತಮಟೆ, ಕೊಳಲು, ವೀಣೆ ಇವುಗಳ ಧ್ವನಿಯಿಂದ ಕೂಡಿದ್ದಿತು. ವಿಚಿತ್ರವಾದ ಮೇಲುಕಟ್ಟುಗಳನ್ನು ಕಟ್ಟಿ ಮುತ್ತಿನಸರಗಳಿಂದಲಂಕೃತವಾಗಿದ್ದಿತು. ಮುನಿಗಳೂ, ಸಿದ್ಧರೂ, ಗಂಧರ್ವರೂ, ಯಕ್ಷರೂ ಚಾರಣರೂ, ಕಿನ್ನರರೂ, ನರ್ತಕರೂ, ಗಾಯಕರೂ, ವಾದ್ಯಗಾರರೂ ಅದರಲ್ಲಿ ತುಂಬಿದ್ದರು.

೨೫. ಆ ವಿಮಾನದ ಬಾಗಿಲಿನಲ್ಲಿ ವೃಷಭಚಿಹ್ನೆಯಿಂದ ಅಲಂಕೃತವಾಗಿದ್ದ ಒಂದು ಬಾವುಟವು ಕಂಗೊಳಿಸುತ್ತಿತ್ತು. ಮತ್ತು ಆ ಬಾವುಟದಲ್ಲಿ ಹವಳದ ಕೋಲನ್ನು ಹಿಡಿದಿರುವಂತೆ ಚಿತ್ರವನ್ನು ಬರೆದಿತ್ತು. ಇದು ಮರ್ಯಾದೆಯನ್ನು ಸೂಚಿಸುವುದಾಗಿದ್ದಿತು.

೨೬-೨೭. ಆ ವಿಮಾನದ ನಡುವೆ ಎರಡು ಚಾಮರಗಳ ಮಧ್ಯದಲ್ಲಿ ಚಂದ್ರನಂತೆ ಬೆಳ್ಳಗಿರುವ ಮತ್ತು ರತ್ನದ ದಂಡವನ್ನು ಹಾಕಿರುವ ಶ್ವೇತಚ್ಛತ್ರಿಯ ಕೆಳಗಡೆ ಶ್ರೇಷ್ಠವಾದ ಸಿಂಹಾಸನದಲ್ಲಿ ಸುಯಶಾದೇವಿಯೊಡನೆ

**ಶ್ರಿಯಾ ಚ ವಪುಷಾ ಚೈವ ತ್ರಿಭಿಶ್ಚಾಪಿ ವಿಲೋಚನೈಃ ।**
**ಪ್ರಾಕಾರೈರಭಿಕೃತ್ಯಾನಾಂ ಪ್ರತ್ಯಭಿಜ್ಞಾಪಕಂ ಪ್ರಭೋಃ ॥ ೨೮ ॥**

**ಅವಿಲಂಘ್ಯ ಜಗತ್ಕರ್ತುರಾಜ್ಞಾಪನಮಿವಾಗತಃ ।**
**ಸರ್ವಾನುಗ್ರಹಣಂ ಶಂಭೋಃ ಸಾಕ್ಷಾದಿವ ಪುರಃ ಸ್ಥಿತಂ ॥ ೨೯ ॥**

**ಶಿಲಾದತನಯಂ ಸಾಕ್ಷಾಚ್ಛ್ರೀಮಚ್ಛೂಲವರಾಯುಧಂ ।**
**ವಿಶ್ವೇಶ್ವರಗಣಾಧ್ಯಕ್ಷಂ ವಿಶ್ವೇಶ್ವರಮಿವಾಪರಂ ॥ ೩೦ ॥**

**ವಿಶ್ವಸ್ಯಾಪಿ ವಿಧಾತ್ರ್ಯಾಣಾಂ ನಿಗ್ರಹಾನುಗ್ರಹಕ್ಷಮಂ ।**
**ಚತುರ್ಬಾಹುಮುದಾರಾಂಗಂ ಚಂದ್ರರೇಖಾವಿಭೂಷಿತಂ ॥ ೩೧ ॥**

**ಕಂಠೇ ನಾಗೇನ ಮೌಲೌ ಚ ಶಶಾಂಕೇನಾಪ್ಯಲಂಕೃತಂ ।**
**ಸವಿಗ್ರಹಮಿವೈಶ್ವರ್ಯಂ ಸಾಮರ್ಥ್ಯಮಿವ ಸಕ್ರಿಯಂ ॥ ೩೨ ॥**

---

ನಂದಿಯು ಮುಂಡಿಸಿದ್ದನು. ಆ ನಂದಿಗೆ ಕಾಂತಿಯಿಂದ ಕೂಡಿದ ಶರೀರವೂ, ಮೂರು ಕಣ್ಣುಗಳೂ ಇದ್ದುವು. ಸುತ್ತಲೂ ನೆರೆದಿದ್ದ ಕೃತ್ಯಾದೇವತೆಗಳು ಹಿಂದಿನ ಸಂಗತಿಗಳನ್ನು ಜ್ಞಾಪಕಕ್ಕೆ ತಂದುಕೊಡುತ್ತಿದ್ದುವು.

೨೯-೩೨. ಆ ನಂದಿಯು ಲೋಕವನ್ನು ಸೃಷ್ಟಿಸಿದ ಶಿವನ ಆಜ್ಞೆಯಿಂದ ಬಂದ ಸಕಲ ಜನರಿಗೂ ಅನುಗ್ರಹವನ್ನು ಮಾಡುವವನು. ಯಾವಾಗಲೂ ಸಾಕ್ಷಾಚ್ಛಿವನ ಮುಂಭಾಗದಲ್ಲಿರುವನು. ಶಿಲಾದಮುನಿಯ ಪುತ್ರನು. ಶೂಲಾಯುಧವನ್ನು ಧರಿಸಿ, ಪ್ರಪಂಚಕ್ಕೆ ಅಧಿಪತಿಗಳಾದವರ ಗುಂಪಿಗೆ ಅಧಿಪತಿಯಾದ ಎರಡನೆಯ ಈಶ್ವರನೋ ಎಂಬಂತೆ ಪ್ರಕಾಶಿಸುತ್ತಿದ್ದನು. ಪ್ರಪಂಚಕ್ಕೂ, ಪ್ರಪಂಚವನ್ನು ಸೃಷ್ಟಿಸಿದ ಬ್ರಹ್ಮರಿಗೂ ನಿಗ್ರಹಾನುಗ್ರಹವನ್ನು ಮಾಡಲು ಶಕ್ತನಾದವನು. ಚತುರ್ಭುಜಗಳು, ಶಿರಸ್ಸಿನಲ್ಲಿ ಬೆಳಗುವ ಚಂದ್ರಕಲೆ, ಕಂಠದಲ್ಲಿ ಶೋಭಿಸುತ್ತಿರುವ ಸರ್ಪಗಳು, ಇವುಗಳಿಂದ ಒಪ್ಪುತ್ತಾ ಐಶ್ವರ್ಯವೇ ಶರೀರವನ್ನು ಧರಿಸಿಬಂದಂತೆಯೂ, ಪರಾಕ್ರಮವೇ ಕ್ರಿಯಾಶಕ್ತಿಯಿಂದ ಕೂಡಿಬಂದಂತೆಯೂ, ಸಂಪೂರ್ಣವಾದ ಮುಕ್ತಿಯೇ ಸಮೀಪಕ್ಕೆ ಬಂದಂತೆಯೂ ಪ್ರಕಾಶಿಸುತ್ತಿದ್ದನು.

ಸಮಾಪ್ತಮಿವ ನಿರ್ವಾಣಂ ಸರ್ವಜ್ಞಮಿವ ಸಂಗತಂ ।
ದೃಷ್ಟ್ವಾ ಪ್ರಹೃಷ್ಟವದನೋ ಬ್ರಹ್ಮಪುತ್ರಃ ಸಹರ್ಷಿಭಿಃ ॥ ೩೩ ॥

ತಸ್ಥೌ ಪ್ರಾಂಜಲಿರುತ್ಥಾಯ ತಸ್ಯಾತ್ಮಾನಮಿವಾರ್ಪಯನ್ ।
ಅಥ ತತ್ರಾಂತರೇ ತಸ್ಮಿನ್ವಿಮಾನೇ ಚಾವನಿಂ ಗತೇ ॥ ೩೪ ॥

ಪ್ರಣಮ್ಯ ದಂಡವದ್ದೇವಂ ಸ್ತುತ್ವಾ ವ್ಯಜ್ಞಾಪಯನ್ಮುನೀನ್ ।
ಷಟ್ಕುಲೀಯಾ ಇಮೇ ದೀರ್ಘಂ ನೈಮಿಷೇ ಸತ್ರಮಾಸ್ಥಿತಾಃ ॥ ೩೫ ॥

ಆಗತಾ ಬ್ರಹ್ಮಣಾದಿಷ್ಟಾಃ ಪೂರ್ವಮೇವಾಭಿಕಾಂಕ್ಷಯಾ ।
ಶ್ರುತ್ವಾ ವಾಕ್ಯಂ ಬ್ರಹ್ಮಪುತ್ರಸ್ಯ ನಂದೀ
ಛಿತ್ವಾ ಪಾಶಾನ್ ದೃಷ್ಟಿಪಾತೇನ ಸದ್ಯಃ ।
ಶೈವಂ ಧರ್ಮಂ ಚೈಶ್ವರಂ ಜ್ಞಾನಯೋಗಂ
ದತ್ವಾ ಭೂಯೋ ದೇವಪಾರ್ಶ್ವಂ ಜಗಾಮ ॥ ೩೬ ॥

---

೩೩. ಈರೀತಿಯಾಗಿ ಬಂದ ನಂದಿಯನ್ನು ಕಂಡು ಬ್ರಹ್ಮಪುತ್ರನಾದ ಸನತ್ಕುಮಾರನು ಸಂತೋಷದ ಮುಖದಿಂದ ಕೂಡಿ, ಋಷಿಗಳೊಡನೆ ಕೈಜೋಡಿಸಿಕೊಂಡು ನಿಂತು, ಅವನಿಗೆ ತನ್ನ ಆತ್ಮಸಮರ್ಪಣೆಯನ್ನೇ ಮಾಡಿದವನಂತಿದ್ದನು.

೩೪-೩೫. ಆಮೇಲೆ ಆ ವಿಮಾನವು ಭೂಮಿಗೆ ಬರುತ್ತಿರಲು ಸನತ್ಕುಮಾರನು ನಂದೀಶ್ವರನಿಗೆ ಸಾಷ್ಟಾಂಗನಮಸ್ಕಾರಮಾಡಿ, ಸ್ತೋತ್ರಮಾಡುತ್ತ ಮುನಿಗಣದ ವಿಷಯವನ್ನು ವಿಜ್ಞಾಪನೆಮಾಡಿದನು. ಈ ಮುನಿಗಳು ಆರು ವಂಶದವರು. ಇವರು ನೈಮಿಶಾರಣ್ಯದಲ್ಲಿ ದೀರ್ಘಸತ್ರವೆಂಬ ಯಜ್ಞವನ್ನು ಮಾಡಿ ಬ್ರಹ್ಮನ ಅಪ್ಪಣೆಯಿಂದ ನೀನು ಬರುವುದಕ್ಕೆ ಮುಂಚೆಯೇ ನಿನ್ನ ದರ್ಶನಮಾಡಬೇಕೆಂಬಾಸೆಯಿಂದ ಬಂದಿರುವರು. ಎಂದು ಹೇಳಿದನು.

೩೬. ನಂಧೀಶ್ವರನು ಬ್ರಹ್ಮಪುತ್ರನಾದ ಸನತ್ಕುಮಾರನ ಮಾತನ್ನು ಕೇಳಿ ತನ್ನ ದೃಷ್ಟಿಪಾತದಿಂದಲೇ ಆ ಮುನಿಗಳ ಪಾಶವನ್ನು ಭೇದಿಸಿ, ಶಿವಧರ್ಮವನ್ನೂ ಈಶ್ವರ ಸಂಬಂಧವಾದ ಜ್ಞಾನಯೋಗವನ್ನೂ ಅವರಿಗೆ ಉಪದೇಶಮಾಡಿ ಮತ್ತೆ ಶಿವನ ಸಮೀಪಕ್ಕೆ ಹೊರಟುಹೋದನು.

ಸನತ್ಕುಮಾರೇಣ ಚ ತತ್ಸಮಸ್ತಂ
ವ್ಯಾಸಾಯ ಸಾಕ್ಷಾದ್ಗುರವೇ ಮಮೋಕ್ತಂ ।
ವ್ಯಾಸೇನ ಚೋಕ್ತಂ ಮಹಿತೇನ ಮಹ್ಯಂ
ಮಯಾ ಚ ತದ್ವಃ ಕಥಿತಂ ಸಮಾಸಾತ್ ॥ ೩೭ ॥

ನಾವೇದವಿದ್ಭ್ಯಃ ಕಥನೀಯಮೇತ-
ತ್ಪುರಾಣರತ್ನಂ ಪುರಶಾಸನಸ್ಯ ।
ನಾಭಕ್ತಶಿಷ್ಯಾಯ ಚ ನಾಸ್ತಿಕೇಭ್ಯೋ
ದತ್ತಂ ಹಿ ಮೋಹಾನ್ನಿರಯಂ ದದಾತಿ ॥ ೩೮ ॥

ಮಾರ್ಗೇಣ ಸೇವಾನುಗತೇನ ಯೈಸ್ತ-
ದ್ದತ್ತಂ ಗೃಹೀತಂ ಪಠಿತಂ ಶ್ರುತಂ ವಾ ।
ತೇಭ್ಯಃ ಸುಖಂ ಧರ್ಮಮುಖಂ ತ್ರಿವರ್ಗಂ
ನಿರ್ವಾಣಮಂತೇ ನಿಯತಂ ದದಾತಿ ॥ ೩೯ ॥

ಪರಸ್ಪರಸ್ಯೋಪಕೃತಂ ಭವದ್ಭಿ-
ರ್ಮಯಾ ಚ ಪೌರಾಣಿಕಮಾರ್ಗಯೋಗಾತ್ ।

---

೩೭. ಆ ಸನತ್ಕುಮಾರನು ಅವೆಲ್ಲವನ್ನೂ ನಮ್ಮ ಗುರುವಾದ ವ್ಯಾಸ ಮುನಿಗೆ ಹೇಳಿದನು. ಮಹಾಮಹಿಮನಾದ ವ್ಯಾಸಮಹರ್ಷಿಯು ಅದನ್ನು ನನಗೆ ಹೇಳಿದನು. ನಾನು ನಿಮಗೆ ಸಂಗ್ರಹವಾಗಿ ಹೇಳಿರುವೆನು.

೩೮. ತ್ರಿಪುರಸಂಹಾರಕನಾದ ಶಿವನ ಈ ಶ್ರೇಷ್ಠವಾದ ಪುರಾಣವನ್ನು, ವೇದವನ್ನು ತಿಳಿಯದವನಿಗೆ ಅಥವಾ ವೇದಪುರಾಣಗಳಲ್ಲಿ ಶ್ರದ್ಧೆಯಿಲ್ಲದವನಿಗೆ ಹೇಳಬಾರದು. ಭಕ್ತನಲ್ಲದವನಿಗೂ, ಶಿಷ್ಯನಲ್ಲದವನಿಗೂ ನಾಸ್ತಿಕನಿಗೂ ಹೇಳ ಬಾರದು. ಅಜ್ಞಾನದಿಂದ ಇದನ್ನು ಹೇಳಿದರೆ ನರಕಫಲವು ಪ್ರಾಪ್ತಿಯಾಗುವುದು.

೩೯. ಸೇವಾಮಾರ್ಗವನ್ನನುಸರಿಸಿ ಎಂದರೆ ಭಕ್ತಿಶ್ರದ್ಧೆಗಳಿಂದ ಕೂಡಿ ಈ ಪುರಾಣವನ್ನು ಕೊಟ್ಟರೂ, ಗ್ರಹಿಸಿದರೂ, ಓದಿದರೂ, ಕೇಳಿದರೂ ಅದು ಅವರಿಗೆ ಸುಖವನ್ನೂ, ಧರ್ಮವೇ ಮುಂತಾದ ತ್ರಿವರ್ಗವನ್ನೂ, ಕೊನೆಗೆ ಮೋಕ್ಷ ವನ್ನೂ ಕೊಡುವುದು.

೪೦. ನನಗೂ, ನಿಮಗೂ ಈ ಪುರಾಣಹೇಳುವ ಸಂಬಂಧದಿಂದ ಒಬ್ಬ

ಅತೋ ಗಮಿಷ್ಯೇಽಹಮವಾಪ್ತಕಾಮಃ
ಸಮಸ್ತಮೇವಾಸ್ತು ಶಿವಂ ಸದಾ ನಃ ॥ ೪೦ ॥

ಸೂತೇ ಕೃತಾಶಿಷಿ ಗತೇ ಮುನಯಃ ಸುವೃತ್ತಾ
ಯಾಗೇ ಚ ಪರ್ಯವಸಿತೇ ಮಹತಿ ಪ್ರಯಾಗೇ
ಕಾಲೇ ಕಲೌ ಚ ವಿಷಯೈಃ ಕಲುಷಾಯಮಾಣೇ
ವಾರಾಣಸೀಪರಿಸರೇ ವಸತಿಂ ವಿತೇನುಃ ॥ ೪೧ ॥

ಅಥ ಚ ತೇ ಪಶುಪಾಶಮುಮುಕ್ಷಯಾ-
ಖಿಲತಯಾ ಕೃತಪಾಶುಪತವ್ರತಾಃ ।
ಅಧಿಕೃತಾಖಿಲಬೋಧಸಮಾಧಯಃ
ಪರಮನಿರ್ವೃತಿಮಾಪುರನಿಂದಿತಾಃ ॥ ೪೨ ॥

॥ ವ್ಯಾಸ ಉವಾಚ ॥

ಏತಚ್ಛಿವಪುರಾಣಂ ಹಿ ಸಮಾಪ್ತಂ ಹಿತಮಾದರಾತ್ ।
ಪಠಿತವ್ಯಂ ಪ್ರಯತ್ನೇನ ಶ್ರೋತವ್ಯಂ ಚ ತಥೈವ ಹಿ ॥ ೪೩ ॥

---

ರಿಗೊಬ್ಬರು ಉಪಕಾರಮಾಡಿದಂತಾಗಿರುವುದು. ಇದರಿಂದ ನನಗೆ ತುಂಬಾ ಸಂತೋಷವುಂಟಾಗಿರುವುದು. ಇನ್ನು ಮುಂದೆ ನಾನು ಪ್ರಯಾಣಮಾಡುತ್ತೇನೆ. ನಮ್ಮೆಲ್ಲರಿಗೂ ಸಮಸ್ತಸನ್ಮಂಗಳಗಳೂ ಉಂಟಾಗಲಿ.

೪೧. ಹೀಗೆ ಹೇಳಿ ಸೂತನು ಆಶೀರ್ವಾದವನ್ನು ಮಾಡಿ ಹೊರಟು ಹೋದಮೇಲೆ, ಒಳ್ಳೆಯ ನಡತೆಯಿಂದ ಕೂಡಿದ ಆ ಮುನಿಗಳು ತಮ್ಮ ಯಾಗವು ಪೂರ್ತಿಯಾಗುತ್ತಲು, ಕಲಿಕಾಲದಿಂದ ದುಷ್ಟವಿಷಯಗಳಿಂದ ದೋಷವು ಹೆಚ್ಚುತ್ತಿರಲು, ವಾರಾಣಸೀಕ್ಷೇತ್ರದ ಸಮೀಪದಲ್ಲಿರುವ ವಿಸ್ತಾರವಾದ ಪ್ರಯಾಗ ಕ್ಷೇತ್ರದಲ್ಲಿ ವಾಸಮಾಡುವುದಕ್ಕೆ ಪ್ರಾರಂಭಿಸಿದರು.

೪೨. ಆಮೇಲೆ ಆ ಮುನಿಗಳು ಪಶುಪಾಶಮೋಚನೆಗಾಗಿ ಎಲ್ಲರೂ ಒಟ್ಟಿಗೆ ಸೇರಿ ಪಾಶುಪತವ್ರತವನ್ನೂ ಮಾಡಿ, ಸಕಲ ಜ್ಞಾನಬೋಧೆಗೂ, ಯೋಗಾಂಗವಾದ ಸಮಾಧಿಗೂ ಅಧಿಕಾರಿಗಳಾಗಿ, ನಿಂದೆಗೆ ಗುರಿಯಾಗದೆ ಪರಮಸುಖವಾದ ಮೋಕ್ಷವನ್ನು ಹೊಂದಿದರು.

೪೩. ವ್ಯಾಸನು ಹೇಳಿದನು—ಈ ಶಿವಪುರಾಣವು ಇಲ್ಲಿಗೆ ಸಮಾಪ್ತ

ನಾಸ್ತಿಕಾಯ ನ ವಕ್ತವ್ಯಮಶ್ರದ್ಧಾಯ ಶಠಾಯ ಚ ।
ಅಭಕ್ತಾಯ ಮಹೇಶಸ್ಯ ತಥಾಽಧರ್ಮಧ್ವಜಾಯ ಚ ॥ ೪೪ ॥

ಏತಚ್ಛ್ರುತ್ವಾ ಹ್ಯೇಕವಾರಂ ಭವೇತ್ಪಾಪಂ ಹಿ ಭಸ್ಮಸಾತ್ ।
ಅಭಕ್ತೋ ಭಕ್ತಿಮಾಪ್ನೋತಿ ಭಕ್ತೋ ಭಕ್ತಿಸಮೃದ್ಧಿಭಾಕ್ ॥ ೪೫ ॥

ಪುನಃ ಶ್ರುತೇ ಚ ಸದ್ಭಕ್ತಿರ್ಮುಕ್ತಿಸ್ಸ್ಯಾಚ್ಚ ಶ್ರುತೇ ಪುನಃ ।
ತಸ್ಮಾತ್ಪುನಃ ಪುನಶ್ಚೈವ ಶ್ರೋತವ್ಯಂ ಹಿ ಮುಮುಕ್ಷುಭಿಃ ॥ ೪೬ ॥

ಪಂಚಾವೃತ್ತಿಃ ಪ್ರಕರ್ತವ್ಯಾ ಪುರಾಣಸ್ಯಾಸ್ಯ ಸದ್ಧಿಯಾ ।
ಪರಂ ಫಲಂ ಸಮುದ್ದಿಶ್ಯ ತತ್ಪ್ರಾಪ್ನೋತಿ ನ ಸಂಶಯಃ ॥ ೪೭ ॥

ಪುರಾತನಾಶ್ಚ ರಾಜಾನೋ ವಿಪ್ರಾ ವೈಶ್ಯಾಶ್ಚ ಸತ್ತಮಾಃ ।
ಸಪ್ತಕೃತ್ವಸ್ತದಾವೃತ್ತ್ಯಾಲಭಂತ ಶಿವದರ್ಶನಂ ॥ ೪೮ ॥

---

ವಾಯಿತು. ಈ ಶಿವಪುರಾಣವನ್ನು ಪ್ರೀತಿಯಿಂದ ಪ್ರಯತ್ನಪೂರ್ವಕವಾಗಿ ಓದಬೇಕು ಮತ್ತು ಕೇಳಬೇಕು.

೪೪. ಇದನ್ನು ನಾಸ್ತಿಕನಿಗೂ, ನಂಬಿಕೆಯಿಲ್ಲದವನಿಗೂ, ಮೂಢನಿಗೂ ಮಹೇಶ್ವರನ ಭಕ್ತನಲ್ಲದವನಿಗೂ, ಅಧರ್ಮವನ್ನೇ ನಡೆಸುವವನಿಗೂ ಹೇಳ ಬಾರದು.

೪೫-೪೬. ಈ ಪುರಾಣವನ್ನು ಒಂದಾವರ್ತಿ ಕೇಳಿದರೆ ಪಾಪಗಳೆಲ್ಲ ಭಸ್ಮವಾಗುವುವು. ಭಕ್ತರಲ್ಲದವರು ಭಕ್ತರಾಗುವರು. ಭಕ್ತರು ತಮ್ಮ ಭಕ್ತಿ ಯನ್ನೂ ಇನ್ನೂ ಹೆಚ್ಚಿಸಿಕೊಳ್ಳುವರು. ಮತ್ತೆ ಕೇಳಿದರೆ ಒಳ್ಳೆಯ ಭಕ್ತಿಯುಂ ಟಾಗಿ ಮತ್ತೊಂದಾವೃತ್ತಿಗೆ ಮುಕ್ತಿಯೇ ಬರುವುದು. ಆದುದರಿಂದ ಮೋಕ್ಷಾ ಪೇಕ್ಷೆಯುಳ್ಳವರು ಪುನಃಪುನಃ ಈ ಪುರಾಣವನ್ನು ಕೇಳುತ್ತಿರಬೇಕು.

೪೭. ಈ ಪುರಾಣವನ್ನು ಒಳ್ಳೆಯ ಮನಸ್ಸಿನಿಂದ ಪರಮಫಲವಾದ ಮೋಕ್ಷವನ್ನುದ್ದೇಶಿಸಿ ಐದಾವೃತ್ತಿ ಕೇಳಿದರೆ ಅಥವಾ ಪಾರಾಯಣಮಾಡಿದರೆ ಆ ಮೋಕ್ಷಫಲವನ್ನು ಹೊಂದುವುದರಲ್ಲಿ ಸಂದೇಹವಿರುವುದಿಲ್ಲ.

೪೮. ಪುರಾತನರಾದ ರಾಜರೂ, ಬ್ರಾಹ್ಮಣರೂ, ವೈಶ್ಯರೂ, ಏಳಾ ವೃತ್ತಿ ಈ ಪುರಾಣವನ್ನು ಪಾರಾಯಣಮಾಡಿಸಿ ಅಥವಾ ಕೇಳಿ ಶಿವನ ದರ್ಶನ ವನ್ನು ಹೊಂದಿರುವರು.

ಶ್ರೋಷ್ಯತ್ಯಥಾಪಿ ಯಶ್ಚೇದಂ ಮಾನವೋ ಭಕ್ತಿತತ್ಪರಃ ।
ಇಹ ಭುಕ್ತ್ವಾಖಿಲಾನ್ಭೋಗಾನಂತೇ ಮುಕ್ತಿಂ ಲಭೇಚ್ಚ ಸಃ ॥ ೪೯ ॥

ಏತಚ್ಛಿವಪುರಾಣಂ ಹಿ ಶಿವಸ್ಯಾತಿಪ್ರಿಯಂ ಪರಂ ।
ಭುಕ್ತಿಮುಕ್ತಿಪ್ರದಂ ಬ್ರಹ್ಮಸಂಮಿತಂ ಭಕ್ತಿವರ್ಧನಂ ॥ ೫೦ ॥

ಏತಚ್ಛಿವಪುರಾಣಸ್ಯ ವಕ್ತುಃ ಶ್ರೋತುಶ್ಚ ಸರ್ವದಾ ।
ಸಗಣಃ ಸಸುತಃ ಸಾಂಬಃ ಶಂ ಕರೋತು ಸ ಶಂಕರಃ ॥ ೫೧ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾ-
ಮುತ್ತರಭಾಗೇ ವ್ಯಾಸೋಪದೇಶ ಶ್ರೀಶಿವಪುರಾಣಮಾಹಾತ್ಮ್ಯ
ವರ್ಣನಂ ನಾಮೈಕಚತ್ವಾರಿಂಶೋಽಧ್ಯಾಯಃ
॥ ಶ್ರೀಶಿವಮಹಾಪುರಾಣಂ ಸಂಪೂರ್ಣಂ ॥

---

೪೯. ಯಾವ ಮನುಷ್ಯನು ಭಕ್ತಿಯಿಂದ ಈ ಶಿವಪುರಾಣವನ್ನು ಕೇಳುತ್ತಾನೆಯೋ ಅವನು ಈ ಲೋಕದಲ್ಲಿ ಸಕಲ ಸುಖಗಳನ್ನೂ ಅನುಭವಿಸಿ ಕೊನೆಗೆ ಮೋಕ್ಷವನ್ನು ಹೊಂದುವನು.

೫೦. ಈ ಶಿವಪುರಾಣವು ಶಿವನಿಗೆ ಅತ್ಯಂತ ಪ್ರೀತಿಪಾತ್ರವಾದುದು. ಇಹದಲ್ಲಿ ಸುಖಭೋಗಗಳನ್ನೂ, ಪರದಲ್ಲಿ ಮೋಕ್ಷವನ್ನೂ ಕೊಡುವುದು. ವೇದಕ್ಕೆ ಸಮಾನವಾದುದು. ಶಿವನಲ್ಲಿ ಭಕ್ತಿಯನ್ನು ಹೆಚ್ಚಿಸುವುದು.

೫೧. ಈ ಶಿವಪುರಾಣವನ್ನು ಹೇಳುವವರಿಗೂ, ಕೇಳುವವರಿಗೂ ತನ್ನ ಗಣಗಳೊಡನೆಯೂ, ಪುತ್ರರೊಡನೆಯೂ, ದೇವಿಯೊಡನೆಯೂ ಕೂಡಿರುವ ಶಿವನು ಯಾವಾಗಲೂ ಸುಖವನ್ನುಂಟುಮಾಡಲಿ.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯವೀಯಸಂಹಿತೆಯ ಉತ್ತರ ಭಾಗದಲ್ಲಿ ಶಿವಪುರಾಣಮಾಹಾತ್ಮ್ಯವರ್ಣನವೆಂಬ ನಲವತ್ತೊಂದನೆಯ ಅಧ್ಯಾಯವು ಮುಗಿದುದು.

**ಶಿವಮಹಾಪುರಾಣವು ಮುಗಿದುದು.**

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ಸದಾಶಿವ ನಮೋಽಸ್ತು ತೇ ॥

॥ ಮಂಗಳಂ ॥